ಅರುಣೋದಯ

# ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವ ಸಂಚಿಕೆ. ೧೯೩೬




ಬೆಲೆ ೨ ರೂಪಾಯಿ

**ಹೊಸ ಯೋಜನೆ!** **ಹೊಸ ಆಡಳಿತ!!**

# ದಿ ಯುನಾಯಿಟೆಡ್ ಕರ್ನಾಟಕ

## ಇನ್ಶೂರನ್ಸ ಕಂಪನಿ ಲಿಮಿಟೆಡ್

**ಮುಖ್ಯಕಾರ್ಯಾಲಯಃ—ಧಾರವಾಡ.**

### ಸಂಯುಕ್ತ ಕರ್ನಾಟಕದ ಪ್ರಾತಿನಿಧಿತ್ವವನ್ನು ಪಡೆದ ಮೊಟ್ಟಮೊದಲನೇಯ ವಿಮಾ ಸಂಘವೆಂದರೆ ಇದೇ!

**ಪ್ರತಿಯೊಬ್ಬ ಕನ್ನಡಿಗನು ತನ್ನದೆಂದು ಹೆಮ್ಮೆ ಪಡೆ ಬಹುದಾದ ಈ ಸಂಘ ದಲ್ಲಿಯೇ ವಿಮೆ ಇಳಿಸಿರಿ!**



**ವಿಮಾ ಕಂತುಗಳ ಮೂಲಕ ಹೊರ ನಾಡಿಗೆ ಹರಿದು ಹೋಗುವ ಹೊನ್ನಿನ ಹೊಳೆಗೆ ತಡೆ ಹಾಕಿರಿ!!**

**ಡೈರೆಕ್ಟರರು.**

೧ **ಶ್ರೀ ಬಿ ಎಸ್ ಸಾವಕಾರ,**
ಎಲ್‌ಎಲ್ ಬಿ ಗವರ್ನಮೆಂಟ
ಪ್ಲೀಡರ, ಧಾರವಾಡ (ಚೇರಮನ)

೨ ,, **ಶ್ರೀನಿವಾಸರಾವ ಕೌಜಲಗಿ** ಬಿ. ಎ
ಎಲ್‌ಎಲ್. ಬಿ ಎಡ್ವೋಕೇಟ
(ವಿಜಾಪೂರ)

೩ ,, ರಾಜಾಸಾಹೇಬ, **ಶ್ರೀನಿವಾಸರಾವ**
**ಕಾರವಾನಕರ** ಬಿ ಏ ಬಾರ ಅಟ ಲಾ
ಹೈದರಾಬಾದ (ನಿಜಾಂ ಕರ್ನಾಟಕ)

೪ ,, **ಕೇಶವದಾಸ ದೇವಿದಾಸ ಸಾವಕಾರ**
ಬ್ಯಾಂಕರ, ಗದಗ,

೫ ,, **ಸಿದ್ರಾಮಪ್ಪ ಅಂದಾನೆಪ್ಪ ಮಾನವಿ**
ಪ್ರೋಪ್ರಾಯಿಟರ, ದಿ ಇಲೆಕ್ಟ್ರಿಕ್
ಸಪ್ಲಾಯ ಕಂಪನಿ, ಗದಗ

೬ ,, **ಡಾ ವ್ಹಿ ಎಸ್ ಉಮಚಗಿ,**
ಎಲ್. ಎಸ್. ಎಸ್ ಗದಗ

೭ , **ಅಬ್ದುಲ್‌ಕರೀಮಸಾಹೇಬ ಎ ಹಣಗಿ**
ಪ್ರೆಸಿಡೆಂಟ, ಮುನಸಿಪಲ್ ಬರೋ ಗದಗ

೮ , **ಶಿವಶಂಕರಪ್ಪ ಶಂಕರಪ್ಪ ಸಕ್ರಿ,**
ಬಿ ಏ. ಮರ್ಚಂಟ, ಮುಂಬಯಿ

೯ ,, **ಗುರುನಾಥ ವಿಠ್ಠಲ ಜೋಶಿ, ಬಿ ಎ.**
ಎಲ್‌ಎಲ್. ಬಿ ಎಡ್ವೋಕೇಟ
ಹೊಸಪೇಟ (ಮದ್ರಾಸ ಕರ್ನಾಟಕ)

೧೦ ,, **ವ್ಹಿ. ಟಿ. ಬಾಕಳೆ,** ಮರ್ಚಂಟ ಧಾರವಾಡ

೧೧ ,, **ಬಳವಂತರಾವ ವೆಂಕಟೇಶ ವ ಪೋತದಾರ,** ಎಲ್‌ಎಲ್ ಬಿ
ರಿಟಾಯರ್ಡ ಜಡ್ಜ ಕೋರ್ಟ ಆಫ್
ಸ್ಮಾಲಕಾಜಿಸ ಬೆಳಗಾವ (ಎಕ್ಸ ಆಫಿಸಿಯೋ)

**ಆಕ್ಚುಅರಿ.**

| | | |
|---|---|---|
| **ಸುಲಭವಾದ ವಿಮಾ ಕಂತುಗಳು** | **ಜಿ, ಎಸ್ ಮರಾಠೆ,** ಎಂ ಎ ಮುಂಬಯಿ<br>ಎ ಆಯ್. ಎ (ಲಂಡನ) **ಪುಣೆ** | **ಸೌಕರ್ಯವುಳ್ಳ ಕಂತುಗಳು** |

ಬ್ಯಾಂಕರ್ಸಃ—ದಿ ಸೆಂಟ್ರಲ್ ಬ್ಯಾಂಕ ಆಫ್ ಇಂಡಿಯಾ ಲಿ. ಮುಂಬಯಿ.

**ಕಾರ್ಯ ಕರ್ತರಾದ ಕುಶಲರಾದ ಎಜಂಟರು ಬೇಕು**

ವಿಶೇಷ ವಿವರಕ್ಕೆ ಕೆಳಗಿನ ವಿಳಾಸಕ್ಕೆ ಬರೆಯಿರಿ

**ಕೆ ಎಲ್ ಹುಯಿಲಗೋಳ, ಬಿ ಎ ಎಲ್‌ಎಲ್. ಬಿ.**

ಸೆಕ್ರೆಟರಿ

ಮುದ್ರಣ ಮತ್ತು ಪ್ರಕಾಶನದ ಸ್ಥಳ.
ಸೀತಾರಾಮ ಪ್ರಿಂಟಿಂಗ ಪ್ರೆಸ್ ಮಾರುತಿಗಲ್ಲಿ ಬೆಳಗಾವಿ.

# ಆಭಾರ ಮನ್ನಣೆ.

ಒಂದಾನೊಂದು ಕಾಲದಲ್ಲಿ ಅತಿ ಘನತೆಗೇರಿದ ಹಾಗು ತನ್ನ ಧವಲಕೀರ್ತಿಯಿಂದ ಇಡೀ ವಿಶ್ವವನ್ನೆ ಬೆಳಗಿಸಿದ ಕನ್ನಡ ಸಾಮ್ರಾಜ್ಯದ ವಿಷಯ ವಾಗಿರುವ ತಮ್ಮ ಜಾಜ್ವಲ್ಯ ಅಭಿಮಾನದಿಂದ ಪ್ರೇರಿತರಾಗಿ ಕರ್ನಾಟಕದೊಳಗಿನ ಬೇರೆ ಬೇರೆ ಭಾಗಗಳಲ್ಲಿ ನೆಲಸಿರುವ ವಿಖ್ಯಾತ ಸಾಹಿತಿಗಳು ತಮ್ಮ ವಿದ್ವತ್ತಾ ಪ್ರಚುರವಾದ ಲೇಖನಗಳನ್ನು ನಿಃಸ್ವಾರ್ಥ ಬುದ್ಧಿಯಿಂದ ಒದಗಿಸಿಕೊಟ್ಟು ಈ ಸಾಮ್ರಾಜ್ಯಸ್ಮಾರಕಮಹೋತ್ಸವ ಸಂಚಿಕೆಯನ್ನು ಯಶಸ್ವಿಯಾಗಿ ಮಾಡಿದ್ದಕ್ಕೆ ಅವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಅದಲ್ಲದೆ ವಿವಿಧ ಪಡಿಯಚ್ಚುಗಳನ್ನು ಅಚ್ಚುಕಟ್ಟಾಗಿ ತಯಾರಿಸಿ ಕೊಟ್ಟು ಸಂಚಿಕೆಯ ಸೌಂದರ್ಯವನ್ನು ಹೆಚ್ಚಿಸಿದ್ದಕ್ಕಾಗಿ ಧಾರವಾಡದ ಶ್ರೀ. ಪೋತದಾರ ಶ್ರೀನಿವಾಸರಾಯರಿಗೂ ಬೆಳಗಾವಿಯ ಶ್ರೀ. ಪವಾರರಿಗೂ ನಾವು ಆಭಾರಿಯಾಗಿದ್ದೇವೆ. ಶ್ರೀಮನ್ಮೈಸೂರ ಮಹಾರಾಜರ ಪಡಿಯಚ್ಚು ಸಕಾಲಕ್ಕೆ ಅತ್ಯಂತ ಪ್ರೀತಿಯಿಂದ ಒದಗಿಸಿ ಕೊಟ್ಟ ಶ್ರೀಮಾನ್ ದೇವುಡು ನರಸಿಂಹ ಶಾಸ್ತ್ರಿಗಳ ಉಪಕಾರವಂತೂ ಎಂದಿಗೂ ಮರೆಯದಂತಹದಾಗಿದೆ ಇವರ ಹೊರ್ತಾಗಿ ನಮ್ಮ ಅನೇಕಜನ ಸ್ನೇಹಿತರು ಕಾಲಕಾಲಕ್ಕೆ ತಕ್ಕ ಸಲಹೆಗಳನ್ನು ಕೊಟ್ಟು ಮುದ್ರಣಕೆಲಸದಲ್ಲಿ ಸಹಾಯ ಮಾಡಿ ಈ ಸಂಚಿಕೆಯು ಬೇಗನೆ ಓದುಗರ ಕೈಸೇರುವಂತೆ ಮಾಡಿದ್ದಕ್ಕಾಗಿ ಅವರೆಲ್ಲರ ಉಪಕಾರವನ್ನು ನಾವು ಈ ಸಮಯದಲ್ಲಿ ಸ್ಮರಿಸದಿರಲಾರೆವು ಅದರಂತೆಯೇ ತಂತಮ್ಮ ಪ್ರಕಟಣಗಳನ್ನು ಕೊಟ್ಟು ಸಹಾಯ ಮಾಡಿದ ಮಹನೀಯರಿಗೂ ನಾವು ಕೃತಜ್ಞರಾಗಿದ್ದೇವೆ ಅವರೆಲ್ಲರೂ ಶ್ರೀಭುವನೇಶ್ವರಿಯ ಕೃಪೆಗೆ ಪಾತ್ರರಾಗಿ ಇನ್ನುಮುಂದಾದರೂ ಹೀಗೆಯೇ ನಿರಲಸತನದಿಂದ ನಿರಭಿಮಾನದಿಂದ ನಿಃಸ್ವಾರ್ಥಬುದ್ಧಿಯಿಂದ ಕನ್ನಡ ನಾಡಿನ ಸೇವೆಮಾಡಿ ಕನ್ನಡ ನಾಡು ತನ್ನ ಗತವೈಭವವನ್ನು ಮರಳಿ ಪಡೆಯುವಂತೆ ಹಣಗಾಡಲು ಸಮರ್ಥರಾಗಲೆಂದು ಆ ಜಗನ್ಮಾತೆಯಾದ ಶ್ರೀ ಭುವನೇಶ್ವರಿಯನ್ನು ಪ್ರಾರ್ಥಿಸುತ್ತೇವೆ.

— ಸಂಪಾದಕ.

ಮುದ್ರಕರು ಮತ್ತು ಪ್ರಕಾಶಕರು:—
**ಶ್ರೀ. ವೆಂಕಟೇಶ ಶ್ರೀನಿವಾಸ ಪಂಡಿತ**
ಬಿ ಎ ಎಲ್ಎಲ್. ಬಿ ವಕೀಲ ಬೆಳಗಾವಿ.

ಶ್ರೀಮತ್ಕೃಷ್ಣರಾಜ ಒಡೆಯರ್ ಬಹಾದ್ದೂರ್

ಜಿ. ಸಿ. ಎಸ್. ಐ. ಜಿ. ಬಿ. ಇ.



ಮೈಸೂರ ಮಹಾರಾಜರು.

# ವಿಜಯನಗರ ಸಾಮ್ರಾಜ್ಯಸ್ಮಾರಕ ಮಹೋತ್ಸವ ಸಂಚಿಕೆ.

**ಈ ಕೃತಿಯು**

ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ
ಕರ್ಣಾಟಕಜನ ಸಂಪದಭಿಸ್ಥಾನಭೂತ ಶ್ರೀಮಹೀಶೂರ ಮಹಾಸಂಸ್ಥಾನಮಧ್ಯ
ದೇದೀಪ್ಯಮಾನ ಸಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ
ಪ್ರಮುಖ ನಿಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿಮಂಡಲಾ
ಸಂಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮತ್ಸಾಮ್ರಾಜ್ಯಾಧಿರಾಜ
ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ
ಬಿರುದೆಂತೆಂಬರ ಗಂಡ ಲೋಕೈಕವೀರ ಯದುಕುಲ
ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ
ಕುಠಾರ ಮಕರ ಮತ್ಸ್ಯ ಶರಭ ಸಾಳ್ವ
ಗಂಡ ಭೇರುಂಡ ಧರಣೀವರಾಹ
ಹನುಮದ್ಗರುಡ ಕಂಠೀರವಾ
ದ್ಯನೇಕ ಬಿರುದಾಂಕಿತ

## ಶ್ರೀಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮ್ಮಾಂಬಾ

ಗರ್ಭಸುಧಾಂಬುಧಿರಾಕಾಸುಧಾಕರಾಯಮಾಣಾ ಶ್ರೀಚಾಮುಂಡಿಕಾಂಬಾ
ವರಪ್ರಸಾದೋತ್ಪನ್ನರಾದ ಆತ್ರೇಯಸಗೋತ್ರ ಆಶ್ವಲಾಯನ
ಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹೀಶೂರ
ಪುರವರಾಧೀಶ

## ಶ್ರೀಮತ್ ಕೃಷ್ಣರಾಜ ಒಡೆಯರ್ ಬಹಾದ್ದೂರ,

**ಜಿ ಸಿ. ಎಸ್. ಐ. ಜಿ ಬಿ ಇ.**

**ಮಹಾಸ್ವಾಮಿಗಳಿಗೆ ವಿನಯಪೂರ್ವಕ ಸಮರ್ಪಿತವಾಗಿದೆ.**

**ಸಂಪಾದಕ**

**ಅರುಣೋದಯ, ಬೆಳಗಾವಿ**

ಪಂಡಿತ ವೆಂಕಟರಾಯರು

ಬಿ. ಎ ಎಲ್‌ಎಲ್, ಬಿ. ಬೆಳಗಾವಿ

ಪ್ರಕಾಶಕರು.





Our large illustrated Catalogue FFEE on requc t




*a faithful servant!*

ಅಷ್ಟು ದೊಡ್ಡದೂ ಅಲ್ಲ, ಅಷ್ಟು ಸಣ್ಣದೂ ಅಲ್ಲದಂದ ನಾ ದ,
ಮ ಆಕಾರದ ಕುಶಲ ಕೆಲಸಗಾರರ ನಾಜೂಕು ಕೆತ್ತಿಗೆಯ,
ಅತ್ಯುತ್ತಮವಾದ ನಕ್ಷೆಗಳಿಂದೊಡಗೂಡಿದ ಗಡಿಯಾರ



"ದಿ ಕೀಪಸೇಕ"

ಸಮಗ್ರಮಣಿಗಳುಳ್ಳ, ಬೀಗರಹಿತವಾದ ಲಿವ್ಹರ
ಸಂಚಲನೆಯುಳ್ಳ ಗಡಿಯಾರ

| | |
|---|---|
| ನಿಕೆಲ್ ಬೆಳ್ಳಿ | ಬೆಲೆ ರೂ. ೩೨ |
| ಸದಾ ಬೆಳಗುವ ಉಕ್ಕು | ಬೆಲೆ ರೂ. ೩೨ |
| ಚೊಕ್ಕ ಬೆಳ್ಳಿ | " ರೂ. ೩೫ |
| ರೋಲ್ಡಗೋಲ್ಡ (೧೦ ವರ್ಷದ ಗ್ಯಾರಂಟಿ) | ರೂ. ೪೨ |
| ೯ ಕ್ಯಾರೆಟ್ ಒರೆಯ ಬಂಗಾರ | ರೂ. ೫೫ |

ಆಕೃತಿಯು ಪ್ರತ್ಯಕ್ಷ ಆಕಾರವನ್ನು ತೋರಿಸುವದು.



ದಿ ವೆಸ್ಟ ಎಂಡ ಪೇಟೆಂಟ್ "ಸದಾ ಬೆಳಗುವ ಉಕ್ಕಿನ ಪಟ್ಟಿಗಳು ಮೇಲಿನ ಆಕಾ-
ರದ ಗಡಿಯಾರಗಳಿಗೆ ಒಪ್ಪುವಂತೆಯೂ ಮತ್ತು ಬೇರೆ ಬಗೆಯಲ್ಲಿರುವ ಆಕಾರದ
ಗಡಿಯಾರಗಳಿಗೆ ಒಪ್ಪುವಂತೆಯೂ ದೊರೆಯುತ್ತವೆ.

# WEST END WATCH C°

BOMBAY . CALCUTTA



# ಅರುಣೋದಯ

# ವಿಜಯನಗರ ಸಾಮ್ರಾಜ್ಯ ಸಂಚಿಕೆ.

ಶಕೆ ೧೮೫೮      ಇಸ್ವಿ ೧೯೩೬

## ಶ್ರೀ ಭುವನೇಶ್ವರಿ ಸ್ತವನ

ಪದ

ಜಯ ಜಯ ಜಯ ಭುವನೇಶ್ವರಿ । ಪಲ್ಲ
ಜಯ ಭುವನೇಶ್ವರಿ । ಜಯ ಮಾಹೇಶ್ವರಿ
ಜಯ ಕೃಪಾಕರಿ । ಶುಭಕರಿ ಶ್ರೀಕರಿ ಅನು॥
ಭೂಸುರ ಮಾಧವ । ನಾಶಾ ಪಾಶವ ॥
ನಾಶಗೊಳಿಸಿ ಸ । ನ್ಯಾಸಿಯ ಮಾಡಿದಿ ॥ ೧ ॥
ವರ ವಿದ್ಯಾರ । ಣ್ಯರ ತಪಕೊಲಿದಾ ॥
ಸುರಿಸಿದಿ ಚಿನ್ನದ । ಸರಿಯಂ ಧರೆಯೊಳು ॥ ೨ ॥
ನೆರೆ ಕನ್ನಡದರ । ಸರ ಪಟ್ಟ ಜನವಂ ॥
ಧರೆಯೊಳು ಸಲಿಸು ಸ್ಥಿರಗೊಳಿಸಿದವಳೆ ॥ ೩ ॥

— ಶಾಂತಕವಿ

# “ಮಹರ್ಷಿ ವಿದ್ಯಾರಣ್ಯ”



ಭಾ। ಷ।

ಒಂದ ಒಂದೂ ಧರ್ಮಕೂಪವಗಿದ ।
ಕುಂದ ನೀಕ್ಷಿಸಿ ಮನದಿ ಮರುಗುತ ।
ಸಾದಿವಾಹನ ರಾಜಧಾನಿ ಎನಿಸ್ಪ ಹಂಪಯೊಳ್ ॥
ಅಂದು ಸಂಸ್ಥಾಪಿಸಿದೆ ರಾಜ್ಯವ ।
ನೊಂದ ಕ್ಷತ್ರಿಯ ಕುಲವ ಸಲಹಿದೆ ।
ತಂದ ಕೀರ್ತಿಯ ತಂದೆ ವಿದ್ಯಾರಣ್ಯ ಗುರುರಾಯಾ । ೧
ವೇದರಾಶಿಗೆ ಅರ್ಥವರುಹಿದೆ ।
ಸಾಧು ಜನಗಳ ಮಾನವುಳಿಸಿದೆ ।
ಬಾಧಿಸಿದ ಯವನರಿಗೆ ಬುದ್ಧಿಯ ಕಲಿಸ್ಸಿ ನೀನು ।
ಬೋಧಿಸಿದೆ ಸರ್ವಾರ್ಥ ಸಾರವ ।
ಸಾಧಿಸಿದ ನಿಜಕಾರ್ಯವೆಲ್ಲವ ।
ಸಾಧುವರ್ಯ ಮಹಾತ್ಮ ವಿದ್ಯಾರಣ್ಯ ಗುರುರಾಯಾ । ೨ ।
ವಿಜಯ ನಗರವ ಕಟ್ಟಿಸಿದ ವೀರ್ ।
ವಿಜಯವನೆ ಸಂಸ್ಥಾಪಿಸಿದ ನೀಂ
ಸುಜನ ಸಂ ವೃರಿಸಿಸ್ಪ ಹುಕ್ಕಾದಿಗಳ ಮೆರೆಯಿಸಿದ ।
ಭಜಿಸುತಿಹ ಭಕ್ತಪ್ರಕರನುದಿನ
ವೃಜಿನವನೆ ನೀಗುತ್ತ ಪೊರೆವೆ ।
ವಿಜಯವಿದ್ಯಾರಣ್ಯ ಗುರುಕುಲಮೇರು ಗತಕೋಪ । ೩
ಹುಕ್ಕ ಬುಕ್ಕರ ಕಾಲದೊಳನಿ ।
ದಿಕ್ಕು ದಿಕ್ಕಿಗೆ ರಾಜ್ಯ ಗಳಿಸಿದ ।
ಸೊಕ್ಕಿ ವೃಮರಿಪಿರ್ದ ಯವನರ ಮದವ ಕರಗಿಸಿದ
ಅಕ್ಕರೆಯ ಕರ್ನಾಟಕದ ಸಿರಿ
ದಕ್ಕಿಸಿದ ಕ್ಷತ್ರಿಯರ ಪಾಲಿಗೆ ।
ಸಿಕ್ಕ ಮಾತ್ರೇಕಲ್ಪ ನಿನ್ನನು ಬಣ್ಣಿಸುವುದೆನಗೆ । ೪ ॥
ತುಂಗಭದ್ರಾ ತೀರದೊಳ್ ನಿಹ ।
ಲಿಂಗದೊಳು ನಿಜಮನವ ನಡಗಿಸಿ ।
ಮಂಗಳಾಸ್ಪದ ನೆನಿಸಿ ಕುಳಿತಿಹ ನಿನ್ನ ಮೂರ್ತಿಯನು ।
ಕಂಗಳಿಂ ನಾ ಕಂಡು ದಣಿಸನು ।
ಭಂಗವೆಲ್ಲವ ಮರತು ಕುಣಿದನ ।
ಸಂಗ ದೂರರು ಋಷಿ ವಿದ್ಯಾರಣ್ಯ ಮುನಿರಾಯಾ । ೫ ।

—**ವೇದವ್ಯಾಸ ತುಮಕೂರು**

ಶ್ರೀವಿದ್ಯಾರಣ್ಯರು.



# ವಿಜಯನಗರದ ಧ್ವಜ.



ವಿಜಯನಗರದ ದೃಶ್ಯ.






## ಹೊಸ ವರುಷದಿಂದ ಬೆಲೆಯನ್ನು ಇಳಿಸಲಾಗಿದೆ.

# 'ಯಶಸ್ವೀರಾಟಿ' ಲಾಭದಾಯಕ ಒಕ್ಕಲತನ.

ದೇಶದ ಸಂಪತ್ತು ಒಕ್ಕಲತನದ ಮೇಲೆ, ಒಕ್ಕಲತನದ ಏಳಿಗೆಯು ಭೂಮಿಯ ಮೇಲೆ ಅವಲಂಬಿಸಿದೆ. ಭೂಮಿಗೆ ನೀರು ಪೂರೈಸುವ ಎಲ್ಲ ಸಾಧನಗಳಲ್ಲಿ 'ಎತ್ತಿನರಾಟಿ'ಯನ್ನು ಲಾಭದಾಯಕವು ಮಾತ್ರವಂ ದಿಲ್ಲಿ ಇದು ಪ್ರತಿಯೊಬ್ಬ ಒಕ್ಕಲಿಗನಿಗೂ ಗೊತ್ತಾಗಿ ಹೋಗಿದೆ ನಮ್ಮ '**ಯಶಸ್ವಿರಾಟಿ**'ಯು ಒಂದು ಸ್ಥಾನದಲ್ಲಿಯೇ ಉತ್ತಮವಾದದ್ದೆಂದು ಹೊಗಳಿಸಿಕೊಳ್ಳುತ್ತಿದೆ ಉಪಯೋಗಿಸಿಯಾದರೂ ನೋಡಿರಿ ನಿಮ್ಮ ಒಂದೇ ಒಂದು ಎತ್ತು ನಾಲ್ಕು ಎತ್ತುಗಳಷ್ಟು ಕೆಲಸ ಮಾಡಿಯೂ ಸ್ವಲ್ಪವೂ ದಣಿಯುದು ಇವರನ್ನು ಕಡಿಮೆ ಬೆಲೆಯಲ್ಲಿ ಇದರಷ್ಟು ಲಾಭವಾಗಿಕೊಡುವ ರಾಟಿಯು ಬೇರೆ ಎಲ್ಲಿಯೂ ನಿಮಗೆ ದೊರೆಯಲಿಕ್ಕಿಲ್ಲ ಇಂದೇ ಕೊಂಡುಕೊಳ್ಳಿರಿ ಹೆಚ್ಚಿನ ಮಾಹಿತಿಗಾಗಿಯೂ ಎಜನ್ಸಿಯ ಸಲುವಾಗಿಯೂ ನಮ್ಮ ಕಡೆಗೆ ವಿಚಾರಿಸಿರಿ

## ಕಬ್ಬಿಣದ ರಾಟಿ

ಮನೆಗೆ [illegible] ಮನೆಗೂ, ಮನೆಯ ಮುಂದಿನ ಕೈತೋಟಗಳಿಗೂ ಬೇಕಾಗುವಷ್ಟು ನೀರನ್ನು ನಿರಾಯಾಸದಿಂದ ಪೂರೈಸುವ ಸಾಧನ, ಚಿಕ್ಕವರಿಗೂ ಹಗುರಾಗಿ ಬರುವಂಥದು. ತಾಳಿಕೆಯಲ್ಲಿ ಒಳ್ಳೇ ಗಟ್ಟಿಮುಟ್ಟಾದದ್ದು. ಬೆಲೆಯೂ, ಬಹಳೇ ಸುಲಭ. ನಿಮ್ಮ ಮನೆಗೊಂದು ಇರಬೇಡವೇ? ಬೇಗನೆ ಆರ್ಡರು ತಿಳಿಸಿರಿ.

ವಿಳಾಸ:-

**ಚಾಂಗಪ್ಪಾ ಲೋಹಾರ, ಅಂಬೇವಾಡಿಕರ,**

**ಕೋನವಾಳಗಲ್ಲಿ ಸ್ಟೇಶನರೋಡ, ಬೆಳಗಾವಿ.**

# TUBERCLE BACILLI



are all around you. Every minute of the day you are inhaling Tubercle bacilli Guard against Tuberculosis Tuberculosis can start from a cough The only remedy to protect you and your family is




# SIROLIN "ROCHE"

Sirolin Roche kills the disease germs, cures coughs, colds, bronchitis, influenza, and Tuberculosis in its early stages.

It is palatable.



ಸಿರೋಲಿನ ರೋಚವು

ರೋಗ ಜಂತುಗಳನ್ನು

ಸಂಹರಿಸುವದು,

ಕೆಮ್ಮು, ಶೀತ, ದಮ್ಮು,

ಇನ್‌ಫ್ಲುಯೆಂಝಾ,

ಮತ್ತು

ಕ್ಷಯ ಬೇನೆಗಳನ್ನು

ಪ್ರಥಮಾವಸ್ಥೆಯಲ್ಲಿ

ಗುಣಪಡಿಸುವದು.

ಅದು ರುಚಿಕರವಾಗಿದೆ.



POST-CARD.

POST OFFICE BOX No. 199

BOMBAY.

# ವಿಜಯನಗರ ಉತ್ಸವದ ಆಧ್ಯಾತ್ಮಿಕ ಅರ್ಥವು.

( ಲೇಖಕರು:- ಶ್ರೀ. ಆಲೂರ ವೆಂಕಟರಾಯರು, ಧಾರವಾಡ. )



ಜಯನಗರ ಸಾಮ್ರಾಜ್ಯ ಸ್ಥಾಪನೆಯ ಮಹೋತ್ಸವವನ್ನು ಜರುಗಿಸಬೇಕೆಂದು ಕರ್ನಾಟಕವು ಸಂಕಲ್ಪಮಾಡಿದಾಗಿನಿಂದ, ಕರ್ನಾಟಕದ ಸಾಮಾನ್ಯ ಜನತೆಯಲ್ಲಿ ಉತ್ಸಾಹವೂ ಅಭಿಮಾನವೂ ಆನಂದವೂ ತುಂಬಿ ತುಳುಕಹತ್ತಿರುತ್ತವೆಂಬುದು, ಸುತ್ತಲು ದೃಷ್ಟಿಚೆಲ್ಲಿದರೆ, ಪ್ರತಿಯೊಬ್ಬನಿಗೂ ಸಹಜವಾಗಿ ಗೊತ್ತಾಗುವ ಮಾತು. ಕರ್ನಾಟಕದೊಳಗಿನ ರಾಜಕೀಯ ಮುಂತಾದ ಯಾವತ್ತು ಮುಖಂಡರ ಸಾಕಷ್ಟು ಬೆಂಬಲವು ದೊರೆತಿದ್ದರೆ, ಇಷ್ಟು ಹೊತ್ತಿಗೆ, ಇದರ ಸಿದ್ಧತೆಯಾಗಿ ಹಳೆಯ ಮಾತಾಗಿ ಹೋಗುತ್ತಿತ್ತು. ಆದರೆ, ಕರ್ನಾಟಕದ ದುರ್ದೈವವು ಇನ್ನೂ ಮುಗಿದಂತೆ ತೋರಲಿಲ್ಲ. ಆದುದರಿಂದಲೇ ಇನ್ನೂ ವರೆಗೆ ಅದು ಮೊದಲನೆಯ ಮನೆಯನ್ನು ದಾಟಿ ಮುಂದಕ್ಕೆ ಹೆಜ್ಜೆಯನ್ನಿಡಲೊಲ್ಲದು. ಹೀಗಾಗುವುದಕ್ಕೆ ಈ ಉತ್ಸವದ ಯಾಥಾರ್ಥ ಸ್ವರೂಪವನ್ನು ನಮ್ಮ ಮುಖಂಡರು ಅರಿಯದೆ, ಅದರ ವಿಷಯವಾಗಿ ತರ್ಕಕುತರ್ಕಗಳನ್ನು ಹೂಡುತ್ತ ಕುಳಿತಿರುವುದೇ ಕಾರಣ. ಆದುದರಿಂದ ನಾವು ಈ ಲೇಖದಲ್ಲಿ ಈ ಉತ್ಸವದ ಆಧ್ಯಾತ್ಮಿಕ ಅರ್ಥವನ್ನು ಹೇಳಿ, ಅದರ ಯಥಾರ್ಥ ಸ್ವರೂಪವನ್ನು ಮುಂದಿಡಲು ಯತ್ನಿಸುತ್ತೇವೆ.

ಇಂಥ ಉತ್ಸವಗಳು ಯಶಸ್ವಿಯಾಗಿ ಆಗಬೇಕಾದರೆ, ಇದರ ನಿಜವಾದ ಕಲ್ಪನೆಯು ಯಾವತ್ತು ವಿಧದ ಮುಖಂಡರಿಂದ ಆಕಲನ ಮಾಡಲ್ಪಡುವುದು ಅತ್ಯವಶ್ಯವಾಗಿದೆ ಕರ್ನಾಟಕದಂಥ ಒಡೆದುಹೋದ ಮತ್ತು ಸಣ್ಣದಾಗಿರುವ ಪ್ರಾಂತದಲ್ಲಂತೂ ಈ ಬಗೆಯ ಒಮ್ಮತದ ಬೆಂಬಲವು ದೊರೆಯದಿದ್ದರೆ, ಇಂಥ ಮಹಾಕಾರ್ಯಗಳು ಯಶಸ್ವಿಯಾಗದಿದ್ದರೆ, ಏನೂ ಆಶ್ಚರ್ಯವಲ್ಲ. ಈಗ ನೋಡಬೇಕು! ಕೆಲವರಿಗೆ ಇದರಲ್ಲಿ ರಾಜಕಾರಣ ಸೇರುವುದೆಂದು ಅಂಜಿಕೆ; ಮತ್ತೆ ಕೆಲವರಿಗೆ ರಾಜಕಾರಣವಿಲ್ಲದ್ದರಿಂದ ಇದು ನೀರಸವಾಗಿ ತೋರುತ್ತದೆ; ಕೆಲವರಿಗೆ ಇದರಿಂದ ಮುಸಲ್ಮಾನರಿಗೆ ಎಲ್ಲಿ ಅಸಮಾಧಾನವಾಗುವುದೋ ಎಂದು ಭಾವನೆ, ಕೆಲವರಿಗೆ ಇದರಲ್ಲಿ ಹಿಂದೂ ಸಂಘಟನವು ಕಾಣುವುದಿಲ್ಲವಲ್ಲಾ ಎಂದು ವಿಷಾದ; ಕೆಲವರಿಗೆ ಈ ಉತ್ಸವವು ನಿರಂಕುಶಚಕ್ರವರ್ತಿಪ್ರಭುತ್ವದ ಸ್ಮರಣೆಯನ್ನು ಮಾಡಿಕೊಡುವದಲ್ಲಾ ಎಂದು ನಿರುತ್ಸಾಹ; ಕೆಲವರು ಇದು ನಿರ್ಜೀವವಾದ ಕಿಗ್ಗಳ ಧರ್ಮವನ್ನು ಎತ್ತಿ ಹಿಡಿಯುವದಲ್ಲಾ ಎಂದು ಹಿಂಜರಿಯುತ್ತಾರೆ.

ನಿಜವಾಗಿ ನೋಡಿದರೆ, ಇವೆಲ್ಲವೂ ನಿರಾಧಾರವಾದ ಅಂಜಿಕೆಗಳೆಂಬುದು ಸಹಜ ಗೊತ್ತಾಗುವಂತಿದೆ. ಈ ಉತ್ಸವದ ಕಡೆಗೆ ನಾವು ಮೂರುದೃಷ್ಟಿಯಿಂದ ನೋಡಬಹುದು. ೧ ಆಧಿಭೌತಿಕ ೨ ಆಧಿದೈವಿಕ ೩ ಆಧ್ಯಾತ್ಮಿಕ ಈ ಉತ್ಸವದ ಆಧಿಭೌತಿಕ ಸ್ವರೂಪವೆಂದರೆ ವಿಜಯನಗರದಲ್ಲಿ ಆ ಕಾಲಕ್ಕೆ ಇಡೀ ಹಿಂದುಸ್ಥಾನದ ಸಾಂಪತ್ತಿಕ ವೈಭವವು ಕೇಂದ್ರೀಕೃತವಾಗಿತ್ತೆಂಬ ಕಾರಣದಿಂದ ಅದರ ಬಗ್ಗೆ ಅಭಿಮಾನ ಪಡುವುದು. ವಿಜಯನಗರದಲ್ಲಿ ಲಕ್ಷಾವಧಿ ಆನೆ ಕುದುರೆಗಳಿದ್ದವು. ಅರಮನೆಯಲ್ಲಿ ಅತುಲವಾದ ಸಂಪತ್ತು ಇತ್ತು. ಪೇಟೆಗಳಲ್ಲಿ ಮುತ್ತು ಹವಳಗಳ ರಾಶಿಗಳು ಒಟ್ಟಿದ್ದವು; ಅಲ್ಲಿಯ ಹೆಣ್ಣುಮಕ್ಕಳ ಶರೀರಗಳೆಲ್ಲವೂ ವಜ್ರವೈಡೂರ್ಯಾದಿಗಳಿಂದ ವಿಭೂಷಿತವಾಗಿದ್ದವು, ಇಂದು ಆಂಗ್ಲಸಮ್ರಾಟನ ಕಿರೀಟದಲ್ಲಿ ವಿರಾಜಮಾನವಾಗಿರುವ ಕೊಹಿನೂರದಂಥ ವಜ್ರಗಳು ವಿಜಯನಗರಸಮ್ರಾಟನ ಕುದುರೆಗಳ ಕಾಲಾಯಿಗಳಲ್ಲಿ ಮೆರೆಯುತ್ತಿದ್ದವು, ಆಪಾದಮಸ್ತಕದ ವರೆಗೆ ಆಭರಣಗಳಿಂದ ಮಂಡಿತರಾಗಿದ್ದ ಅಲ್ಲಿಯ ದಾಸಿಗಳು ಪರದೇಶೀಯ ಪ್ರವಾಸಿಕರ ರಾಣಿಯರೆಂದೂ ಭ್ರಮೆ

ಯನ್ನುಂಟು ಮಾಡಿದ್ದರು, ಎಂಬ ಮುಂತಾಗಿ, ಹಿಂದೆ ಹಿಂದುಸ್ಥಾನದಲ್ಲಿ ಎಂದೆಂದಿಗೂ ಪಡೆಯದಷ್ಟು ಸಾಂಪತ್ತಿಕ ವೈಭವವನ್ನು ನಮ್ಮ ಕನ್ನಡಿಗರು ಸ್ವಂತ ಶೂರತನದಿಂದ ಸಂಪಾದಿಸಿದ್ದರೆಂಬ ಬಗ್ಗೆ ಯಾವ ಸ್ವಾಭಿಮಾನಿಯಾದ ಕನ್ನಡಿಗನಿಗೆ ಆನಂದವಾಗಲಿಕ್ಕಿಲ್ಲ !

ಆದರೆ ಉತ್ಸವದ ಬಗ್ಗೆ ಅಭಿಮಾನ ಪಡಲಿಕ್ಕೆ ಇದು ಗೌಣಕಾರಣವು. ಇದಕ್ಕಿಂತಲೂ, ವಿಜಯನಗರವು ಪಡೆದ ಮಾನಸಿಕ ಮತ್ತು ಸಾಂಸ್ಕೃತಿಕ ಉನ್ನತಿಯು ಹೆಚ್ಚಿಗೆ ಅಭಿಮಾನ ಪಡತಕ್ಕ ಸಂಗತಿಯಾಗಿದೆ. ಆಗಿನ ಕಾಲಕ್ಕೆ ತಕ್ಕಂತೆ, ವಿಜಯನಗರವು ಪ್ರತಿಯೊಂದು ಕಲೆಯಲ್ಲಿ ಮುಂದುವರೆದಿತ್ತು. ಸಂಗೀತ, ನಾಟ್ಯ, ಶಿಲ್ಪ, ಸಾಹಿತ್ಯ ಮುಂತಾದವುಗಳಲ್ಲಿ ಅದು ತನ್ನ ಹೆಸರು ಚಿರಕಾಲ ಉಳಿಯುವಂತೆ ಕೆಲಸ ಮಾಡಿದೆ. ರಾಜಕಾರಣದಲ್ಲಿ ಅದು ಮುಂದಿನ ಮರಾಠರೇ ಮುಂತಾದವರಿಗೆ ಮೇಲುಪಂಕ್ತಿಯನ್ನು ಹಾಕಿಕೊಟ್ಟಿದೆ. ಸಾಮಾಜಿಕ ಉನ್ನತಿಯು ಬಹಳವಾಗಿ ರೂಪುಗೊಂಡಿತ್ತು. ಪತಿವ್ರತಾಧರ್ಮವು ಪರಮಾವಧಿಗೆ ಹೋಗಿತ್ತು. ವರ್ಣಾಶ್ರಮಧರ್ಮಗಳು ಉಜ್ವಲಸ್ವರೂಪದಲ್ಲಿ ಇದ್ದವು. ವೀರರು ತಮ್ಮ ಜೀವದ ಪರವೆಯಿಲ್ಲದೆ ಕಾದುವಷ್ಟು ಶೂರ ಸ್ವಭಾವದವರಾಗಿದ್ದರು. ಆ ಕಾಲದಲ್ಲಿ ಅನೇಕ ಕವಿಗಳು, ಗ್ರಂಥಕರ್ತರು, ಸಂಗೀತಗಾರರು ಆಗಿಹೋದರು. ಇವೆಲ್ಲ ಅಭಿಮಾನಪಡತಕ್ಕ ಸಂಗತಿಗಳಲ್ಲವೇ ? ಅಹುದು, ಆದರೆ, ನಾವು ಉತ್ಸವಮಾಡುವುದಕ್ಕೆ ಇದೂ ಗೌಣ ಕಾರಣವೇ ಸರಿ.

ನಾವು ಉತ್ಸವ ಮಾಡಬೇಕೆಂದಿರುವುದು ಇವುಗಳಲ್ಲಿ ಅಡಕವಾಗಿರುವ ಆಧ್ಯಾತ್ಮಿಕ ಪ್ರಯೋಜನಕ್ಕಾಗಿ. ಆ ಆಧ್ಯಾತ್ಮಿಕ ಪ್ರಯೋಜನವು ಯಾವುದೆಂದರೆ ವಿಜಯನಗರವು ಸಮಸ್ತ ಜನತೆಯಲ್ಲಿ ಹೊಸ ಜೀವಕಳೆಯನ್ನು ತುಂಬಿತೆಂಬುದೊಂದೆ ಆಗಿದೆ. ಆ ಚೈತನ್ಯವು ಆಗಿನ ಕಾಲಕ್ಕೆ ತಕ್ಕಂತೆ ವಿವಿಧ ಅವಯವಗಳಲ್ಲಿ ಕಂಡುಬಂದುದು ಅದರ ದ್ಯೋತಕವಲ್ಲದೆ, ಅದೇ ಮುಖ್ಯವಲ್ಲ. ವಿಜಯನಗರವು ಮಾಡಿದ ಎಲ್ಲಕ್ಕೂ ಮಹತ್ವದ ಕಾರ್ಯವೆಂದರೆ ಇಡೀ ಜನತೆಯಲ್ಲಿ ಹೀಗೆ ಜೀವಕಳೆಯನ್ನು ತುಂಬಿದುದು. ವಿಜಯನಗರ ರಾಜ್ಯಸ್ಥಾಪನೆಯೆಂದರೆ ಶಿಷ್ಟರ ರಕ್ಷಣ, ದುಷ್ಟರ ಶಿಕ್ಷಣಕ್ಕಾಗಿ ಅವತಾರ ತಾಳಿದ ಸಾಮ್ರಾಜ್ಯದ ಹುಟ್ಟಿದ ಹಬ್ಬ. ಇದೊಂದು ಮಾತನ್ನು ಲಕ್ಷ್ಯದಲ್ಲಿ ಇಟ್ಟರೆ, ಯಾವತ್ತು ಶಂಕೆಗಳು ದೂರಸಾಗುವವು, ಮತ್ತು ಪ್ರತಿಯೊಬ್ಬರು ತಮತಮಗೆ ಅನುಕೂಲವಾಗುವ ತೆರದಲ್ಲಿ ಇದರಲ್ಲಿ ಭಾಗವನ್ನು ವಹಿಸಬಹುದು. ವಿಜಯನಗರ ಉತ್ಸವವನ್ನು ಮಾಡುವುದೆಂದರೆ ಹಿಂದಿನ ಏಕಚಕ್ರಾಧಿಪತ್ಯಕ್ಕೆ ಬೆಂಬಲಕೊಡುವದೆಂದು ಅರ್ಥವಲ್ಲ, ಅಥವಾ ವರ್ಣಾಶ್ರಮಧರ್ಮವನ್ನು ಪುನರುಜ್ಜೀವನಗೊಳಿಸುವದೆಂದೂ ಅರ್ಥವಲ್ಲ; ಅಥವಾ ಮುಸಲ್ಮಾನರ ಜಗಳವನ್ನು ಕೆದರಿ ತೆಗೆಯುವದೆಂದೂ ಅರ್ಥವಲ್ಲ, ಅಥವಾ ಗುಡಿಗೋಪುರಗಳನ್ನು ಉದ್ಧಾರಮಾಡುವುದೆಂದೂ ಅರ್ಥವಲ್ಲ. ಹೀಗೆ ತಿಳಿಯುವುದು ಸಂಕುಚಿತ ದೃಷ್ಟಿಯ ದ್ಯೋತಕವು. ಈ ಉತ್ಸವದಿಂದ ಆಗುವ ಮುಖ್ಯ ಪ್ರಯೋಜನವೆಂದರೆ ನಮ್ಮ ಸರ್ವಾಂಗ ಉನ್ನತಿಯು. ಆ ಉನ್ನತಿಗೆ ಪುಟಕೊಡುವದಕ್ಕೆ ನಾವು ಅದರ ಆಧ್ಯಾತ್ಮಿಕ ಸ್ವರೂಪವನ್ನು ಲಕ್ಷ್ಯದಲ್ಲಿ ತರಬೇಕು. ಅಂದರೆ ಮಾತ್ರವೇ ನಾವು ಈ ಉತ್ಸವದ ಉಪಯೋಗವನ್ನು ನಮ್ಮ ಇಂದಿನ ಮತ್ತು ಮುಂದಿನ ವೈಭವಕ್ಕೆ ಅನುಕೂಲವಾಗುವಂತೆ ಹೇಗೆ ಮಾಡಿಕೊಳ್ಳಬಹುದೆಂಬುದು ಗೊತ್ತಾಗುವದು. ಹಾಗೆ ನೋಡಿದರೆ ಕರ್ನಾಟಕಕ್ಕೆ ಇಂಥ ಸುಸಂಧಿಯು ಮುಂದೆ ಬಹಳ ದಿವಸಗಳಲ್ಲಿ ದೊರೆಯಲಾರದೆಂದು ಹೇಳಬಹುದು. ಇದು ಕೇವಲ ವರ್ತಮಾನ ಕಾಲದಲ್ಲಿ ದೃಷ್ಟಿಯಿಟ್ಟ ರಾಜಕಾರಣವಲ್ಲ, ಕೇವಲ ಭೂತಕಾಲದಲ್ಲಿ ದೃಷ್ಟಿಯಿಟ್ಟ ಸನಾತನ ಧರ್ಮವಲ್ಲ, ಕೇವಲ ಹಳೆಯ ವಾಙ್ಮಯದ ಪುನರುದ್ಧಾರದ ಚಟುವಟಿಕೆಯಲ್ಲ, ಅಥವಾ ಕಿಗ್ಗಳ ಶಿಲಾಲಿಪಿಗಳ ಪುನರುಜ್ಜೀವನಚಳವಳಿಯಲ್ಲ, ಇವೆಲ್ಲವನ್ನೂ ಒಳಗೊಂಡ ಮತ್ತು ಇವೆಲ್ಲವನ್ನೂ ಮೀರಿದ ಸರ್ವಾಂಗಗಳಲ್ಲಿ ಉನ್ನತಿಗೆ ಅನುವ ಕೊಡುವ ಚೈತನ್ಯಮಯವಾದ ಚಟುವಟಿಕೆಯಿದು! ಈ ವಿಚಾರವು ಆಕಲನವಾದರೆ, ರಾಷ್ಟ್ರೀಯತ್ವವನ್ನು ವಿಲಕ್ಷಣವಾಗಿ, ಸರ್ವತೋಮುಖವಾಗಿ, ಸರ್ವಾಂಗ ಸುಂದರವಾಗಿ ಚೇತರಿಸುವ ಈ ಉತ್ಸವವನ್ನು ಎತ್ತಿ ಹಿಡಿಯದೆ ಯಾವನು ಉಳಿಯುವನು? ಆಗ 'ನಮ್ಮದೀ ಭರತ ಭೂಮಿ' ಯೆಂದು ಹಾಡುವವರು ನಮ್ಮದೀ

ಉತ್ಸವವು ಎಂದು ಹಾಡದೆ ಇರಲಾರರು. ಅವರಿಗೆ ಈಗ ಇವು ತಮ್ಮದಾಗಿ ತೋರದಿರುವ ಈ ಚಳವಳಿಯು ತಮ್ಮದಾಗಿ ತೋರುವುದು. ಮತ್ತು 'ಇದೂ ನಮ್ಮ ಚಳವಳಿಯೋ' ಎಂದು ಮುಂದೆ ಬರಬಹುದು. ದೇವರು ಆ ತರಹದ ಬುದ್ಧಿಯನ್ನು ಎಲ್ಲರಿಗೂ ಕೊಡುವನೆಂದು ಹಾರೈಸುತ್ತೇವೆ

---

# ವಿಜಯನಗರದ ವೈಭವ.

(೧)

ವಿಜಯನಗರವಳಿವರೇನು !
ಮರಳಿ ಬರದೆ ಕಳೆದ ವೈಭವ ?
ಹಸಿಯ ಮಸಣವಾದರೇನು !
ಮತ್ತೆ ಬೆಳಗದಿಹುದೆ ಆ ಬುಸಿ ?
ನಾಡನುಳಿಸ ಹರಣವೀಯು
ಪೀಡ್ಯವೆರದ ಕೀರ್ತಿ ಬಾರದೆ ?
ಮಡದಿ ಮಕ್ಕಳೊರಗಿ ಸಾಯೆ
ಜನರ ಮನದಿ ನೆನಪು ಇಲ್ಲವೆ ?

(೨)

ಕಾಲ ಚಕ್ರದೋಟದೊಳಗೆ
ಸಿಲುಕಿ ಸಾಯಲೇನು ಮರಳದೆ ?
ಭವ್ಯ ಭಾವ ಭವನದೊಳಗೆ
ಬೆಳಗುತಿಹುದು ಸಾವನರಿಯದೆ.
ಕವಿಯ ಮನದಿ ನೆಲೆಯ ತಳೆದು
ಮರಳಿ ಬರುವುದೆಂದಿನಾ ಸಿರಿ.
ವಿವಿಧ ರೂಪಗಳನು ಬಳೆದು
ಮರಳಿ ಹೊಳೆವುದೆಂದಿನಾ ಸಿರಿ.

(೩)

ಗಗನಕೇರಿ ಕಾಂತಿ ಬೀರಿ
ಮೆರೆದವಂದು ವಿವಿಧ ಗೋಪುರ
ತಿರೆಯನೊರಗಿ ಮರುಕ ಸಾರಿ
ಕೊಳೆಯುತಿಹವು ಹೊಳೆದ ಗೋಪುರ.
ರತ್ನಖಚಿತ ಉಡಿಗೆ ತೊಟ್ಟು
ಮೆರದರಂದು ವೀರ ಧೀರರು,
ಕೊನೆಗೆ ಬಿಸಿಯ ಉಸಿರ ಬಿಟ್ಟು
ಇಂದು ಮಣ್ಣು ಮುಕ್ಕುತಿರುವರು,

(೪)

ಘಲಿರು ಘಲಿರು ನಿನದಗೆಯ್ದು
ಕುಣಿದಳಂದು ರಾಜ್ಯಲಕ್ಷ್ಮಿಯು.
ಚೀರಿ ಚೀರಿ ರಕುತ ಸುರಿದು
ಕುಣಿಯುತಿಹಳು ಮಸಣದೊಡತಿಯು.
ಅಳಿದು ಹಳೆಯದಾದರೇನು ?
ನೋಡೆ, ಕಳೆದ ನೆನಪು ಬರುತಿದೆ
ಹಾಳ ಬೀಡ ನೋಡೆ ನರನು
ಕಳೆದ ಸಿರಿಯ ತೆರೆಯ ತರುತಿದೆ.

(೫)

ಕಾಲ ಬಲೆಗೆ ಸಿಲುಕದಿನಿತು
ನಿರುತ ನಲಿವುದಾವುದಿರುವುದು ?
ಮುಂದೆ ಬಹುದ ಮನದಿ ಅರಿತು
ಅಳಿವನರಿಯದಾವುದಿರುವುದು ?
ಬೆಳಗಿ ಹೊಳೆದ ವಸ್ತುಗಳಿಗೆ
ಕಾಲ ಕಿಲುಬೆ ಹಿಡಿಸದಿರುವನೆ ?
ಆದೊಡೇನು 'ನೆನೆಪ ಸಿರಿಗೆ'
ಕಾಲನೊಲಿದು ಕಿಲ ಬೆ ಹಿಡಿಪನೆ ?

- ಜಿ. ವರದರಾಜರಾವ
ಬೆಂಗಳೂರು

# ಕರ್ಮಯೋಗಿ ವಿದ್ಯಾರಣ್ಯರು.



**ಲೇಖಕರು:- ಶ್ರೀ ದಿವಾಕರ ರಂಗರಾಯರು, ಬೆಳಗಾವಿ.**



ದು ವಿಜಯನಗರ ಸಾಮ್ರಾಜ್ಯ ಸಂಚಿಕೆಯು. ವಿಜಯನಗರದ ಸ್ಮರಣೆಯಾದೊಡನೆ ಆ ವಿಜಯನಗರದ ಮಹತ್ವಕ್ಕೆ ಕಾರಣರಾದ ಹುಕ್ಕ ಬುಕ್ಕ ಹಾಗೂ ವಿದ್ಯಾರಣ್ಯರ ನೆನಪಾಗದೆ ಇರುವುದೆ? ಹುಕ್ಕ ಬುಕ್ಕರು ವೀರತನದಿಂದ ಕೈಹಾಕಿದ ಕೆಲಸಕ್ಕೆ ಸತತ ಬೆಂಬಲಿಗರೂ ಸಹಾಯಭೂತರೂ ಮಾರ್ಗದರ್ಶಕರೂ ಆಗಿನಿಂತ ವಿದ್ಯಾರಣ್ಯರನ್ನು ಈ ಹೊತ್ತು ನೆನಿಸುವಾ. ನೆನಿಸಿ ಅವರ ಸ್ಮರಣದಿಂದ ಆದ ಸ್ಫುರಣವನ್ನು ನಮ್ಮ ಅಂತಃಕರಣಗಳಲ್ಲಿ ಸಂಗ್ರಹಿಸಿ ಹೆಜ್ಜೆಯನ್ನಿಡುವಾ.

ವಿದ್ಯಾರಣ್ಯರು ಆದರ್ಶಭೂತರಾದ ಮಹಾ ಕರ್ಮಯೋಗಿಗಳು. ಅವರು ಸ್ವತಃ ವ್ಯಕ್ತಿದೃಷ್ಟಿಯಿಂದ ಸಂಪೂರ್ಣ ವಿದ್ಯೆಯನ್ನು ಪಡೆದು, ಘೋರವಾದ ತಪಸ್ಸನ್ನು ಮಾಡಿ, ಕಠೋರ ಸಾಧನವನ್ನೆಸಗಿ ಕೃತಾರ್ಥರಾಗಿದ್ದರೂ, ಧನ್ಯಭಾವವನ್ನು ಪಡೆದಿದ್ದರೂ, ಅವರಿಗೆ ಪ್ರಾಪ್ತವ್ಯವೆಂಬುದೇನೂ ಇರಲಿಲ್ಲ. ಅವರ ವೈಯಕ್ತಿಕ ಹಂಬಲವು ಹಿಂಗಿತ್ತು, ಅವರ ಆತ್ಮವು ಶಾಂತವಾಗಿತ್ತು, ಅವರ ನೀರಡಿಕೆ ಆರಿತ್ತು. ಅವರು ಕಾಣತಕ್ಕದ್ದನ್ನು ಕಂಡಿದ್ದರು. ಅರಿಯತಕ್ಕದ್ದನ್ನು ಅರಿತುಕೊಂಡಿದ್ದರು. ಅವರಿಗಿನ್ನಾವುದೂ ಬೇಕಾಗಿರಲಿಲ್ಲ.

ಕೇವಲ ನಿವೃತ್ತಿ ಮಾರ್ಗದಿಂದ ಸಾಗಿದ್ದಾದರೆ ಅವರು ಇಲ್ಲಿಗೆ ತಮ್ಮ ಅವತಾರ ಸಮಾಪ್ತಿಯನ್ನು ಮಾಡಬಹುದಾಗಿತ್ತು. ಆದರೆ ಅವರ ಜೀವನದ ಸಂದೇಶವು, ಅವರ ಜೀವಿತದ ರಹಸ್ಯವು ಇದಕ್ಕೂ ಹೆಚ್ಚಿನದಾಗಿತ್ತು. ಜ್ಞಾನಿಯಾಗಿ ನಿಲುಗನ್ನಡಿಯಂತೆ ಎದುರಿಗೆ ನಡೆಯುವ ಎಲ್ಲ ವಿವಿಧ ಕಾರ್ಯಕಲಾಪಗಳನ್ನು ನಿರ್ವಿಕಾರ ರೀತಿಯಿಂದ ಕೇವಲ ಪ್ರತಿಬಿಂಬಿಸಬೇಕೋ ಅಥವಾ ಆ ಕಾರ್ಯಕಲಾಪಗಳಲ್ಲಿ ಕೈಹಾಕಿ ಅವು ಸರಿಯಾಗಿಲ್ಲದಲ್ಲಿ ಅವುಗಳನ್ನು ಸ್ವಸಾಮರ್ಥ್ಯದಿಂದ ತಿದ್ದಬೇಕೋ ಎಂಬ ಪ್ರಶ್ನೆಗೆ ಅವರ ಚರಿತ್ರವು ಎದುರುತ್ತರವಾಗಿದೆ.

ಪಂಚದಶಿಯಲ್ಲಿರುವ 'ಜ್ಞಾನಿನಾಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಮ್' ಎಂಬ ಮಹಾವಾಕ್ಯವೆ ಶ್ರೀವಿದ್ಯಾರಣ್ಯರ ಜೀವನ ರಹಸ್ಯವೆಂದು ಹೇಳಬಹುದು. ಈ ವಿಷಯದ ಮಟ್ಟಿಗೆ ಇವರ ಜೀವನವನ್ನು ಶ್ರೀಬಸವೇಶ್ವರ ಹಾಗೂ ಶ್ರೀರಾಮದಾಸಸ್ವಾಮಿ ಇವರ ಜೀವನಗಳೊಡನೆ ಹೋಲಿಸಬಹುದು. ಇವರು ಮೂವರೂ ಧರ್ಮಪುರುಷರು, ತಪಸ್ವಿಗಳು, ಅತ್ಯಂತ ನಿಷ್ಠೆಯಿಂದ ಆಧ್ಯಾತ್ಮಿಕ ಸಾಧನವನ್ನೆಸಗಿದವರು. ಹೀಗಿದ್ದರೂ ಇವರು ಮೂವರೂ ಅತ್ಯಂತ ವ್ಯವಹಾರ ಚತುರರು, ರಾಜಕಾರಣಿಗಳು, ತಮ್ಮ ಆತ್ಮಿಕ ಬಲವನ್ನು ರಾಜಕಾರ್ಯದಲ್ಲಿ ಉಪಯೋಗಿಸಿ ಸಮಾಜದಲ್ಲಿ ಹೆಚ್ಚಿನ ಕಾರ್ಯವನ್ನು ಮಾಡಿದವರು. ಅವರವರ ಪರಿಸ್ಥಿತಿಯ ಪ್ರಕಾರ ಅವರವರ ಕೆಲಸವು ಬಾಹ್ಯತಃ ಬೇರೆ ಮಾದರಿಯದಾಗಿದ್ದರೂ ತತ್ವತಃ ಅವರೆಲ್ಲರೂ ಒಂದೇ ಕರ್ಮಯೋಗಮಾರ್ಗದಿಂದ ಆಚರಿಸಿದರು. ಆಧ್ಯಾತ್ಮಿಕ ಆನಂದದ ಪರಮಾವಧಿಯನ್ನು ಮುಟ್ಟಿದ್ದರಿಂದ ಅವರು ಅದರಲ್ಲಿ ತನ್ಮಯರಾಗಿ ಕೇವಲ ಚಿನ್ಮಯರೂಪದಿಂದ ತಮ್ಮ ಜೀವಿತವನ್ನು ಕಳೆಯಬಹುದಾಗಿತ್ತು. ಹಾಗೆ ಮಾಡದೆ ಅವರು ನಿಷ್ಕಾಮಬುದ್ಧಿಯಿಂದ ಜನಸಾಮಾನ್ಯರ ವ್ಯವಹಾರದಲ್ಲಿ ತೊಡಗಿ, ಅವರ ಸುಖದುಃಖಗಳೊಡನೆ ಸಮರಸರಾಗಿ, ಅನ್ಯಾಯ ಜುಲುಮೆ ಮುಂತಾದವುಗಳನ್ನು ಸದೆಬಡಿದು ಸರ್ವಾಂಗಸುಂದರವಾದ ಸಮಾಜವನ್ನು ನಿರ್ಮಿಸಲು ಅವರು ಹೆಣಗಿದರು.

ಕರ್ಮಯೋಗದ ತಿರುಳು ಇದರಲ್ಲಿ, ಇಂಥ ವೃತ್ತಿಯಲ್ಲಿ, ಇಂಥ ಮಹಾ ಕಾರ್ಯಸಾಧನೆಯಲ್ಲಿಯು ಇರುವದು. ಸತತ ಕರ್ಮವನ್ನು ಮಾಡತಕ್ಕದ್ದು, ಲೋಕ ಹಿತದ ಕರ್ಮವನ್ನು ಮಾಡತಕ್ಕದ್ದು, ನಿಷ್ಕಾಮಬುದ್ಧಿಯಿಂದ ಮಾಡತಕ್ಕದ್ದು, ಜಯಾಪಜಯಗಳಿಂದ ಉಬ್ಬದೆ ಕುಗ್ಗದೆ ಅನಂತ ವೃತ್ತಿಯಿಂದ ಸ್ವಕರ್ಮದಲ್ಲಿ ನಿರಂತರನಿರತಕ್ಕದ್ದು—ಇದೇ ಕರ್ಮಯೋಗಿಯ ಬಾಳಿನ ಬೀಜ ಮಂತ್ರವು.

ವಿಜಯನಗರ ಸಾಮ್ರಾಜ್ಯಸ್ಥಾಪನೆಯ ಕಾಲವೆಂದರೆ ಎಲ್ಲ ಪರಿಯಿಂದಲೂ ಅತ್ಯಂತ ನಿರಾಶಾಜನಕವು. ಮಾತೃಭೂಮಿಯ ಮೇಲೆ ಪರಕೀಯರ ಭೀಕರ ದಾಳಿಯು ಆಗಿ ಅವರು ವಿಜಯಿಯಾದದರಿಂದ ಅಂಧರಾಗಿ ಇಡೀ ಭಾರತದೇಶವನ್ನು ನುಂಗಿ ನೀರು ಕುಡಿಯಬೇಕೆಂದು ಹವಣಿಸುತ್ತಿದ್ದರು. ಅವರಿಗೆ ಎದುರಾಗಲಿಕ್ಕೆ ಈ ವೀರರ ಭೂಮಿಯಲ್ಲಿ ಬಂಟರಾರು ಉಳಿದಿಲ್ಲವೋ ಎಂಬ ಮಾತುಗಳು ಎತ್ತೆತ್ತಲೂ ಕೇಳುತ್ತಿತ್ತು. ಎಲ್ಲೆಲ್ಲಿಯೂ ನಿರಾಶೆಯ ಮೋಡಗಳು ಮುಸುಕಿದ್ದವು. ನಾವೇ ಎನ್ನುವವರೆಲ್ಲ ನಿಸ್ತೇಜರಾಗಿ ತಲೆ ಕೆಳಗೆ ಹಾಕಿ ಕುಳಿತಿದ್ದರು. 'ಮಹಾಪ್ರಲಯದ ಪ್ರವಾಹದಂತೆ ನುಗ್ಗಿ ಬರುವ ಮಹಮ್ಮದೀಯರ ಧಾಳಿಯನ್ನು ಯಾರಾದರೂ ತಡೆದು ೩೦೦ ವರ್ಷಗಳ ವರೆಗೆ ನಿಲ್ಲಿಸಿ ದಕ್ಷಿಣ ಹಿಂದುಸ್ಥಾನವನ್ನು ರಕ್ಷಿಸಿದ್ದರೆ ವಿಜಯನಗರದವರೇ ಆ ಕಾರ್ಯವನ್ನು ಮಾಡಿದವರು' ಎಂದು ಸೀವೆಲ್ ಸಾಹೇಬನು ಬೆರಳು ಕಚ್ಚುತ್ತ ಹೇಳಿರುವನು.

ಈ ಮಹತ್ಕೃತ್ಯಕ್ಕೆ ಕಾರಣಪುರುಷರಾದವರಲ್ಲಿ ದಿವ್ಯವಿದ್ಯಾರಣ್ಯರು ಅಗ್ರಗಣ್ಯರು. ಹಕ್ಕಬುಕ್ಕ ವಿದ್ಯಾರಣ್ಯ ಈ ತ್ರಿಮೂರ್ತಿಗಳು ಈ ಶ್ರೇಷ್ಠ ಕಾರ್ಯವನ್ನು ಮಾಡಿದರು. ಅವರು ಪರಚಕ್ರವನ್ನು ತಡೆದರು, ಸ್ವಾತಂತ್ರ್ಯವನ್ನು ಕಾಯ್ದರು, ಸ್ವಸಂಸ್ಕೃತಿಯನ್ನು ರಕ್ಷಿಸಿ ಬೆಳಸಿದರು. ಅಜರಾಮರ ಕೀರ್ತಿಯನ್ನು ಹೊಂದಿ ಎಲ್ಲರಿಗೂ ಮಹಾಪಾಠವನ್ನು ಹಾಕಿಕೊಟ್ಟರು.

ಇದಲ್ಲ ಅವರು ಆಚರಿಸಿದ ಕರ್ಮಯೋಗದ ಪರಿಣಾಮವು ಈಗ್ಯೂ ಆ ಕರ್ಮಯೋಗವೆ ನಮ್ಮನ್ನು ಕರೆಯುತ್ತಿದೆ. ಅದರ ಸಂದೇಶವನ್ನು ಮನ್ನಿಸುವಾ.

---

# ಶೃಂಗೇರಿಯ ಜಗದ್ಗುರುಗಳ ಬಿರುದಾವಳಿ.

ವಿದ್ಯಾರಣ್ಯರು ಶೃಂಗೇರಿಯ ಶ್ರೀಜಗದ್ಗುರು ಶಂಕರಾಚಾರ್ಯ ಮಠದ ಸ್ವಾಮಿಗಳಾದುದರಿಂದ ಅವರಿಗಿದ್ದ 'ಕರ್ಣಾಟಕಸಿಂಹಾಸನಸ್ಥಾಪನಾಚಾರ್ಯ' ಎಂಬ ಬಿರುದು ಆ ಮಠದ ಸ್ವಾಮಿಗಳ ಬಿರುದಾವಳಿಯಲ್ಲಿ ಈಗಲೂ ನಡೆದು ಬಂದಿದೆ ಇದರಿಂದ ವಿದ್ಯಾರಣ್ಯರೇ ವಿಜಯನಗರಸಿಂಹಾಸನ ಸ್ಥಾಪನೆಗೆ ಮುಖ್ಯರೆಂಬ ಮಾತು ಬಲಪಡತ್ತದ ಆ ಮಠದ ಬಿರುದಾವಳಿಯನ್ನು ಶೃಂಗೇರಿಯ ಶಾಖಾಮಠವಾದ ಶ್ರೀಶಿವಗಂಗಾಸ್ವಾಮಿಗಳ ಆಜ್ಞಾಪತ್ರದಿಂದ ಇಲ್ಲಿ ಎತ್ತಿ ಕೊಟ್ಟಿದೆ—

**" ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯಪದವಾಕ್ಯಪ್ರಮಾಣಪಾರಾವಾರಪಾರೀಣ ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣಾಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠಾಗರಿಷ್ಠತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನಗುರುಪರಂಪರಾಪ್ರಾಪ್ತಷಡ್‌ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ ಸಕಲವೇದಾರ್ಥಪ್ರಕಾಶಕ ಸಾಂಖ್ಯತ್ರಯೀಪ್ರತಿಪಾಲಕ ಸಕಲನಿಗಮಾಗಮಸಾರಹೃದಯ ವೈದಿಕಮಾರ್ಗಪ್ರವರ್ತಕ ಸರ್ವತಂತ್ರಸ್ವತಂತ್ರಾದಿರಾಜಧಾನೀ ಶ್ರೀಮದ್ವಿದ್ಯಾನಗರಮಹಾರಾಜಧಾನೀ ಕರ್ಣಾಟಕಸಿಂಹಾಸನಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ ತುಂಗಭದ್ರಾತೀರವಾಸ ಋಷ್ಯಶೃಂಗಪುರವರಾಧೀಶ್ವರ....... ....... "**

# ವಿಜಯನಗರದ ನಿರ್ಮಾಣವೂ

## ಶೃಂಗೇರಿಯ ಗುರುಪರಂಪರೆಯೂ.

( ಲೇಖಕರು:—ಶ್ರೀ ಗೋವಿಂದ ಪೈ. ಮಂಜೇಶ್ವರ )

(ಮಂಗಳೂರಿನ ಬಾಸೆಲ್ ಮಿಶ್ಶನ್ ಗ್ರಂಥಶಾಲೆಯ ಸಂಗ್ರಹದಲ್ಲಿದ್ದ ಈ ಲೇಖದ ಹಸ್ತಪ್ರತಿಯನ್ನು ದಯಮಾಡಿ ನನಗೆ ಎರವಲಾಗಿತ್ತು, ಇದನ್ನು ಪ್ರಕಟಿಸಲಿಕ್ಕೆ ಅನುಮತಿಯನ್ನೂ ಕೊಟ್ಟ ಬಗ್ಗೆ ಆ ಗ್ರಂಥಶಾಲೆಯ ಮೆನೇಜರರಾಗಿರುವ ಮಿ| ಎಮ್. ಬೆಚ್ ರವರಿಗೆ ಅತ್ಯಂತ ಕೃತಜ್ಞನಾಗಿರುತ್ತೇನೆ. ಇದರಲ್ಲಿಯ ಅಕ್ಷರವಿನ್ಯಾಸದಲ್ಲಿ ಅಲ್ಲಲ್ಲಿ ಹೇರಳ ಅಶುದ್ಧಿ ಇದೆ ಯಾದರೂ ಅದನ್ನು ತಿದ್ದದೆ ಮೂಲದಲ್ಲಿ ಇರುವಂತೆಯೇ ಇರಗೊಡಿಸಿದೆ. ವಿರಾಮ ಚಿಹ್ನೆಗಳನ್ನೂ ಮೂಲದಲ್ಲಿ ಇರುವಂತೆಯೇ ಕೊಟ್ಟಿದೆ. ಅರ್ಥಕ್ಕೆ ತೀರ ತೊಡಕಾಗುವಲ್ಲಿ ಮಾತ್ರ ಮಾಡಿರುವ ಕೆಲವು ತಿದ್ದುಗಳನ್ನು ಅಲ್ಲಲ್ಲಿ ನಾಗದಂತಗಳಲ್ಲಿ ನಮೂದಿಸಿಯದೆ. ಹಸ್ತಪ್ರತಿಯಲ್ಲಿ ಈ ಲೇಖಕ್ಕೆ ಯಾವ ಹೆಸರನ್ನಾದರೂ ಕೊಟ್ಟಿಲ್ಲ. ಆದರೆ ಈ ಹಸ್ತಪ್ರತಿಯ ಹೊರಗಣ ರಟ್ಟಿಯಲ್ಲಿ ಜರ್ಮನ್ ಭಾಷೆಯಲ್ಲಿ 'Wunder der Cringeri Gurus hauptsaechlich Vidyaranya' (= Miracles of the Gurus of Sringeri, chiefly of Vidyaranya) ಎಂದಿದೆ. ಇದನ್ನು ಸಂಗ್ರಹಿಸಿದ ಆಗಣ ಜರ್ಮನ್ ಮಿಶನರಿಗಳಾರೋ ಹೀಗೆ ಬರೆದಿರಬೇಕು. ಇದರ ಕನ್ನಡ ಬರೆಹವು ತೀರ ಹಳೆಯದು, ಈ ಹಸ್ತಪ್ರತಿಯ ಕಾಲವು ಕ್ರಿ ಶ ಸು ೧೭೮೦—೯೦ ಆಗಿರಬೇಕು ) —ಲೇಖಕರು.

### ಮಂಗಳೂರಿನ ಹಸ್ತಪ್ರತಿಯು.

ಶ್ರುಂಗೇರಿ ನಗರದಲ್ಲಿ ಸರಸ್ವತೀ ಪೀಠದಲ್ಲಿ ಸುರೇಶ್ವರಾಚಾರ್ಯರು---ಇವರ ಶಿಷ್ಯರು ಬೋ(ಬೋ)ಧಮು(ಘ)ನಾಚಾರ್ಯರು। ಯಿವರ ಶಿಷ್ಯರು ಜ್ಞಾನಘನಾಚಾರ್ಯರು। ಇವರ ಶಿಷ್ಯರು ಜ್ಞಾನ ಘನೋತ್ತಮ ಶಿವರು। ಇವರ ಶಿಷ್ಯರು ಗ್ನಾ [ಜ್ಞಾ] ನಗಿರಿಗಳು। ಯಿವರ ಶಿಷ್ಯರು ನರಸಿಂಹಮುನಿಗಳು। ಆ ಮೇಲೆ ವಿದ್ಯಾಶಂಕರರು। ಇವರ ಶಿಷ್ಯರು ಭಾರತೀ ಕೃಷ್ಣತೀರ್ಥರು। ಯಿವರು ೧ ವೊರುಗಲ್ಲಿನಲ್ಲಿ ಪ್ರತಾಪ ರುದ್ರನ ಪಟ್ಟಣದಲ್ಲಿ ವುತ್ತಮಶ್ಲೋಕ ಬ್ರಾಹ್ಮಣನಲ್ಲಿ ಜನಿಸಿದರು। ಆಶ್ರಮ ಸ್ವೀಕಾರವಾಗಿ ಭಾರತೀಕೃಷ್ಣ ತೀರ್ಥರೆಂದು ಪುನಃ ಪುರವರರೆನಿಸಿಕೊಂಡು ಯಿರುತ್ತಿದ್ದರು। ಇವರ ಅಣ್ಣನು ಹುಡುಕಿಕೊಳ್ಳುತ್ತಾ ಬಂದಲ್ಲಿ ಯಿ ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿ ವೇದಸಂಪನ್ನ ಬ್ರಾಹ್ಮಣೋತ್ತಮನ ಮಕ್ಕಳು-ಸಮಸ್ತ ವೇದಶಾಸ್ತ್ರಗಳನ್ನು ನೋಡಿ ಉಪಾಸನಾ ಖಂಡವನ್ನು ನೋಡಿ ಗಾಯತ್ರೀಪುರ(ರ) ಶ್ಚರಣೆ ಶಾಸ್ತ್ರವನ್ನು ನೋಡಿಯದರಿಂದೈಶ್ವರ್ಯಗಳುಂಟಾಗದೆ ಮಂತ್ರ ಶಿದ್ಧಿಯು (ಯಿ)ಲ್ಲದೆ ಹೋಯಿತೆಂದು ತಾವು ವುಪಾಸನೇ ಮಾಡುವಂಥಾ ದೇವತಾಯ(ಂ)ತ್ರವನ್ನು ೨ ಬಹಳ ಕಾಲ ಪ್ರಸನ್ನವಾಗದೆಯಿದ್ದದರಿಂದಾ ಅಗ್ನಿಯಲ್ಲಿ ದಗ್ಧವಮಾಡಬೇಕೆಂದು ಯೋಚಿಸಲಾಗಿ ಆ ದೇವತೆಯು ಪ್ರತ್ಯಕ್ಷವಾಗಿ ನಿನಗೆ ಜನ್ಮಾಂತರಕ್ಕೆ ಹೊರತಾಗಿ ಐಶ್ವರ್ಯವಿಲ್ಲಾವೆಂದು ಹೇಳಿದ್ದರಿಂದ ಹಾಗೆ ತೀರ್ಥಯಾತ್ರೆಗಳು ಮಾಡಿಕೊಳುತ್ತಾ ಬಂದು ಶೃಂಗೇರಿಗೆ ಬಂದು ಶ್ರೀ ಜಗದ್ಗುರುವಾದ ವಿದ್ಯಾತೀರ್ಥರಿಗೆ ನಮಸ್ಕರಿಸಿ ತಮ್ಮ ಅನುಜರು ಭಾರತೀ ಕೃಷ್ಣರು ಇವರಿಂದಾ ಆಶ್ರಮುವಮಾಡಿದ್ದು ನೋಡಿ ತಾವು ಸನ್ಯಾಸಗ್ರಹಣವು ಮಾಡಿ ವಿದ್ಯಾರಣ್ಯರೆಂಬ ಯೋಗಪಟ್ಟ(ಟ್ಟ?)ವಮಾಡಿದರು।ಯಿವಿದ್ಯಾಶಂಕರರ ಲಂಬಿಕಾಯೋ(ಯೋ)ಗದಲ್ಲಿ ತಪಸ್ಸಿಗೆ ಕುಳಿತು ಲಿಂಗೋ

---

೧. ಏಕಶಿಲಾನಗರವೆಂಬ ಒರುಗಲ್ಲಿನಲ್ಲಿ ( Warangal) ಕಾಕತೀಯ ವಂಶದ 11 ಪ್ರತಾಪ ರುದ್ರನು ( ಕ್ರಿ. ಶ. ೧೨೯೧-೧೩೩೦ ) ಆಗ್ಗೆ ಅರಸಾಗಿದ್ದನು.

೨. ಈ ದೇವತಾಯಂತ್ರವು ಶ್ರೀಚಕ್ರಯಂತ್ರವೆಂದು 'ಕೆಳದಿ ನೃಪವಿಜಯ.'ದಿಂದ ಕೊಟ್ಟ ಉತಾರೆಯಿಂದ ತಿಳಿಯುತ್ತದೆ.

ಗ್ಯವಪಾದರು । ಯಿವರಿಗೆ ಜಕ್ಕಣ-ಚಾರಿಯಿಂದಾ ದೇವಾಲಯವು ಮಾಡಿದರು । ಇಲ್ಲಿಗೆ ಶಕ ವರುಷ ೧೨೬೩ನೇ ವಿಕ್ರಮಸ-ವತ್ಸರದಲ್ಲಿ[೩] ನಿರ್ಮಾಣ-ಆ ಮೇಲೆ ವಿದ್ಯಾರಣ್ಯರು ವೇದಭಾಷ್ಯವನ್ನು ಮಾಡಿ ವ್ಯಾಸರ ದರ್ಶನವಾಗ ಬೇಕೆಂದು ಹೋಗುವಾಗ ವಿಂಧ್ಯಪರ್ವತ ಸಮೀಪದಲ್ಲು ವೊಂದಾನೊಂದು ವೃಕ್ಷದ ಮೇಲೆ ಬ್ರಹ್ಮರಾಕ್ಷಸ ನಾಗಿರೂ(ರು)ವ ಶಿಂಗಿರಿ ಭಟನು[೪] ಯಿೂ ವಿದ್ಯಾರಣ್ಯರು ಕಂಡು ಮಾರ್ಗದಲ್ಲಿ ನೀವು ಯಾರೆಂದು ಕೇಳಲಾಗಿ ನಾನು ಶಿಂಗಿರಿಭಟ ನೆಂಬ ಹೆಸರುಳ್ಳವನು ಪೂರ್ವದಲ್ಲಿ ತ್ರೆ(ೇ)ತಾಯುಗದಲ್ಲಿ ಶ್ರೀರಾಮಚಂದ್ರನಿಂವಾ ತುಲಾ ಪುರುಷದಾನವ ಮಾಡಿದ್ದರಿಂದಾ ಬ್ರಹ್ಮರಾಕ್ಷಸನಾಗಿ ಯಿದ್ದೆನೆ। ಇದಕ್ಕೆ ವಿಶಾಪವನ್ನು ಕಡಿಯಲಿಲ್ಲಾ-ಕ್ಷುಧೆಯಿಂದಾ ಪೀಡಿತ ನಾಗಿ ಯಿಧೇನೆ-ಅನ್ನವಕೊಟ್ಟು ತೃಪ್ತನ ಮಾಡ ಬೇಕೆಂದು ಹೇಳಿಕ್ಕೊಂಡಲ್ಲಿ-ಅನ್ನವ ಕೊಡುವ ಅಧಿ ಕಾರವು ನಮಗಿಲ್ಲಾ- ನಾವು ಯತೀಶ್ವರರು । ಕಾಶೀ ಪಟ್ಟಣಕ್ಕೆ ವ್ಯಾಸರ ದರ್ಶನಕ್ಕೆ ಹೋಗುತ್ತೇವೆಂದು ಹೇಳಿದಲ್ಲಿ ನೀವು ಕಾಶಿಗೆ ಹೋಗಿ ವ್ಯಾಸರ ದರ್ಶನವ ಮಾಡಿ ನಿಮ್ಮ ಕಾರ್ಯಸಿದ್ಧಿಯಾಗುತ್ತಾ ಯಿಧೆ। ನಾನು ನಿಮ್ಮ ಸಂಗಡಲೀ (ವೇ?) ಬಂದು ನಿಮಗೆ ವ್ಯಾಸರ ದರ್ಶನವಾಗುವ ಪ್ರಯತ್ನವನ್ನು ಹೇಳುತ್ತಾಯಿದ್ದೆನೆ। ನಿಮ್ಮ ಸರ್ವ ಕಾರ್ಯವು ಸಿದ್ಧಿಯಾದೀತು। ಅನ್ನದಾನವನ್ನು ಮಾಡಬೇಕೆಂದು ಘಟ್ಟಿಯಾಗಿ ಹೇಳಿಕ್ಕೊಂಡಲ್ಲಿ ಹಾಗೆ ಶಿಂಗಿರಿಭಟ್ಟನಿಂದಾ ಸಮೇತವಾಗಿ ಕಾಶಿಗೆ ಬಂದು ಪ್ರಭಿನ್ನ (ಪ್ರಚ್ಛನ್ನ?) ವೇಷವ ಧರಿಸಿದ ವ್ಯಾಸರನ್ನು ಕಂಡು ತಾವು ಮಾಡಿದ ವೇದಭಾಷ್ಯ ಮುಂತ್ತಾದ್ದನ್ನು ವ್ಯಾಸರಿಂದಾ ಶೋಧಿಸಿಕ್ಕೊಂಡು ಘು (ಘ?) ಟಿಕಾ ಸಿದ್ಧಿಗಳನ್ನು ಪಡಕೊಂಡು ಶಿಂಗಿರಿ ಭಟ ಸಹಿತವಾಗಿ ಪಂಪಾಕ್ಷೇತ್ರಕ್ಕೆ ಬರಲಾಗಿ ಶ್ರೀ ವಿರೂಪಾಕ್ಷನ ಪೂಜೆಯನ್ನು ಮಾಡಿಕ್ಕೊಂಡು ಯಿರುತ್ತಿದ್ದಲ್ಲಿ ಅಲ್ಲಿ ಮತಂಗಪರ್ವತಕ್ಕೆ ನಡೆಯಲಾಗಿ ಆ ಪ್ರಾಂತ್ಯದಲ್ಲು ನರಪತಿ ಸಿಂಹಾಸನದಲ್ಲು ಯಿದ್ದ ಮಂತ್ರಿಗಳೆಂಬ ಸಾಯಣ ಮಾಯಣರು ಬಂದು ಯಿೂ ವಿದ್ಯಾರಣ್ಯರ ದರ್ಶನವನ್ನು ಮಾಡಿ ತಮಗೆ ಸಂತ್ತಾನವಾಗಬೇಕೆಂದು ಹೇಳಿಕೊಂಡಲ್ಲಿ ಸಂತ್ತಾನ ಯೋಗವು ನಿಮಗೆ ಯಿಲ್ಲಾಯೆಂದು ಹೇಳಲಾಗಿ ಸಾಯಣ್ಣಾ ಮಾಯಣ್ಣನವರು ಆ ಮಾತು ಕೇಳಿ ಮನಸ್ಸ (ಸ್ಸಿ)ನಲ್ಲಿ ಬಹುಚಿಂತೆಯನ್ನು ತಾಳಿಕೊಳ ಲಾಗಿ ಶ್ರೀ ವಿದ್ಯಾರಣ್ಯರು ಬಹಳ ಪ್ರಯಾಸದಿಂದ ಸಂತಾನಧನಗಳು ॥ ಶ್ಲೋಕ ॥ ವನಂ ನಿಧಿ ತಟಾಕಂ ಚ್ಚ (ಚ) ಕೃತು ದೇವಾಲಯಸ್ತಥಾ। ತಥಾ ವಿಪ್ರ ಪ್ರತಿಷ್ಟಾಂ (ಷ್ಠಾ) ಚ ಸ್ಸ(ಸ)ಂತಾನಸ್ಸಪ್ತಕೀರ್ತಿತಾಃ ॥ ೧ ॥ ಯೆಂಬ ನ್ಯಾಯದಿಂದಾ ತಾವು ಮಹಾಗ್ರಂಥ ಗಳನ್ನು ಮಾಡಿ ಸಾಯಣ್ಣ ಮಾಯಣ್ಣಯೆಂಬ ಹೆಸ ರನ್ನು ಯಿಟ್ಟು ಅವರನ್ನು ಸಂತ್ತೊ[ೀ]ಷಮಂ ಪಡಿಸಿ ಯಿರುತ್ತಿದ್ದಲ್ಲಿ-ಒಳಿತ ಮಂಗಳನಿಲಯಾಯೆಂಬ ಪಟ್ಟ ಣದಲ್ಲಿ ಯದುವಂಶೋತ್ಪನ್ನನಾದ ಸಂಗಮರಾಯನೆಂ ಬರಸು ಯಿರುತ್ತಿದ್ದಾ[ದ್ದ]ನು। ಆತಗೆ ಆಯಿದು ಮಂದಿ ಮಕ್ಕಳಿರುತ್ತಿದ್ದರು। ಅವರ ಹೆಸರು-ಹರಿಹರ ರಾಯ-ಕಮ್ಮ [?] ರಾಯ। ಮಾಧವರಾಯ-ಮುದ್ದಪ್ಪ ರಾಯ ಯೆಂದು[೫] ಐದು ಮಂದಿ ಮಕ್ಕಳು-ಅದ[ವ] ರೊಳಗೆ ಹರಿಹರ ಬುಕ್ಕ ಮೊದಲಾಗಿ ಅನೇಕ ಪರಾ ಕ್ರಮ ಶಾಲಿಗಳಾಗಿರುತ್ತಿದ್ದಲ್ಲಿ ಅವರ ಸಮೀಪದಲ್ಲು ಸಾಯಣ ಮಾಯಣ್ಣನವರು ಯೆಂಬ ಅಮಾತ್ಯರು ವಪ್ಪುತ್ತಂ ಯಿರಲಾಗಿ ಯೆ [ಏ]ಕಶಿಲಾನಗರವಾದ ವೊ[ಒ]ರುಗಲ್ಲು ಯೆಂಬ ನಗರದಲ್ಲು ಪ್ರತಾಪರುದ್ರ ನೆಂಬರಸು [೧] ರಾಜ್ಯವನ್ನಾಳುತ್ತಾ ಯಿರಲಾಗಿ ಯಿೂ ಹರಿಹರ ಬುಕ್ಕರು ಹೋಗಿ ಯಿವರ ಆಶ್ರಯವ ಮಾಡಿ

೩. ಶಾ. ಶ. ೧೨೬೩ ನೆಯ (ವರ್ತಮಾನ) ವಿಕ್ರಮ ಸಂ|ವು ಕ್ರಿ ಶ ೧೩೪೦-೪೧.

೪ ಈ ಅಕ್ಷರವು ಯಾವುದೆಂದು ತಿಳಿಯುವುದಿಲ್ಲ, ನಾನದನ್ನು 'ನು' ಎಂದು ಓದಿಕೊಂಡಿರುತ್ತೇನೆ.

೫. ಇಲ್ಲಿ ಐದು ಮಂದಿ ಮಕ್ಕಳೆಂದರೂ ಹೆಸರು ನಾಲ್ಕೇ ಇವೆ; ಇವರೈವರ ಹೆಸರುಗಳು ಹರಿಹರ-ಕಂಪಣ-ಬುಕ್ಕ-ಮಾರಪ-ಮುದ್ದಪ ಎಂದು ಇತಿಹಾಸದಿಂದ ತಿಳಿಯುತ್ತವೆ. ಬಾಗೆಪಳ್ಳಿ ನಂ. ೭೦ ನೆಯ ಶಾಸನ ದಲ್ಲಿ (Epigr Carn X) ಈ ಕುರಿತು ಹೀಗಿದೆ-

ಹರಿಹರರಾಯ। ಕಂಪಧರಣೀಪತಿ ಬುಕ್ಕ ಮಹೀ
ಪರಿವೃಢ ಮಾರಭೂರಮಣ ಮುದ್ದನೃಪಾಃ ಖ್ಯಾತೇ ।

ಕೊಂಡು ಯಿರುತ್ತಿರ್ದಲ್ಲಿ ಅಶ್ವಪತಿಯಾದ[೬] ಸುರತ್ರಾಣನೆಂಬ ದಿಲ್ಲೀಶ್ವರನು ಯೀ ಪ್ರತಾಪರುದ್ರನ ದೇಶಕ್ಕೆ ಏರಲಾಗಿ ಯೀ [ಪ್ರ]ತಶಿಲಾಧಿಪತಿಯಾದ ರಾಜನು ಯುದ್ಧದಲ್ಲಿ ಪರಾಜಯನಾಗಿ ಹೋಗಿ ಯೀತನ ಬೊಕ್ಕಸಾಧಿಕಾರಿಗಳಾದ ಹರಿಹರ ಬುಕ್ಕರನು ಸೆರೆ ಹಿಡಿದು ತೆಗೆದುಕೊಂಡು ತಮ್ಮ ಪಾಳ್ಯಕ್ಕೆ ಹೋಗಲಾಗಿ ಸಾಯಂಕಾಲದಲ್ಲಿ ಆಶನ ಬಂದ ಸಮಯದಲ್ಲಿ ಕಾವಲಲ್ಲಿದ್ದವರೆಲ್ಲಾ ಭಯಸ್ಥರಾಗಿ ಪರಾರಿ ಹೋಗಿ ಯೀ ಹರಿಹರ ಬುಕ್ಕರು ಅಂಕ್ಕ [ಕೆ] ಸಾಲೆ ಕಳತಿದ್ದಲ್ಲಿ ಸುರತ್ರಾಣನು ನೋಡಿ ಯಿವರು ಸತ್ಯಸಂಧರೆಂದು ತಿಳಿದು ಯಿವರಿಗೆ ಅಧಿಕಾರವನ್ನು ಕೊಟ್ಟು ಯಿಟ್ಟುಕೊಂಡಿರ್ದಲ್ಲಿ ಕರ್ನಾಟಕ ಪ್ರಾಂತ್ಯದಲ್ಲ ನವಬಲ್ಲಾಳರು[೭] ಯಂತಾ ಹೆಚ್ಚಿ ಸುರತ್ರಾಣಗೆ ಮಲತು ಯಿದ್ದಲ್ಲಿ ಯೀ ಹರಿಹರ ಬುಕ್ಕರು ಬಲ್ಲಾಳನ ಮೇಲೆ ಸಕಲ ಸೈನ್ಯ ಸಮೇತವಾಗಿ ಕಳುಹಿಸಿ ಕೊಟ್ಟಲ್ಲಿ ಯಿವರು ಬಲ್ಲಾಳರಿಂದಾ ಪರಾಜಿತರಾಗಿ ಬಳಲಮದು ವೃಷ್ಟವ ಉಲದಲ್ಲಿ ಆನ್ಲತಮ್ಮಂದಿರು ದಣಿದು ಮಲಗಿರಲಾಗಿ ಸಿದ್ರಾಕಾಲದಲ್ಲ ೯[ ]ವಗಾ [ಣ] ಶಿದ್ದೆ[ೕ]ಶ್ವರನೆಂಬ ಯೋಗಿಗಳು ಸ್ವಪ್ನದಲ್ಲಿ ಬಂದು ಚಂದ್ರಮೌಳೀ[ಶ್ವ]ರ ಲಿಂಗವನ್ನು ಕೊಟ್ಟು ಸರ್ವಲೋಕೋಪಕಾರಿಗಳಾದ ಶ್ರೀ ವಿದ್ಯಾರಣ್ಯರೆಂಬ ಯೋಗಿಗಳ ದರ್ಶನವಾಗುತ್ತಾ ಯಿದೆ। ಆವರ ದರ್ಶನಾನುಗ್ರಹದಿಂದ್ದಾ ನಿಮಗೆ ಸಿಂಹಾಸನಾಧಿಪತ್ಯ ಬಂದೀತು ಯೆಂದು ಹೇಳಿ ರೆ[ೕ]ವಣಾ ಶಿದ್ದರು ಅಂತರ್ಧಾನವಾದ ಮೇಲೆ ಹಾಗೆ ಯುಚ್ಚರವಾಗಿ ಯೀ ವೃತ್ತಾಂತವನೆಲ್ಲಾ ತನ್ನ ತಮ್ಮನ ಕೂಡೆ ಹೇಳಲಾಗಿ ಸಂತೋಷಪಟ್ಟು ಯಿರುವ[ರ]ವ ವೇಳೆಯಲ್ಲಿ ಆಕಸ್ಮಾತ್ಕಾರಣದಿಂದಾ ಶ್ರೀ ವಿದ್ಯಾರಣ್ಯರ ದರ್ಶನದಿಂದಾ ಸೈನ್ಯವೆಲ್ಲಾ ಸಮೀಪಕ್ಕೆ ಬಂದು ಕೂಡಿದಲ್ಲಿ ಶ್ರೀ ವಿದ್ಯಾರಣ್ಯರ ಅನುಗ್ರಹವಿಶೇಷದಿಂದಾ ಬಲ್ಲಾಳರ ಮೇ[ೕ]ಲೆ ಯುದ್ಧಮುಖಕ್ಕೆ ಹೋಗಿ ನವಬಲ್ಲಾಳರನ್ನೂ ಜಯಿಸಿದಲ್ಲಿ ಸುರತ್ರಾಣನು ಸಂತೋಷಪಟ್ಟು ಕರ್ನಾಟಂತು ವಿಸೃಷ್ಟಾ[ಸ್ತಾ]ನಾನ್[೮] ಯಂದು ಕರ್ನಾಟಕ ರಾಜ್ಯಾಧಿಪತ್ಯವನ್ನು ಕೊಟ್ಟಲ್ಲಿ ಶ್ರೀ ವಿದ್ಯಾರಣ್ಯರ ಸಮೀಪದಲ್ಲು ಯಿದ್ದ ಶ್ರೀ(ಶಿ)ಗಿರಿಭಟನು ಹುತ್ತದಲ್ಲ ಯಿದ್ದ ನರಪತಿ ಸಿಂಹಾಸನವನ್ನು ಸಿಪ್ಪಿಂದಾ ವುದ್ಧಾರಾ (ಉದ್ಧಾರ) ಮಾಡಬೇಕೆಂದು ಶ್ರೀ ವಿದ್ಯಾರಣ್ಯರಿಗೆ ಹೇಳಿಕ್ಕೊಂಡು ವಿಜಯನಗರವೆಂಬ ಪಟ್ಟಣ ನಿರ್ಮಾಣ ಮಾಡುವ ಪ್ರಯತ್ನವ ಮಾಡಿ ಶ್ರೀ ವಿದ್ಯಾರಣ್ಯರ ಸಮೀಪಕ್ಕೆ ಸಾಯಣ್ಣಾ ಮಾಯಣ್ಣರೆಂಬ ಪ್ರಧಾನಿಗಳು ಬರಲಾಗಿ ಯಿವರುವ ತಂಗ ಪರ್ವತದ ಸಮೀಪದಲ್ಲು ಯಿದ್ದ ನರಪತಿ ಸಿಂಹಾಸನವನ್ನು ಹರಿಹರ ಬುಕ್ಕರಿಗೆ ಪಟ್ಟಣವನ್ನು ಕಟ್ಟಿ ವಿಜಯನಗರ ನಿರ್ಮಾಣವ ಮಾಡಿ ಬಲ್ಲಾಳರಾಯರು ಆಳದಂಥಾ ರಾಜ್ಯವನೆಲ್ಲಾ ವಶೀಕೃತ ಮಾಡಿಕೊಂಡು ತುಂಗಭದ್ರಾ ಪ್ರವಾಹ ಯಲ್ಲಿ ಬರುತ್ತಾ ಯಿಧಯೀ ಅಲ್ಲಿ ಆನಗೊಂದಿ ೧೨ ಸ ಳಕ್ಕೆ ವನಬೇಟೆಹೋಗಿ ಯಿರುತ್ತಿದ್ದಲ್ಲಿ ಅಲ್ಲಿರ್ದೂ(ರ)ವಂಥಾ

---

೬ 'ಸುಲತಾನ್' ಎಂಬ ಅರಬೀ ಶಬ್ದವನ್ನು ಸಂಸ್ಕೃತದಲ್ಲಿ 'ಸುರತ್ರಾಣ' ಎಂದು ಮಾಡಿಕೊಂಡವೆ ಆಗ್ಗೆ ಮುಹಮ್ಮದ್ ಬಿನ್ ತುಘ್ಲಕನು ದಿಲ್ಲಿಯ ಸುಲ್ತಾನನಾಗಿದ್ದನು (ಕ್ರಿ ಶ ೧೩೨೫-೫೧) ವಿಜಯನಗರದ ಅರಸರು 'ಹಿಂದುರಾಯಸುರತ್ರಾಣ' ಎಂಬ ಬಿರುದನ್ನು ತಳೆದಿದ್ದರೆಂದು ಅವರ ಎಷ್ಟೋ ಶಾಸನಗಳಿಂದ ತಿಳಿಯುತ್ತದೆ

೭. ನವಬಲ್ಲಾಳರೆಂದರೆ ದ್ವಾರಸಮುದ್ರದ ಹೊಯ್ಸಳ ಬಲ್ಲಾಳರು. ದ್ವಾರಸಮುದ್ರವು ಕ್ರಿ ಶ ೧೩೧೦ ರಲ್ಲಿ ಮಾಲಿಕ್ ಕಾಫೂರನಿಂದಲೂ ಕ್ರಿ. ಶ. ೧೩೨೭ ರಲ್ಲಿ ಮುಹಮ್ಮದ್ ಬಿನ್ ತುಘ್ಲಕನಿಂದಲೂ ಧ್ವಸ್ತವಾಯಿತು, ಆ ಮೇಲೆ ಅದರ ಕೊನೆಯ ಅರಸನಾದ III ವೀರಬಲ್ಲಾಳನು ಮಧುರೆಯ ಸುಲ್ತಾನನಾದ ಘಿಯಾಸುದ್ದೀನನಿಂದ ಕ್ರಿ ಶ. ೧೩೪೩ ರಲ್ಲಿ ಕೊಲ್ಲಲ್ಪಟ್ಟನು.

೮. 'ಕರ್ನಾಟಂತು ವಿಸೃಷ್ಟವಾನ್' ಎಂಬ ಮಾತನ್ನು ವಿದ್ಯಾರಣ್ಯರ ಕಾಲಜ್ಞಾನದ ಶ್ಲೋಕಗಳಿಂದ ಇಲ್ಲಿ ಎತ್ತಿ ಕೊಂಡಿರಬೇಕು.

ಶತಕಗಳು ಶಸ್ತ್ರನಗಳ ಮೇ(ೕ)ಲೆ ಬಿಟ್ಟುಕೊಂಡು ಬರಲಾಗಿ ಯಿದು ಮಹಾ ಪ್ರಬಲಸ್ಥಳ ಯಿಲ್ಲಿಯೆ ಪಟ್ಟಣವ ನಿರ್ಮಾಣವ ಮಾಡಬೇಕೆಂದು ಯೀ ವಿದ್ಯಾರಣ್ಯರು ಸಂಕಲ್ಪಿಸಿ (ಸಿ) ಪಟ್ಟಣವ ಮಾಡಿದ ವಿವರಾ ।—॥ **ಶಾಲೀವಾಹನ ಶಕ ೧೨೫೮ ನೆ ಧಾತು ಸಂವತ್ಸರ ವೈಶಾಖ ಶುದ್ಧ ೭ ಆದಿತ್ಯವಾರ ಮಾ(ಮ)ಘಾ ನಕ್ಷತ್ರದಲ್ಲು**[೧೦] ವಿಜಯನಗರ ನಿರ್ಮಾಣವ ಮಾಡಿದರು। ಭಾರತೀಕೃಷ್ಣರು ಶ್ರೀ ವಿದ್ಯಾಶಂಕರ ದೇವಾಲಯದ ನಿರ್ಮಾಣವ ಮಾಡಿದರು । ಯಿದಕ್ಕೆ ಶಕ ವರುಷಗಳು ೧೨೬೩ನೆ ವರುಷದಲ್ಲು ೩ ಜಕ್ಕಣಾಚಾರಿಯಿಂದಾ ದೇವಾಲಯವ ನಿರ್ಮಾಣವ ಮಾಡಿದರು । ಶ್ರೀ ವಿದ್ಯಾರಣ್ಯ ಶ್ರೀಪಾದರು ಶ್ರೀಂಗೇರಿಗು(ಗೂ) ವಿಜಯನಗರಕ್ಕ(ಕ್ಕೂ) ವಂದೆ (ಒಂದೇ) ಯಂತ್ರವನ್ನು ಬರದು ಹರಿಹರ ಮಹಾರಾಯರಿಗೆ ಪಟ್ಟಾ

---

೯ ತಸ್ಮಿನ್ ವನೇ ಕಂಚನ ಸಾರಮೇಯಾಂ । ಸದಂಶನೈಕಾಗ್ರ ರದಾಗ್ರಮುಗ್ರಮ್ ।
ಸ ಸಾಗಮೇಶಾಬ್ಧಿ ಶಶೀ ಶಶಂ ಚ । ವಿಸಿಸ್ಮಯೇ ವೀಕ್ಷ್ಯ ವಿಶಾಮಧೀಶಃ ॥ ೩೦ ॥
(ಬಾಗೆಪಳ್ಳಿ ನಂ ೭೦)

೧೦. ಅಷ್ಟ ಪಂಚಯುಗಲೈಕ ಸಂಖ್ಯಯಾ । ಸಾಯುತೇ ಶಕನೃಪಸ್ಯ ವತ್ಸರೇ ।
ಧಾತೃ ಮಾಧವ ವಲಕ್ಷ ಸಪ್ತಮಿ । ಸ್ವಹ್ನಿ ಸತ್ಯನಘ ಲಗ್ನ ತಾರಕೇ ॥ ೨೭ ॥
(ಬಾಗೆಪಳ್ಳಿ ನಂ. ೭೦)

(ಅಷ್ಟ = ೮; ಪಂಚ = ೫; ಯುಗಲ = ೨; ಏಕ = ೧– 'ಅಂಕಾನಾಂ ವಾಮತೋ ಗತಿಃ' ಎಂಬ ಮೇರೆಗೆ ಇದು ಶಾ. ಶ. ೧೨೫೮ ಎಂದಾಗುತ್ತದೆ. 'ಧಾತೃ' ಎಂಬುದು ಆ ಸಂವತ್ಸರದ ಹೆಸರಿನ ಸರಿಯಾದ ರೂಪು; ಮಾಧವ = ವೈಶಾಖಮಾಸ; ವಲಕ್ಷ = ಬಿಳಿ, ಅಂದರೆ ಶುಕ್ಲಪಕ್ಷ)

ಶಾ. ಶ. ೧೨೫೮ ನೆಯ (ವರ್ತಮಾನ) ಧಾತು ಸಂ।ದ ವೈಶಾಖ ಶುದ್ಧ ಸಪ್ತಮಿ ಆದಿತ್ಯವಾರ ಎಂಬುದು ಸರಿಯಾಗಿ ಕ್ರಿ. ಶ. ೧೩೩೬ ನೆಯ ಏಪ್ರಿಲ್ ೩೦ ನೆಯ ತಾರೀಕು ಆದಿತ್ಯವಾರವಾಗುತ್ತದೆ; ಅಂದು ಮಘಾ ನಕ್ಷತ್ರವೂ ಇತ್ತು. (ಕ್ರಿ. ಶ. ೧೩೩೭ ರಲ್ಲಿ ಆ ತಿಥಿ ಏಪ್ರಿಲ್ ೧೮ ನೆಯ ತಾರೀಕು ಗುರುವಾರದಂದು ಬಂದಿತ್ತು.) ಅಂದಿನ ಗ್ರಹಸ್ಥಿತಿ ಹೀಗಿತ್ತು–

| | | | |
|---|---|---|---|
| | ಬುಧ<br>ಗುರು<br>ರಾಹು | ರವಿ<br>ಶುಕ್ರ | |
| | ಶಾ. ಶ. ೧೨೫೮ನೆಯ ಧಾತೃ ಸಂ। ವೈಶಾಖ ಶು। ಸಪ್ತಮಿ ರವಿವಾರ(೩೦-೪-೧೩೩೬) ವೃಷಭಮಾಸ ದಿನ ೪ (ಮೇಷ ಸಂಕ್ರಾಂತಿ ೨೬-೩-೧೩೩೬) | | |
| | | | ಲಗ್ನ<br>ಚಂದ್ರ |
| | | ಶನಿ<br>ಕೇತು | ಕುಜ |

ಈ ಬಗೆಯ ಗ್ರಹಸ್ಥಿತಿಯಲ್ಲಿ ಶಂಕುಸ್ಥಾಪನೆಯ ಬಗ್ಗೆ ಮಧ್ಯಾಹ್ನಕಾಲವ್ಯಾಪಿಯಾಗಿದ್ದ ಸಿಂಹಲಗ್ನವೇ ಪ್ರಶಸ್ತವೆನಿಸುವುದರಿಂದ, ಲಗ್ನವನ್ನು ಆ ಅಂಕಣದಲ್ಲಿ ಹಾಕಿರುತ್ತೇನೆ.

ವಿದ್ಯಾರಣ್ಯರ ಕಾಲಜ್ಞಾನದ ಶ್ಲೋಕಗಳಲ್ಲಿ ಹೇಳಿರುವ ಮೇರೆಗೆ, ದಿಕ್ = ೮, ಬಾಣ = ೫, ದ್ವಿ = ೨, ಚಂದ್ರ = ೧ ಇವು ವಾಮಗತಿಯಿಂದ ಶಾ. ಶ. ೧೨೫೮ ಎಂದಾಗುತ್ತವೆ. 'ಧಾತ್ವಬ್ದೇ' ಎಂಬುದು ಸರಿಯಲ್ಲ, ಏಕೆಂದರೆ ಪ್ರಭವದಿಂದ ೧೦ ನೆಯ ಸಂವತ್ಸರವನ್ನು ರೂಢಿಯಾಗಿ 'ಧಾತೃ' (ಧಾತಾ) ಎಂದೇ ಹೊರತು 'ಧಾತು' ಎಂದಲ್ಲ. ಬಾಗೆಪಳ್ಳಿಯ ನಂ. ೭೦ ನೆಯ ಶಾಸನದಿಂದ ಮೇಲೆ ಕೊಟ್ಟಿರುವ ವೃತ್ತದಲ್ಲಿಯೂ ಅದನ್ನು 'ಧಾತೃ' ಎಂದಿದೆ; ಭವಿಷ್ಯಪುರಾಣದಲ್ಲಿ ಆಯಾ ಸಂವತ್ಸರಗಳ ಫಲವನ್ನು ಹೇಳುವಲ್ಲಿ ಈ ಸಂವತ್ಸರವನ್ನು ಕುರಿತು ಹೀಗಿದೆ—

ನಿಷ್ಪತ್ತಿಃ ಸರ್ವಸಸ್ಯಾನಾಂ ಮಧ್ಯಾ ಧಾತರಿ ಕೀರ್ತಿತಾ ।(ಶಬ್ದಕಲ್ಪದ್ರುಮ–'ವತ್ಸರ') ಆತ ಏವ 'ಧಾತ್ವಬ್ದೇ' ಎಂಬುದು 'ಧಾತ್ರಬ್ದೇ' ಎಂದಾಗಬೇಕು

ಭಿಷೇಕವನ್ನು ಮಾಡಿಸಬೇಕಾದರೆ ಶ್ರೀ ವಿದ್ಯಾರ್ಣ್ಯರು ತಾವು ಸಿಂಹಾಸನದ ಮೇಲೆ ಕುಳಿತುಕೊಂಡು ರಾಯರಿಂದಾ ಶ್ರೀಂಗೇರಿ ಶ್ರೀಮಠದ ಸತ್ರ ಧರ್ಮ ಅಗ್ರ ಹಾರ ವ (ಪ?) ರಮಹಂಸ (?) ಸತ್ರಕ್ಕೆ ಸಹಾ ತಾವು ಪಡದ ಕರ್ನಾಟಕ ರಾಜ್ಯದಲ್ಲಿ ಘಟ್ಟ (ಗಟ್ಟ) ದ ಮೇಲೆ ಘಟ್ಟ (ಗಟ್ಟ)ದ ಕೆಳಗೆ ಸಪಾದಲಕ್ಷಸೀಮೆಯನ್ನು ಧಾರಾಗ್ರಹಿ[ೀ]ತವನ್ನು ಸಮರ್ಪಿಶಿಕೊಂಡು ಆ ಮೇಲೆ ರಾಯರ(+ನ್ನು) ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕವ[ವ]ಮಾಡಿಸಿ ರಾಜಚಿನ್ಹೆ (ಹ್ನೆ) ಯ ಮುಂತ್ತಾದ ಬಿರುದು ಮುಕ್ತಿ [ತ್ತಿ+ನ] ಕಿರೀಟ ಮುತ್ತಿನ ಗದ್ದಿಗೆ ಸಹಾ ರಾಯರಿಗೆ ಕೊಡಿಸಿಯೂ ರಾಯರು ಯೀ ವಿದ್ಯಾರಣ್ಯ ಶ್ರೀಪಾದರಿಗೆ ಮುತ್ತಿನ ಚಾವಡೀ ಹಜಾರದಲ್ಲಿ ಕುಳ್ಳಿರಿಸಿ ಅನೆ[ೀ]ಕ ಪೂಜೋ(ೀ)ಪಚಾರಗಳ ಮಾಡಿ ತನ್ನ್ಯ ಬಿರುದುಗಳ ಮುಂತ್ತಾಗಿ ಶ್ರೀಪಾದಗಳಿಗೆ ನಡೆಯಬೇಕೆಂದು ಮುತ್ತಿನ ಕಿರೀಟ ಮುತ್ತಿನ ಗದ್ದಿಗೆ ಸ್ವರ್ಣಪಾದುಕ ಮುಂತ್ತಾಗಿ ಸಮರ್ಪಿಶಿದಲ್ಲಿ ತಾವೂ ವ್ಯಾಸರಿಂದಾ ಪಡದ ಘಟಿಕಾಸಿದ್ಧಿ ಪ್ರಯೋಗಗಳನ್ನು ಯಿವರು ತಾವು ರಚಿಸಿದ ವಿಜಯನಗರ ಪಟ್ಟಣದಲ್ಲಿ ಸ್ವರ್ಣ ವೃಷ್ಟಿ ಮೂರುಮುಕ್ಕಾಲು ಘಳಿಗೆ ತರ(ೆ)ಸಿ ಮನೆ ಮನೆಗಳಲ್ಲಿ ಬಿದ್ದ ಸ್ವರ್ನವು ಆ ಮನೆಯವರಿಗೆ ಸರಿಮ [ಮೇ?]ಲಾದ್ದು ರಾಜಭಂಡಾರಕ್ಕೆ ತರಿಶಿ ಹಾಕಿಸ್ತರು [ಹಾಕಿಸಿದರು]। ರಾಯರಿಗೆ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಅಪ್ರತಿಮ ಪ್ರತಾಪವೀರ ನರಪತಿ ಯಂಬ ಬಿರುದಾಂಕಿತವ ಮಾಡಿ ಶ್ರೀವಿರೂಪಾಕ್ಷ ಯಂಬ ಮುದ್ರೆ ವುಂಗುರ ಸಹಾ ದಯಮಾಡಿ ಶ್ರಿಂಗೇರಿಯಲ್ಲಿ ಶ್ರೀವಿದ್ಯಾಶಂಕರ ಶ್ರೀಶಾರದ(ದಾ) ಚಂದ್ರಮೌಳೀಶ್ವರ ಸ್ವಾಮಿಯ ಸೆ[ೀ]ವೆಗೆ ಸತ್ರಧರ್ಮಗಳಿಗೆ ಸಹಾ ಸ್ವಾಸ್ತ್ಯಾ ವಿಂಗಡಿಸಿ ಬ್ರಾಹ್ಮರಿಗ ಅಗ್ರಹಾರಕ್ಕೆ ಮೂವತ್ತುಸಾವಿರ ವರಹಾದ ಸ್ವಾಸ್ತ್ಯ ಸಹಾ ನಿಯಮಿಸ್ತರು (ನಿಯಮಿಸಿದರು)। ಅಲ್ಲಿಗೆ ಶಾಲೀವಾಹನಶಕ ವರುಷಂಗಳು ೧೨೬೩ ನೆ ವಿಕ್ರಮ ಸಂವ್ವತ್ಸರದಲ್ಲು ೩ ಶ್ರೀವಿದ್ಯಾಶಂಕರ ದೇವಾಲಯ ನಿರ್ಮ್ಮಾಣ ಜಕ್ಕಣಾಚಾರಿ ಯಿವನ ಮಗನಿಂದಾ ಸಹಾ ಶ್ರಿಂಗೇರಿ ಬೇಲೂರು ಹಳೆಬೀಡು ಯಿ ಮೂರು ಸ್ಥಳ ದೇವಾಲಯ ನಿರ್ಮಾಣವಾಯಿತು॥

**ಹ ಬು ಹು (ಹೋ) ವೀ (ವಿ) ಬುದೇರಾದಿ (ವಿ) ದೇ(ೇ) ದಿ(ವಿ) ಮಾರಾದಿ(ವಿ) ಸಂಜ್ಞಕಾಃ**೧೧।

ಭವಿಷ್ಯ[ಂ]ತಿ ನರಾಧೀಶ:[ಶಾಃ] ಕರ್ನಾಟಕ್ಷಿತಿ ಮಂಡಲೇ ॥೧॥ ಯಿ ರೀತಿ ಹದಿಮೂರು ಮಂದಿ ರಾಯರು ಆಳಿದ ಮೇಲೆ ಕೃಷ್ಣರಾಯರ ಪರಿಯಂತರ ನಡದು ಬಂತು। ಅಲ್ಲಿಗೆ ರಾಯರ ವಂಶಾ ನಡದು ಬಂತ್ತು । ಅಲ್ಲಿಗೆ ರಾಯರ ವಂಶ ನಿಂತಿತು। ಅಳಿಯ ಶ್ರೀರಂಗರಾಯರು ಕೆಲವು ದಿವಸವಾಳಿದರು॥—ಶ್ರೀ ಶಾರದಾಂಬಾಯ ನಮಃ ॥ ಶ್ರೀ ರಾಮಾರ್ಪಣಮಸ್ತು॥ ಶ್ರೀ ವಾಸುದೇವ ಪರಬ್ರಹ್ಮಣೇ ನಮ: ॥

**ಆದಿಗುರು ಪರಂಪರೆ.**

ಶಿವಾಯ ನಮ: ॥ ವಿಷ್ಣವೇ ನಮ: ॥ ಬ್ರಹ್ಮಣೇ ನಮ: । ವಶಿಷ್ಠಾಯ ನಮ: । ಶಕ್ತಯೇ ನಮ: । ಪರಾಶರಾಯ ನಮಃ । ವ್ಯಾಸಾಯ ನಮ: । ಶುಕಾಯ ನಮ: । ಜೈನು (ಮಿ)ನಯೆ[ೀ]ನಮ: । ವೈಶಂಪಾಯ(+ನಾಯ)ನಮ: । ತೈ[ಪೈ]ಲವಾಯ ನಮ: । ಗೋವಿಂದ ಭಗವತ್ಪಾದಾಯ ನಮ: । ಶ್ರೀಶಂಕರಾಚಾರ್ಯ್ಯಾಯ ನಮ: । ಶ್ರೀ ಸನಂದನಾಚಾರ್ಯ್ಯಾಯ ನಮ: । ಸುರೇಶ್ವರಾಚಾರ್ಯ್ಯಾಯ ನಮ: । ತೊ[ೀ]ಟಕಾಚಾರ್ಯ್ಯಾಯ ನಮಃ । ಹಸ್ತಾಮಲಕಾಚಾರ್ಯ್ಯಾಯ ನಮ: । ಜ್ಞಾನಘನಾಚಾರ್ಯ್ಯಾಯ ನಮ: । ಜ್ಞಾನೋತ್ತಮ ಶಿವಾಯ ನಮ: । ಶಿಂಗಗಿರಿಶ್ವರಾಯ ನಮ: । ಈಶ್ವರತೀರ್ಥಾಯ ನಮ: । ನೃಸಿಂಹಮೂರ್ತಯೆ(ೀ) ನಮ: । ವಿವರಣಾಚಾರ್ಯ್ಯಾಯ ನಮಃ । ವಿದ್ಯಾಶಂಕರಾಯ ನಮಃ । ಭಾರತೀಕೃಷ್ಣ ತೀರ್ಥಾಯ ನಮಃ । ವಿದ್ಯಾರಣ್ಯಾಯ ನಮಃ । ಚಂದ್ರಶೇಖರ ರಕ್ಷಿಣ್ಯಾಯ ನಮ: । ನೃಸಿಂಹಭಾರತಿನೆ[ೀ] ನಮಃ । ಶಂಕರ ಭಾರತಿನೇ ನಮಃ । ನೃಸಿಂಹ್ಮಭಾರತಿನೇ ನಮಃ । ಪುರುಷೋತ್ತಮಭಾರತಿನೇ ನಮಃ । ರಾಮಚಂದ್ರಭಾರತಿನೇ ನಮ: । ನೃಸಿಂಹಭಾರತಿನೇ ನಮಃ । ಯಿಂಮಡಿಭಾರತಿನೇ ನಮಃ । ಅಭಿನವ ನೃಸಿಂಹ ಭಾರತಿನೇ ನಮಃ ।

---

೧೧. ಈ ೧೩ ಅಕ್ಷರಗಳು ಹರಿಹರಾದಿಯಾಗಿ ವಿಜಯನಗರವನ್ನು ಆಳಿದ ಸಂಗಮವಂಶೀಯರಾದ ೧೩ ಮಂದಿ ಅರಸರ ಹೆಸರುಗಳ ಪ್ರಥಮಾಕ್ಷರಗಳು; ಛಂದೋನುಕೂಲತೆಯ ಬಗ್ಗೆ ಇವುಗಳ ಸ್ವರರೂಪಗಳನ್ನು ಅಲ್ಲಲ್ಲಿ ಮಾರ್ಪಡಿಸಿಯದೆ. ಈಗಣ ಇತಿಹಾಸ ಸಂಶೋಧನವು ಗೊತ್ತುಹಚ್ಚಿರುವ ಮೇರೆಗೆ ಸಂಗಮವಂಶೀಯರು ೯-೧೦ ಮಂದಿಯಷ್ಟೇ ಆಳಿರುವರೆಂದು ತಿಳಿಯುತ್ತದೆ. ಈ ಸಂದರ್ಭದಲ್ಲಿ 'ಕೆಳದಿ ನೃಪವಿಜಯ'ದ ಉಪೋದ್ಘಾತ (ಪು. IX—XIII) ವನ್ನು ಓದುವುದು.

ಸಚ್ಚಿತಾ[ದಾ]ನಂದ ಭಾರತಿನೇ ನಮಃ। ನೃಸಿಂಹ ಭಾರತಿನೇ ನಮಃ। ಯಿಂಮಡಿ ಸಚ್ಚಿದಾನಂದ ಭಾರತಿನೇ ನಮಃ। ಅಭಿನವ ಸಚ್ಚಿದಾನಂದ ಭಾರತಿನೇ ನಮಃ[೧೨]। ಯಿವರು ನಾಶಿಕಾ ತ್ರಿಯಂಬಕದಲ್ಲಿ ಮುಕ್ತರಾದರು ॥—॥ ನೃಸಿಂಹಭಾರತಿನೇ ನಮಃ। ಸಚ್ಚಿದಾನಂದ ಭಾರತಿನೇ ನಮಃ। ಅಂತು ಮನ್ಮಥ ನಾಮ ಸಂವ್ವತ್ಸರ ಮಾರ್ಗಶಿರ ಬಹುಳ ೩೦ ವರಿಗೆ ನಿಂತವರು ಯಿವರು। ಯಿವರು ನಾಶಿಕಾ ತ್ರಿಯಂಬಕದಿಂದಾ **ಹೇವಳಂಬಿ ಸಂವತ್ಸರ ಆಶ್ವೀಜ ಶುದ್ಧ ೨ ಶುಕ್ರವಾರ**[೧೩] ಗೋಧೊಳಿ ಮುಹೂರ್ತ ಶುಕ್ರಹೋ[ ]ರೆಯಲ್ಲಿ ಶ್ರಿಂಗೇರಿಗ ಚಿತ್ತೈಸಿ ಶ್ರಿ ಶಾರದಾ ಅಮ್ಮನವರ ದರ್ಶನವ ಮ್ಮಾಡಿ ಮಠಪ್ರವೇಶಾ ಮಾಡಿದರು॥ ಯಿವರ ಕರಸುವ ಬಗ್ಯೆ ನಬಾಬು ಸಾಹೇಬರು[೧೪] ಬಿನ್ನವತ್ತಳೆ ಬರದು ವುಡುಗೆರೆ ಸಹಾ ಕಳುಹಿಸಿದಲ್ಲಿ ಹೇವಿಳಂಬಿ ಸಂ॥ದ ವೈಶಾಖ ಶುದ್ಧ ೫ ದಿವಸಾ ಪಂಚ್ಚವಟಿಯಿಂದಾ ಹೊರಟು, ಪುನಃ ಕ್ಕಾಗಿ ಮಿರಿಜ[?][೧೫]ಯಿಂದಾ ಕೃಷ್ಣವೇಣೀ ದಾಟಿ ಸವಣೂರಿಗಾಗಿ ಹೊನ್ನಾಳಿ ಸೀಮೆಗಾಗಿ ಕೂಡಕೆರಿಗೆ ಬಂದು। ವ್ಯಾಸಪೂಜೆಗಾಗಿ ಭಾದ್ರಪದ ಮಾಸದಲ್ಲಿ ನಗರಕ್ಕೆ ಬಂದು ರಾಜಭೇಟಿಯಾಗಿ ಶ್ರಿಂಗೇರಿಗೆ ಚಿತ್ತೈಸ್ತರು [ಚಿತ್ತೈಸಿದರು] ॥ ಶ್ರಿ ಶಾರದಾಂಬಾಯ ನಮಃ ॥ ಸರಭಸ ಕರವ[ ]ಗಾಗ್ರ [ಗ್ರ]ಸ್ತ ವರ್ಣಾದಿ ದೋಷಾ ಯದಿಭವತಿ ನ ರಾಜ್ಯಂ ಪುಸ್ತಕೆ( ) ಹಸ್ತದೋ( )ಷಾತ್ ॥ ಸಕಲಗುಣಗ್ರಹಣಾಂ ಸದ್ಗುಣಗ್ರಾಹಕಾನಾಂ ಕರಕೃತಮಪರಾಧಂ ಕ್ಷಂತುಮರ್ಹಂತಿಸಂತ: ॥=॥ ಶ್ರಿರಸ್ತು॥

× × × ×

ಈ ಮೇಲಣ ಲೇಖಕ್ಕೆ ಸಂಬಂಧಪಟ್ಟ ಕೆಲವು ಉತಾರೆಗಳನ್ನು 'ಕೆಳದಿ ನೃಪವಿಜಯ' ದಿಂದ ಇಲ್ಲಿ ಎತ್ತಿ ಕೊಟ್ಟಿದೆ-

(೧) .....ಉತ್ತರದಿಕ್ಕಿನ ಕೃಷ್ಣಾ ದೇವೀ ನದೀತೀರದಲ್ಲಿ ಗೃಹಸ್ಥಾಶ್ರಮದಲ್ಲಿರುತಿರ್ದ ಮಾಧವಭಟ್ಟನೆಂಬಾತಂ ದಕ್ಷಿಣದೇಶಕ್ಕೆ ಬಂದು ಕುಂತಳ ದೇಶದೊಳಗಣ ಪಂಪಾ ಕ್ಷೇತ್ರದಲ್ಲಿ ನಿಂದು ಭಾಗ್ಯಾಪೇಕ್ಷಿಯಾಗಿ ಶ್ರೀಚಕ್ರಯಂತ್ರ ಪುರಶ್ಚರಣಮಂ ಮಾಡುತ್ತುಮಿರಲಾಗಿ ಅಮ್ಮನವರು ಪ್ರಸನ್ನರಾಗಿ ನಿನಗಿಹಜನ್ಮದಲ್ಲಿ ಭಾಗ್ಯಪ್ರಾಪ್ತಿಯಿಲ್ಲಮುತ್ತರಜನ್ಮದಲ್ಲಿ ಕೊಟ್ಟೇನೆನಲಾಗಿಯಾ ಮಾತಂ ಮನದೆಕೊಂಡು ಆ ಮಾಧವ ಭಟ್ಟಂ ಶಂಕರಾಚಾರ್ಯರ ಶಿಷ್ಯರಾದ ವಿದ್ಯಾಶಂಕರರಿಂದೆ ಸನ್ಯಾಸಾಶ್ರಮವನಂಗೀಕರಿಸಿ ವಿದ್ಯಾರಣ್ಯರೆಂದು ಪ್ರಸಿದ್ಧ ನಾಮಾಂಕಿತರಾಗಿತುಮಿರಲಾಗಿ.... ಎಂದು ಅಮ್ಮನವರಿಂ ಸ್ವಪ್ನವಾಗಲಾಗಿ ಆ ಸ್ವಪ್ನಾರ್ಥವಂ ಮನದೊಳಿಟ್ಟು ಕತಿಪಯ ದಿವಸಂ ವರ್ತಿಸುತ್ತುಮಿರಲಾಗಿ ಯುತ್ತರ ದೇಶದಿಂದೆ ಸಹೋದರರಾದ ಹರಿಹರ ಬುಕ್ಕರೆಂಬ ಬಡ ಕ್ಷತ್ರಿಯರುಂ ಈ ದಕ್ಷಿಣರಾಜ್ಯಕ್ಕೈತಂದು ಕುರುಬರಲ್ಲಿ ನಂಟುತನವಂ ಮಾಡಿ ಹೆಣ್ಣುತಂದು ಮದುವೆಯಾಗಿ ಸುಖವಾಸಿಗಳಾಗಿರುತ್ತುಮಿರಲಾಗಿ ಅವರೊಳ್ ಪಿರಿಯನಾದ

---

೧೨ ಕೆಳದಿಯ ಬಸವಪ್ಪನಾಯಕನ ಪತ್ನಿ ಚನ್ನವೀರಮ್ಮಾಜಿಯ ಗೃಹೀತಪುತ್ರನಾದ ಸೋಮಶೇಖರ ನಾಯಕನಿಗೆ ಶಾ. ಶ. ೧೬೮೦ ನೆಯ ಈಶ್ವರ ಸಂ। ಶ್ರಾವಣ ಬ। ಪಂಚಮಿ ಗುರುವಾರದಂದು (ಕ್ರಿ. ಶ. ೧೭೫೭ ನೆಯ ಅಗೋಸ್ತು ೪ ನೆಯ ತಾರೀಕು) ರಾಜಪಟ್ಟವಾಗಿ ಅದೇ ಈಶ್ವರ ಸಂ। ಮಾರ್ಗಶಿರ ಬ। ದ್ವಾದಶಿಯಂದು ಶೃಂಗೇರಿಯ ಈ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಯವರನ್ನು ಅಲ್ಲಿಗೆ ಕರಸಿಕೊಂಡರೆಂದು 'ಕೆಳದಿ ನೃಪ ವಿಜಯ'ದಲ್ಲಿ (ಪು. ೨೧೭; ೩೭೧) ಹೇಳಿರುವುದರಿಂದ ಇವರು ಕ್ರಿ. ಶ. ೧೭೫೭ ರಲ್ಲಿ ಶೃಂಗೇರಿಯ ಗುರು ಪೀಠದಲ್ಲಿ ಇದ್ದರೆಂದಾಗುತ್ತದೆ.

೧೩. ಅತಏವ ಆ ಗುರುಗಳ ಕ್ರಿ. ಶ. ೧೭೫೭ ನೆಯ ಈಶ್ವರ ಸಂ।ದಿಂದ ಈಚೆಯ ಈ ಹೇವಿಳಂಬಿ ಸಂ। ಆಶ್ವೀಜ ಶುದ್ಧ ೨ ಶುಕ್ರವಾರವು ಕ್ರಿ. ಶ. ೧೭೭೭ ನೆಯ ಅಕ್ಟೋಬರ ೩ ನೆಯ ತಾರೀಕು ಶುಕ್ರವಾರವಾಗಬೇಕು. ಹಾಗಾದರೆ ಈ ಹಸ್ತಪ್ರತಿ ಅದಕ್ಕಿಂತ ಈಚೆಯಲ್ಲಿ, ಅಂದರೆ ಕ್ರಿ. ಶ. ಸು ೧೭೮೦–೯೦ ರೊಳಗೆ ಬರೆಯಲ್ಪಟ್ಟಿರಬೇಕು.

೧೪. ಈ 'ನಬಾಬು ಸಾಹೇಬ' ಎಂದರೆ ಹೈದರ್ ಅಲ್ಲೀ ಶಾ. ಶ. ೧೬೮೯ (ಕ್ರಿ. ಶ ೧೭೬೭—೬೮)ನೆಯ ಸೊರಬ ನಂ. ೩೫ (E C. VIII) ನೆಯ ಲೇಖದಲ್ಲಿ ಆತನನ್ನು 'ಹಜರತು ನವಾಬು ಸಾಹೇಬ' ಎಂದಿದೆ.

೧೫. ಈ ಅಕ್ಷರಗಳು ಸರಿಯಾಗಿ ಓದಬರುವುದಿಲ್ಲ ಇವು 'ಮಿರಿಜ' ಎಂದಾದರೆ, ಆ ಊರು 'ಮಿಡಿಜೆ' ಎಂಬುದಾಗಿರಬಹುದೇ ? 'ಕೆಳದಿನೃಪವಿಜಯ'ದಲ್ಲಿ (X. ೧೧–೧೩) ಮಿಡಿಜೆಯನ್ನು ಹೊನ್ನಾಳಿ ಮತ್ತು ಸವಣೂರಿನ ನೆರೆಯಲ್ಲಿ ಹೇಳಿದೆ.

ಹರಿಹರಗೆ ನೀನುಂ ಬುಕ್ಕನುಂ ಸಹ ವಿದ್ಯಾರಣ್ಯರ ಬಳಿಗೆ ಹೋಗಿ ಆಶ್ರಯಿಸಲಾಗಿ ಮಹದೈಶ್ವರ್ಯಂ ಬಂದೀತೆಂದು ಸ್ವಪ್ನವಾಗಲಾಗಿ ಆ ಮೇಲೆ ಹರಿಹರ ಬುಕ್ಕರ್ ಹಂಪೆಗೆ ಬಂದು ವಿದ್ಯಾರಣ್ಯರಂ ಕಂಡು ಸಂಧಿಸಿ ಸ್ವಪ್ನಾಭಿಪ್ರಾಯವನುಸಿರಲಾಗಿ ಆಗ ವಿದ್ಯಾರಣ್ಯರ್ ಹಂಪೆಯ ಸ್ಥಳದವರಂ ಕರೆಯಿಸಿ ವಿಚಾರವಂ ಮಾಡಲಾಗಿ ಅವರ್ಪೇಳಿದುದು- ಪೂರ್ವದೊಳ್ ಸೂರ್ಯವಂಶಜನಾದ ತ್ರಿಶಂಕು ಮಹಾರಾಯಂ ಪಂಪಾ ಕ್ಷೇತ್ರಕ್ಕೆ ಬಂದು ಈ ವಿರೂಪಾಕ್ಷ ಲಿಂಗಂ ಪ್ರಾದುರ್ಭವ ಲಿಂಗವೋ ಪ್ರತಿಷ್ಠಾ ಲಿಂಗವೋ ಯೆಂದು ಕೇಳಿದಲ್ಲಿ ಈ ಲಿಂಗಂ ಜ್ಯೋತಿರ್ಮಯವಾದ ಲಿಂಗಂ ಈ ಲಿಂಗದ ಮಹಿಮೆಯಂ ಪೇಳ್ವುದಕ್ಕೆ ಬ್ರಹ್ಮದೇವರಿಗಾದರೂ ಅಸಾಧ್ಯವೆಮ್ಮ ಪಾಡೇನೆನಲಾಗಿ ಆ ಮಾತಂ ಕೇಳ್ದು ಆ ತ್ರಿಶಂಕು ಮಹಾರಾಯಂ ಪ್ರತಿಷ್ಠಾಲಿಂಗವೋ ಯೆಂದು ಕೇಳ್ದ ದೋಷ ನಿವೃತ್ತಿಗೋಸುಗಂ ಕೃಷ್ಣವೇಣೀ ನದೀತೀರಮಾರಭ್ಯ ಸೇತು ಪರ್ಯಂತಂ ಮೂರುವರೆ ಕೋಟಿ ರಾಜ್ಯವನೀ ವಿರೂಪಾಕ್ಷ ದೇವರ್ಗೆ ಧಾರೆಯನೆರೆದನೆಂದು ಸ್ಥಳದವರ್ಪೇಳಲ್ ಆ ಮಾತಂ ಕೇಳ್ದಾ ವಿದ್ಯಾರಣ್ಯರ್ ಹರಿಹರ ಬುಕ್ಕರಂ ಕರೆದು ಈ ರಾಜ್ಯಕ್ಕೆಲ್ಲಂ ವಿರೂಪಾಕ್ಷ ಸ್ವಾಮಿಯೇ ಕರ್ತಂ, ನೀಂ ಆ ದೇವರ ಭಕ್ತರಾಗಿ ವರ್ತಿಸುತ್ತುಂ ಶ್ರೀವಿರೂಪಾಕ್ಷನೆಂದೊಪ್ಪವಂ ಹಾಕಿ ನಡಕೊಂಡು ಸದ್ಧರ್ಮದಿಂ ರಾಜ್ಯವನಾಳಿಕೊಂಡಿರ್ಪುದೆಂದು ಕಟ್ಟಳೆಯಂ ರಚಿಸಿ ಆ ಹರಿಹರಗೆ ಹರಿಹರ ರಾಯನೆಂದ ಪೆಸರಿಟ್ಟು ವಿದ್ಯಾನಗರಮೆಂಬ ಪಟ್ಟಣಮಂ ನಿರ್ಮಾಣಂ ಮಾಡಿಸುವ ಕಾಲದಲ್ಲಿಯಾ ಪಟ್ಟಣದ ಕೆಸರ್ಗಲ್ಲ ಮುಹೂರ್ತ ಕಾಲದಲ್ಲಿ ವಿಧಿವಶದಿಂದ ದಾಸನೂದಿದ ಶಂಖಧ್ವನಿಯಿಂ ವಿದ್ಯಾರಣ್ಯರ ನಿಯಾಮಕಗೈದ ಲಗ್ನಂ ವ್ಯತ್ಯಾಸವಾಗಲಾಗಿ ಈ ಪಟ್ಟಣಂ ಕೆಲವು ವರ್ಷದ ಮೇಲೆ ತುರಷ್ಕಾಧೀನವಾದೀತೆಂದು ವಿದ್ಯಾರಣ್ಯಾತ್ಮಕ ಕಾಲಜ್ಞಾನವೆಂದು ಕೆಲವು ಕಾಲಜ್ಞಾನ ಗ್ರಂಥವಂ ಬರೆಸಿ, ಆ ವಿದ್ಯಾರಣ್ಯರ್ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೨೫೮ ನೆಯ ಸಂವತ್ಸರದಲ್ಲಿ ಆ ವಿದ್ಯಾನಗರೀ ರತ್ನ ಸಿಂಹಾಸನದಲ್ಲಿ ಹರಿಹರರಾಯಂಗೆ ಪಟ್ಟಮಂ ಕಟ್ಟಿ ನಿಲಿಸಿದರ್; ಹೀಗಿರಲಾಗಿ ಕೆಲವು ದಿವಸದ ಮೇಲೆ ರೇವಣಸಿದ್ಧನೆಂಬೊಬ್ಬ ಜಂಗಮ ಸ್ವರೂಪ ಗಣಾಧೀಶ್ವರಂ ಒಂದು ದಿವ್ಯಲಿಂಗಮಂ ವಿದ್ಯಾರಣ್ಯರ ವಶಕ್ಕೆ ತಂದು ಕೊಟ್ಟು ಈ ಲಿಂಗಂ ಚಂದ್ರಮೌಳೀಶ್ವರಂ ಈ ಲಿಂಗಮಂ ನಿತ್ಯಂ ಪೂಜೆ ಗೈವುದೆಂದುಸಿರ್ದಂತರ್ಧಾನನಾಗಿ ಪೋಗಲೊಡನಾ ವಿದ್ಯಾರಣ್ಯರ್ ಶೃಂಗಪುರಕ್ಕೈತಂದು ಶೃಂಗೇರಿ ಮೂಲ ಸಂಸ್ಥಾನದ ಮಠದಲ್ಲಿ ಆ ಚಂದ್ರಮೌಳೀಶ್ವರನ ಪೂಜೆಯಂ ಮಾಡಿಕೊಂಡಿರ್ದು ಶಿಷ್ಯಪರಂಪರೆಯಲ್ಲಿಯುಂ ನಡಕೊಂಡು ಬಾಹಂತು ಕಟ್ಟಲೆಯಂ ಮಾಡಿಸಿದರ್. ಶೃಂಗಪುರದ ಸಂಸ್ಥಾನದೊಳವರಂತು ವರ್ತಿಸುತ್ತುಮಿರಲಿತ್ತಂ ವಿದ್ಯಾನಗರಿಯುಂ ರಾಯಸಂಸ್ಥಾನವೆಂದು ಜಗತ್ಪ್ರಖ್ಯಾತವಾಯ್ತು. ಆ ರತ್ನಸಿಂಹಾಸನವನಾಳ್ದ ರಾಯರ ವಂಶಪರಂಪರಾ ವಿವರಣಂ-

ಹಬುಹೋ ವಿಬುದೇರಾವಿದೇವಿಮಾರಾವಿಸಂ ಸ್ಥಿತಾಃ[೧೧] । ತ್ರಯೋದಶ ಮಹೀಪಾಲಾ ರತ್ನಸಿಂಹಾಸನಾಧಿಪಾಃ ॥ ದ್ವಾತ್ರಿಂಶದುತ್ತರಾನ್ಶೇತೇ ದ್ವಿಶತಾಬ್ದಾನ್ ಕ್ಷಿತೌಸ್ಥಿತಾಃ ।

( ಈ ಮೇಲೆ ಬರೆದ ಶ್ಲೋಕ ಸಂಜ್ಞಾರ್ಥ ಪ್ರಕಾರ ವಿದ್ಯಾನಗರೀ ರತ್ನಸಿಂಹಾಸನವನಾಳ್ವ ರಾಯರ ವಿವರಣ—ಹರಿಹರರಾಯ । ಬುಕ್ಕರಾಯ । ಹರಿಹರರಾಯ । ವಿರೂಪಾಕ್ಷರಾಯ । ಬುಕ್ಕರಾಯ । ದೇವರಾಯ । ರಾಮರಾಯ । ವಿರೂಪಾಕ್ಷರಾಯ । ದೇವರಾಯ । ವಿಠಲರಾಯ । ಮಲ್ಲಿಕಾರ್ಜುನ ರಾಯ । ರಾಮರಾಯ । ವಿರೂಪಾಕ್ಷರಾಯ ।........) (ಪು. ೧೫-೧೭.)

(೨) ಸರ್ವಜಗತ್ಕರ್ತೃವಪ್ಪ ಶ್ರೀಮತ್ಪರಮೇಶ್ವರನಿಂ ಹರಿ ಹರಿಯಿಂ ಬ್ರಹ್ಮನಾ ಬ್ರಹ್ಮನಿಂ ವಸಿಷ್ಠನಾ ವಸಿಷ್ಠನಿಂ ಶಕ್ತಿಯಾ ಶಕ್ತಿಯಿಂ ಪರಾಶರನಾ ಪರಾಶರನಿಂ ವ್ಯಾಸನಾ ವ್ಯಾಸನಿಂ ಶುಕಯೋಗೀಂದ್ರನಾ ಶುಕಯೋಗೀಂದ್ರನ ಶಿಷ್ಯರ್ ಗೌಡಪಾದಾಚಾರ್ಯರಾ ಗೌಡಪಾದಾಚಾರ್ಯರ ಶಿಷ್ಯರ್ ಗೋವಿಂದ ಭಗವತ್ಪಾದಾಚಾರ್ಯರಾ ಗೋವಿಂದ ಭಗವತ್ಪಾದಾ ಚಾರ್ಯರಿಂದಿತ್ತಮಯೋನಿಜರೆಂದೆನಿಸಿ ಭೂಮಿಯೊಳವತರಿಸಿದ ಈಶ್ವರಾಂಶೀಭೂತರಾದ ಕಾರಣರೂಪರಾದ ಶ್ರೀಮಚ್ಛಂಕರಾಚಾರ್ಯರಾ ಶಂಕರಾಚಾರ್ಯರ್ಗೆ ನಾಲ್ವರ್ ಶಿಷ್ಯರವರಾರೆಂದೊಡೆ— ಹಸ್ತಾಮಳಕಾಚಾರ್ಯರ್, ತೋಟಕಾಚಾರ್ಯರ್, ಪಾದಪದ್ಮಾಚಾರ್ಯರ್, ಸುರೇಶ್ವರಾಚಾರ್ಯರ್;...........ಇನ್ನಾ ಸುರೇಶ್ವರಾಚಾರ್ಯಕರಕಮಲಸಂಜಾತರಾರೆಂದೊಡೆ, ಅವರ ನಾಮಂಗಳ್—ನಿತ್ಯಬೋಧ ಘನಾಚಾರ್ಯರ್, ಅವರ ತರುವಾಯ ನೃಸಿಂಹಾಚಾರ್ಯರ್, ಆ ತರುವಾಯ ಜ್ಞಾನೋತ್ತಮ ಶಿವಾಚಾರ್ಯರ್, ಆ

ತರುವಾಯ ಜ್ಞಾನಗಿರ್ಯಾಚಾರ್ಯರ್, ಆ ತರುವಾಯ ನೃಸಿಂಹ ಗಿರ್ಯಾಚಾರ್ಯರ್, ಆ ತರುವಾಯ ಈಶ್ವರ ತೀರ್ಥಾಚಾರ್ಯರ್, ಆ ತರುವಾಯ ನೃಸಿಂಹಾಚಾರ್ಯರ್, ಆ ತರುವಾಯ ವಿದ್ಯಾತೀರ್ಥಾಚಾರ್ಯರ್, ಆ ತರುವಾಯ ಭಾರತೀತೀರ್ಥಕೃಷ್ಣಾಚಾರ್ಯರ್, ಆ ತರುವಾಯ ವಿದ್ಯಾರಣ್ಯಯೋಗೀಂದ್ರರ್,........ ಆ ವಿದ್ಯಾರಣ್ಯರ ತರುವಾಯ ಚಂದ್ರಶೇಖರ ಭಾರತೀಂದ್ರರ್, ಆ ತರುವಾಯ ನೃಸಿಂಹಭಾರತಿಗಳ್, ಆ ತರುವಾಯ ಪುರುಷೋತ್ತಮಭಾರತಿಗಳ್, ಆ ತರುವಾಯ ಶಂಕರಭಾರತಿಗಳ್, ಆ ತರುವಾಯ ನೃಸಿಂಹಭಾರತಿಗಳ್, ಆ ತರುವಾಯ ಪುರುಷೋತ್ತಮಭಾರತಿಗಳ್, ಆ ತರುವಾಯ ರಾಮಚಂದ್ರ ಭಾರತಿಗಳ್, ಆ ತರುವಾಯ ನೃಸಿಂಹಭಾರತಿಗಳ್, ಆ ತರುವಾಯ ಮತ್ತಂ ನೃಸಿಂಹಭಾರತಿಗಳ್, ಆ ತರುವಾಯ ಅಭಿನವ ನೃಸಿಂಹಭಾರತಿಗಳ್, ಆ ತರುವಾಯ ಸಚ್ಚಿದಾನಂದ ಭಾರತಿಗಳ್, ಆ ತರುವಾಯ ಸಚ್ಚಿದಾನಂದ ಭಾರತೀಸ್ವಾಮಿಗಳ ಕರಕಮಲ ಸಂಜಾತರಾದ ಅಭಿನವ ಸಚ್ಚಿದಾನಂದ ಭಾರತಿಗಳ್.[೧೨] ( ಪು. ೨೧೯—೨೧ )

(೩) ವಿದ್ಯಾರಣ್ಯ ಕಾಲಜ್ಞಾನದ ಶ್ಲೋಕಗಳು

೧

ಏತಸ್ಮಿನ್ನಂತರೇ ಕಾಲೇ ಕುರುವಂಶಪ್ರಸೂತಿಜೌ ।
ಕೋಶಾಗಾರಪ್ರತೀಹಾರೌ । ವೀರರುದ್ರಮಹೀಪತೇಃ ॥
ಆಗತೌ ಯವನಾಕ್ರಾಂತಾವಸಹಾಯೌ ।
ಶಿಲಾಪುರೀಂ ॥
[೧೬]ರಾಮನಾಥಂ ನಿಷೇವಾತೇ ರಾಜಾನಂ
ಕೋಶಪಾಲನೇ ॥
ಸಾಮ್ರಾಜ್ಯಲಕ್ಷಣೋಪೇತೌ ಮಹೋರಸ್ಕೌ
ಮಹಾಭುಜೌ ॥
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ
ಸಮಾಗತೌ ।
[೭]ಬಲ್ಲಾಳಕ್ಷಿತಿಪಾಲೇನ ಯುದ್ಧಂ ಕೃತ್ವಾ
ಪರಾಜಿತೌ ।

. . . . . . . . . . . . . . . . . . . . . . . .

ಅನಜ್ಞಪ್ತೌ ತತೋ ಗತ್ವಾ ಬಲ್ಲಾಳಕ್ಷಿತಿಪಂ ಪುನಃ ।
ವಿಜಿತ್ಯ ರಾಜ್ಯಮಾಕ್ರಮ್ಯ[೧೭] ಹಸ್ತಿಕೋಣಾಹ್ವಯೇ
ಪುರೇ ॥

. . . . . . . . . . . . . . . . . . . . . . . .

೨

ಪುರಾದ್ವೌ ಪುರುಕ್ಷೌ (ಷೌ) ವೀರೌ ಭ್ರಾತರೌ ತು
ಯಶಸ್ವಿನೌ ।
ಗೃಹೀತೌ ತೌ ಸುರತ್ರಾಣಭಟೈರ್ನಿರ್ಗತ್ಯ ಸಂಸ್ಥಿತಾ॥
ಸುರತ್ರಾಣಗೃಹೀತೌ ತೌ ತತ್ರೈಕ ದಿವಸಾತ್ಯಯೇ ।
ರಾತ್ರಾವಶನಿಪಾತಾಂಬು ಮೇಘಘೋಷ
ನಿರಾಕುಲೌ ॥
ದ್ವಾರಭಿತ್ತ್ಯೈಸ್ಸಮೀಪಸ್ಥೌ ಸುರತ್ರಾಣೇಪಿ
ನಿದ್ರಿತೇ ।
ಬಹಿರ್ನಿರ್ಗತ್ಯ ತೌ ಕೃಷ್ಟೌ ಕಾವೇ(ತಾವತ್ರ
ಸಂಸ್ಥಿತೌ ॥
ಗೃಹೀತೌ ಭ್ರಾತರೌ ಮತ್ವಾ ಸತ್ಯಸಂಧೌ
ತತಸ್ಸುಧೀಃ ।
ತಯೋರ್ದತ್ವಾದೇಶಮಾದೌ **ಕರ್ಣಾಟಂತು
ವಿಸೃಷ್ಟವಾನ್** ॥
ತೇನಾಜ್ಞಪ್ತೌ ತು ತೌ ವೀರೌ ಶೀಘ್ರಮಾಗತ್ಯ
ತೌನದೀಂ ।
ಉಡುಪೇನ ಸಮುತ್ತೀರ್ಯ ಕೃಷ್ಣವೇಣೀಂ
ಸಮಾಗತೌ ।
ಬಲ್ಲಾಳ ಕ್ಷಿತಿಪಾಲೇನ ಯುದ್ಧಂ ಕೃತ್ವಾ
ಪರಾಜಿತೌ ।
ವನಮಧ್ಯೇ ಪರಿಶ್ರಾಂತೌ ವೃಕ್ಷಮೂಲಮೂಲ
ಮುಪಾಶ್ರಿತೌ ॥

. . . . . . . . . . . . . . . . . . . . . . . .

ತಸ್ಮಿನ್ನೇವ ಕ್ಷಣೇ ಪೂರ್ವಂ ಭಗ್ನಂ ಸೈನ್ಯಂ
ಸಮಾಗತಂ ।
ಕ್ರೋಡೀಕೃತ್ಯ ತದಾ ಸರ್ವಂ ವಿದ್ಯಾರಣ್ಯ
ಮುನೀಶ್ವರಂ ॥
ದದರ್ಶತುರ್ವದಾನ್ಯೌ ತೌ ತೇನಾಶೀರ್ವಚನಾ
ದಿಭಿಃ ।
ಅನುಜ್ಞಾತೌ ತದಾ [೭] **ವೀರಬಲ್ಲಾಳ** ನೃಪತಿಂ
ಪುನಃ ।

---

೧೬. ಈ ರಾಮನಾಥನೆಂಬವನು ಹೊಯ್ಸಳ ಸೋಮೇಶ್ವರನ ಎರಡನೆಯ ಮಗನೂ III ನರಸಿಂಹನ ತಮ್ಮನೂ ಆದ ರಾಮನಾಥನಾಗಿರಬಹುದೆಂದು ತೋರುತ್ತದೆ.

ನಿರ್ಜಿತ್ಯ ರಾಜ್ಯಮಾಕ್ರಮ್ಯ ಶಾಸನು ವರ ಮುಶಾ
ಲಿನೌ ।
ತದಾ ಹಿ ಕ್ಷೇತ್ರ ನಿಕ್ಷಿಪ್ತಂ ಸಿಂಹಪೀಠಂ
ಪ್ರಲೀಭಕಃ ॥
ಲಬ್ಧ್ವಾ ತು ಸಿಂಹಪೀಠಂ ಚ ಸಮಾಗತ್ಯ
ಸಮಾಶ್ರಿತೌ ।
ತುಂಗಭದ್ರಾ ನದೀ ತೀರೇ ೧೭ ಹಸ್ತಿಕೋಣಾ
ಹ್ವಯೇ ಪುರೇ ॥
ತಸ್ಮಿನ್ನೇವ ತು ಕಾಲೇ ಚ ಮೃಗಯಾಂ
ಗಂತುಮುದ್ಯತೌ ।
ತುಂಗಭದ್ರಾನದೀಂ ತೀರ್ತ್ವಾ ದಕ್ಷಿಣೇ
ದಿಗ್ವಿಭಾಗಕೇ ॥
.................... ... . . . .... . . .
ತಚ್ಛ್ರುತ್ವಾ ವಚನಂ ಯೋಗೀ ಸಮುಯಾತಸ್ತ
ದನ್ವಿತಃ ।
ತಾಂ ಸ್ಥಲೀಂ ಸ ಸಮೀಕ್ಷ್ಯಾಥ ರಾಜಧಾನೀಂ
ಮಹೀಕ್ಷಿತಾಂ ॥

ತತ್ಪ್ರಂಶಜಾನಾಮನ್ಯೇಷಾಂ ಕರ್ಣಮೇ(ಪ್ಯೇ)ಪ
ಚಕ್ರಮೇ ।
೧೦ ದಿಕ್ಸಂಖ್ಯಾ ಬಾಣಯುಕ್ತದ್ವಿ ಚಂದ್ರ (೧೫೫೦)
ಯಂಕ್ತ ಶಕಾನ್ವಿತೇ ॥
ಧಾತೃಬ್ದೇ ಸಿತಸಪ್ತಮ್ಯಾಂ ವೈಶಾಖೇಮಾಸಿ
ಭಾಸ್ಕರೇ ।
ಸುಲಗ್ನೇ ಶುಭನಕ್ಷತ್ರೇ ಮಾ (ಮ) ಘಾಖ್ಯೇ
ಚ ಸಿಶೇಷತಃ ॥
ರಚಿತಾ ನಗರೀ ರಮ್ಯಾ ಪುರುಷಾಕೃತಿಶಾಲಿನೀ ॥
. . . . . . ... . . . .. . .... . . .
ತಸ್ಯಾಂ ಪುರ್ಯಾಂ ಚ ರಾಜಾನಸ್ತ್ರಯೋದಶ
ಯಥಾಕ್ರಮಂ ।
೧೧ ಹರಿಹರೋ ವಿಬುದೇರಾವಿ ದೇವಿ ಮಾರಾವಿ
ಸಂಜ್ಞಿತಾಃ ॥
ಭವಿಷ್ಯಂತಿ ಮಹೀಪಾಲಾಃ ಕರ್ನಾಟಕ್ಷಿತಿಮಂಡಲೇ ।
. .. . .
(ಉಪೋದ್ಘಾತ.ಪು. XIX—XXI)

೧೭. ಹಸ್ತಿಕೋಣ = ಆನೆಗೊಂದಿ. (ಸಂ. ಕೋಣ = ಕ ಗೊಂದಿ = ಸಂದಿ, ಮೂಲೆ)

# ವಿಜಯನಗರ ಸಾಮ್ರಾಜ್ಯ ಸ್ಥಾಪನೆ

## ಮತ್ತು

# ಅದರ ನೈಸರ್ಗಿಕ ಮಹಾತ್ಮ್ಯ

( ಲೇಖಕ:—ಟಿ. ಬಿ ಕೇಶವರಾವ. ಬಳ್ಳಾರಿ )

ಮಹಾರಾಷ್ಟ್ರ ಕಾಕತೀಯ ಭಲ್ಲಾಳ ಸಾಮ್ರಾಜ್ಯಗಳ ಕೆಳಗೆ ಸುಖವಾಗಿದ್ದ ದಕ್ಷಿಣ ಹಿಂದೂ ದೇಶ ರಾಜ್ಯಗಳ ಮೇಲೆ ಕ್ರಿಸ್ತ ಶಕ ೧೨೯೪ ರಲ್ಲಿ ತುರುಷ್ಕವಾಹಿನಿ ಹಠಾತ್ತಾಗಿ ಓರುಗಲ್ಲಿನವರೆಗೂ ಪ್ರವಹಿಸಿತು. ಇದರ ತರುವಾಯ ೧೩೦೭, ೧೩೦೯ ಮತ್ತು ೧೩೧೦ನೆಯ ಸಂವತ್ಸರಗಳಲ್ಲಿ ಪುನಃ ದಾಳಿಯಾಯಿತು. ಕೊನೆಯ ಸಲ ಮಧುರಾ, ರಾಮೇಶ್ವರಗಳವರೆಗೂ ಅವರು ನುಗ್ಗಿದರು. ಈ ಪ್ರವಾಹಗಳಲ್ಲಿ ಮೇಲ್ಕಾಣಿಸಿದ ಮೂರು ರಾಜ್ಯಗಳೂ ಕೊಚ್ಚಿಕೊಂಡು ಹೋದವು. ಇಷ್ಟೆಲ್ಲಾ ಆದ ಮೇಲೆ, ದಕ್ಷಿಣ ಹಿಂದೂದೇಶವೆಲ್ಲವೂ ಚಿಕ್ಕ ಚಿಕ್ಕ ಸ್ವತಂತ್ರ ರಾಜ್ಯಗಳಿಂದ ತುಂಬಿ ಹೋಯಿತು.

ಚರಿತ್ರೆಯನ್ನೋದಿದವರಿಗೆ ದಕ್ಷಿಣ ಹಿಂದುಸ್ಥಾನವೆಲ್ಲಾ ಕ್ಷಣಭಂಗುರಸಾಮ್ರಾಜ್ಯಸಂಸ್ಥಾಪನೆಯ ಕಥೆಗಳಿಂದ ತುಂಬಿದೆಯೆಂಬುದು ವ್ಯಕ್ತಪಡುತ್ತದೆ. ಚಾಳುಕ್ಯ, ಪಶ್ಚಿಮ ಚಾಳುಕ್ಯ, ಪೂರ್ವಚಾಳುಕ್ಯ, ರಾಷ್ಟ್ರಕೂಟ, ಕಾಕತೀಯ ಮೊದಲಾದ ವಂಶಗಳ ರಾಜರ ನೀತಿಧೋರಣೆಯು ಹೇಗಿದ್ದರೂ ಪ್ರಜರನ್ನು ಮಾತ್ರ ಸುಖದಲ್ಲಿಟ್ಟಿದ್ದರು. ಆ ರಾಜರೆಲ್ಲರೂ, ರಾಜ-ಪ್ರಜೆಗಳಿಗಿರುವ ನೀತಿಯನ್ನು ಮನ್ನಿಸಿ, ಸರ್ವದಾ ಪ್ರಜಾಕ್ಷೇಮವನ್ನು ಕೋರುತ್ತಾ ಧರ್ಮರಕ್ಷಣೆ ಮಾಡುತ್ತಾ, ರಾಜ್ಯಭಾರಮಾಡಿದರು.

ಮುಸಲ್ಮಾನರ ದಂಡಯಾತ್ರೆಯಿಂದ ಈ ಪರಿಸ್ಥಿತಿಗಳೆಲ್ಲವೂ, ವ್ಯಸ್ತವಾದುವು. ಅವರಿಗೆ ವಿಗ್ರಹಾರಾಧನೆ ಅಸಹ್ಯವಾಗಿದ್ದುದರಿಂದ, ಹಿಂದೂದೇವಾಲಯಗಳನ್ನು ನೆಲಮಟ್ಟ ಮಾಡುತ್ತಾ ದೇವತಾ-ವಿಗ್ರಹಗಳನ್ನೊಡೆಯುತ್ತಾ ಸಾಗಿದರು. ಕೆಲವು ಕಡೆಗಳಲ್ಲಿ ದೌರ್ಜನ್ಯ ಒತ್ತಾಯಗಳಿಂದಲೂ, ಕೆಲವೆಡೆಗಳಲ್ಲಿ ಧನರಾಶಿಯ ಆಶೆಯನ್ನು ಹಚ್ಚಿಯೂ, ಹಿಂದೂ ಪ್ರಜೆಗಳ ಜಾತಿಮತ ಪದ್ಧತಿಗಳನ್ನು ಹಾಳು ಮಾಡಿ, ಅವರನ್ನು ಇಸ್ಲಾಂ ಮತದಲ್ಲಿ ಸೇರಿಸಿಕೊಂಡರು. ಹಿಂದೂಗಳಿಗೆ ಸಹಿಸಲಸಾಧ್ಯವಾದ ಶಾಸನ ಪ್ರಯೋಗದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದರು. ಇದರಿಂದ ಅಶಾಂತಿಯು ಪ್ರಜ್ವಲಿಸಿ, ವ್ಯವಸಾಯಾದಿವೃತ್ತಿಗಳು ಕ್ಷೀಣಿಸಿದುವು, ಇದನ್ನು ಸಹಿಸಲಾರದೆ, ಜನರು ತಮ್ಮ ತಮ್ಮ ಪಟ್ಟಣ ಗ್ರಾಮಾದಿಗಳನ್ನು ತ್ಯಾಗಮಾಡಿ ದೂರ ಹೋಗಲಿಕ್ಕೆ ಹತ್ತಿದರು. ಇಂಥಾ ಪರಿಪಾಲನವು ಉತ್ತರ ಹಿಂದೂಸ್ಥಾನದಲ್ಲಿ ಒಂದು ಶತಮಾನದವರೆಗೂ ಇದ್ದಿತು. ಯುದ್ಧವೇ ವೃತ್ತಿಯಾಗುಳ್ಳ ಯೋಧರೂ, ಕೆಲವು ರಾಜವಂಶಜರೂ, ದಕ್ಷಿಣ ಹಿಂದೂದೇಶಕ್ಕೆ ಬಂದು ನೆಲಿಸಿದರು.

ಮೂರನೆಯ ದಂಡಯಾತ್ರೆಯಲ್ಲಿ ಸರ್ದಾರನಾದ ಮಲ್ಲಿಕ್ ಕಾಫೂರನು ಹಿಂದಿರುಗಿ ಹೋಗಬೇಕಾದರೆ, ದಕ್ಷಿಣದೇಶದ ಮಧುರೆಯಲ್ಲಿ, ರಾಜ್ಯಪರಿಪಾಲನೆ ಮಾಡಲು ಒಬ್ಬ ಸರ್ದಾರನನ್ನು ಬಿಟ್ಟು ಹೋದನು. ದೆಹಲಿನಗರವು ಬಹಳ ದೂರವಿದ್ದ ಕಾರಣ ಈ ಸರದಾರನು ಸುಲ್ತಾನರ ಅಂಕಿತಕ್ಕೆ ಒಳಗಾಗದೆ ಸ್ವತಂತ್ರನಾದನು. ಅಂದಿನಿಂದ ಹರಿಹರನ ತಮ್ಮನ ಮಗನಾದ ಕಂಪರಾಯನು ಬರುವವರೆಗೂ, ಮಧುರೆಯ ಸುಲ್ತಾನರು ಹಿಂದೂಗಳಿಗೆ ಕೊಟ್ಟ ಹಿಂಸೆಯು ಅವರ್ಣನೀಯವಾದುದು. ದೇವಾಲಯಗಳನ್ನು ಕೆಡವಿ ವಿಗ್ರಹಗಳನ್ನೊಡೆಯುವ ಮಾಮೂಲು ಧೋರಣೆ ಒಂದೆಡೆಗಿರಲಿ, ಪುರುಷರನ್ನು ತಮ್ಮ ಸ್ತ್ರೀಯರೆದುರಿಗೆ ಕಂಭಕ್ಕೆ ಕಟ್ಟಿ, ವಿಚಿತ್ರ ಹಿಂಸೆಗೆ ಗುರಿಪಡಿಸುವ ಪದ್ಧತಿಯು ಅನೇಕ ವರ್ಷಗಳವರೆಗೂ ಜಾರಿಯಲ್ಲಿದ್ದಿ

ತೆಂದು ಒಬ್ಬ ಪ್ರಯಾಣಿಕನು ಬರೆದಿರುತ್ತಾನೆ. ಈ ಪ್ರಯಾಣಿಕನು ಮಧುರಾಸುಲ್ತಾನರ ದಬ್ಬಾಳಿಕೆಯನ್ನು ವಿಶದವಾಗಿ ವರ್ಣಿಸಿರುವನು.

ಉತ್ತರಹಿಂದುಸ್ಥಾನದಿಂದ ಬರುವ ವಾರ್ತೆಗಳ ಜೊತೆಯಲ್ಲಿ ಮಧುರಾಸುಲ್ತಾನರ ಶೌರ್ಯಗಳಿಗೆ ದಿಕ್ಕುತೋರದೆ ಇರುವ ನಿಸ್ಸಹಾಯ ಪ್ರಜೆಗಳಿಗೆ ೧೩೨೫ ರಲ್ಲಿ ಮಹಮ್ಮದ್ ಬಿನ್ ತಘಲಕ್ ಎಂಬ ಮೂರ್ಖನೂ, ಅಜ್ಞಾನಿಯೂ, ಕ್ರೂರಪ್ರವೃತ್ತಿಯ ರಾಕ್ಷಸನೂ, ದಿಲ್ಲಿಯ ಸಿಂಹಾಸನವೇರಿದನೆಂಬ ಭಯಂಕರ ವಾರ್ತೆಯು ಹಿಂದೂಗಳ ಎದೆ ಒಡೆಯುವಂತೆ ಎಲ್ಲೆಲ್ಲಿಯೂ ಹಬ್ಬಿತು. ಅವನು ದಕ್ಷಿಣ ದೇಶದ ವರೆಗೂ ತನ್ನ ಹುಚ್ಚುತನದ ರಾಜ್ಯಭಾರವನ್ನು ಚಲಾಯಿಸಲಿಕ್ಕೆ ಹತ್ತಿದನು. ತಮ್ಮ ದೇಶದಲ್ಲಿ ತಮ್ಮ ಮತಧರ್ಮಗಳಿಗೂ, ಸಾಮಾನ್ಯ ಹಕ್ಕುಗಳಿಗೂ, ದಾಳಿಯಾಗುತ್ತಿರುವದನ್ನು ಕಂಡು, ಇದನ್ನು ಹೇಗಾದರೂ ತಡೆಯಬೇಕೆಂದು ಕೆಲ ದೇಶಾಭಿಮಾನಿಗಳು ಆಲೋಚಿಸಿದರು. ಇದು ಹೇಗಾಗಬೇಕು ? ಇದ್ದ ಮೂರೂ ಸಾಮ್ರಾಜ್ಯಗಳೂ ನಶಿಸಿಹೋದವು. ಅವುಗಳಿಗೆ ಸಂಬಂಧಿಸಿದ ರಾಜಮನೆತನದವರೊಬ್ಬರಾಗಲೀ ಉತ್ತರಹಿಂದುಸ್ಥಾನದ ತುರುಕರೊಡನೆ ಹೋರಾಡಲಿಕ್ಕೆ ಸಮರ್ಥರಿದ್ದಿಲ್ಲ. ಇದಕ್ಕೆ ಉದಾಹರಣಾರ್ಥವಾಗಿ ಅತಿದೂರದಿಂದ ಬಂದ ದಿಲ್ಲಿಯ ಸೇನೆಯನ್ನು ಸೋಲಿಸಲಿಕ್ಕೆ ಆನೆಗುಂದಿ ರಾಜನಾದ ಜಂಬುಕೇಶ್ವರರಾಯನಿಗೆ ಸಾಧ್ಯವಾಗಲಿಲ್ಲ. ಅವನ ಸೇನೆಯು ಅಶಿಕ್ಷಿತವಿದ್ದಿತಲ್ಲದೆ ಇತರ ಹಿಂದೂ ನಾಯಕರ ಬೆಂಬಲವು ಅವನಿಗಿದ್ದಿಲ್ಲ.

ಆನೆಗುಂದಿಯ ಮುತ್ತಿಗೆಗೆ ಒಂದು ಕಾರಣವಿದ್ದಿತು. ದೆಹಲಿಯ ಸುಲ್ತಾನನಾದ ಮಹಮ್ಮದ ಬಿನ್ ತಘಲಕನಿಗೆ ಬಾಹುದ್ದೀನ್ ಗುರ್ಷಾಸ್ಪ್ ಎಂಬುವನೊಬ್ಬ ಅಳಿಯನಿದ್ದನು ಅವನು ಮಾವನಿಗೆ ಸರಿಬಾರದ ಕೆಲಸಮಾಡಿ, ಅವನ ಅಪ್ರೀತಿಗೆ ಪಾತ್ರನಾದನು. ಅಲ್ಲಿದ್ದರೆ ತನ್ನ ಪ್ರಾಣಾಪಾಯವಾಗುವದೆಂದರಿತು, ದಕ್ಷಿಣಕ್ಕೆ ಪಲಾಯನಮಾಡಿದನು ಅವನನ್ನು ಹಿಡಿಯಲು, ಅವನ ಹಿಂದೆಯೇ ಒಂದು ಸೈನ್ಯವು ಹೊರಟಿತು. ದಕ್ಷಿಣದೇಶದ ಸಣ್ಣ ಸಣ್ಣ ರಾಜರು ತುರುಕರಿಗೆ ಭಯಪಟ್ಟು, ಯಾರೂ ಸುಲ್ತಾನನ ಅಳಿಯನಿಗೆ ಆಶ್ರಯವನ್ನು ಕೊಡಲಿಲ್ಲ. ಅವನು ಕೊನೆಗೆ ಆನೇಗುಂದಿಗೆ ಬಂದು ಆ ರಾಜರ ಮನಕರಗಿಸಿ, ಅವರಿಗೆ ಶರಣಾಗತನಾದನು. ಆ ರಾಜರು ಅಂದರೆ, ಜಂಬುಕೇಶ್ವರರಾಯರು ಅವನಿಗೆ ಆಶ್ರಯಕೊಟ್ಟು ಉತ್ತರದೇಶದ ದೆಹಲಿ ಸುಲ್ತಾನರೊಡನೆ ಹೋರಾಡಲು ಪ್ರಾರಂಭಿಸಿದರು. ೧೩೩೪ ನೆಯ ಇಸ್ವಿಯ ಸುಮಾರಕ್ಕೆ ಜಂಬುಕೇಶ್ವರನ ಬಲವು ಕುಗ್ಗಲಿಕ್ಕೆ ಹತ್ತಿತು ಇಷ್ಟಕ್ಕೆ ತೃಪ್ತಿಪಡದೆ ಸುಲ್ತಾನನು ಆನೆಗುಂದಿಯ ಮೇಲೆ ತಾನೇ ದಂಡೆತ್ತಿ ಬಂದನು ಬಹಿರಂಗಯುದ್ಧದಿಂದ ಗೆಲ್ಲುವುದಸಾಧ್ಯವೆಂದು ಅರಿತು, ಜಂಬುಕೇಶ್ವರನು ತನಗೆ ಶರಣಾಗತನಾದ ಬಾಹುದ್ದೀನನನ್ನು ತನ್ನ ಸ್ನೇಹಿತನಾದ ದಕ್ಷಿಣದೇಶದಲ್ಲಿದ್ದ ಭಲ್ಲಾಳರಾಜನೆಡೆಗೆ ಗುಪ್ತವಾಗಿ ಕಳುಹಿಸಿ, ಆನೆಗುಂದಿ ದುರ್ಗದ ದ್ವಾರಗಳನ್ನೆಲ್ಲಾ ಮುಚ್ಚಿ ಒಳಗಿನಿಂದಲೇ ಯುದ್ಧಮಾಡಲಿಕ್ಕೆ ಹತ್ತಿದನು. ಮಹಮ್ಮದ ತಘಲಕನು ತನ್ನ ಸೈನ್ಯವನ್ನು ಅಭಿವೃದ್ಧಿಪಡಿಸಿ, ಕೋಟೆಗೆ ಮುತ್ತಿಗೆ ಹಾಕಿದನು. ಕೆಲವು ತಿಂಗಳೊಳಗಾಗಿ, ಆಹಾರಸಾಮಗ್ರಿಗಳೆಲ್ಲಾ ವ್ಯಯವಾಗಿ ಜಂಬುಕೇಶ್ವರನ ಬಲವು ತಗ್ಗಿದ್ದರಿಂದ, ರಾಣೀವಾಸದವರನ್ನೆಲ್ಲಾ ಅಗ್ನಿಪ್ರವೇಶಮಾಡಿಸಿ, ಕಳಿದುಳಿದ ವೀರರೊಡನೆ ಹೊರಬಂದು, ತುರುಕಸೇನೆಯಮೇಲೆ ಬಿದ್ದು, ಘೋರಯುದ್ಧ ಮಾಡಿ ವೀರಸ್ವರ್ಗವೇರಿದನು.

ಜಂಬುಕೇಶ್ವರನ ಮರಣಾನಂತರ ತುರುಕರು, ಆನೆಗುಂದಿ ಪಟ್ಟಣವನ್ನು ಪ್ರವೇಶಿಸಿ, ಧನಕ್ಕಾಗಿ ಗುಹೆಗಳನ್ನೆಲ್ಲಾ ಹುಡುಕತೊಡಗಿದರು. ಅವರಿಗೆ ಒಂದು ಗುಹೆಯಲ್ಲಿ ಆರು ಜನ ರಾಜವಂಶೀಯರು ದೊರೆತರು. ಇಬ್ಬರು ಸೋದರರು, ಇಬ್ಬರು ರಾಜಕುಮಾರರು, ಕಡುವೃದ್ಧರಾದ ಇಬ್ಬರು ರಾಜವಂಶೀಯರು.

ಆ ಇಬ್ಬರು **ಸೋದರರೇ, ಹರಿಹರ** ಬುಕ್ಕ ಎಂಬುವರು, ಓರುಗಲ್ಲು ಪ್ರತಾಪ ರುದ್ರನಾಶ್ರಯದಲ್ಲಿದ್ದು, ಅವನ ಮರಣಾನಂತರ ಜಂಬುಕೇಶ್ವರನ ಬಳಿ ಬಂದು, ಕೋಶಾಧ್ಯಕ್ಷರಾಗಿ ನಿಯಮಿಸಲ್ಪಟ್ಟಿದ್ದರು. ಈ ಸೋದರರು ಸಂಗಮ ವಂಶಕ್ಕೆ ಸೇರಿದವರು. ಇವರೂ ಕೂಡ ತುರುಕರೊಡನೆ ಹೋರಾಡಿದವರು. ಜಂಬುಕೇಶ್ವರನು ಸಾಯುವ ವೇಳೆಗೆ ಈ ಇಬ್ಬರು ಸೋದರರನ್ನೂ ಕರೆಯಿಸಿ, ತನ್ನ ಇಬ್ಬರು ಮಕ್ಕಳಾದ ರಾಜಕುಮಾರರನ್ನು ಹೇಗಾದರೂ ಕಾಪಾಡಬೇಕೆಂದು ಬಿನ್ನವಿಸಿಕೊಂಡನು. ಇದಕ್ಕಾಗಿಯೇ, ಅವರು ರಾಜಕುಮಾರರನ್ನು ಹಿಂದಿಟ್ಟುಕೊಂಡು, ಇಬ್ಬರು ವೃದ್ಧರೊಡನೆ ಗುಹೆಯಲ್ಲಿ ಅಡಗಿದ್ದುದು ಸುಲ್ತಾನನು

ಅವರನ್ನೆಲ್ಲಾ ಖೈದಿಗಳನ್ನಾಗಿ ಮಾಡಿ, ಆನೆಗುಂದಿಯ ರಾಜ್ಯಪರಿಪಾಲನೆಗೆ ಮಲ್ಲಿಕ್ ನಾಯಬ್ ಎಂಬುವನನ್ನು ನಿಯಮಿಸಿ, ಡಿಲ್ಲಿಗೆ ಹೋದನು. ಅಲ್ಲಿಗೆ ಹೋದ ತರುವಾಯ, ಜಂಬುಕೇಶ್ವರನ ಚಿಕ್ಕಮಕ್ಕಳನ್ನು ಮುಸಲ್ಮಾನ್ ಮತಕ್ಕೆ ಸೇರಿಸಿಕೊಂಡು, ಅರಮನೆಯಲ್ಲಿಟ್ಟನು. ಉಳಿದ ನಾಲ್ವರು ಇದಕ್ಕೊಪ್ಪದೆ ಸೆರೆಮನೆಯಲ್ಲೇ ಉಳಿದರು

ಮಲ್ಲಿಕ್ ನಾಯಬನ ಅಧಿಕಾರವು ಕೆಲಕಾಲ ಶಾಂತವಾಗಿ ನಡೆಯಿತು. ನಂತರ ಒಂದು ದಿನ ಏಕಾಏಕೀ ಒಂದು ದೊಡ್ಡ ಹಿಂದೂ ಸೈನ್ಯವು ಬಂದು ಆನೆಗುಂದಿಯನ್ನು ಮುತ್ತಿತು. ತುರುಕ ಸರದಾರನ ಪರಾಕ್ರಮವು ಏನೂ ಕೆಲಸಕ್ಕೆ ಬೀಳಲಿಲ್ಲ ಸರದಾರನು ಏನೂ ಮಾಡಲು ತೋಚದೆ, ಬಾಗಿಲು ಹಾಕಿಕೊಂಡು ಈ ಸುದ್ದಿಯನ್ನು ದೆಹಲಿಗೆ ಕಳುಹಿಸಿದನು. ಮಹಮ್ಮದ ಬಿನ್ ತೊಗಲಖನು ಈ ಸಂದರ್ಭದಲ್ಲಿ ತನ್ನ ವಜೀರರನ್ನೆಲ್ಲಾ ಕರೆಯಿಸಿ ವಿಚಾರ ವಿನಿಮಯಮಾಡಿದನು. ಬಹಳ ಚರ್ಚೆಯಾದ ಮೇಲೆ ಈ ಸಲಹೆಯು ಸಾರಾಂಶದಲ್ಲಿ ಹೊರಬಿದ್ದಿತು.

"ದಕ್ಷಿಣ ದೇಶೀಯರು ಸ್ವತಂತ್ರಾಭಿಲಾಷಿಗಳು ಪರಾಧೀನಕ್ಕೆ ಬಗ್ಗರು. ಜಂಬುಕೇಶ್ವರನ ಮಕ್ಕಳನ್ನು ಕಳುಹಿಸಿ ರಾಜಿ ಮಾಡಿಕೊಳ್ಳಬೇಕೆಂದರೆ, ಅವರು ಮುಸಲ್ಮಾನರಾಗಿರುವದರಿಂದ, ಅವರನ್ನು ಹಿಂದುಗಳು ಸ್ವೀಕರಿಸುವಂತಿಲ್ಲ. ಹರಿಹರನನ್ನು ಆನೆಗೊಂದಿಗೆ ಸಾಮಂತ ರಾಜನನ್ನಾಗಿ ಮಾಡಿ, ಅವನ ತಮ್ಮನಿಗೆ ಮಂತ್ರಿಪದವಿಯನ್ನು ಕೊಟ್ಟು, ಅಲ್ಲಿಯ ಸರದಾರನನ್ನೂ, ನಮ್ಮ ಸೇನೆಯನ್ನೂ, ಮೇಲಾಗಿ ಸಾಮ್ರಾಜ್ಯಗೌರವವನ್ನೂ ಕಾಪಾಡಬೇಕು. ಕಾರಣ ಸೋದರರಿಬ್ಬರನ್ನೂ, ಕೂಡಲೇ ದಕ್ಷಿಣಕ್ಕೆ ಕಳುಹಿಸಿ ಬಿಡಬೇಕು ಇದನ್ನು ಬಿಟ್ಟರೆ ಬೇರೊಂದು ಮಾರ್ಗವಿಲ್ಲ."

ಮಹಮ್ಮದ ಬಿನ್ ತೊಗಲಖನು ಈ ಸಲಹೆಗೆ ಒಪ್ಪಿ ಆ ಸೋದರರನ್ನು ಕೂಡಲೇ ದಕ್ಷಿಣಕ್ಕೆ ಕಳುಹಿಸಿದನು. ಹಿಂದೂರಾಜ್ಯವು ಹಿಂದೂ ಹಸ್ತಗತವಾದ್ದರಿಂದ ಹಿಂದೂ ಸೈನಿಕರಿಗೆ ಸಂತೋಷವಾಯಿತು. ಸರದಾರನು ಆನೆಗೊಂದಿ ರಾಜ್ಯವನ್ನು ಹರಿಹರನಿಗೊಪ್ಪಿಸಿ ಡಿಲ್ಲಿಗೆ ಹೋದನು. ಹರಿಹರ ಬುಕ್ಕ ಇವರಿಬ್ಬರೂ ರಾಜ್ಯಪರಿಪಾಲನೆ ಮಾಡಲಿಕ್ಕೆ ಹತ್ತಿದರು.

ಈ ಕಾಲದಲ್ಲಿ ಆನೆಗೊಂದಿ ಪ್ರಾಂತದ ಅರಣ್ಯದಲ್ಲಿ ಈಗಿರುವ ಹಂಪಿ ಶ್ರೀಕೋದಂಡರಾಮಸ್ವಾಮಿಯವರ ಆಲಯಕ್ಕೆದುರಿಗೆ ಚಕ್ರತೀರ್ಥದಹತ್ತರ ಮಾಧವನೆಂಬ ಬ್ರಾಹ್ಮಣನು ತಪಸ್ಸನ್ನಾಚರಿಸುತ್ತಿದ್ದನು. ತಂದೆಯ ಹೆಸರ—ಮಾಯಣ, ತಾಯಿ – ಶ್ರೀಮತಿ; ಮನೆಯ ಹೆಸರ—ಸಾಯಣದವರು, ಭಾರದ್ವಾಜ ಗೋತ್ರದವರು ಬೋಧಾಯನ ಸೂತ್ರಜರು. ಯಜುಶ್ಶಾಖೆಯವರು. ಅವರು ವೇದಗಳಿಗೆ ಭಾಷ್ಯವನ್ನು ಬರೆದು ಕೀರ್ತಿ ವಹಿಸಿದ ಮಹಾಪುರುಷರು. ಸ್ವದೇಶ ಮತಧರ್ಮ ಭಕ್ತಿಪರಾಯಣರಾದ ಆ ಮಹನೀಯರಿಗೆ ಮಹಮ್ಮದೀಯರ ಉಪದ್ರವದಿಂದ ಪಾರಾಗಲು ಒಂದು ಉಪಾಯವು ಹೊಳೆಯಿತು. ಲೌಕಿಕ ವಿಷಯಗಳಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಭಾಗವನ್ನೂ ಅವರು ಕೂಲಂಕಷವಾಗಿ ಆಲೋಚಿಸುತ್ತಿದ್ದರು. ತಾವು ತಪವನ್ನಾಚರಿಸುತ್ತಿದ್ದ ಸ್ಥಳವು ಸರ್ವವಿಧವಾಗಿ ಮಹತ್ವದ್ದೆಂದೂ, ಅಲ್ಲಿ ಆರ್ಯಧರ್ಮಸಂರಕ್ಷಣೆಗಾಗಿ ಒಂದು ಆದರ್ಶಪ್ರಾಯವಾದ ಪಟ್ಟಣವನ್ನು ನಿರ್ಮಿಸಿ, ಅದರ ಹೆಸರಿನ ಮೇಲೆ ಒಂದು ದೊಡ್ಡ ಸಾಮ್ರಾಜ್ಯವನ್ನೇರ್ಪಡಿಸಿದರೆ, ಹಿಂದೂಧರ್ಮವನ್ನೂ, ಜಾತಿಯನ್ನೂ, ಕಾಪಾಡಬಹುದೆಂದೂ ಅವರಿಗೆ ತೋರಿತು. ಅವರಿಗೂ ಆನೆಗುಂದಿ ರಾಜನಾದ ಹರಿಹರನಿಗೂ ಸ್ನೇಹಸಂಬಂಧವಿದ್ದಿತು. ತೇಜೋಮಯರಾದ ಆ ತಪಸ್ವಿಗಳ ಸಲಹೆಗನುಸರಿಸಿ ೧೩೩೬ ರಲ್ಲಿ ಆನೆಗುಂದಿಯ ದಕ್ಷಿಣಕ್ಕೆ ಒಂದು ಪಟ್ಟಣವನ್ನು ನಿರ್ಮಿಸಲು ಕೃತಸಂಕಲ್ಪನಾದನು, ಹರಿಹರನು !

ಅವನು ಪಟ್ಟಾಭಿಷಿಕ್ತನಾಗಿ ಒಂದು ವರ್ಷ ಮಾತ್ರವಾಗಿದ್ದಿತು ಆನೆಗುಂದಿ ಖಜಾನೆಯೆಲ್ಲಾ, ಎರಡು ವರ್ಷಗಳ ಕೆಳಗೇ ತುರುಕರ ವಶವಾಗಿ ಖಾಲಿಯಾಗಿದ್ದಿತು. ಶ್ರೀ ವಿದ್ಯಾರಣ್ಯರು ಮಂತ್ರಶಕ್ತಿಯಿಂದ ಏಳು ಘಳಿಗೆಗಳವರೆಗೆ ಸುವರ್ಣವೃಷ್ಟಿಯನ್ನು ಕರೆಸಿದರೆಂತಲೂ, ಅದರಿಂದ ಪಟ್ಟಣ ನಿರ್ಮಾಣವಾಗಿದ್ದಲ್ಲದೆ, ಇನ್ನೂ ಬೇಕಾದಷ್ಟು ಹಣವು ಅನೇಕ ಬೊಕ್ಕಸಗಳನ್ನು ತುಂಬಿತೆಂತಲೂ, ಪ್ರತೀತಿ ಇದೆ. ಆ ಮಹಾಮಹಿಮರ ತಪೋಶಕ್ತಿಯಲ್ಲಿಯೂ, ಈ ಸುವರ್ಣವೃಷ್ಟಿಯ ವಿಷಯದಲ್ಲಿಯೂ ವಿಶ್ವಾಸವಿಲ್ಲದವರು ಪೂರ್ವಪುರುಷರಿಂದ ಸಂಚಿತವಾದ, ಭೂಗತವಾದ ದ್ರವ್ಯವು ಆಕಸ್ಮಿಕವಾಗಿ ದೊರೆಯಿತೆಂದು ತಿಳಿದುಕೊಳ್ಳಲಿ ಇಲ್ಲವೆ "ನಮ್ಮ ಆದರ್ಶವಿದು. ಅದನ್ನು ನೆರವೇರಿಸಲು ನಮಗೆ ಈ

ಮಾರ್ಗವು ತೋರಿದೆ ಅದಕ್ಕಿಷ್ಟು ಧನವು ಬೇಕಾಗಿದೆ. ಅದು ಹಿಂದೂಧರ್ಮ ಮತ್ತು ಮತೋದ್ಧಾರಕ್ಕೋಸ್ಕರ ವಿನಿಯೋಗಿಸಲ್ಪಡ ಬಹುದಾದ್ದರಿಂದ ನಮಗೆ ನೀನೆಲ್ಲಾ ಸಹಾಯ ಮಾಡಿರಿ." ಎಂದು ಗುರುಶಿಷ್ಯರಿಂದ ಹರಿಹರ, ವಿದ್ಯಾರಣ್ಯರಿಬ್ಬರೂ, ಸಂದೇಶವನ್ನು ಕಳುಹಿಸಿ, ಹಿಂದೂರಾಜರಿಂದ, ಶ್ರೀಮಂತರಿಂದ ಸಹಾಯ ಪಡೆದ ರೆಂದು ಭಾವಿಸಲಿ" ಅಂತೂ ಹಣವು ಶಲೆಯಿತು. ವಿದ್ಯಾರಣ್ಯರು ಪಟ್ಟಣ ಸ್ಥಾಪನೆ ಮಾಡಲು ಕಾಶಿ ಯಿಂದ ಒಬ್ಬ ಪಂಡಿತನನ್ನು ಕರೆಕಳುಹಿಸಿದರು ಆ ಕಾಲದಲ್ಲಿ ಗಡಿಯಾರಗಳಿಲ್ಲ. ಕಾಲನಿರ್ಧಾರಣೆಯನ್ನು ನಕ್ಷತ್ರಗಮನದಾವಲೋಕನದಿಂದ ಮಾಡುತ್ತಲಿದ್ದರು ಕಾಶಿಯ ಪಂಡಿತನು ನಕ್ಷತ್ರಗಣನೆಮಾಡಿ, ಸುಮು ಹೂರ್ತದಲ್ಲಿ ಶಂಖವನ್ನೂದಿದನು. ಶ್ರೀ ವಿದ್ಯಾರಣ್ಯರು ಕರಗಿದ ಲೋಹವನ್ನು ಅಚ್ಚಿನಲ್ಲಿ ಹಾಕಿ, ಎಲ್ಲಾ ತಣ್ಣಗಾದಮೇಲೆ ನೋಡಿದರು. ಅದರಲ್ಲಿ ೩೨೫ ಗುರ್ತುಗಳು ಕಾಣಿಸಿದವು ಪಂಡಿತರೂ,ವಿದ್ಯಾರಣ್ಯರೂ, ಲೆಕ್ಕ ಹಾಕಿ, ಈ ಪಟ್ಟಣವು ೩೨೫ ವರ್ಷ ಬಾಳುವುದೆಂದು ನಿಶ್ಚಯಿಸಿ ಪಟ್ಟಣ ಪ್ರಾರಂಭಕ್ಕೆ ಮೊದಲಿಟ್ಟರು. ಈ ಪಟ್ಟಣವು ವಿದ್ಯಾರಣ್ಯರ ಪ್ರೇರ ಯಿಂದ ಸ್ಥಾಪಿಸಲ್ಪಟ್ಟದ್ದಾದಕಾರಣ, ವಿದ್ಯಾನಗರ ವೆಂದು ಹೆಸರಿಡಲ್ಪಟ್ಟಿತು. ಎರಡನೆಯ ಹರಿಹರ ರಾಯನು ಏಕಚಕ್ರಾಧಿಪತ್ಯವಾಗಿ ಸಾಮ್ರಾಜ್ಯವನ್ನು ಸ್ಥಾಪಿಸಿದಾಗ 'ವಿಜಯನಗರ' ವೆಂಬ ಹೆಸರು ಬಂದಿತು. ೧೩೩೬ ರಿಂದ ಕ್ರಿ. ಶ. ೧೫೬೫ರ ವರೆಗೆ ಆ ಪಟ್ಟಣವೂ, ಅದರಿಂದೇರ್ಪಟ್ಟ ಸಾಮ್ರಾಜ್ಯವೂ ಹಿಂದೂಧರ್ಮಸಂರಕ್ಷಣೆಮಾಡಿ,ಮುಸಲ್ಮಾನರುಕೃಷ್ಣಾ ನದಿ ದಾಟಿ ಬರದಂತೆ ತಡೆದುದರಿಂದ ಸಂಸ್ಥಾಪಕರ ಆದರ್ಶವು ಸಾಫಲ್ಯವನ್ನು ಹೊಂದಿತು

## ನೈಸರ್ಗಿಕ ಮಹಾತ್ಮ್ಯ ಮತ್ತು ನಗರ ನಿರ್ಮಾಣ ಕಾರ್ಯ.

ಶ್ರೀ ವಿದ್ಯಾರಣ್ಯರು, ಎಲ್ಲಾ ವಿಧದ ಮಹತ್ವವನ್ನ ರಿತು ಇಲ್ಲಿ ಪುರನಿರ್ಮಾಣಕ್ಕೆ ಆಜ್ಞೆಯಿತ್ತರು ವಾಲಿ, ಸುಗ್ರೀವಾದಿಗಳ ಕ್ಷೇತ್ರವಾಗಿ, ಶ್ರೀ ರಾಮಲಕ್ಷ್ಮಣರ ಅರಣ್ಯಾವಾಸದ ಕಾಲದ ವಾಸಸ್ಥಾನವಾಗಿದ್ದ ಇಂಥಾ ಪುರಾಣಪ್ರಸಿದ್ಧವಾದ ಕಿಷ್ಕಿಂಧಾ ಕ್ಷೇತ್ರವು ಸ್ವಾಮಿ ಗಳಿಗೆ ಉಚಿವಾಗಿ ತೋರಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ದುರ್ಗನಿರ್ಮಾಣಕ್ಕೆ ಅನುಕೂಲವಾದ ಪರ್ವತ ಪ್ರದೇಶಗಳಿಂದ ಕೂಡಿದ ಅಂಥಾ ಸ್ಥಳವು ಬೇರೊಂದೆಡೆ ದೊರಕುವುದು ಕಷ್ಟ. ಉತ್ತರದಲ್ಲಿ ತುಂಗಭದ್ರಾ ನದಿ. ಅದಕ್ಕೆ ಹೊಂದಿಕೊಂಡು ಇರುವ ಪರ್ವತಶ್ರೇಣಿ ಕಟ್ಟಿದ ಅಭೇದ್ಯ ಗೋಡೆಯಂತಿದ್ದು, ಶತ್ರುಗಳು ನಗರಪ್ರವೇಶ ಮಾಡಲು ಬರುವಂತೆಯೇ ಇಲ್ಲ. ಇಲ್ಲಿ ಸುತ್ತಮುತ್ತಲಿರುವ ಭೂಮಿ, ಅತಿ ಸಾರ ವಂತವಾದುದು. ಸುಲಭವಾಗಿ ನೀರಾವರಿಯನ್ನು ತುಂಗಭದ್ರಾ ನದಿಯ ನೀರಿನಿಂದ ನಡೆಸಬಹುದು ಕಟ್ಟಡಗಳಿಗನುಕೂಲವಾದ ಎಂಥಾ ಕಲ್ಲಾದರೂ ಇಲ್ಲಿ ಸುಲಭವಾಗಿ ದೊರೆಯುತ್ತದೆ

ಪರ್ವತ ಶ್ರೇಣಿಯು ನೂರಾರು ಅನೇಕ ಭಾಗ ಗಳಾಗಿ ಒಡೆದು ಹಂಸೆಯಿರುವ ಸ್ಥಳದಲ್ಲಿ ನಗರ ನಿರ್ಮಾಣಕ್ಕೆ ಬಹಳ ಅನುಕೂಲವಾಗಿದೆ. ಈ ಎಂಟು ಹತ್ತು ಮೈಲುಗಳಗಲವಿಸ್ತೀರ್ಣದಲ್ಲಿ ಪ್ರಥಮತಃ ನಗರ ನಿರ್ಮಾಣವಾಯಿತು. ನಂತರ ತುಂಗಭದ್ರಾ ನದಿಗೆ ೧೦ ಮೈಲ ದೂರದಲ್ಲಿ ಒಂದು ಅಣೆಕಟ್ಟು ಏರ್ಪಟ್ಟು ಪಟ್ಟಣದಾವರಣದೊಳಕ್ಕೆ ನೀರನ್ನು ಕಾಲುವೆಗಳ ಮೂಲಕ ತಂದರು; ಮತ್ತು ವ್ಯವಸಾಯದುಪಯೋಗಕ್ಕೂ ಕೊಟ್ಟರು. ೧೦ಮೈಲ ಅಗಲ ೧೨ ಮೈಲ ಉದ್ದಕ್ಕೆ ಪಟ್ಟಣವನ್ನು ಹಬ್ಬಿಸಿ ಬೀದಿಗಳನ್ನು ಏರ್ಪಡಿಸಿದರು ಪ್ರತಿಬೀದಿಯಿದುರಿಗೆ ಒಂದು ದೇವಾಲಯವನ್ನು ಕಟ್ಟಿದರು. ಆ ದೇವಾಲಯದ ಸ್ವಾಮಿಯ ಹೆಸರೇ ಬೀದಿಗೆ ನಾಮಧೇಯವಾಯಿತು. ಪ್ರಭುತ್ವ ದವರೇ ಪುರಸೌಂದರ್ಯವು ಕೆಡದಂತೆ ಬೀದಿಗಳ ಅಗಲವನ್ನೂ ಮನೆಗಳ ವೈಚಿತ್ರ್ಯವನ್ನೂ ನಿರ್ಣಯಿಸಿ ದಂತೆ ಚನ್ನಾಗಿ ವ್ಯಕ್ತಪಡುವುದು. ಇದು ಗುಡ್ಡ ಗಾಡಿನ ಪ್ರದೇಶವಾಗಿದ್ದಿತಾದ್ದರಿಂದ ಕೆಲವೆಡೆಗಳಲ್ಲಿ ಕಾಲುನಡಿಗೆಯಿಂದ ಹೋಗಬೇಕಿದ್ದಿತು. ಈ ಪಟ್ಟಣದ ವರ್ಣನೆಯನ್ನೆಲ್ಲಾ ವಿದೇಶೀಯರೇ ಮಾಡಿದ್ದಕ್ಕೆ ಒಂದು ಕಾರಣವುಂಟು. ಹಿಂದೂ ಜನರಿಗೆ ಪಟ್ಟಣದ ವಿಧ್ವಂಸವಾಗುವುದೆಂದು ಕನಸು ಮನಸುಗಳಲ್ಲಿಯೂ ಇರಲಿಲ್ಲ ಆದಕಾರಣ ಅವರು ಅದನ್ನು ಬರೆದಿಡಲಿಲ್ಲ. ಅಲ್ಲದೆ ಚರಿತ್ರೆಯನ್ನೂ, ಸ್ವಯಂ ಜೀವನಚರಿತ್ರೆ ಯನ್ನೂ ಬರೆದಿಡುವ ಇಚ್ಛೆ ಪೂರ್ವಕಾಲದ ಭಾರತೀಯರಿಗೆ ಬಹಳ ಕಡಿಮೆ ಇದ್ದಿತು.

ಈ ಮಹಾನಗರದಲ್ಲಿ ಎಲ್ಲಾ ವರ್ಣದವರಿಗೂ ಆಶ್ರಯವು ಕೊಡಲ್ಪಟ್ಟಿತ್ತು. ಶಿಲ್ಪಿಗಳು ವಿಠಲಾಪುರದಲ್ಲಿದ್ದರೆಂದೂ, ಅಚ್ಯುತದೇವಸ್ಥಾನದೆದುರಿಗೆ ವೇಶ್ಯಾ ಸ್ತ್ರೀಯರ ಬಾಜಾರವಿದ್ದಿತೆಂದೂ, ವೈಶ್ಯರು ವ್ಯಾಪಾರ

ನಡೆಯುತ್ತಿದ್ದ ಪ್ರದೇಶಗಳಲ್ಲೆಲ್ಲಾ ಇದ್ದರೆಂತಲೂ, ಬ್ರಾಹ್ಮಣರೂ, ಕ್ಷತ್ರಿಯರೂ, ಸ್ನಾನ ಸಂಧ್ಯಾವಂದನ ಗಳಿಗನುಕೂಲವಾದ ನದೀಪ್ರದೇಶದಲ್ಲಿದ್ದರೆಂತಲೂ ಒಬ್ಬ ಪ್ರಯಾಣಿಕನು ಹೇಳಿರುವನು.

ನೀರಿನ ಸೌಕರ್ಯವು ಊರಿನಲ್ಲಿ ಅಗೆದ ಭಾವಿಗಳಿಂದಲೂ, ತುಂಗಭದ್ರಾ ನದಿಯಿಂದಲೂ ನೀರಿನ ಪೂರೈಕೆ ಆಗುತ್ತಿತ್ತು. ದೂರಪ್ರದೇಶಗಳವರು, ಕಾಲುವೆಗಳ ನೀರನ್ನು ಬಳಸುತ್ತಿದ್ದರು. ಅಗೆದ ಭಾವಿಗಳನ್ನು ಇಂದಿಗೂ ಕಾಣಬಹುದು. ಅವು ಲೆಕ್ಕವಿಲ್ಲದಷ್ಟಿವೆ. ಎಲ್ಲಾ ಬೀದಿಗಳಿಗೂ ದೀಪದ ಅನುಕೂಲವಿತ್ತು. ಈ ವತ್ತಿಗೂ ಕೆಲ ದೀಪಸ್ತಂಭಗಳನ್ನು ಕಾಣಬಹುದು.

## ರಾಜರ ಅರಮನೆಯ ಪ್ರದೇಶವು.

ಅವರ ಮನೆಗಳೂ, ಬಹು ಸುಂದರವಾಗಿ ಅಮೂಲ್ಯಾಲಂಕಾರಶೋಭಿತವಾಗಿ ಇದ್ದುವೆಂಬುದರಲ್ಲಿಯಾವ ಸಂಶಯವೂ ಇಲ್ಲ. ಅನೇಕ ವಿದ್ವಾಂಸರು ಅವನ್ನು ಅನೇಕ ಪ್ರಕಾರವಾಗಿ ವರ್ಣಿಸಿರುವರು. ಅವರು ತಮಗೆ ಬೇಕಾದ ಸಮಸ್ತ ಸದುಪಾಯುಗಳನ್ನೂ ಅಲ್ಲಿಯೇ ಏರ್ಪಡಿಸಿಕೊಂಡರು. ಪೂಜೆಗಾಗಿ ದೇವಸ್ಥಾನಗಳಲ್ಲಿಯೇ ಎಲ್ಲ ವ್ಯವಸ್ಥೆ ಇದ್ದಿತು. ವಿಹಾರರಂಗಗಳೂ, ನಾಟ್ಯಭವನಗಳೂ, ಸ್ನಾನಮಾಡಲನುಕೂಲವಾದ ತಟಾಕಗಳೂ, ಅಲ್ಲಿದ್ದವು ಸಾಮ್ರಾಜ್ಯ ವ್ಯವಹಾರಮಾಡಲಿಕ್ಕನುಕೂಲವಾಗಿ ಕಚೇರಿಗಳನ್ನು ತಮ್ಮ ಸಮೀಪದಲ್ಲಿಯೇ ಏರ್ಪಡಿಸಿಕೊಂಡರು. ರಾಜ ಸಭಾ ಮಂಟಪಗಳೂ, ಮಂತ್ರಾಲೋಚನಾಮಂದಿರಗಳೂ, ಅಲ್ಲಿಯೇ ಇದ್ದವು ಅವರಿಗೆ ಬೇಕಾದ ಸಾಮುಗ್ರಿಗಳಿಗಾಗಿ ಒಂದು ಬೀದಿಯೂ ಕೂಡ ಅಲ್ಲಿದ್ದಿತು. ಕಮಲಾಪುರಕ್ಕೆ ಹೋಗುವ ಹಾದಿಯಿಂದ ದ್ವಾರವನ್ನು ದಾಟಿದೊಡನೆ ಒಂದು ಸಣ್ಣ ಮೈದಾನವು ಬರುತ್ತದೆ. ಅಲ್ಲಿ ಭೀಮಸೇನ ದರ್ವಾಜಾ ದಾಟಿಹೋದರೆ ಒಂದು ದೊಡ್ಡ ಬಯಲು ಬರುತ್ತದೆ. ಈ ಮೈದಾನ ಬಯಲುಗಳೆರಡರಲ್ಲಿಯೂ ಮಹರ್ನವಮಿಯ ದಶರಾತ್ರಿ ಉತ್ಸವಗಳಲ್ಲಿ ದೊಡ್ಡ ದೊಡ್ಡ ಪ್ರದರ್ಶನಗಳಾಗುತ್ತಿದ್ದವಂತೆ. ನೀರಿನ ಅನುಕೂಲತೆಯು ಅವರಿಗೆ ಪ್ರತ್ಯೇಕವಿದ್ದಿತು. ಅವರಿಗೆ ಪ್ರತ್ಯೇಕವಾದ ಸಿಹಿನೀರಿನ ಭಾವಿಗಳಿದ್ದು ನೀರು ಕೊಡಗಳಲ್ಲಿ ಮೊಹರ್ ಬಂದ ಆಗಿ ಬರುತ್ತಿದ್ದಿತಂತೆ. ಚಕ್ರವರ್ತಿಗಳಿಗಾಗಿ ಈ ನೀರಿನನುಕೂಲತೆ ಇದ್ದಿತೆಂಬುದು ಸೂಕ್ಷ್ಮ ಪರಿಶೀಲನೆಯಿಂದ ವ್ಯಕ್ತಪಡುತ್ತದೆ.

ಶ್ರೀ. ವಿದ್ಯಾರಣ್ಯ ಸ್ವಾಮಿಗಳು ಶಂಖು ಸ್ಥಾಪನ ಮಾಡಿದ ಕೂಡಲೇ ನಗರದ ವ್ಯಾಸವು ಇಷ್ಟಾಯಿತೆಂದು ಯಾರೂ ಭಾವಿಸಬಾರದು. ವಂಶಾನುಪಾರಂಪರ್ಯವಾಗಿಬಂದ ರಾಜರೂ ತಮ್ಮ ಶಕ್ತಿಗನುಸಾರವಾಗಿ ಅದನ್ನಭಿವೃದ್ಧಿಪಡಿಸಿದರು. ಉಚ್ಚ ದೆಶೆಯಲ್ಲಿದ್ದ ಪಟ್ಟಣದ ನಿರೂಪಣೆಯನ್ನು ಸಂಕ್ಷಿಪ್ತವಾಗಿ ಮೇಲೆ ಹೇಳಲಾಗಿದೆ. ಸ್ಥಾಪಿಸಿದ ಮುಹೂರ್ತ ಬಲುಮೆಯಿಂದ ಅದು ಅಭಿವೃದ್ಧಿಹೊಂದಿ, ಅಪರಿಮಿತ ಐಶ್ವರ್ಯ,ವೈಭವಯುಕ್ತವಾಗಿ ಮೆರೆದು ವಿರಮಿಸಿತು. ರಾಜರು ಧರ್ಮರಕ್ಷಣೆ ಮಾಡುತ್ತಾ ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿದರು.

# ವಿಜಯನಗರ ಸಾಮ್ರಾಜ್ಯದ ಕೆಳಗಿನ

## ಗೋವಾ ಮತ್ತು ಕುಡಾಳ ಪ್ರಾಂತವು.

(ಲೇಖಕರು — **ಶ್ರೀ ಲೋಖಂಡೆ ನಾರಾಯಣರಾಯರು** ಬಿ. ಎ. ಎಲ್‌ಎಲ್. ಬಿ. ವಕೀಲ ಬೆಳಗಾವ)

ಅತಿ ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿದ್ದ ಗೋಮಾಂತಕ ಪ್ರಾಂತವು ಕೊಂಕಣದ ಒಂದು ಭಾಗವು. ಕೊಂಕಣ ಪ್ರದೇಶವು ಪರಶುರಾಮನು ಸಮುದ್ರವನ್ನು ಹಿಂದಟ್ಟಿಸಿ ಸಂಪಾದಿಸಿದ ಪ್ರದೇಶವೆಂದು ಪುರಾಣ ಪ್ರಸಿದ್ಧಿಯುಂಟು. ಸಹ್ಯಾದ್ರಿ ಖಂಡವೆಂಬ ಗ್ರಂಥದಲ್ಲಿ ಈ ಪ್ರಾಂತದ ಹಾಗೂ ಇಲ್ಲಿಯ ಜನರ ವಿಶೇಷ ವರ್ಣನೆ ಮಾಡಿದ್ದಿರುವದು. ಕೊಂಕಣ ಪ್ರಾಂತಕ್ಕೆ 'ರಾಮಖಂಡ'ವೆಂದು ಹೆಸರಿದ್ದು ಇದು ಶತಯೋಜನ ಉದ್ದವಾಗಿಯೂ ಮೂರರಿಂದ ಏಳು ಯೋಜನಗಳವರೆಗೆ ಅಗಲವಾಗಿಯೂ ಇದೆ. ಈ ಕೊಂಕಣದಲ್ಲಿ ಹಿಂದಿನ ಕಾಲದಲ್ಲಿ ಏಳು ಭಾಗಗಳನ್ನು ಮಾಡಿದ್ದರು ಆದ್ದರಿಂದ ಇದಕ್ಕೆ 'ಸಪ್ತಕೊಂಕಣ'ವೆಂದು ಹೆಸರು ಸಹ ಇತ್ತೆಂದು ಇದೇ ಗ್ರಂಥದಿಂದ ತಿಳಿಯುತ್ತದೆ. ಆ ಸಪ್ತ ಭಾಗಗಳು ಯಾವಾವು ಎಂದರೆ—

> कराटच वराटच मराट मालव [तत?] तथा ।
> हविग तौलव चाथ केरल चेति सप्तकम् ॥

ಈ ಭಾಗಗಳೊಳಗಿನ ಹವಿಗವೆಂಬ ಭಾಗವು ಕೊಂಕಣದ ಮಧ್ಯಭಾಗದಲ್ಲಿದ್ದು ಗೋವೆ ಎಂಬ ಪಟ್ಟಣವು ಇದೇ ಭಾಗದಲ್ಲಿರುವದು. ಗೋವಾ ಪಟ್ಟಣಕ್ಕೆ ಗೋವಾಪುರಿ, ಗೋಮಾಂತಕ, ಗೋವೇಯ, ಮತ್ತು ಸಿದ್ಧಪೂರ ಮುಂತಾದ ಹೆಸರುಗಳು ಇದ್ದುದು ಪ್ರಾಚೀನ ಗ್ರಂಥಗಳಿಂದ ತಿಳಿದು ಬರುವದು.

ಈ ನಾಡು ಸೃಷ್ಟಿಸೌಂದರ್ಯದ ಬಗ್ಗೆ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದದ್ದು. ದಟ್ಟವಾದ ವನರಾಜಿಯಿಂದ ಸುಶೋಭಿತವಾದ ಸಹ್ಯಾದ್ರಿಯ ಮಾಲೆಯು ಈ ಪ್ರಾಂತದ ಪೂರ್ವಸೀಮೆಯಾಗಿರುವದು. ಇದೇ ಪ್ರಾಂತದಲ್ಲಿ ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಪಡೆದ ಗಂಭೀರವಾದ ಅನೇಕ ಸುಂದರ ತಡಸಲುಗಳಿರುವವು. ತಮ್ಮ ಪ್ರಿಯಪತಿಯ ದರ್ಶನಕ್ಕಾಗಿ ವನಶ್ರೀಯಿಂದ ಅಲಂಕಾರ ಭರಿತರಾಗಿ ವೇಗದಿಂದ ಸಾಗುವಂಥ ಅನೇಕ ನದಿಗಳು ಈ ಪ್ರದೇಶದ ಶೋಭೆಯನ್ನು ಹೆಚ್ಚಿಸುತ್ತಿರುವವು. ಈ ಬಗ್ಗೆ 'ಶಿವಭಾರತ'ಕಾರನು ಹೀಗೆ ಹೇಳಿರುವನು.—

> " अथ पुन्नाग बकुल प्रसूनप्रायसौरभम् ।
> नागवल्ली नारिकेल क्रमुक प्रायभूरुहम् ।
> आरामप्रायभूमीध्र "

'ಇಲ್ಲಿಯ ವಾತಾವರಣವು ಪುನ್ನಾಗ, ಬಕುಲ ಇವುಗಳ ಸುವಾಸನೆಯಿಂದ ತುಂಬಿರುತ್ತದೆ. ನಾಗವಲ್ಲಿ, ತೆಂಗು, ಅಡಿಕೆ ಮುಂತಾದವುಗಳಿಂದ ತುಂಬಿರುವ ನಾಡಿದು. ಇಲ್ಲಿಯ ಪರ್ವತಗಳು ಉದ್ಯಾನಗಳೇ! 'ದಕ್ಷಿಣ ಹಿಂದುಸ್ಥಾನದ ನಂದನವನ'ವೆಂಬ ಯಥಾರ್ಥ ಹೆಸರನ್ನು ಪಡೆದ ಈ ಭಾಗದ ಮೇಲೆ ಪ್ರಾಚೀನ ಕಾಲದಿಂದಲೂ ಕರ್ನಾಟಕದ ರಾಜರದೇ ವರ್ಚಸ್ಸು ಇದ್ದಿತು. ಆ ಕಾಲದಲ್ಲಿ ಈ ನಾಡಿನಲ್ಲೆಲ್ಲ ಕನ್ನಡ ಭಾಷೆಯು ಪ್ರಚಾರದಲ್ಲಿತ್ತು. ಗೋವಾ ಮತ್ತು ಕುಡಾಳ ಪ್ರಾಂತದೊಳಗಿನ ಪ್ರಾಚೀನ ಊರುಗಳ ಹೆಸರುಗಳು ಕನ್ನಡ ಊರಿನ ಹೆಸರಿನಂತೆ ಇದ್ದು ಅಲ್ಲಿಯ ಅರಸರ ಶಿಲಾಲಿಪಿಗಳು ಸಂಸ್ಕೃತ ಇಲ್ಲವೆ ಕನ್ನಡದಲ್ಲಿಯೇ ಇರುತ್ತವೆ.

ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಅಭಿನವ ಚಾಲುಕ್ಯ, ಕಲಚೂರ್ಯ ಮುಂತಾದ ಪ್ರಾಚೀನ ಮನೆತನದವರ ಅಧಿಪತ್ಯಕ್ಕೆ ಸೇರಿ ಕೊನೆಗೆ ಈ ಪ್ರಾಂತವು ಹೊಯ್ಸಳರ ಕೈಸೇರಿತು. ಹೊಯ್ಸಳರಿಗೂ ದೇವಗಿರಿ ಯಾದವರಿಗೂ ಬಹು ಕಾಲದವರೆಗೆ ಯುದ್ಧಗಳು ನಡೆದವು. ಕೊನೆಗೆ ಸಿಂಘಣ ಯಾದವನ ಸೇನಾಪತಿಯಾದ ಬಿಚ್ಚಣ್ಣನು ಈ ಪ್ರಾಂತವನ್ನು ಹೊಯ್ಸಳರ ಕಡೆಯಿಂದ ಗೆದ್ದು ದೇವಗಿರಿಯ ಯಾದವರ ರಾಜ್ಯಕ್ಕೆ ಅಂಕಿತವಾಗಿ ಮಾಡಿದನು, (ಕ್ರಿ. ಶ. ೧೨೩೮) ಅಲ್ಲಿಂದ ಸುಮಾರು ೬೦ ವರ್ಷಗಳ ವರೆಗೆ ಈ ನಾಡು ಯಾದವರ ರಾಜ್ಯದ ಒಂದು ಭಾಗವಾಗಿತ್ತು.

"

ಶ್ರೀ. ಆಲೂರ ವೆಂಕಟರಾಯರು
ಬಿ. ಎ. ಎಲೆಲ್. ಬಿ ಧಾರವಾಡ



ಶ್ರೀ. ದಿವಾಕರ ರಂಗರಾಯರು
ಎಂ. ಎ. ಎಲೆಲ್. ಬಿ. ಬೆಳಗಾವಿ



ಶ್ರೀ. ಲೋಖಂಡೆ ನಾರಾಯಣರಾಯರು
ಬಿ ಎ. ಎಲೆಲ್. ಬಿ. ಬೆಳಗಾವಿ



ಪ್ರೊ. ರಂ. ಶ್ರೀ. ಮುಗಳಿ
ಎಂ.ಎ.ಬಿ.ಟಿ.ವಿಲಿಂಗಡನ್ ಕಾಲೇಜ ಸಾಂಗಲಿ



ಕ್ರಿ. ಶ. ೧೩೧೦ ರಲ್ಲಿ ಅಲ್ಲಾಉದ್ದಿನನ ಸರದಾರ ನಾಯಿಬ ಮಾಲಿಕ ಖುಸರುವು ಗೋವಪ್ರಾಂತಕ ಪ್ರಾಂತವನ್ನು ಗೆದ್ದು ಅಲ್ಲಿ ದಿಲ್ಲಿಯ ಅರಸನ ಪರವಾಗಿ ಒಬ್ಬ ಸುಭೇದಾರನನ್ನು ನೇಮಿಸಿ ಹೊರಟು ಹೋದನು ಗೋವಾಪ್ರಾಂತದಲ್ಲಿ ಮುಸಲ್ಮಾನರ ಪ್ರಥಮ ಪ್ರವೇಶವು ಇದೆ ಮುಸಲ್ಮಾನರು ಈ ಪ್ರಾಂತದಲ್ಲಿ ಕಾಲೂರಿದ ನಂತರ ಅನೇಕ ತರದ ಅತ್ಯಾಚಾರಗಳನ್ನು ಮಾಡಿದರು. ಹಿಂದೂಜನರ ಅನೇಕ ದೇವಾಲಯಗಳನ್ನು ಭ್ರಷ್ಟಮಾಡಿ ಅಲ್ಲಿ ಮಸೀದೆಗಳನ್ನು ಕಟ್ಟಿಸಿದರು. ಅನೇಕ ದೇವಾಲಯದೊಳಗಿನ ಮೂರ್ತಿಗಳನ್ನು ಒಡೆದರು ಅನೇಕ ಹಿಂದೂ ಜನರನ್ನು ಒತ್ತಾಯದಿಂದ ಮುಸಲ್ಮಾನರನ್ನಾಗಿ ಮಾಡಿಕೊಂಡರು. ಈ ಪ್ರಕಾರ ಅಲ್ಲಿಯ ಹಿಂದೂ ಜನಾಂಗಕ್ಕೆ ಭಯಂಕರವಾದ ಪ್ರಸಂಗವು ಬಂದೊದಗಿತು ಸುಮಾರು ಮೂವತ್ತು ವರ್ಷಗಳ ವರೆಗೆ ಇಲ್ಲಿಯ ಜನರಿಗೆ ಸುತ್ತಲೂ ನಡೆದ "ತುರುಕ್ಕ"ರ ಹಾವಳಿಯಿಂದ ಎಷ್ಟೂ ಶಾಂತಿ ದೊರೆಯಲಿಲ್ಲ

ಗೋವಪ್ರಾಂತಕದಲ್ಲಿ ನಡೆದಂತೆಯೇ ದಕ್ಷಿಣ ಹಿಂದುಸ್ಥಾನದಲ್ಲೆಲ್ಲಾ ಮುಸಲ್ಮಾನರ ದಾಳಿಗಳಿಂದ ಕೋಲಾಹಲವದ್ದಿತ್ತು. ತಮ್ಮ ಧರ್ಮ, ದ್ರವ್ಯ, ಪ್ರಾಣಗಳನ್ನುಳಿಸುವ ಬಗೆ ಹೇಗೆ ಎಂಬುದೊಂದೆ ವಿಚಾರವು ಎಲ್ಲರಲ್ಲಿಯೂ ಹುಟ್ಟಿತ್ತು ರಾಜ್ಯಭ್ರಷ್ಟರಾದ ಅನೇಕ ಅರಸರು ತಮ್ಮ ತಮ್ಮೊಳಗಿನ ದ್ವೇಷಾಸೂಯಾದಿಗಳನ್ನು ಬಿಟ್ಟು ಒಕ್ಕಟ್ಟಾದರು. ಮುಸಲ್ಮಾನರನ್ನು ಹಿಂದಟ್ಟಿಗ ವಿನಹ ಗತಿಯಿಲ್ಲೆಂಬ ಮಾತು ಎಲ್ಲರಿಗೂ ಮನವರಿಕೆಯಾಯಿತು.

ದಿಲ್ಲಿಯ ಬಾದಶಹನಾದ ಅಲ್ಲಾಉದ್ದೀನ ಖಿಲಜಿಯು ಕ್ರಿ. ಶ ೧೩೧೬ ರಲ್ಲಿ ತೀರಿಕೊಂಡನು. ಅತನ ವಂಶದವರು ಮುಂದೆ ಬಹಳ ದಿವಸಗಳ ವರೆಗೆ ಆಳಲಿಲ್ಲ. ಕ್ರಿ ಶ. ೧೩೨೧ ರಲ್ಲಿ ಖಿಲಜಿ ಮನೆತನದ ಆಳಿಕೆ ತೀರಿ ತಘಲಖ ಮನೆತನದ ಘ್ಯಾಸುದ್ದೀನನು ಅರಸನಾದನು. ಆದರೆ ಐದೇ ವರ್ಷಗಳಲ್ಲಿ ಈತನನ್ನು ಹಂಚಿಕೆಯಿಂದ ಕೊಲ್ಲಿಸಿ ಈತನ ಮಗನಾದ ಮಹಮ್ಮದ ತಘಲಖನು ಪಟ್ಟಕ್ಕೆ ಬಂದನು ಮಹಮ್ಮದನು ಬಹಳ ದುಷ್ಟಸ್ವಭಾವದವನೂ, ಸ್ವಚ್ಛಂದಿಯೂ, ಅವಿವೇಕಿಯೂ ಇದ್ದ ಕಾರಣ ಇವನ ಆಳಿಕೆಯಲ್ಲಿ ಉತ್ತರ ಹಿಂದುಸ್ಥಾನದಲ್ಲೆಲ್ಲ ಅಲ್ಲಲ್ಲಿ ಬಂಡಾಯಗಳಾದವು. ಮುಸಲ್ಮಾನರ ವರ್ಚಸ್ಸನ್ನು ತೆಗೆದು ಹಾಕಲು ಇದೊಂದು ಉತ್ಕೃಷ್ಟ ಸಂಧಿಯು ದಕ್ಷಿಣದ ಹಿಂದೂ ಜನರಿಗೆ ದೊರೆಯಿತು. ಕ್ರಿ. ಶ. ೧೩೩೬ ರಲ್ಲಿ ಮಾಧವಾಚಾರ್ಯರ ಆಶೀರ್ವಾದದಿಂದ ವಿಜಯನಗರದ ಸ್ಥಾಪನೆಯಾಗಿ ಅಲ್ಲಿ ಹರಿಹರ(ಹುಕ್ಕ)ರಾಯನು ಪಟ್ಟಕ್ಕೆ ಕುಳಿತನು. ಬುಕ್ಕರಾಯನು ಹರಿಹರರಾಯನ ಮಂತ್ರಿಯ ಕೆಲಸವನ್ನು ಮಾಡುತ್ತಿದ್ದನು. ಮುಂದೆ ಕ್ರಿ. ಶ ೧೩೫೪ ರಲ್ಲಿ ಹರಿಹರರಾಯನು ತೀರಿಕೊಂಡನಂತರ, ಬುಕ್ಕರಾಯನು ಪಟ್ಟವೇರಿದನು ವರಂಗಲದ ರಾಜ್ಯವು ತುರುಕರಿಂದ ನಾಶ ಮಾಡಲ್ಪಟ್ಟನಂತರ ಅಲ್ಲಿಯ ಅರಸನ ಮಗನಾದ ಕೃಷ್ಣರಾಯನು ಬುಕ್ಕರಾಯನ ಆಶ್ರಯಕ್ಕೆ ಬಂದು ನಿಂತನು ಅದೇ ಪ್ರಕಾರ ಹೊಯ್ಸಳರಸನೂ ಮತ್ತೂ ಅನೇಕ ದಕ್ಷಿಣ ಹಿಂದುಸ್ಥಾನದ ಅರಸರೂ ಶ್ರೀ ಬುಕ್ಕಭೂಪತಿಯ ನೇತೃತ್ವದಲ್ಲಿ ಮುಸಲ್ಮಾನರ ಮೇಲೆ ದಂಡೆತ್ತಿ ಹೋಗಿ ಯಾವತ್ತೂ ಮುಸಲ್ಮಾನ ಸರದಾರರನ್ನು ದಕ್ಷಿಣ ಹಿಂದುಸ್ಥಾನದೊಳಗಿಂದ ಹಿಮ್ಮೆಟ್ಟಿಸಿದರು. ದೇವಗಿರಿಯ ಹೊರ್ತು ಎರಡನೆಯ ಒಂದಾದರೂ ಸ್ಥಳವು ದಿಲ್ಲಿಯ ಸುಲ್ತಾನನ ಕೈಯಲ್ಲಿ ಉಳಿಯಲಿಲ್ಲ ಈ ಪ್ರಕಾರ ಮುಸಲ್ಮಾನರಿಗೆ ಪ್ರತಿಬಂಧವಾದದ್ದೆಂದರೆ ಹಿಂದುಸ್ಥಾನದ ಇತಿಹಾಸದಲ್ಲಿ ಇದು ಮೊದಲನೆಯ ಉದಾಹರಣೆ ಶ್ರೀ ಬುಕ್ಕರಾಯನು ಮುಸಲ್ಮಾನರಿಗೆ ಕೊಟ್ಟ ಈ ಆಘಾತದಿಂದ ಮುಸಲ್ಮಾನರ ಶಕ್ತಿಪಾತವು ಕ್ರಮೇಣ ಆಗುತ್ತ ಹೋಗಿ ಕೊನೆಗೆ ಅವರು ಹಿಂದುಸ್ಥಾನದ ಸಾಮ್ರಾಜ್ಯವನ್ನೇ ಕಳಕೊಳ್ಳಬೇಕಾಯಿತು ಬುಕ್ಕರಾಯನು ೧೩೬೮ ರಲ್ಲಿ ದಿಲ್ಲಿಯ ಬಾದಶಹನ ಸೈನ್ಯದ ಪರಾಭವ ಮಾಡಿದ ನಂತರ ಅತನ ಮಹಾಮಂತ್ರಿಯಾದ ಮಾಧವಾಚಾರ್ಯರು ವೈಜಯಂತಿಪುರದ ಅಂದರೆ ಬನವಾಸಿ ಪ್ರಾಂತದ ಸುಭೇದಾರರಾಗಿದ್ದರು. ಅವರು ಕ್ರಿ. ಶ ೧೩೮೦ ರಲ್ಲಿ ಗೋವೆನಗರದ ಮೇಲೆ ದಂಡೆತ್ತಿಹೋಗಿ ಅಲ್ಲಿಯ ಮುಸಲ್ಮಾನ ಸರದಾರನನ್ನು ಓಡಿಸಿ, ಆ ನಾಡನ್ನು ತುರುಕರ ವಶದಿಂದ ಬಿಡಿಸಿದರು ಆಗ್ಯೆ ಅಲ್ಲಿಯ ಹಿಂದೂ ಜನತೆಗೆ ಅತ್ಯಾನಂದವಾಯಿತು ಅಲ್ಲಿಯ ಕೋಚರಿ ಗ್ರಾಮವು ಮಾಧವಪುರವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಮಾಧವ ಮಂತ್ರಿವರ್ಯರು ಅಲ್ಲಿದ್ದ ಅನೇಕ ದೇವಾಲಯಗಳೊಳಗಿಂದ ತುರುಕರಿಂದ ಕಿತ್ತಲ್ಪಟ್ಟ ದೇವತೆಗಳ ಪುನಃ ಪ್ರತಿಷ್ಠಾಪನೆ ಮಾಡಿಸಿದರು.

ಕುಡಾಳ ಮತ್ತು ಗೋವಾ ಇವುಗಳೊಳಗಿನ ಪ್ರದೇಶಕ್ಕೆ "ಮಾಧವರಾಯನ ಪಟ್ಟಿ" ಎಂದು ಹೆಸರು ನಡೆಯುತ್ತಿತ್ತು. ಮಾಧವ ಮಂತ್ರಿಯು ಗೋವಾಪ್ರಾಂತವನ್ನು ಜಯಿಸಿದ ವೃತ್ತಾಂತವೂ ಇನ್ನೂ ಕೆಲವು ಮಹತ್ವದ ಸಂಗತಿಗಳೂ ಕೋಚರಿಯಲ್ಲಿ ಉಪಲಬ್ಧವಾದ ತಾಮ್ರಶಾಸನದಿಂದ ತಿಳಿದು ಬಂದಿರುತ್ತವೆ. ಈ ವಿಜಯದಿಂದ ಅತಿ ಸಂತುಷ್ಟನ ಗಿ ಬುಕ್ಕರಾಯನು ಕ್ರಿ. ಶ ೧೩೪೬ ರಲ್ಲಿ ಒಂದು ವಿಜಯ ಮಹೋತ್ಸವವನ್ನು ಅತಿ ವಿಜೃಂಭಣೆಯಿಂದ ನಡಿಸಿದ ಸಂಗತಿಯು ಬೇರೊಂದು ಶಿಲಾಲಿಪಿಯಿಂದ ತಿಳಿದು ಬಂದಿರುತ್ತದೆ.

ವಿಜಯನಗರದಲ್ಲಿ ಮಾಧವರೆಂಬ ಅನೇಕರು ಆಗಿರುವರು. ಈ ತಾಮ್ರಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಮಾಧವಮಂತ್ರಿಯು ಬೇರೆ, ಮಾಧವಾಚಾರ್ಯರು (ವಿದ್ಯಾರಣ್ಯರು) ಬೇರೆ ಎಂದು ಕೆಲವರು ಉದಾಹರಿಸುತ್ತಿರುವರಂತೆ. ಮಾಧವರೆಂಬ ಅನೇಕ ವ್ಯಕ್ತಿಗಳು ವಿಜಯನಗರದ ಇತಿಹಾಸದಲ್ಲಿ ಆಗಿರಬಹುದು. ಆ ಬಗ್ಗೆ ಚರ್ಚೆಮಾಡುವದೀ ಸ್ಥಳವಲ್ಲ. ಜಯಂತೀಪುರದಲ್ಲಿ ಅರಸನಂತೆ ಆಳಿದ ಮಂತ್ರಿವರ್ಯನಾರು? ಎಂಬುವ ಪ್ರಶ್ನದ ಮಟ್ಟಿಗೆ ಇಲ್ಲಿ ವಿಚಾರಮಾಡುವದು ಯೋಗ್ಯವಾಗಬಹುದು ಈ ತಾಮ್ರಪಟವಲ್ಲಿ ಮಾಧವಮಂತ್ರಿವರ್ಯನ ಬಿರುದಾವಳಿಯಲ್ಲಿ ಮುಂದಿನ ಭಾಗ ಬಂದದೆ.

"स्वस्ति श्रीमन्महामंत्रीश्वर उपनिपन्मार्ग प्रवर्तकाचार्य श्रीमन्माधव राज्ञः"

ಇದರೊಳಗಿನ महामंत्रीश्वर ಮತ್ತು उपनिपन्मार्ग-प्रवर्तकाचार्य ಎಂಬ ಎರಡೂ ಶಬ್ದಗಳು ವಿಶೇಷ ಮಹತ್ವವುಳ್ಳಂಥವಾಗಿವೆ. महामंत्रीश्वर ಶಬ್ದದಿಂದ ಅನೇಕ ಮಂತ್ರಿಗಳೊಳಗೆ ಅಗ್ರಗಣ್ಯನು, ಮುಖ್ಯ ಪ್ರಧಾನಿಯು ಎಂದು ಅರ್ಥವು ಸ್ಪಷ್ಟಾಗುವದು ಮತ್ತು उपनिषन्मार्ग प्रवर्तकाचार्य ಎಂಬ ಬಿರುದಿನಿಂದ ಮಾಧವಮಂತ್ರಿ ಎಂದರೆ ಮಾಧವಾಚಾರ್ಯ ವಿದ್ಯಾರಣ್ಯರೆಂದು ಅರ್ಥವು ಸಿದ್ಧವಾಗುವದು. ಶ್ರೀ ಬುಕ್ಕಣರಾಜನಿಗೆ ಪರಾಶರ ಸ್ಮೃತಿಯ ವ್ಯಾಖ್ಯೆಯ ಅಂತ್ಯದಲ್ಲಿ "श्रीमद्राजाधिराजपरमेश्वर वैदिकमार्ग प्रवर्तक श्रीवीर बुक्कण भूपाल साम्राज्य धुरंधरस्य माधवामात्य कृता पाराशरस्मृति व्याख्यायां माधवी व्याख्यायां' ಎಂದು ಉಲ್ಲೇಖವು ಬಂದದೆ ರಾಜಾಧಿರಾಜ ಬುಕ್ಕಣಗೆ वैदिकमार्गप्रवर्तक ನೆಂದ ಬಳಿಕ 'उपनिषन्मार्गप्रवर्तक' ಎಂಬ ಬಿರುದು ಮಾಧವಾಚಾರ್ಯ ಯಾ ವಿದ್ಯಾರಣ್ಯರ ಹೊರತು ಎರಡನೆಯವರಿಗೆ ಸಲ್ಲಲಾರದು. ಮಾಧವಾಚಾರ್ಯರು ಮಹಾ ವಿದ್ವಾಂಸರೂ, ಚತುರರಾದ ವಾಕ್ಸಿದ್ಧಿಗಳೂ ಇದ್ದರಲ್ಲದೆ, ಕುಶಲರಾದ ರಾಜ್ಯಕರ್ತರೂ ಆಗಿದ್ದರೆಂದು ಈ ತಾಮ್ರಶಾಸನದಿಂದ ಸಿದ್ಧವಾಗುತ್ತದ ಮಾಧವಾಚಾರ್ಯರು ಒಂದು ಕಡೆಗೆ (ಪಂಚದಶಿಯಲ್ಲಿ) ಹೇಳಿದ ವಾಕ್ಯವು ज्ञानिनाचरितु शक्य सम्यग्राज्यादिलौकिक ಎಂಬ ತತ್ವವು ಅವರು ಸ್ವಾನುಭವದಿಂದ ಹೇಳಿದ ಮಾತಾಗಿದೆ, ತಾತ್ವಿಕ ಸೂತ್ರವಲ್ಲ! ಇರಲಿ.

ಮಾಧವಮಂತ್ರಿವರ್ಯರು ಕೀರ್ತಿಶೇಷರಾದ ನಂತರ ನರಹರಿ ಎಂಬೊಬ್ಬ ಬ್ರಾಹ್ಮಣ ಸರದಾರನನ್ನು ವೈಜಯಂತಿ ಪಟ್ಟಣಕ್ಕೆ ಅಧಿಕಾರಿಯಾಗಿ ನೇಮಿಸಲಾಯಿತು. ಇವನು ಮಾಧವ ಮಂತ್ರಿಯ ಕಾಲದಲ್ಲಿ ಅತನ ಸೈನ್ಯದಲ್ಲಿ ಶೂರ ಸರದಾರನೆಂದು ಪ್ರಸಿದ್ಧಿಗೆ ಬಂದಿರಬಹುದು. ಮೇಲೆ ಉಲ್ಲೇಖಿಸಿದ ಕೋಚರಿ ಬಂದರದ ತಾಮ್ರಶಾಸನವನ್ನು ಬರೆಯಿಸಿದವನಿವನೇ. ಕೋಚರಿ ಗ್ರಾಮವು ಮಾಧವಪುರವೆಂದು ಪ್ರಸಿದ್ಧಿಯಾದ ಸಂಗತಿಯು ಮೇಲೆ ಹೇಳಿರುತ್ತದಷ್ಟೆ. ಈ ಮಾಧವಪುರವನ್ನು ಕೆಲ ನಿರಾಶ್ರಿತರಾದ ವೈದಿಕ ಬ್ರಾಹ್ಮಣರಿಗೆ ಈ ನರಹರಿ ಮಂತ್ರಿಯು ಕ್ರಿ. ಶ ೧೩೯೧ ರಲ್ಲಿ ಅಗ್ರಹಾರವಾಗಿ ಮಾಡಿಕೊಟ್ಟಿರುವನು. ಇದರ ಬಗ್ಗೆ ಈ ತಾಮ್ರಶಾಸನವು ಹುಟ್ಟಿದ್ದು. ಈತನು ಅನೇಕ ಯುದ್ಧಗಳಲ್ಲಿ ಶೌರ್ಯವನ್ನು ತೋರಿಸಿ, ಶತ್ರುಗಳನ್ನು ಜಯಿಸಿ ಬಹಳ ಪ್ರಸಿದ್ಧಿಗೆ ಬಂದವನೆಂದು ಈ ಶಿಲಾಶಾಸನದಿಂದಲೇ ತಿಳಿಯುತ್ತದೆ.

ನರಹರಿ ಮಂತ್ರಿಯು ಗೋವೆಯ ಸುತ್ತಲಿರುವ ಪ್ರದೇಶವನ್ನು ಕ್ರಿ.ಶ. ೧೩೯೫ ರಲ್ಲಿ ಆಕ್ರಮಿಸಿ ಸಂಪೂರ್ಣ ಕುಡಾಳಪ್ರಾಂತ, ಭಿಮಗಡ, ಅಂಬೋಲಿ, ಚಂದಗಡ ಮುಂತಾದ ಪ್ರದೇಶಗಳನ್ನೆಲ್ಲ ವಿಜಯನಗರದ ರಾಜ್ಯಕ್ಕೆ ಜೋಡಿಸಿದನು. ಮತ್ತು ಅಲ್ಲಲ್ಲಿ ತನ್ನ ದಳವಾಯಿಗಳನ್ನು ನೇಮಿಸಿದನು. ಹತ್ತು ಹನ್ನೆರಡು ಊರುಗಳ ಮೇಲೆ ಒಬ್ಬ ನಾಯಕ, ಕೆಲವರು ನಾಯ

ಕರ ಮೇಲೆ ಒಬ್ಬ ದೇಶಕನು ಇರುತ್ತಿದ್ದನು. ಈ ದೇಶಕರೆ ಮುಂದೆ ದೇಸಾಯಿ ಎಂಬ ಪ್ರಸಿದ್ಧಿಗೆ ಬಂದರು. ಯಾವತ್ತು ದಕ್ಷಿಣಕುಡಾಳ ಪ್ರಾಂತದಮೇಲೆ ಈಗಿನ ಸಾವಂತವಾಡಿ ಸಂಸ್ಥಾನಿಕರ ಪೂರ್ವಜನಾದ ಭಾಮ ಸಾವಂತನ ಮಗನು ದಳವಾಯಿ ಆಗಿದ್ದನೆಂದು "चाद्गडाङ्गुजीपति नन्यसी देश्वाचा दळवैयाने याचा पिता भामसावंतु" ಮಡಗಾಂವಿಯಲ್ಲಿ ದೊರೆತ ಶಿಲಾಲಿಪಿಯಿಂದ ತಿಳಿದು ಬಂದಿದೆ ಈ ಶಿಲಾಲೇಖದಲ್ಲಿ ಚಿತ್ರಭಾನುಸಂವತ್ಸರದಲ್ಲಿ ಭಾವ. ಸಾವಂತನ ಮಗನು ತನ್ನ ತಂದೆಯ ಸ್ಮಾರಕವಾಗಿ ಒಂದು ಸಮಾಧಿಯನ್ನು ಕಟ್ಟಿಸಿ ಅವರ ನಿತ್ಯದ ವೆಚ್ಚಕ್ಕಾಗಿ ಕೆಲವು ಜಹಗೀರು ಹಾಕಿ ಕೊಟ್ಟನೆಂದು ಹೇಳಿದೆ. ಈ ಶಿಲಾಲೇಖವು ಕ್ರಿ. ಶ. ೧೪೦೨ ರಲ್ಲಿಯದು ಇರುತ್ತದೆ.

ಬುಕ್ಕರಾಯನು ಕ್ರಿ. ಶ. ೧೩೭೯ ರಲ್ಲಿ ಮರಣ ಹೊಂದಿದನು ಆತನ ತರುವಾಯ ಆತನ ಮಗನಾದ ೨ನೆಯ ಹರಿರಾಯನು ಪಟ್ಟಕ್ಕೆ ಬಂದನು ನರಹರಿ ಮಂತ್ರಿಯು ನೇಮಣೂಕ ಮಾಡಿದ ಆರಸನಿಸನೆ ತಾಮ್ರಶಾಸನದಲ್ಲಿ "ಹರಿಹರ" ರಾಯನ ಉಲ್ಲೇಖ ಬಂದಿರುವದು. ಈ ಹರಿರಾಯನು ಕೊಂಕಣದೊಳಗಿನ ತನ್ನ ರಾಜ್ಯವನ್ನು ಮಾಲವಣದ ವರೆಗೆ ವಿಸ್ತರಿಸಿದನೆಂದು ಕಂಡುಬರುತ್ತದೆ ಬಹುಶ ಮಾಲವಣದ ಹತ್ತರದಲ್ಲಿಯೇ ಉತ್ತರಕ್ಕಿರುವ 'ವಿಜಯದುರ್ಗವು" ಉತ್ತರ ದಿಕ್ಕಿನ ಸೀಮೆಯಾಗಿರಬಹುದು.

ಕೋಚರೆ ಊರ್ಫ ಮಾಧವಪುರದ ತಾಮ್ರಶಾಸನದೊಳಗಿನ ಸಂಗತಿಗಳು ಬೇರೆ ಸ್ವತಂತ್ರವಾದ ಪುರಾವೆಗಳಿಂದಲೂ ನಿಸ್ಸಂದಿಗ್ಧವಾಗಿ ಸಿದ್ಧವಾಗುತ್ತವೆ.

ಇಬ್ನ ಬಟುಟಾ ಎಂಬ ಆಫ್ರಿಕಾಖಂಡದೊಳಗಿನ ಟ್ಯಾಂಜರ್ಸ ಎಂಬ ನಗರದ ಪ್ರವಾಸಿಯು ಕ್ರಿ. ಶ. ೧೩೪೫ ರಲ್ಲಿ ಚೀನದೇಶದಿಂದ ಹಿಂದುಸ್ಥಾನಕ್ಕೆ ಬಂದು ಗೋವೆ ಬಂದರಕ್ಕೆ ಬಂದಿದ್ದನು. ಆಗ್ಯೆ ಗೋವೆ ಪಟ್ಟಣವನ್ನು ಮುಸಲ್ಮಾನರ ಕೈಯೊಳಗಿಂದ ಹಿಂದೂ ಜನರು ತಕ್ಕೊಂಡಿದ್ದರೆಂದು ತನ್ನ ಪ್ರವಾಸ ವರ್ಣನೆಯಲ್ಲಿ ನಮೂದಿಸಿರುವನು. ಫೇರಿಸ್ತಾ ಎಂಬ ಪ್ರಸಿದ್ಧ ಮುಸಲ್ಮಾನ ಇತಿಹಾಸಕಾರನೂ ಹೀಗೆ ನಮೂದ ಮಾಡಿದ್ದಾನೆ:— "ವಿಜಯನಗರದರಸರ ರಾಜಸತ್ತೆಯು ಬಹಾಮನೀ ಸುಲ್ತಾನರ ಸತ್ತೆಗಿಂತಲೂ ಮೇಲಾಗಿದೆ. ದಕ್ಷಿಣ ದೇಶ, ಓರಿಸಾ ಒಳಪಟ್ಟು ಹಿಂದುಸ್ಥಾನ ದೇಶದ ಪೂರ್ವದ ಸಮುದ್ರತೀರ, ಗೋವಾ ಮುಂತಾದ ಅನೇಕ ಬಂದರಗಳು ಅವರ ವಶವಲ್ಲಿವೆ. ಮಂಗಳೂರಿನಲ್ಲಿ ಅವರ ಬಲಾಢ್ಯ ಪಡೆಗಳು ಪಡೆಯಿದ್ದು, ಗೋವೆ ಬಂದರ, ಬೆಳಗಾಂವಿಯ ಕೋಟೆ ಮತ್ತು ಕೊಂಕಣದೊಳಗಿನ ಅನೇಕ ಪ್ರಾಂಗಳು ವಿಜಯನಗರದ ಅರಸರ ಕೈವಶದಲ್ಲಿವೆ ಮಲಬಾರ, ಸಿಂಹಲದ್ವೀಪ ಮತ್ತು ಸಮೀಪದಲ್ಲಿದ್ದ ಬೇರೆ ದ್ವೀಪಗಳ ಅರಸರು ಪ್ರತಿವರ್ಷ ವಿಜಯನಗರದ ಅರಸನಿಗೆ ಬಹು ಮೂಲ್ಯವಾದ ನಜರಾಣೆಗಳನ್ನು ಕೊಡುತ್ತಾರೆ." ಫೆರಿಸ್ತನ ಈ ವರ್ಣನೆಯು ಕ್ರಿ. ಶ. ೧೩೬೬ ರಲ್ಲಿ ಬರೆದದ್ದಿರುತ್ತದೆ

ಕೊಂಕಣಾಖ್ಯಾನವೆಂಬದೊಂದು ಮರಾಠಿ ಪುರಾಣವದೆ. ಆ ಗ್ರಂಥದಲ್ಲಿ ಮುಂದಿನಂತೆ ಉಲ್ಲೇಖವಿರುವದು.—

अविंध नव्हते विजापूर । विद्यानगर रायाचा देश

समग्र ।

ಆ ಕಾಲದಲ್ಲಿ ವಿಜಾಪೂರದ ಮುಸಲ್ಮಾನರ ಆಳಿಕೆಯು ಇಲ್ಲಿರಲಿಲ್ಲ, ಯಾವತ್ತೂ ಪ್ರದೇಶವು ವಿದ್ಯಾನಗರದ ಅರಸರದಾಗಿತ್ತು

ಕೋಚರೆ ತಾಮ್ರಪಟದಲ್ಲಿ ಕೊಟ್ಟಿರುವ ಅಗ್ರಹಾರವು ೨೫ ಮಂದಿ ಬ್ರಾಹ್ಮಣರಿಗೆ ಕೊಡಲ್ಪಟ್ಟಿತು ಸಹಜವಾಗಿಯೆ ಆ ಗ್ರಾಮದಲ್ಲಿಯ ಜಮೀನಿಯಲ್ಲಿ ತಕ್ಷೀಮುಗಳಾದವು. ಆ ತಕ್ಷೀಮುಗಳಿಗೆ ಆಯಾ ಬ್ರಾಹ್ಮಣರ ಹೆಸರುಗಳು ಬಿದ್ದಿರುತ್ತವೆ. ಉದಾಹರಣಾರ್ಥ (ನಾರಾಯಣಭಟ್ಟನ ರಿಕಾಣ) ಹರಭಟ್ಟನ ರಿಕಾಣ; ಇ)

ಈ ಯಾವತ್ತೂ ಸಂಗತಿಗಳನ್ನು ಲಕ್ಷ್ಯಕ್ಕೆ ತಂದರೆ ಗೋವಾ ಪ್ರಾಂತವು ವಿಜಯನಗರದವರ ಆಧಿಪತ್ಯಕ್ಕೆ ಒಳಪಟ್ಟಿತ್ತೆಂಬುವದರಲ್ಲಿ ಏನೂ ಸಂಶಯವಿಲ್ಲ. ಆದರೂ ಕಲವರು ಹಟದಿಂದ ಈ ಮಾತನ್ನು ಒಪ್ಪಿಕೊಳ್ಳುವದಿಲ್ಲ. ಅವರೆ ಅವರ ಮತಕ್ಕೆ ಪುಷ್ಟಿ ಕೊಡುವಂಥ ಪುರಾವೆಗಳನ್ನೂ ಅವರು ತೋರಿಸುವದಿಲ್ಲ. ಗೋವಾ ಪ್ರಾಂತದಲ್ಲಿ ವಿಜಯನಗರದವರ ರಾಜ್ಯವು ಇದ್ದಿಲ್ಲ ಅಲ್ಲಿ ಬ್ರಾಹ್ಮಣ ಸಾಮಂತ ವಂಶದವರ ರಾಜ್ಯವಿತ್ತು. ಎಂಬ ಆಧಾರಗಳಿಲ್ಲದೆ ಬರಿ ತರ್ಕವಾದದಿಂದ ವಾದಿಸಿದರೆ ಆ ಮಾತು ಸಿದ್ಧವಾಗಲಾರದು.

ಬಂದಿವಡೆಯಲ್ಲಿ ದೊರೆತ ಶಿಲಾಲೇಖದಲ್ಲಿ 'ವಿಜಯನಗರದ ಅರಸರು ನಂಜಣ್ಣ ಗೋಸಾವಿ ಎಂಬವನನ್ನು ಗೋವೆ ಪ್ರಾಂತದ ಸುಭೆದಾರನನ್ನಾಗಿ ನೇಮಿಸಿದರೆಂದು ಬರೆದದೆ' ಎಂದು गोमांत्यांचा इतिहास ಎಂಬ ಪುಸ್ತಕದಲ್ಲಿ ನಮೂದಿಸಿದೆ. ಇತಿಹಾಸ ಸಂಶೋಧಕರು ಈ ಶಿಲಾಲೇಖದೊಳಗಿನ ಮಾಹಿತಿ ಹಾಗೂ ಈ ಶಿಲಾಲೇಖದ ಮಿತಿ ಮುಂತಾದ ವಿಷಯಗಳ ಬಗ್ಗೆ ಶೋಧನೆ ಮಾಡಿ ಪ್ರಕಟಿಸಿದರೆ ವಿಜಯನಗರದವರ ಗೋವೆಯ ಆಳಿಕೆಯ ಇತಿಹಾಸದ ಮೇಲೆ ಹೆಚ್ಚಿನ ಪ್ರಕಾಶ ಬೀಳುವದುಂಟು.

ಮಾಧವ ಮಂತ್ರಿಯಿಂದ ವಿಜಯನಗರದ ಸಾಮ್ರಾಜ್ಯದಲ್ಲಿ ಸೇರಿಸಲ್ಪಟ್ಟ ಗೋವಾ ಪ್ರಾಂತವು ಸುಮಾರು ಒಂದೂವರೆ ನೂರು ವರ್ಷಗಳ ವರೆಗೆ ವಿಜಯನಗರದ ಸಾಮ್ರಾಜ್ಯದ ಅಧೀನವಾಗಿಯೇ ಇತ್ತು. ಸಂಗಮ ಮನೆತನದ ರಾಜರು ತಮ್ಮ ಗೌರವವನ್ನು ಕಾಯ್ದುಕೊಂಡು ಆಳಿದರು. ಕ್ರಿ. ಶ. ೧೩೬೫ ರಿಂದ ಮುಂದೆ ವಿಜಯನಗರದ ಅರಸರಿಗೂ ಮುಸಲ್ಮಾನರಿಗೂ ಮೇಲಿಂದ ಮೇಲೆ ಯುದ್ಧಗಳಾಗುತ್ತಲೇ ಇದ್ದವು. ಸಂಗಮ ಮನೆತನದ ಕಾಲದಲ್ಲಿ ವಿಜಯನಗರದ ಅರಸರೇ ಬಾಮನೀ ಅರಸರಿಗಿಂತ ಹೆಚ್ಚು ಬಲಾಢ್ಯರಾಗಿ ಉಳಿದರು. ಈ ಮನೆತನದ ಕೊನೆಯ ವಿರೂಪಾಕ್ಷನು ದುರ್ಬಲನಾದ್ದರಿಂದ ಅವನ ದರಬಾರಿನಲ್ಲಿ ಒಡಕು ಉಂಟಾಯಿತು. ಇದೆ ಕಾಲದಲ್ಲಿ ಬಾಮನೀ ರಾಜ್ಯದ ಸೂತ್ರಗಳು ಮಹಂಮದ್‌ಗವಾನನೆಂಬ ಅತಿ ಕರ್ತೃತ್ವಶಾಲಿಯಾದ ಸರದಾರನ ಕೈಯಲ್ಲಿದ್ದವು. ಅತನು ವಿಶ್ವಪ್ರಯತ್ನ ಮಾಡಿ ಕ್ರಿ. ಶ. ೧೪೭೨ ರಲ್ಲಿ ಗೋವೆಯನ್ನು ವಿಜಯನಗರದವರ ಕಡೆಯಿಂದ ಗೆದ್ದುಕೊಂಡನು. ಮುಂದೆ ೧೪೮೯ ರಲ್ಲಿ ಗೋವೆಯು ಬಿಜಾಪುರದ ಆದಿಲಶಾಹಿಯ ಭಾಗವಾಯಿತು. ಅನಂತರ ಕ್ರಿ. ಶ. ೧೫೧೦ ರಲ್ಲಿ ಪೋರ್ತುಗೀಜರ ಸರದಾರನಿಂದ ಅಲ್ಬುಕರ್ಕನು ಗೋವೆಯನ್ನು ವಿಜಾಪೂರದವರ ಕೈಯಿಂದ ಗೆದ್ದುಕೊಂಡನು. ಆಗ ಪೋರ್ತುಗೀಜ ಜನರಿಗೂ ವಿಜಯನಗರದ ಅರಸರಿಗೂ ಸ್ನೇಹ ಭಾವವಿದ್ದದರಿಂದ ಗೋವೆಯ ನಾಡು ಪೋರ್ತುಗೀಜರ ಕೈಗೆ ಸೇರಿದ್ದಕ್ಕೆ ವಿಜಯನಗರದವರಿಗೆ ಸಮಾಧಾನವೆನಿಸಿತು. ಅಂದಿನಿಂದ ಗೋವೆ ಪ್ರಾಂತವು ಇವತ್ತಿನ ವರೆಗೂ ಪೋರ್ತುಗೀಜರ ಕೈವಶದಲ್ಲಿ ಅದೆ. ಯುರೋಪಿಯನ್ನರ ವಶಕ್ಕೆ ಹೋದ ಹಿಂದುಸ್ಥಾನದ ಭಾಗಗಳಲ್ಲಿ ಇದೇ ಮೊದಲನೆಯದೆನ್ನಬಹುದು.

ಈ ಗೋವೆ-ಕುಡಾಳ ನಾಡಿನಲ್ಲಿ ಹಿಂದೆ ಕನ್ನಡ ಭಾಷೆಯೇ ಪ್ರಚಾರದಲ್ಲಿತ್ತೆಂದು ಈ ಮೊದಲು ಹೇಳಿದೆ. ಆದರೆ ವಿಜಯನಗರದವರ ಅಧಿಪತ್ಯವು ಹೋದನಂತರ ಇಲ್ಲಿ ವಿಜಾಪೂರದವರ ಆಳಿಕೆಯಲ್ಲಿ ಕನ್ನಡ ಭಾಷೆಯು ಹಿಂದೆ ಬೀಳಲಾರಂಭಿಸಿತು ಮುಂದೆ ಈ ಪ್ರಾಂತದ ಸುತ್ತುಮುತ್ತಲೂ ಮರಾಠರ ರಾಜ್ಯವಾದನಂತರವಂತೂ ಯಾವತ್ತೂ ರಾಜಕೀಯ ಉತ್ತೇಜನವು ಮರಾಠಿ ಭಾಷೆಗೆ ದೊರೆಯಲಾರಂಭಿಸಿತು. ಹೀಗಾಗಿ ಕನ್ನಡವು ಬಹುಶ: ಲೋಪವಾಗುತ್ತ ನಡೆದದೆ. ಸಾವಂತವಾಡಿ ವಗೈರೆ ಭಾಗಗಳಲ್ಲಿ ೧೭ ನೆಯ ಶತಮಾನದಲ್ಲಿ ಸರಕಾರಿ ಕಾಗದಪತ್ರಗಳೆಲ್ಲಾ ಮರಾಠಿಯಲ್ಲಿದ್ದರೂ ಜನರು ತಮ್ಮ ಖಾಸಗಿ ವ್ಯವಹಾರದಲ್ಲಿ ಕನ್ನಡವನ್ನೇ ಉಪಯೋಗಿಸುತ್ತಿದ್ದರೆಂದು ಹೇಳಲಿಕ್ಕೆ ಅವಕಾಶವದೆ. ಕ್ರಿ. ಶ. ೧೬೦೪ ರಲ್ಲಿ ಬರೆದ ಒಂದು ಮಹತ್ವದ ಕಾಗದದ ಛಾಯಾ ಚಿತ್ರವನ್ನು 'सावंतवाडीचा इतिहास' ಎಂಬ ಪುಸ್ತಕದಲ್ಲಿ ಕೊಟ್ಟಿದ್ದಾರೆ. ಅದರೊಳಗೆ ಕಾರಕೂನರು ಬರೆದ ಮೋಡಿ ಮಜಕೂರಿನ ಕೆಳಗಿನ ಸಹಿಗಳು ಕನ್ನಡದಲ್ಲಿಯೆ ಇವೆ. ಈಗಿನ ಕಾಲದಲ್ಲಿ ಮಾತ್ರ ಲಿಂಗಾಯತ ವರ್ತಕರ ಹೊರತು ಕನ್ನಡವನ್ನರಿತವರು ಕೊಂಚಮಟ್ಟಿಗೆ ಕನ್ನಡವನ್ನು ಜೀವದಿಂದಲಾದರೂ ಉಳಿಸಿರುವರೆಂದು ತಿಳಿಯುತ್ತದೆ. ಉಳಿದದ್ದಾದರೂ ಕನ್ನಡ ಸಂಸ್ಕೃತಿಯನ್ನೂ ಕನ್ನಡ ಭಾಷೆಯನ್ನೂ ಲೋಪವಾಗದಂತೆ ಪ್ರಸಾರ ಮಾಡುವದು ಕನ್ನಡಾಭಿಮಾನಿಗಳ ಕರ್ತವ್ಯವಾಗಿದೆ.

# ವಿಜಯ ಸಾಮ್ರಾಜ್ಯ.

## ( ಒಂದಂಕಿನ ದೃಶ್ಯ. )

( ಲೇಖಕರು: ಪ್ರೊ| ರಂ ಶ್ರೀ ಮುಗಳಿ ಎಂ. ಎ. ಬಿ. ಟಿ. )

### ಪ್ರವೇಶ ೧

(ಹಂಪೆಯ ವಿರೂಪಾಕ್ಷ ದೇವರ ಗುಡಿಯ ವಿಶಾಲ ಮಂಟಪ. ಮಧ್ಯಾಹ್ನದ ಮಂಗಲಾರತಿಯ ಹೊತ್ತಿಗೆ ಹರಿಹರ–ಬುಕ್ಕರು ಕೈ ಮುಗಿದು ಬಲಮಗ್ಗಲಿಗೆ ನಿಂತಿರುವರು. ಅಂದೇ ಹಂಪೆಯಲ್ಲಿ ಬಿಡುಬಿಟ್ಟ ಮೂರನೆಯ ಬಲ್ಲಾಳದೊರೆಯು ತುಸು ದೂರದಲ್ಲಿ ಎಡತುದಿಯ ಒಂದು ಕಂಬಕ್ಕೆ ಮರೆಯಾಗಿ ಆತುಕೊಂಡು ಯಾವುದೋ ಯೋಚನೆಯಲ್ಲಿ ಗೋಪುರದ ತುದಿಯತ್ತ ನೋಡುತ್ತಲಿರುವನು. ಅವನಿಂದ ನಾಲ್ಕು ಹೆಜ್ಜೆಗಳ ಮೇಲೆ ಅತಿ ನಮ್ರನಾಗಿ ಕೈಕಟ್ಟಿಕೊಂಡು ಬಲಪ್ಪದಣ್ಣಾಯಕಮಂತ್ರಿಯು ನಿಂತಿರುವನು. )

**ಬಲ್ಲಾಳ** — ( ಎಡಗಿವಿಯ ಹಿಂದೆ ಕೈಯಿಟ್ಟು ) ' ಹೊಯ್‌ಸಳ! ಹೊಯ್ಸಳ! ' ಯಾರು ನನ್ನನ್ನು ಜಿನುಜಿನುಗಾಗಿ ಕರೆಯುತ್ತಿರುವರು ? ಯಾರು ?

**ಬಲಪ್ಪದಣ್ಣಾಯಕ**:- ಯಾರೂ ಇಲ್ಲ ಒಡೆಯರೇ;

**ಬ**:— ಏನು ? ಯಾರೂ ಇಲ್ಲ! ನೀವು ಬಹಳ ಬಲ್ಲವರು! ಇಲ್ಲಿಗೆ ಬಂದು ಬೀಡುಬಿಟ್ಟ ಗಳಿಗೆಯಿಂದ ನಿಲ್ಲದ ಗಂಟೆಯ ನಾದದಂತೆ ಈ ಕರೆಯು ನನ್ನ ಕಿವಿಯಲ್ಲಿ ಕಟ್ಟಿರುವುದು. ಈ ಗುಡಿಯೊಳಕ್ಕೆ ಅಡಿಯಿಟ್ಟಂತೆ ಅದು ತಡೆಯಿಲ್ಲದೆ ಅಪ್ಪಳಿಸುತ್ತಿದೆ. ' ಹೊಯ್‌ಸಳ! ಹೊಯ್ಸಳ! '

**ಬ. ದ**: – ಅದು ಕಲ್ಪನೆಯಿರಬೇಕು, ದೊರೆಗಳೇ ಹರಿಹರ ಮಾವಂದಿರು ತಮಗಾಗಿ ಅಲ್ಲಿ ದಾರಿ ನೋಡುತ್ತಿರುವರು.

**ಬ**:— ಅದೇತಕ್ಕೆ ?

**ಬ. ದ**, - ಮಧ್ಯಾಹ್ನದ ಮಂಗಳಾರತಿಯ ಹೊತ್ತಾಗಿದೆ, ಜೀಯ.

**ಬ**:— ಬರುತ್ತೇನೆ. ( ಒಂದೆರಡು ಹೆಜ್ಜೆಯಿಟ್ಟು ) ಆದರೆ ಈ ನಾದ! ನಾದ! ನನ್ನನ್ನು ಕೊನೆವರೆಗೂ ಬಿಡದು! ( ಮುಂದುವರಿಯದೆ ದೇವರಿಗೆ ವಿಮುಖನಾಗಿ ಕಂಬಕ್ಕೆ ಕೈಯೂರಿ ನಿಂತು ) ದಣ್ಣಾಯಕ, ವಿರೂಪಾಕ್ಷ ಮೂರ್ತಿಯ ಮಂಗಲಾರತಿಯನ್ನು ನಾನೀಗ ನೋಡಲಾರೆ ನನ್ನ ಚಿತ್ತ ಅಮಂಗಲವಾಗಿದೆ, ನಾನು ತೀರ ಕ್ಷುದ್ರನೆಂದು ತೋರುತ್ತಿದೆ

**ಬ. ದ** — ಹೊಯ್ಸಳನಾಡಿನ ಹಿರಿದೊರೆಗಳು ತಾವು ಹೀಗೆ ತಿಳಿಯಬಾರದು.

**ಬ**:—ಹೊಯ್ಸಳನಾಡಿನ ಹಿರಿದೊರೆ! ಎಂಥ ಮಹಾಸತ್ಯವಿದು, ದಣ್ಣಾಯಕ! ಹೊಯ್ಸಳನಾಡು ಹೆರವರ ತುತ್ತಾಯ್ತು ! ಈ ಹಿರಿದೊರೆಯು ತಿರುಕರಿಗೆ ದೊರೆಯಾದ!

**ಬ. ದ**—ದೊರೆಗಳಿಗೆ ಒಳಿತಾಗಲಿ. ಅದೇಕೆ ಹೀಗೆ ಹೇಳುವುದು ?

**ಬ**:—ನಾನು ಹೇಳುವದಿಲ್ಲ, ದಣ್ಣಾಯಕ, ನಾನಲ್ಲ. ಈ ಕಿವಿದನಿಯು ಕೆಣಕಿ ಅಣಕಿಸುವ ಮಿಂಚುನಗೆಯಿಂದ ಒಂದೆಸವನಾಗಿ ಗುಡುಗುತ್ತಿರುವುದು. ' ಹೊಯ್‌ಸಳ! ಹೊಯ್ಸಳ! ' ಅಂದು ಮೊದಲು ಕುಲದೇವತೆಯ ಗುಡಿಹೊಕ್ಕ ಹುಲಿಯೊಂದನು ' ಹೊಯ್‌ಸಳ್! ' ಎಂದೊಡನೆ ದೀಸಚಾಚುವ ಶಲಾಕೆಯಿಂದ ನೆಲಕಿಕ್ಕಿದ ಹಸುಳನಾದ ಸಳನ ವಂಶದಲ್ಲಿ ನಾನು ಹುಟ್ಟಿದುದು ಬರಿದಂತೆ! ನಿಜ, ನಿಜ, ದಣ್ಣಾಯಕ, ನೂರಾರು ಆಯುಧಗಳುಳ್ಳ ಹಿಂಡು ದಂಡಿದ್ದು, ವರದಂತೆ ಬೆಳೆದು ಮುದುಕನಾದ ನಾನು ನುಗ್ಗಿ ಬರುವ ಹೊಸ ಹುಲಿಗಳಿಂದ ನಾಡದೇವಿಯನ್ನು ಕಾಪಿಡದ ಹೇಡಿಯಾಗಿ ಬದುಕುತ್ತಿರುವೆ! ( ಕೊರಳುಬ್ಬಿ ಗದ್ಗದದಿಂದ ) ಈ ಗೋಪುರದ ಸುತ್ತೆಲ್ಲ ಪೂಜ್ಯಪೂರ್ವಜರಾದ ನಮ್ಮ ಎರೆಯಂಗ, ಬಿಟ್ಟಿದೇವ, ವೀರಬಲ್ಲಾಳರ ಪ್ರತಿಮೆಗಳು ಮುಕ್ಕುರಿಕ್ಕಿ 'ಹೊಯ್‌ಸಳ! ಮತ್ತೆ ಹೊಯ್‌!' ಎಂದು ಶಿವಿತಿವಿದು ಆಡುತ್ತಿವೆ. ಅಯ್ಯೊ ಎನ್ನ ದುರ್ಭಾಗ್ಯವೇ!

( ಕಂಬದ ಕೈಗೆ ತಲೆಯೂನಿಸಿ ಸ್ತಬ್ಧನಾಗುವನು.)

**ಬ. ದ** — ( ಸ್ವಗತ ) ಏನು ಮಾಡುವುದೀಗ ? ಹರಿಹರದೇವರನ್ನೇ ಕರೆತರುವೆ. ( ಹಂಪರನ ಹತ್ತಿರ ಹೋಗಿ ) ಮಾವಂದಿರೇ, ಒಲ್ಲಾಳ ದೇವರಸರು ಬರಲೊಲ್ಲರು.

**ಹ**— ಅದೇನು ಕಾರಣ? ಅನಾರೋಗ್ಯವೇ?

**ಬ ದ**:— ಈವರೆಗೆ ಬಂದಿದ್ದಾರೆ. ಅದೇನೋ ಕನವರಿಕೆಯಲ್ಲಿ ಮುಳುಗಿ ಅಲ್ಲಿ ಕಂಬದೆಡೆ ನಿಂತಿರುವರು.

**ಹ**:—ಹೀಗೆಯೇ? ಮಂಗಲ ರತಿಯು ತುಸು ತಡೆಯಲಿ ಎಂದು ತಿಳಿಸು, ಬುಕ್ಕರಾಯ. ಬಸ್ತಿ, ನಡೆಯಲ್ಲಿ ದೊರೆಗಳನ್ನು ಕಾಣುವ. (ಬಲ್ಲಾಳನ ಹತ್ತಿರ ಹೋಗಿ) ಒಡೆಯರೇ..........

ಬ:—(ಮೆಲ್ಲನೆ ತಲೆಯೆತ್ತಿ) ಯಾರು? ಹರಿಹರ! ಕನ್ನಡದ ತಾಯಿಯ ಹೊಸ ಕುವರ!

**ಹ**:—ಒಡೆಯರೇ, ನನ್ನಿಂದ ಏನಾದರೂ ಪ್ರಮಾದವಾಯ್ತೆ?

ಬ:—ನಿನ್ನಿಂದ ಪ್ರಮಾದವೆ? ಆಗಿಲ್ಲ, ಆಗುವುದಿದೆ.

**ಹ**:— ಅದೇನು?

ಬ:— ಹೊರ ಹಗೆಗಳನ್ನು ಎಬ್ಬಟ್ಟಿ ಮಹಾಮಂಡಳೇಶ್ವರನಾದ ನೀನು ಮಹಾಸಮ್ರಾಟನಾಗಿ ನನ್ನನ್ನು ಪಾತಾಳದರಸಾಗಿ ಮಾಡುವುದು.

**ಹ**:— ಇದೆಂಥ ನುಡಿ, ಒಡೆಯರೇ ನನ್ನ ಸತ್ಕಾರದಲ್ಲಿ ಕೊರತೆಯೇನಾಯಿತು?

ಬ:— ವೀರ ಹರಿಹರ, ಏನೂ ಕೊರತೆಯಿಲ್ಲ. ಚಿಂತಿಸದಿರು ನೀನು ಮಾಡಬೇಕಾದ ಪ್ರಮಾದವು ನನಗೆ ಬೇಕಾದುದು. ನನ್ನಿಂದ ಆಗದ ಹಿರಿಗೆಲಸವು ನಿನ್ನಿಂದ ಆಗತಕ್ಕದಿದೆ

**ಹ**:— ತಾವದನ್ನು ಕೈಕೊಳ್ಳುವದು ಒಡೆಯರೇ. ನಾವು ತಮಗೆ ಕೈಯಾಳುಗಳಾಗಿ ಹೆಣಗುವೆವು

ಬ:—ಮತ್ತೆ ನಿನ್ನ ಹಟದ ಕತೆಯನ್ನು ಬಿಚ್ಚದಿರು, ಹರಿಹರ. ನೀನು ಮುಂದಾಗಲೇಬೇಕು. ಕನ್ನಡ ರಾಜ್ಯಲಕ್ಷ್ಮಿಯು ಹೊಸ ಒಬ್ಬ ಸಳನನ್ನು ಹುಡುಕುತ್ತಿರುವಳು.

**ಬ ದ**:—ಆದರೆ ಕ್ಷಮೆಯಿರಲಿ ದೊರೆಗಳೇ ಆವಳು ತಮ್ಮನ್ನೇ ಕರೆಯುತ್ತಿಹಳೆಂದು ಆಗಳೆ ಹೇಳಿದಿರಲ್ಲವೇ?

ಬ:—ಇಲ್ಲ, ನನ್ನನ್ನು ಕರೆಯುತ್ತಿಲ್ಲ, ಜರೆಯುತ್ತಿಹಳು ದಣ್ಣಾಯಕಾ! ಹರಿಹರ, 'ಹೊಯ್ ಸಳ, ಹೊಯ್ಸಳ' ಎಂಬ ಕೂಗು ಇಂದು ಬೆಳಗಿನಿಂದ ನಿನ್ನ ಬಂಟಿಗೆಯ ಮುಟ್ಟಲಿಂದ ನನ್ನ ಕಿವಿ ಕೊಳವಿಯಲ್ಲಿ ಹೊಕ್ಕಾಡುತಿದೆ, ಸಳನಾಗಿ ಹೊಯ್ಯುವಿಯಾ?

**ಹ**:—ತಮ್ಮಪ್ಪಣೆ. ಆದರೆ ಹೇಗಾದರೂ, ಒಡೆಯರೇ, ನಾವು ಮಾಂಡಳಿಕರಾಗಿ ಉಳಿದು ತಾವು ಚಕ್ರವರ್ತಿಗಳಾಗಿ ಮೆರೆಯಬೇಕು.

ಬ:—ಆವಾಗನು, ಹರಿಹರ, ಇದಿನ್ನು ಆಗದು. ಕಾಲಚಕ್ರವು ತನ್ನೊಳದ ಚಕ್ಕೆಯಲ್ಲಿ ಹೇಗೆ ನನ್ನನ್ನು ಇರಿಸಿ ತಿರುಗಿಸುತ್ತಿದೆ ಎಂಬುದನ್ನು ನೀನು ಬಲ್ಲೆ. ಅಷ್ಟುಮಾತ್ರಕ್ಕೆನಾನು ಚಕ್ರವರ್ತಿ ಎನ್ನು ಬೇಕಾವರೆ! ದಿಟವಾಗಿ ನಾನೀಗ ಸ್ವತಂತ್ರನಾದ ಕನ್ನಡ ದೊರೆಯಲ್ಲ, ಆ ಸಾವಿರ ಬಿರುದುಗಳ ಶ್ರೀಮತ್‌ಪ್ರತಾಪ ಚಕ್ರವರ್ತಿಯಲ್ಲವೇ ಅಲ್ಲ. ಈ ದಕ್ಷಿಣ ದೇಶಕ್ಕೆ ವಿಷವಾಯುವಾಗಿ ಬೀಸಿಬಂದ ಆ ಮಲಿಕಕಾಫರನು ದೋರಸಮುದ್ರವನ್ನು ಕೊಳ್ಳೆ ಹೊಡೆದಂದಿನಿಂದ ನನ್ನ ಪ್ರಭುತ್ವವು ಉಸಿರಾಡದ ಬೊಂಬೆಯಾಯ್ತು. ಅವನ ಕೈಸೆರೆಯಾಗಿ ಕೆಳವೋರೆಯಿಂದ ಅವನ ಬಿಡಾರದಲ್ಲಿ ಕೆಲಹೊತ್ತು ಬಿದ್ದಾಗ, ಸಂಕೋಲೆಗಳ ಕಚ್ಚಿ ತೋಳ ನರವುಬ್ಬಿಸಿ ನಾನು ಹರಿಯಿಸಿದ ಕಣ್ಣೀರಕಾಲುವೆಗಳನ್ನು ಕಂಡವರಾರು? ನಾನಾಗ ಸಾವಿನ ಮನೆಯ ತೊತ್ತಾಗಲು ಬರುತ್ತಿದ್ದಿಲ್ಲವೇ? ಹೊಟ್ಟೆಯುರಿಯುತ್ತಿದ್ದರೂ ಬದುಕಿ ತಿರುಗಿದೆನೇಕೆ? ತುರುಕುದೊರೆಯ ದಾಸಾನುದಾಸನಾಗುವೆನೆಂದು ತೋರಿಸಲು ಬಿಸಿನೆತ್ತರದ ಬೀರ ಮಗ ಬಲ್ಲಾಳರಾಯನನು ರಾಜಬಂದಿಯಾಗಿ ದಿಳ್ಳಿಯ ವರೆಗೆ ಕಳುಹಿದೆನೇಕೆ?

**ಹ**:—ತಮ್ಮ ಜಾಣ್ಮೆಯೂ ತಾಳ್ಮೆಯೂ ನಮಗಿಲ್ಲ, ಒಡೆಯರೇ.

ಬ:—ಹರಿಹರ, ನಿನ್ನಂಥ ಕಡುಗಲಿಯನ್ನು ಕಂಡು ಕನ್ನಡ ಸಾಮ್ರಾಜ್ಯದ ಸೊತ್ತನ್ನು ಒಪ್ಪಿಸಲು ಬದುಕಿದೆ. ಕೆಲಕಾಲದ ಹಿಂದೆ ರಹಸ್ಯವಾಗಿ ಕರೆದ ವೀರ ಬಾಂಧವರ ಸಭೆಯಲ್ಲಿ ನಿನ್ನನ್ನು ಮಹಾಮಂಡಳೇಶ್ವರನೆಂದು ಮಾಡಿದುದು ಅದಕ್ಕಾಗಿಯೇ. ಇನ್ನು ಮುಂದಿನ ಸಾಹಸವೆಲ್ಲ ನಿನ್ನದು.

**ಹ**:—ದೊರೆಗಳಾಜ್ಞೆಯಂತೆ ನಡೆಯುವೆ. ತಮ್ಮ ಹರಕೆಯು ಕುಂದದಿರಲಿ

ಬ:—ಹರಕೆಯೊಷ್ಟೇ ಏಕೆ, ಹರಿಹರ, ಈ ಮುತ್ತೈಯಿಂದ ಕೊನೆಯುಸಿರು ಕೊಸರಿ ಹೋಗುವರೆಗೆ ನಿನ್ನ ಕಾರ್ಯಕ್ಕೆ ನೆರವಾಗುವೆನೆಂದು ಬಗೆ ಈಗಾಗಳೆ ಸ್ಥಳದಿಂದ ಸ್ಥಳಕ್ಕೆ ರಾಜಧಾನಿಗಳನ್ನು ಕಿತ್ತುತಲಿದ್ದು ಈಗ ಈ ಹಂಪೆಗೆ ಬಂದಿರುವುದು ತುರುಕರನ್ನು ಅಡ್ಡಗಟ್ಟಲು ಬೇಕಾಗುವ ಕೋಟೆಗಳನ್ನೂ ದಂಡನ್ನೂ ಅಣಿಮಾಡಲಿಕ್ಕಲ್ಲವೇ? ಆದರೆ ನನ್ನ ಹೊರವೇಷವು ಬೇರೆಯೆಂಬುದನ್ನು ಮರೆಯದಿರು. ನಾನು ದಿಲ್ಲಿಯ ಪಾದಷಹನ ಕೈಕೆಳಗಿನ

ದೊಡ್ಡ ಸರದಾರನು, ಅವನ ಹೆಸರಿನಲ್ಲಿ ಈ ಕನ್ನಡ ನಾಡನ್ನು ಆಳುತ್ತಿರುವೆ. ಅಂತೆಯೇ ಇಲ್ಲಿಂದ ಹೋದ ಮೇಲೆ ಪ್ರಕಟವಾಗಿ ಮಗ ಬಲ್ಲಾಳನನ್ನು ವೀರ ವಿರುಪಾಕ್ಷನೆಂಬ ಬಿರುದಿನಿಂದ ಯುವರಾಜಾಭಿಷೇಕ ಮಾಡುವುದಿದೆ. ಮುಂದೆ ಪಟ್ಟಗಟ್ಟಲೂ ಬೇಕ.. ಯಾವ ಪೂರ್ವಜನ್ಮದ ಶಾಪವೋ ನನ್ನನ್ನು ದಾಸ್ಯದ ಕೊಳೆಯಲ್ಲಿ ನೂಕಿರುವುದು. ನೀನು ಕನ್ನಡ ಸಾಮ್ರಾಜ್ಯಮೂರ್ತಿಯನ್ನು ವಿಜಯಮಂದಿರದಲ್ಲಿ ಇಟ್ಟು ಪೂಜಿಸುವಿಯಾದರೆ ನಾನು ಈ ಪರದಾಸ್ಯವನ್ನು ಕೂಡ ಪ್ರೀತಿಸುವೆನು.

**ಹ:**—ಒಡೆಯರೇ, ನೀವು ಹೇಳಿದ ಮಾತುಗಳೆಲ್ಲ ತೀರ ನಿಜವಾಗಿವೆ ನೀವೀಗ ಇದಿರಿದಿರು ಬಂದು ಹೂಡಿದರೆ ವಿಜಯವು ನಮ್ಮದಾಗದು ನೀವು ಅಪ್ಪಣೆ ಯಿತ್ತಂತೆ ನಾನಿನ್ನು ನನ್ನ ನಾಲ್ಕು ತಮ್ಮಂದಿರೊಡನೆ ಹೊಸಸಾಮ್ರಾಜ್ಯವನ್ನು ನಿರ್ಮಿಸಲು ಹೆಣಗಾಡುವೆನು ಆದರೆ, ದೊರೆಗಳೇ, ಕನ್ನಡನಾಡದೇವಿಯ ಸೌಭಾಗ್ಯವನ್ನು ಕಸಿದುಕೊಳ್ಳುತ್ತಿರುವಂತೆ ಈ ಮ್ಲೇಚ್ಛರು ಸನಾತನವಾದ ನಮ್ಮ ಧರ್ಮಮೂಲಕ್ಕೆ ಕೂಡ ಕೊಡಲಿಯನ್ನು ಹಾಕಿರುವರಲ್ಲವೆ ? ಈ ಎಲ್ಲ ಆಪತ್ತಿಯಿಂದ ದೇಶವನ್ನು ಪಾರುಗೊಳಿಸುವುದು ನಮ್ಮ ಕಲಿತನ ವೊಂದರಿಂದ ಸಾಧ್ಯವೇ ?

**ಬು:**—ಅದು ಒಪ್ಪತಕ್ಕ ಮಾತು, ಹರಿಹರ ಅಂತೆಯೇ ಪಂಪಾಪತಿಗೆ ಸಿರವಾಗಿ ಅವನ ಹರಕೆ ಪಡೆದು ಮುಂದರಿಯುವ. ಅವನಿದಿರು ತಾಯಿ ಭುವನೇಶ್ವರಿಯನ್ನೂ ನೆನೆದು ವಿಜಯಸಾಮ್ರಾಜ್ಯದ ನಿರ್ಮಾಣಕ್ಕೆ ನೀನು ಪ್ರತಿಜ್ಞೆಮಾಡಬೇಕು ( **ಗರ್ಭಗುಡಿಯ ದಿಕ್ಕಿಗೆ ತಿರುಗಿ** ) ಈಗ ಹಗುರಾದ ನನ್ನ ಮನಸ್ಸು ತಂದೆ ವಿರುಪಾಕ್ಷನನ್ನೂ ಕಣ್ತುಂಬ ನೋಡಿ ನೂರಾರು ಸಲ ಮುಡಿಯಿಕ್ಕಿ ವಂದಿಸಬೇಕೆನ್ನುತ್ತಿದೆ. ದಣ್ಣಾಯಕ, ಇನ್ನು ಮಂಗಲಾರತಿಯನ್ನೆತ್ತುವುದಕ್ಕೆ ಹೇಳು ಪೂಜಾರಿಗಳಿಗೆ

**(ಗರ್ಭಗುಡಿಯ ಹತ್ತಿರಕ್ಕೆ ಬಲ್ಲಾಳ, ಹರಿಹರರು ಬರುವರು. ಬುಕ್ಕ, ಬಲ್ಲಪ್ಪರು ಅವರಿಗೆ ಇದಿರಾಗಿ ಇನ್ನೊಂದು ಬದಿಗೆ ನಿಲ್ಲುವರು )**

**ಬು:**—ಹರಿಹರ, ನಿನ್ನ ಹರಕೆಯನ್ನು ಕೇಳು ಪ್ರತಿಜ್ಞೆಯನ್ನು ಮಾಡು.

**ಹ:**—( **ಕೈಮುಗಿದು** ) ಶಿವಶಂಕರ, ಪಂಪಾಪತೇ ವಿಜಯಸಾಮ್ರಾಜ್ಯವನ್ನು ಕಟ್ಟಿ ಕನ್ನಡನಾಡಿನ ಸ್ವಾತಂತ್ರ್ಯವನ್ನು ಪಡೆಯುವುದಕ್ಕೂ ಸನಾತನವಾದ ವೈದಿಕ ಧರ್ಮವನ್ನು ರಕ್ಷಿಸುವುದಕ್ಕೂ ನಿನ್ನ ಹಣೆಗಣ್ಣಿನ ಕಿಡಿಯೊಂದನ್ನು ನಮ್ಮಲ್ಲಿ ಇಡು. ನಿನ್ನ ಕಿಂಕರನಾಗಿ ನಾನು ಕೊನೆವರೆಗೆ ಬಾಳುವೆನು ( **ನೆಲಕ್ಕೆ ಒರಗುವನು** )

**ಬು:**—ಧನ್ಯ, ಹರಿಹರ ಪಂಪಾಪತಿಯಿನ್ನು ಒಲಿಯುವನು ಏಳು

( **ಮಂಗಳಾರತಿ ಯಾಗುವುದು. ಅದನ್ನು ಪೂಜಾರಿಯು ಎಲ್ಲರಿಗೆ ತೋರಿಸಲು ತೆರೆಬೀಳುವುದು** )

---

## ಪ್ರವೇಶ ೨

[ವಿರೂಪಾಕ್ಷನ ಗುಡಿಯ ಮುಂಭಾಗ ಅದೇ ದಿನ ಸಂಜಯ ಹೊತ್ತು ಬುಕ್ಕನ ಹಿರಿಮಗನಾದ ತರುಣ ಕಂಪಣರಾಯನು ಮುಮ್ಮಡಿ ಬಲ್ಲಾಳನ ಬಿಡಾರದಿಂದ ಹೊರಬಿದ್ದು ಬರುವನು ]

**ಕಂ:**—( **ತನ್ನಲ್ಲಿ** ) ಈ ಎರಡುಗಳಿಗೆಗಳಲ್ಲಿ ನನ್ನ ಜೀವಕ್ಕೆ ನೆಮ್ಮದಿಯಿಲ್ಲ ಕಟ್ಟಿ ಹಾಕಿದ ಬಿರುಗಾಳಿಯಂತೆ ಬಿಡಾರದಲ್ಲಿ ಕುಳಿಕುಳಿತು ಬೇಸತ್ತೆನು. ವೃದ್ಧರಾದ ವೀರಬಲ್ಲಾಳದೇವರ ಸಂನಿಧಿಸೇವೆಗೆ ಬಲ್ಲಪ್ಪರೊಡನೆ ಇರೆಂದು ನನಗೆ ಕಟ್ಟುಮಾಡಿ, ತಾತ ಬುಕ್ಕ, ದೊಡ್ಡ ತಾತ ಹರಿಹರರು ಅಕ್ಕರೆಯ ನಾಯಿಗಳ ಕೂಡ ಈ ಮಾತಂಗ ಪರ್ವತದಾಚೆ ಹಿರಿಬೇಟೆಗೆ ಹೋದರು. ಸಂಜೆಗೆಂಪಾಯಿತು, ಅವೇಕೆ ಅವರಿನ್ನೂ ಬರಲೊಲ್ಲರು ? ( **ಸುತ್ತು ಮುತ್ತು ನೋಡುತ್ತ ಗುಡಿಯ ಕಡೆ ನಿಟ್ಟಿಸಿ** ) ಅದೇನು ಬೆಳಕಲ್ಲಿ ? ರಾತ್ರಿಯ ಸೇವೆಗೆಂದು ಸಜ್ಜಾದ ದೀವಟಿಗೆಯೆ ? ಅಲ್ಲ, ತಾನಾಗಿ ಮುಂದಲೆಯುತಿಹುದು ಅಹ! ಕಣ್ಣು ಕೋರೆಯುವ ಹೊಳಹು ! ( **ಕಣ್ಣುಮುಚ್ಚಿ ತೆರೆಯುವುದರಲ್ಲಿ ಕೈಕೋಲುಳ್ಳ ಮೈಮುದುಡಿದ ಮುದುಕಿಯು ಮೆಲ್ಲನೆ ಬರುವುದನ್ನು ಕಂಡು** ) ! ಓ, ಇವಳಾವಳೋ ಭಿಕ್ಷುಕಿ

**ಮು:**—( **ನಲಳಾಟದ ದನಿಯಲ್ಲಿ** ) ಮಗೂ, ನನ್ನನ್ನು ಕೇಳುವವರು ಯಾರೂ ಇಲ್ಲವೇ ?

**ಕಂ:**—ಏನು ತಾಯಿ ಏನು ಬೇಕಾಗಿದೆ ?

**ಮು:**—ಎಲ್ಲಾ ಬೇಕಾಗಿದೆ, ಮಗೂ, ಎಲ್ಲಾ. ಕೊಡುವವರು ದಿಕ್ಕಿಲ್ಲ

**ಕಂ:**—ಹೀಗೇಕೆ ಅಳುವಿಯಮ್ಮ? ನಾವಿರುವಾಗ ನಿನಗೇನು ಕಡಿಮೆಯಾಯ್ತು ಹೇಳು.

**ಮು:**—ಅಯ್ಯೋ, ಹಸಿಹೆಮ್ಮೆಯ ಹಸುಳೆ ರಾಮೇಶ್ವರದಗುಡಿಯಿಂದ ಈ ಹಂಪೆಯ ಗೋಪುರದ

ವರೆಗೆ ಅಲೆದಾಡಿದೆ. ಹೆಣ ಬಿದ್ದ ರಣರಂಗವನ್ನು ತುಳಿದಂತೆ ಆಯ್ತು. ಜೀವವಿಲ್ಲ! ಜೀವವಿಲ್ಲ!

**ಕಂ:**—ಹರಿಯದ ಕೆಚ್ಚನ್ನು ಕೆಣಿಸ ಬೇಡ, ತಾಯೇ ನಿನಗೆ ಬೇಕೇನು ಉಸಿರು.

**ಮು:**—ಮಗೂ, ನನಗೆ ನಿನ್ನಂಥ ಕ್ಷತ್ರಿಯ ನಕ್ಷತ್ರಗಳು ಬೇಕು. ಲೆಕ್ಕವಿಲ್ಲದಷ್ಟು ಬೇಕು.

**ಕಂ:**—ಅದೇಕೆ ತಾಯಿ?

**ಮು:**—ಅದೇಕೆ! ಈ ನಾಡು ಹೇಡಿಗಳ ಬೀಡಾಗಿದೆ. ಇವರ ಧರ್ಮ ನಿರ್ನಾಮವಾಗಿದೆ ಇವರ ಗುಡಿಗಳೂ ಮೂರ್ತಿಗಳೂ ಕೊಲೆಗಡಕರು ಪುಟಿಸಿದ ರಕ್ತದ ಸೆಲೆಯಲ್ಲಿ ಜಳಕವಾಡುತ್ತಿವೆ.

**ಕಂ:**—ಅದೆಲ್ಲಿ, ಅದೆಲ್ಲಿ?

**ಮು.**—ನಾಳೆ ಎಲ್ಲೆಲ್ಲಿ, ಈಗ ಮಧುರೆಯಲ್ಲಿ. ಮಗ, ಮನುಷ್ಯರಿಂದ ಕಿಕ್ಕಿರಿದ ಆ ಊರು ಈಗ ಹುಲಿ ಪಟ್ಟಣವಾಗಿದೆ. ಅಭಯವನ್ನೂ ಕೊಡುವ ಶ್ರೀರಂಗನಾಥನ ವಿಗ್ರಹವು ಮೇಲಿಂದ ಬೀಳಲಿರುವ ವಿನಾಶದ ಭಯದಲ್ಲಿದೆ. ಮೊದಲು ಮೃದಂಗದ ಮತ್ತನಾದವು ಕೇಳುವಲ್ಲಿ ಈಗ ನಾಯಿನರಿಗಳ ಗೋಳಿನ ಕೂಗು ಕೇಳುತ್ತಿದೆ ವೇದಘೋಷದೊಡನೆ ಆಗ ಯಜ್ಞದ ಹೊಗೆಯು ದಿಕ್ಕತುಂಬುತಿದ್ದ ಅಗ್ರಹಾರಗಳಲ್ಲಿ ಮ್ಲೇಚ್ಛರು ಸುಡುವ ಮಾಂಸದ ದುರ್ವಾಸವು ಈಗ ಇಡುಗಿದೆ. ಮಗು, ಒಂದೇ ಎರಡೇ, ಪಾಂಡ್ಯರಾಳಿದ ಮಧುರೆ ಈಗ ವಿಧುರೆಯಾಗಿಹಳು

**ಕಂ:**—ತಾಯಿ!, ನಮ್ಮ ನಾಡು ಇಷ್ಟು ನಿರ್ಗತಿಕವಾಯ್ತೆ? ಹೇಳು ಬೇಗ ನಾನೇನು ಮಾಡುವುದು?

**ಮು:**—ಹೇಳುವಂತೆ ಮಾಡುವಿಯ? ಇಗೋ ಈ ಪಾಂಡ್ಯವಂಶದ ದಿವ್ಯ ಖಡ್ಗವನ್ನು ತೆಗೆದುಕೊ. (ಎಡಗಡೆಗೆ ಬಚ್ಚಿಟ್ಟ ಖಡ್ಗವಕೊಟ್ಟು) ಇದರಿಂದ ಮ್ಲೇಚ್ಛರನ್ನು ಹೊರ ಅಟ್ಟಿ ಮಧುರೆಯನ್ನು ವಶಪಡಿಸು. ನೀನೇ ಅದಕ್ಕೆ ಯೋಗ್ಯನು. ಇದನ್ನು ಹಿಡಿದೊಡನೆ ನಿನಗೆ ಸೋಲದ ಬಲ್ಮೆ ಬರುವುದು, ಹಿಂಗದ ಹುಮ್ಮಸು ನಿನ್ನ ವೈರಿಗಳಲ್ಲಿ ಜೀಕಾಡುವುದು ನಿನಗೆ ಗೆಲುವಾಗಲಿ, ಕಂಪಣ! (ಹಿಂದೆ ಹಿಂದೆ ಸರಿಯುತ್ತ ಮಾಯವಾಗುವಳು)

**ಕಂ:**—(ಸ್ವಗತ) ವನು ಅಚ್ಚರಿಯಿದು! ನನ್ನ ಹೆಸರನ್ನು ಸಹ ಬಲ್ಲಳು! ಎಲ್ಲಿಯೋ ಗುಡಿಯೊಳಗೆ ಮಾಯವಾದಳು ಬೇರೆ! ಯಾರಿರಬಹುದು ಆಕೆ! ಈ ಖಡ್ಗವು ಅವಳಿಗೆ ಹೇಗೆ ದೊರೆಯಿತೊ! ಈ ಅಚ್ಚರಿಯ ಸುದ್ದಿಯನ್ನು ಹಿರಿಯರಿಗೆ ತಿಳಿಸಲೆಬೇಕು.

(ವೇಗದಿಂದ ಬಿಡಾರದತ್ತ ನಾಲ್ಕು ಹೆಜ್ಜೆ ಇಡಲು ಬಲ್ಲಾಳ ದೊರೆಯು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ತಡೆದು)

ಒಲ್ಲಾಳದೇವರಸರು ಇತ್ತಲೇ ದಯಮಾಡುತ್ತಿರುವರು.

**ಬು:**—ಏನು ಕಂಪಣ, ನಿನ್ನನ್ನು ಬೇಟೆಗೆ ಹೋಗಗೊಡಲಿಲ್ಲವೆಂದು ನಮ್ಮ ಬೀಡಿನ ಜೀವವಾಡಲಿಕ್ಕೆ ನಡೆದಿರುವಿಯ? ಕೈಯಲ್ಲಿ ಮಿರುಗುವ ಈ ಕತ್ತಿ ಎಲ್ಲಿಯದು?

**ಕಂ:**—ಒಂದು ಆಶ್ಚರ್ಯವಾಯ್ತು, ದೊರೆಗಳೇ. ನನಗೆ ಹೇಳಲಿಕ್ಕೆ ಒಾಯಿ ಸಾಲದು

**ಬು:**—ಏನು, ಏನಯ್ಯಾ ಅದು?

**ಕಂ:**—ಇದನ್ನು ಹಿಡಿದ ನನಗೆ ಈಗ ಮುಗಿಲು ಮುಟ್ಟಿದ ಧೈರ್ಯ ಒಂದಿದ! ವೈರಿಗಳನ್ನು ಸಿಡಿಲಿನಂತೆ ಬಡಿದು ನೆಲಕ್ಕೆ ಚಲ್ಲುವ ಬಲವು ಉಕ್ಕಿದೆ!

**ಬು:**—ಹೀಗೆಯೆ? ಅದು ಹೇಗಾಯಿತಯ್ಯ? ಅದೋ ಅಲ್ಲಿ ನಿನ್ನ ನಲ್ಮೆಯ ಹರಿಹರ-ಬುಕ್ಕರು ಬೇಟೆಯಿಂದ ಬಂದರು. ಅವರಿಗಾದರೂ ಹೇಳುವಿಯ?

(ಹರಿಹರ-ಬುಕ್ಕರು ಪ್ರಸನ್ನ ಮುಖಗಳಿಂದ ಪ್ರವೇಶಿಸುತ್ತಾರೆ)

**ಹ:**—ಒಡೆಯರೇ, ಮಹಾದ್ಭುತವಾದ ಬೇಟೆ! ಒಂದು ಪ್ರಾಣಿಯನ್ನೂ ಕೊಲಲಿಲ್ಲ!

**ಬು:**—ಹೂಂ ಇಲ್ಲಿ ನೋಡಿರಿ ಮೊದಲು ಕಂಪಣನ ಕೈಯ ಮಿಂಚುಮರಿಯನ್ನು.

**ಬು:**—(ಕಂಪಣನ ಹತ್ತಿರ ಧಾವಿಸಿ) ನಿಜವಾಗಿ. ಇದೆಲ್ಲಿಯ ಖಡ್ಗ, ಮಗು ಕಂಪಣ?

**ಹ:**—ಭಲೆ, ಇಂದು ಎಲ್ಲ ಸೋಜಿಗವೇ ನಡೆದಿದೆ ಏನು ನಿನ್ನ ಸುದ್ದಿ, ಕಂಪಣಕುಮಾರ?

**ಕಂ:**—ಹಿರಿಯರೇ, ಬಿಡಾರದಿಂದ ಹೊರಹೊಂಟು ನಾನಿಲ್ಲಿ ಇದೆ ಗಾಳಿಗೆ ನಿಂತಿರಲು, ಇತ್ತ ಗುಡಿಯೊಳಗಿನಿಂದ ಮುದುಕಿಯೊಬ್ಬಳು ಬಂದು ಮ್ಲೇಚ್ಛರು ಹಾಳುಗೆಡಹಿದ ಮಧುರೆಯನ್ನು ಬಣ್ಣಿಸಿ, ಅದನ್ನು ಳಿಸಲು ನಾನು ತಕ್ಕವನೆಂದು ಈ ದಿವ್ಯ ಖಡ್ಗವನ್ನು ತೆತ್ತು ಮಟಮಾಯವಾದಳು. ಅವಳು ಹೇಳಿದಂತೆ ಇದನ್ನು ಹಿಡಿದಕ್ಷಣದಿಂದ ನನ್ನ ಮೈಯಲ್ಲಿ ಬೀರಕಾವು ಉಕ್ಕೇರುತ್ತಿದೆ.

**ಬು.**—ಎಂಥ ಚಮತ್ಕೃತಿಯಿದು! ಅವಳು ತಾಯಿ ಭುವನೇಶ್ವರಿಯೇ ಇರಬೇಕು.

**ಹ:**—ಸತ್ಯವಾಗಿ. ಪ್ರಭುಗಳೇ, ಪಂಪಾಪತಿಯ ಕರುಣೆ ಕುಡಿವರಿಯತೊಡಗಿತು.

ವಿರೂಪಾಕ್ಷದೇವಾಲಯದ ನೋಟ



ವಿರೂಪಾಕ್ಷದೇವಾಲಯದ ಒಳನೋಟ.



ಬು:- ಹೌದು ಹರಿಹರ. ನಿಮ್ಮ ಬೇಟೆಯ ಸಂಗತಿ ಯೇನು?

ಹ:—ಅದೂ ಒಂದು ದೈವಲೀಲೆಯೇ ಹಿರಿಬೇಟೆ ಯಿಂದ ಪ್ರಭುಗಳ ನೋಟವನ್ನು ತಣಿಸಲೆಂದು ನಾವು ಉಬ್ಬುಬ್ಬಿ ಈ ದಕ್ಷಿಣದ ಕಾಡಿಗೆ ಹೋದೆವು. ಹುಲಿಸಿಂಗಗಳನ್ನು ಕಚ್ಚಿ ಕೆಡಹುವ ಹೆಸರಾದ ನಾಯಿಗಳು ನಮ್ಮೊಡನೆ, ಮೃಗಗಳ ಹಕ್ಕಿ-ಸರು ಗಳನ್ನು ಬಲ್ಲ ಕಪ್ಪು ಬೇಡರು ನಮ್ಮ ಜೊತೆಗೆ; ಮೇಲೆ ನಮ್ಮಿಬ್ಬರ ಗುರಿಗಂಡ ಬಿಲ್ಲುಡೆಂಕಣಿಗಳು. ಆದರೆ, ದೊರೆಗಳೇ, ಅದೇ ಮೊಗ್ಗೆ ಬಿಡುತ್ತಿರುವ ಕಾಡು ಮಲ್ಲಿಗೆ ಕಂಟಿಗಳ ದುಂಡುಬೇಲಿಯ ನಡುಬಯಲಿಗೆ ನಾವು ನುಗ್ಗುವುದರಲ್ಲಿ ಒಂದು ಅಪುರವಾದ ನೋಟ ವನ್ನು ಕಂಡೆವು.

ಬು:—ಅದೇನು ಹರಿಹರ?

ಹ.—ನಮ್ಮ ಬೇಟೆಯ ನಾಯಿಗಳೂ ಕಾಡಿನ ಮೊಲಗಳೂ ಕೂಡಿ ಆಡುತಲಿದ್ದವು! ಬೇಟೆ ಕಂಡೊಡನೆ ಮುಗಿಬಿದ್ದು ಉಗಿಬಗಿ ಮಾಡುವ ನಾಯಿಗಳು ಹೂಗಿಡವ ನೋಡುತ್ತ ಮಲಗಿವೆ. ಅತ್ತಿತ್ತ ಅಲೆಯುವ ಅರಳೆಮೈಯ ಮೊಲಗಳು ಆಟಕೆಂದು ಅವನ್ನು ಕಚ್ಚಿದರೂ ನಾಯಿ ನಾಲಿಗೆ ಚಾಚಿ ಜೊಲ್ಲು ಸುರಿಯುತ್ತ ಹಾಗೆ ಮಲಗಿವೆ.

ಕಂ:—ಮುಂದೇನು ಮಾಡಿದಿರಿ?

ಬು:—ಬೇಟೆಯಾಡುವ ಮುದವಳಿದು ಬೆರಗಿನಲ್ಲಿ ಮುಳುಗಿ ಹಾಗೆಯೆ ತಿರುಗಿದೆವು, ಮಗೂ

ಹ—ದೊರಗಳೇ, ತರುವಾಯ ಕಾಲು ತೊಳೆಯಲೆಂದು ತುಂಗೆಗೆ ಬಂದೆವು ಅಲ್ಲಿ ನೆಲಕೊರಗಿದ ಮೈಯೊಂದು 'ಭುವನೇಶ್ವರಿ!' ಎಂದು ಕೂಗಿ ದಂತಾಗಲು ಅತ್ತ ಸಾಗಿದವು ತೇಜಸ್ವಿಗಳಾದ ಯತಿಗಳೊಬ್ಬರು ನಮ್ಮನ್ನು ಮಮತೆಯಿಂದ ಒರಮಾಡಿ ನಮ್ಮ ಪ್ರಶ್ನೆಗಳನ್ನು ಕೇಳಿ, ನಾವು ನಾಯಿ ಮೊಲಗಳ ಅಲೌಕಿಕ ಸಂಗಮವನ್ನು ಕಂಡ ನೆಲವು ನಮ್ಮಿಂದ ಹುಟ್ಟಲಿರುವ ಹೊಸ ಸಾಮ್ರಾಜ್ಯದ ನೆಲೆವೀಡು ಎಂದು ಒಡನುಡಿದು ಹುರುಡಿನ ಹಲವು ಮಾತುಗಳನ್ನು ಹೇಳಿದರು.

ಬು:—ನಾಳೆ ಬೆಳಿಗ್ಗೆ ತಾವು ಆ ನೆಲಕ್ಕೆ ಬರುವೆವೆಂದೂ ನೀವೂ ಬರಬೇಕೆಂದೂ ವಿಧಿಸಿದರು.

ಬು:—ಹರಿಹರ, ನಮ್ಮ ದೊರೆಯು ವಿರುಪಾಕ್ಷದೇವನ ಕಿವಿಗೆ ಬಿದ್ದಿತು. ಇನ್ನು ನಾವು ಮಾಡುವುದೆಲ್ಲ ಅವನ ಕೈಬೊಂಬೆಗಳಾಗಿ ಎಂದು ತಿಳಿ. ನಡೆಯಿರೀಗ ಬಿಡಾರದೊಳಗೆ.

---

### ಪ್ರವೇಶ ೩.

(ಬೇಟೆಯಲ್ಲಿ ನಾಯಿಮೊಲಗಳನ್ನು ಸಖ್ಯದಲ್ಲಿ ಕಂಡ ಆ ಕಾಡನಡುಬಯಲು. ಮರುದಿನ ಬೆಳಿಗ್ಗೆ ಸೂರ್ಯೋದಯ ವಾಗುವ ಹೊತ್ತಿಗೆ ಮುಮ್ಮಡಿ ಬಲ್ಲಾಳ, ಹರಿಹರ, ಬುಕ್ಕ, ಕಂಪಣ, ಬಲ್ಲಪ್ಪ ಕೂಡಿಕೊಂಡು ಬರುತ್ತಾರೆ)

ಹ:—ದೊರೆಗಳೇ, ಇದೇ ಆ ಪವಾಡವು ನಡೆದ ಸ್ಥಳವು. ಅದನ್ನು ನೋಡಿದಾಗ ಇಂಥಿಂಥ ಆಗಬಾರದ ಸಂಗತಿಗಳು ಆಗುತ್ತಿದ್ದರೆ ನಮ್ಮಂಥ ಕಾಡು ಕುರುಬರು ರಾಜ್ಯವನ್ನೇಕೆ ಕಟ್ಟಬಾರದು ಎಂದೊಮ್ಮೆ ಎನಿಸಿ ನನ್ನ ಮೈಯಲ್ಲಿ ಶಕ್ತಿಸಂಚಾರವಾಯ್ತು.

ಬ.—ಹಾಗೆನ್ನಲಾಗದು ನೀವು ಹೆಸರಿಗೆ ಕಾಡು ಕುರುಬರು, ಹರಿಹರ ಕ್ಷತ್ರಿಯರಕ್ತವು ನಿಮ್ಮಲ್ಲಿ ಆಡುತ್ತಿದೆ ಆಗೊ ಅಲ್ಲಿ ಯಾರೋ ಬರುತ್ತಿರುವರು, ಬೆಟ್ಟದ ಮೇಲೆ ಹುಟ್ಟಿದ ಸೂರ್ಯನು ನಡೆದು ಬರುವಂತೆ.

ಹ.—ಅವರೇ ನಾವು ಕಂಡ ಯತಿವರ್ಯರು!

ಬು—ಅವರ ಹೆಸರು ಮಾಧವಯತಿಗಳೆಂದೂ ಬಹು ಕಾಲದಿಂದ ಹಂಪೆಯ ಗವಿಯಲ್ಲಿ ತಪಸ್ಸು ಮಾಡುವರೆಂದೂ ಪೂಜಾರಿಗಳಿಂದ ಕೇಳಿದೆ

ಬ:—ಹೀಗೋ? ನಮ್ಮ ನಾಡಿನ ಧರ್ಮವು ಅವರಲ್ಲಿ ರೂಪಗೊಂಡಂತೆ ತೋರುವುದು ಅವರ ಬೆಂಬಲದಿಂದ ನಿನ್ನ ರಾಜ್ಯವು ನಿಲ್ಲಬೇಕು, ಹರಿಹರ.

ಹ—ಪ್ರಭುಗಳಾಜ್ಞೆ

(ಮಾಧವಯತಿಗಳು ಬರುತ್ತಾರೆ ಎಲ್ಲರೂ ಕೆಳಬಾಗಿ ವಂದಿಸುತ್ತಾರೆ)

ಮಾ:—ವಿಜಯವಾಗಲಿ ನಿಮಗೆ ಹರಿಹರ ಬುಕ್ಕರೇ, ನಿಮ್ಮೊಡನೆ ಇದ್ದ ಉಳಿದವರು ಯಾರು ಯಾರು?

ಹ:—ಇವರು ನಮ್ಮ ನಾಡಿನ ಶ್ರೀಮತ್‌ಪ್ರತಾಪ ಚಕ್ರವರ್ತಿಗಳಾದ ಮುಮ್ಮಡಿ ಬಲ್ಲಾಳ ದೇವರಸರು ನಾವವರ ಪಾದಪದ್ಮೋಪಜೀವಿಗಳು

ಮಾ:—ಹೀಗೇ? ಕನ್ನಡರಾಜ್ಯದ ಅಭಿಮಾನ ಮೂರ್ತಿಗಳಾದ ನಿಮ್ಮನ್ನು ಕಂಡು ಹಿಗ್ಗುತ್ತೇನೆ. ನಿಮ್ಮ ಮನೋಗತವೂ ಸ್ಥಿತಿಯೂ ನಮಗೆ ತಿಳಿದಿವೆ. ಶಿಥಿಲವಾಗುತ್ತಿರುವ ಆರ್ಯಧರ್ಮವನ್ನೂ ಪ್ರಜಾಸುಖವನ್ನೂ ತಿರುಗಿ ಗಳಿಸುವಂತೆ ಈ ಹೊಸ

ಅರಸುಗಳಿಗೆ ಸ್ಫೂರ್ತಿ ಕೊಡಿರಿ, ಬಲ್ಲಾಳದೇವರೇ.

**ಬು**:—ನಿಮ್ಮ ಶಾಸನದಂತೆ ನನ್ನ ಪ್ರಾಣವಿರುವ ವರೆಗೆ ನಾನು ಯತ್ನಿಸುವೆನು.

**ಬು**:—ಯತಿವರರೇ, ಇವರು ಬಲ್ಲಾಳದೇವರ ಮಂತ್ರಿಗಳಾದ ಬಲ್ಲಪ್ಪದಣ್ಣಾಯಕರು. ಇವನು ನನ್ನ ಹಿರಿಮಗನಾದ ಕಂಪಣನು.

**ಮಾ**:—ವೃದ್ಧಕಾಯದ ತರುಣರಾಗಿದ್ದಾರೆ. ಯುವಕ ವೀರರೆ, ಬಲ್ಲಾಳ ದೇವರಂಥ ವೃದ್ಧರು ತೋರುವ ಉತ್ಸಾಹವನ್ನು ನೋಡಿ. ನಿಮ್ಮ ಶೌರ್ಯ ಸಾಹಸವು ಎಷ್ಟು ಹೆಚ್ಚಾಗಿರಬೇಕು? ತಿಳಿದು ನಾಡಿಗಾಗಿ ದೇಹಸವೆಯಿರಿ.

**ಕಂ. ಬು**:—ಗುರುಗಳಾಜ್ಞೆ.

**ಮಾ**:—ಹರಿಹರ, ಈ ಹೊತ್ತು ಈ ಸೂರ್ಯೋದಯದ ಸಮಯಕ್ಕೆ ಅಮೃತಸಿದ್ಧಿಯೋಗವಿರುವುದೆಂದು ನಿಮಗಿಲ್ಲಿ ಕೂಡಲು ಕರೆದೆ. ಮೃತವೆಂದು ತೋರಿದ ನಾಡು ಇನ್ನು ಮುಂದೆ ನಿಮ್ಮ ಸಾಹಸದಿಂದ ಸಿದ್ಧಿಹೊಂದಿ ಅಮೃತವಾಗಿ ಬಾಳಬೇಕಾಗಿದೆ. ಹಾಳುಗಳೆ ಸುರಿಯುವ ದೇಶವನ್ನು ಈವರೆಗೆ ನೋಡಿ ನೋಡಿ ತಾಳಲಾರದೆ ನನ್ನ ಮಠಾಲೆಗವಿಯಲ್ಲಿ ಗೋಳಿಟ್ಟೆ. ನನ್ನ ತಪವೆಲ್ಲವೂ ನನ್ನನ್ನು ಕಾರ್ಯಹೀನನನ್ನಾಗಿ ಮಾಡುತ್ತಿರುವ ಹತ್ತು ಜನ್ಮದ ಶಾಪವೆಂದು ಹಳಿದುಕೊಂಡೆ. ಕೊನೆಗೆ ಲೋಕಮಾತೆಯ ಅನುಗ್ರಹದಿಂದ ನಿಮ್ಮನ್ನು ಕಂಡು ನನಗೆಷ್ಟು ಹರುಷವಾಗಿದೆ ಹೇಳಬಲ್ಲೆನೇ? ನಿಮ್ಮ ಕ್ಷಾತ್ರಬಲವಿನ್ನು ಸಿಡಿದೇಳಲಿ, ತಮ್ಮ ಧರ್ಮವನ್ನು ತಾವು ಸರಿಯಾಗಿ ಅರಿಯದೆ ವಿಧರ್ಮಿಯರು ನಡೆಸಿರುವ ತಾಮಸ ಕೃತ್ಯಗಳಿಗೆ ತಡೆಹಾಕಲಿ, ಸತ್ಯ ನಿತ್ಯವಾದ ಸನಾತನ ಧರ್ಮವನ್ನು ಕಾಯಲಿ. ನೀವು ಹುಟ್ಟಿದುದು ಸಂಗಮವಂಶದಲ್ಲಿ ಬೆಳೆದುದು ಪರಮೋದಾರರಾದ ಹೊಯ್ಸಳರಸರ ತೊಡೆಯಲ್ಲಿ, ಅಂತೆಯೇ ನಿಮ್ಮ ಹೊಸರಾಜ್ಯನಿರ್ಮಾಣವು ಸರ್ವಸದ್ಗುಣಗಳ ಸಂಗಮವಾಗಲಿ. ಎಲ್ಲ ಧರ್ಮಗಳ ಎಲ್ಲ ಪ್ರಜೆಗಳು ಕೂಡಿ ಕೆಲೆಯುವ ನಲ್ಮೆಯ ನೆಲವಾಗಲಿ ನಿಮ್ಮ ನಾಡು. ಇಲ್ಲಿ ನೀವು ಈಗ ನಿಂತಿರುವ ಸ್ಥಳದಲ್ಲಿ ನಿಮ್ಮ ಒಡ್ಡೋಲಗ, ಪಟ್ಟಮಹೆಗಳಾಗಬೇಕು. ಸುತ್ತುಮುತ್ತು ಅರಮನೆಗಳೂ ಅಂತಃಪುರಗಳೂ ಏಳಬೇಕು. ಮುಂದೆ ನೀವು ಪಡೆದ ಪರಚಕ್ರದ ಮೇಲಿನ ವಿಜಯಮಾಲಿಕೆಗಳ ಹಿರಿಯ ಕುರುಹಾಗಿ, ಭೂಮಿಯನ್ನೆಲ್ಲ ಬೆರಗುಗೊಳಿಸುವ ವಿಜಯನಗರವೆಂಬ ನಿಮ್ಮ ರಾಜಧಾನಿಯು ಇಲ್ಲಿ ಕುಬೇರನ ಅಲಕಾಪುರಿಯಂತೆ ಹರವಾದ ಧರ್ಮದೆದೆಯಂತೆ ಮೆರೆಯಬೇಕು. ತಂದೆ ಪಂಪಾಪತಿಯೂ ತಾಯಿ ಭುವನೇಶ್ವರಿಯೂ ನಿಮ್ಮ ವಿಜಯಸಾಮ್ರಾಜ್ಯದ ಮೇಲೆ ಅಭಯಹಸ್ತವನ್ನಿಡಲಿ.

**ಹ**:—ಆ ವಿಜಯಸಾಮ್ರಾಜ್ಯಸಂಸ್ಥಾಪಕಗುರುಗಳಾದ ತಮಗೆ ಅನಂತ ವಂದನೆಗಳು

( ಬಾಗುವನು. )

( ಉಳಿದೆಲ್ಲರೂ ಮಾಧವಯತಿಗೆ ಬಾಗುವರು, ತೆರಬೀಳುವದು. )

# ವಿಜಯನಗರದ ಸಾಮ್ರಾಜ್ಯದಲ್ಲಿ ಸಾಹಿತ್ಯದ ಬೆಳವಣಿಗೆ.

( ಲೇಖಕರು—ಶ್ರೀ ಸೋಸಲೆ ಕೃಷ್ಣಶಾಸ್ತ್ರಿಗಳು ಶಾಸನದ ಇಲಾಖೆಯ ಪಂಡಿತರು. ಮೈಸೂರು.)

ಭರತಭೂಮಿಯ ಭಾಗ್ಯೋದಯದಿಂದ ೧೪ ಮತ್ತು ೧೫ ನೆಯ ಶತಮಾನಗಳಲ್ಲಿ ದಕ್ಷಿಣದೇಶದಲ್ಲಿ ರಾಜ್ಯವಾಳಿ ಸತ್ಯಾಶ್ರಯರಾಗಿ ಸನಾತನ ಧರ್ಮವನ್ನು ಕಾಪಾಡಿದ ವಿಜಯನಗರದ ಅರಸರನ್ನು ನೆನೆಯುವ ದಿನವೆ ಸುದಿನವು. ಈ ರಾಜ್ಯದ ಅರಸರಲ್ಲಿ ಪ್ರಜಾವಾತ್ಸಲ್ಯ, ಪರಾಕ್ರಮ, ದೈವಭಕ್ತಿ, ವಿಸ್ವತ್ಪಕ್ಷಪಾತ ಮೊದಲಾದ ಸುಗುಣಗಳು ನೆಲಸಿದ್ದವು ಆದುದರಿಂದ ನಾವು ಈಹೊತ್ತೂ ಆ ಮಹಾನುಭಾವರ ಗುಣಗಾನವನ್ನು ಮಾಡುತ್ತೇವೆ. ತಂಕಣ ನಾಡಿನ ದೌರ್ಭಾಗ್ಯದಿಂದ ಕ್ರಿ. ಶ. ೧೫೬೫ ರಲ್ಲಿ ತಾಳೀಕೋಟೆಯ ಕಾಳಗವು ನಡೆದು ವಿಜಯನಗರದ ಬೆಡಗು ಅಡಗಿತು. ಆಗ ಅರಸಾಗಿದ್ದ ಸದಾಶಿವರಾಯನು ಪೆನುಗೊಂಡೆಗೆ ಹೋಗಿ ನೆಲಸಿದನು ಸದಾಶಿವರಾಯನ ಅನಂತರದಲ್ಲಿ ತಿರುಮಲರಾಯ, ರಂಗರಾಜ, ಮೊದಲನೆಯ ವೆಂಕಟಪತಿರಾಯ ಇವರುಗಳು ರಾಜ್ಯವಾಳಿದರು. ತಿರುಮಲರಾಯನು ತನ್ನ ಕಾಲದಲ್ಲಿ ಚಂದ್ರಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಮೂರನೆಯ ವೆಂಕಟಪತಿರಾಯನ ಕಾಲದಲ್ಲಿ ಎಂದರೆ ಕ್ರಿ. ಶ ೧೬೩೯ ರಲ್ಲಿ ಇಂಗ್ಲೀಷರು ಚಂದ್ರಗಿರಿಯನ್ನು ಆ ವೆಂಕಟಪತಿಯಿಂದ ಕೊಂಡುಕೊಂಡರು. ಬಳಿಕ ವಿಜಯನಗರದ ಅರಸುಗಳ ಮನೆತನದವರು ಆನೆಗೊಂದಿ, ಗದ್ವಾಲ್, ವನಪರ್ತಿ, ಆತ್ಮಕೂರು ಮೊದಲಾದ ಪಾಳೆಯ ಪಟ್ಟುಗಳಿಗೆ ಹೋಗಿ ನೆಲಸಿದರು ಈಗಲೂ ಆ ಜಹಗೀರಿಗಳಲ್ಲಿ ವಿಜಯನಗರದ ವೆಂಕಟಪತಿರಾಯನ ವಂಶಸ್ಥರಿದ್ದಾರೆ ದಕ್ಷಿಣ ಭಾರತದಲ್ಲಿ ನೆಗಳ್ತೆ ಪಡೆದಿದ್ದ ದೋರಸಮುದ್ರದ ಹೊಯ್ಸಳರ ರಾಜ್ಯಭಾರವು ಅಲ್ಲಾಉದ್ದೀನನೆಂಬ ಪಠಾಣ ಸುಲ್ತಾನನ ಸೇನಾಪತಿ ಮಲ್ಲಿಕಾಫೂರನೆಂಬುವನಿಂದ ಕೊನೆಗೊಳ್ಳುತ್ತಿರ್ದ ವೇಳೆಯಲ್ಲಿ ಹೊಯ್ಸಳರ ಆಶ್ರಿತರಾಗಿದ್ದ ಹುಕ್ಕರಾಯ, ಬುಕ್ಕರಾಯರೆಂಬ ಸಹೋದರರು ತುರುಕರ ಹಾವಳಿಯನ್ನು ತಡೆಯಲು, ಸನಾತನ ಧರ್ಮವನ್ನು ಉದ್ಧಾರ ಮಾಡಲು ತವಕಗೊಂಡು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ದಕ್ಷಿಣದಲ್ಲಿ ತಪೋಧನರಾದ, ಭಗವಂತನ ಅಪರಾವತಾರರೂಪಿಗಳಾದ ವಿದ್ಯಾರಣ್ಯವರೇಣ್ಯರ ಆಶೀರ್ವಾದ, ಅನುಗ್ರಹಗಳಿಂದ ಶಾಲಿವಾಹ ಶತಾಬ್ದ ೧೨೫೮ ರಲ್ಲಿ ಎಂದರೆ ಕ್ರಿ ಶ ೧೩೩೬ ರಲ್ಲಿ ತುಂಗಭದ್ರಾ ತೀರದಲ್ಲಿ ವಿಜಯನಗರವೆಂಬ ರಾಜಧಾನಿಯನ್ನು ಸ್ಥಾಪಿಸಿದರು ವಿಜಯನಗರಿಗೆ **ವಿದ್ಯಾನಗರ**ವೆಂಬ ಅನ್ವರ್ಥವಾದ ಹೆಸರನ್ನು ಶಾಸನಗಳಲ್ಲೂ, ಗ್ರಂಥಗಳಲ್ಲೂ ಹೇಳಿರುವುದು ಸಾರ್ಥಕವಾಗಿದೆ.

ವಿದ್ಯಾನಗರ ಅಥವಾ ವಿಜಯನಗರ ಸಂಸ್ಥಾನವು ೨ ಡೂ ವರೆ ಶತಮಾನಗಳ ಕಾಲ ನೆಲೆಯಾಗಿದ್ದಿತು. ಆ ಚಕ್ರಾಧಿಪತ್ಯದ ಹೆಸರು ಹಿಂದೂದೇಶದ ಚರಿತ್ರೆಯಲ್ಲಿ ಇಂದೂ ಸ್ವರ್ಣಾಕ್ಷರಗಳಿಂದ ಹೊಳೆಯುತಲಿದೆ. ಆ ರಾಜ್ಯದ ಸಿಂಹಾಸನಪತಿಗಳಾಗಿದ್ದ ಹರಿಹರ, ಬುಕ್ಕ, ಸಂಗಮ ಮೊದಲಾದವರೂ, ಸರ್ವಾಧಿಕಾರಿಗಳಾಗಿದ್ದ ಕಂಪಣ, ಮಾರಪ, ಮುದ್ದಪ ಮೊದಲಾದವರೂ ದಂಡಾಧೀಶರಾಗಿದ್ದ ಮಾಧವ, ಗೋಪನ್ನ ಮೊದಲಾದವರೂ ಸಹ ಸ್ವತಃ ವಿದ್ಯಾವಂತರಾಗಿದ್ದು ವಿದ್ಯಾ ಪ್ರಚಾರಕ್ಕಾಗಿ ತಮ್ಮ ತಮ್ಮ ಘನತೆಗೆ ತಕ್ಕಂತೆ ಸಾಹಿತ್ಯ ರಾಜ್ಯಲಕ್ಷ್ಮಿಯನ್ನು ರಾಜಲಕ್ಷ್ಮಿಗೆ ಗೆಳತಿಯನ್ನಾಗಿ ಮಾಡಿರುವರು.

'ವೇದೋಧರ್ಮಮೂಲಂ' ಎಂಬ ವಚನದಂತೆ ಸನಾತನ ಧರ್ಮವೆಂಬ ಕಲ್ಪತರುವಿಗೆ ವೇದವೇ ತಾಯಿಬೇರು. ವೇದ ಮುಕ್ಕಗಳಿಗೆ ಶಾಸ್ತ್ರಸಂಸ್ಕೃತವಾದ, ಸಂಪ್ರದಾಯಸಿದ್ಧವಾದ ಭಾಷ್ಯವನ್ನು ಬರೆಸಿದರೆ ಧರ್ಮಾಭಿವೃದ್ಧಿಗೆ ಮಾರ್ಗವಾಗುವುದೆಂದೆಣಿಸಿ ಧರ್ಮಪ್ರಭುಗಳಾಗಿದ್ದ ವಿಜಯನಗರದ ಅರಸರು ಸರ್ವತಂತ್ರ ಸ್ವತಂತ್ರರಾದ ಮಾಧವಾಚಾರ್ಯರಿಂದ ಸಾಯಣ ಭಾಷ್ಯವನ್ನು ಬರೆಸಿದರು. . ಈ ಭಾಷ್ಯವು ಪುರಾತನವಾದ ಯಾಸ್ಕನಿರುಕ್ತ ಗ್ರಂಥಕ್ಕೆ ಅನುಸಾರವಾಗಿರುವುದು. ಕ್ರಿ. ಶ ೧೩೭೭ ರಿಂದ ಕ್ರಿ. ಶ. ೧೪೦೪ ರ ವರೆಗೆ ವಿಜಯನಗರದ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿದ್ದ ಇಮ್ಮಡಿ ಹರಿಹರರಾಯನ ಕಾಲದಲ್ಲಿ ಶತಪಥ ಬ್ರಾಹ್ಮಣ, ತೈತ್ತಿರೀಯ ಬ್ರಾಹ್ಮಣ, ಯಜುರ್ವೇದ ಬ್ರಾಹ್ಮಣಗಳು ವ್ಯಾಖ್ಯಾನಿಸಲ್ಪಟ್ಟಿರುವುವು. [R. N.

೧೩ ಶ್ರೀ ವೀರಣಾಚಾರ್ಯವ್ಯಲಿಖತ್ತಾಮ್ರ
ಶಾಸನಂ ॥

ಈ ಸಭಾಪತಿ ಪಂಡಿತನ ಮೃದುಸವ ಸಂದರ್ಭದಿಂದ ಕೂಡಿದ ಕವಿತ್ವವು ಎಷ್ಟು ಗಂಭೀರವಾಗಿದೆಯೆಂಬುದನ್ನು ಈ ಕೆಳಗಣ ಪದ್ಯಗಳಲ್ಲಿ ನೋಡಬಹುದು.

೧೪ ಕಾವೇರೀಮಾಶು ಬಧ್ವಾ ಬಹು ಜಲರಯಾಂ ಯೋವಿಲಂ ಘ್ಯೈವ ಶತ್ರುಂಜೀವಗ್ರಾಹಂಗ್ರಹೀ

೧೫ ತ್ವಾ ಸಮಿತಿ ಭುಜಬಲಾತ್ತಂಚ ರಾಜ್ಯಂತದೀಯಂ । ಕೃತ್ವಾ ಶ್ರೀರಂಗಪೂರ್ವಂ ತದಪಿನಿಜವಶೇ

೧೬ ಪಟ್ಟಣಂ ಯೋಬಭಾಸೇ ಕೀರ್ತಿಸ್ತಂಭಾನಿಖಾಯ ತ್ರಿಭುವನ ಭವನ ಸ್ತೂಯಮಾನಾಪದಾನಃ । ಜೇರಂ

೧೭ ಚೋಳಂಚ ಪಾಂಡ್ಯಂತಮಪಿಚ ಮಧುರಾವಲ್ಲಭಂ ಮಾನಭೂಷಂ ವೀರೋದಗ್ರಂತುರುಷ್ಕಂ ಗಜಪತಿ

೧೮ ನೃಪತಿಂಚಾಪಿ ಜಿತ್ವಾತದನ್ಯಾನ್ । ಆಗಂಗಾತೀರಲಂಕಾಪ್ರಥಮಚರಮ ಭೂಭೃತ್ತಟಾಂತಂನಿ

೧೯ ತಾಂತಂ ಖ್ಯಾತಃ ಕ್ಷೋಣೀಪತೀನಾಂ ಸ್ರಜಮಿವ ಶಿರಸಾಂ ಶಾಸನಂ ಯೋವ್ಯತಾಸೀತ್ । ತಿಪ್ಪಾಜೀನಾಗ

೨೦ ಲಾದೇವ್ಯೋಃ ಕೌಸಲ್ಯಾಶ್ರೀಸುಮಿತ್ರಯೋಃ । ದೇವ್ಯೋರಿವ ನೃಸಿಂಹೇಂದ್ರಾತ್ತಸ್ಮಾತ್ಪಂಕ್ತಿರಥಾದಿವ । ವೀತಾ

೨೧ ವಿನಯಿನೌ ರಾಮಲಕ್ಷ್ಮಣಾ ವಿವನಂದನೌ । ಜಾತೌ ವೀರ ನೃಸಿಂಹೇಂದ್ರ ಕೃಷ್ಣರಾಯ ಮಹೀಪತೀ । ರಂ

೨೨ ಗ ಕ್ಷಿತೀಂದ್ರಾಚ್ಯುತದೇವರಾಯೌರಕ್ಷಾ ಧುರೀಣಾವಿವರಾಮಕೃಷ್ಣೌ । ಓಬಾಂಬಿಕಾಯಾಂನರ

೨೩ ಸ ಕ್ಷಿತೀಂದ್ರಾದುಭಾವ ಭೂತಾಪುರಗೇಂದ್ರ
ಸ ಕೌ

ಇತ್ಯಾದಿ ಮನೋಹರಪದ್ಯಗಳನ್ನು ಒಟ್ಟುಗೂಡಿಸಿದಲ್ಲಿ ಮಹಾಭಾರತದಷ್ಟು ದೊಡ್ಡದಾಗುವ ಒಂದು ಗ್ರಂಥವನ್ನು ಅಣಿಮಾಡಿಸಬಹುದು. ದೊಡ್ಡ ದೊಡ್ಡ ತಾಮ್ರ ಶಿಲಾಶಾಸನಗಳಿಗೆ ಕವಿತ್ವವನ್ನು ಮಾಡಿಕೊಟ್ಟ ಕವಿಗಳಲ್ಲಿ ಸಭಾಪತಿ ಪಂಡಿತನಲ್ಲದೆ ಲಕ್ಷ್ಮೀಧರ, ತಿರುಮಲಾರ್ಯ ಮೊದಲಾದವರು ಪ್ರಸಿದ್ಧರಾಗಿರುವರು.

ಶ್ರಿ ಶ ೧೩೫೪ ರಲ್ಲಿ ನೆಲ್ಲೂರು ಪ್ರಾಂತದಲ್ಲಿ ಸರ್ವಾಧಿಕಾರಿಯಾಗಿದ್ದ ಸಂಗಮ ಯುವರಾಜನಿಗೆ ವಿದ್ಯಾಗುರುವಾಗಿದ್ದ ಮಾಧವನ ಸಹೋದರ ಭೋಗನಾಥನೆಂಬವನು ತನ್ನ ಸಹೋದರನಂತೆಯೆ ಶಾಸ್ತ್ರಜ್ಞನಾಗಿ ತನ್ನ ಅಪರ ವಯಸ್ಸಿನಲ್ಲಿ ಶೃಂಗಗಿರಿ ಮಠದ ಸನ್ಯಾಸವನ್ನು ಸ್ವೀಕರಿಸಿದನೆಂದು ತಿಳಿದು ಬಂದಿದೆ. ಇವನು ಗೃಹಸ್ಥನಾಗಿದ್ದಾಗ ರಾಮೋಲ್ಲಾಸ, ತ್ರಿಪುರವಿಜಯ ಉದಾಹರಣಮಾಲೆ, ಮಹಾಗಣಪತಿಸ್ತವ, ಶೃಂಗಾರಮಂಜರಿ, ಗೌರೀನಾಥಾಷ್ಟಕ ಗ್ರಂಥಗಳನ್ನು ಬರೆದಿರುವುದಾಗಿ ಅಲಂಕಾರ ಸುಧಾನಿಧಿಯಲ್ಲಿ ಪ್ರಸ್ತಾಪಿತವಾಗಿರುವುದು. ಈ ವಿಷಯವು ಮ. ರಾ. ಡಿ. ಪಿ. ಗುಂಡಪ್ಪನವರ ವಿದ್ಯಾರಣ್ಯರ ಸಮಕಾಲೀನರು ಎಂಬ ಕೃತಿಯ ೨ನೆಯ ಭಾಗದ ೩೨೩ನೆಯ ಪುಟದಲ್ಲಿ ಬರೆಯಲ್ಪಟ್ಟಿರುವುದು.

ಈ ರಾಜ್ಯದ ಅರಸರಲ್ಲಿ ನಾಲ್ಕು ಸಂಗತಿಗಳು ಮುಖ್ಯವಾಗಿದ್ದವು. ಅವುಗಳಲ್ಲಿ ಸಂಗಮ ಸಂತತಿಯೇ ಮೊದಲನೆಯದು ಎರಡನೆಯ ಸಂತತಿಯೇ ಸಾಳ್ವ ಸಂತತಿ ಇದರಲ್ಲಿ ಮಂಕಿದೇವನೆ ಮೊದಲಾದ ಪ್ರಖ್ಯಾತ ರಾದ ದೊರೆಗಳಿದ್ದರು. ಮೂರನೆಯ ತುಳುವ ಸಂತತಿಯಲ್ಲಿ ನರಸರಾಜ, ತಿಮ್ಮರಾಜ, ವೀರನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ, ಮೊದಲಾದ ಪ್ರಖ್ಯಾತ ರಾಜರಿದ್ದರು. ಸಾಳ್ವ ಸಂತತಿಯಲ್ಲಿ ಹುಟ್ಟಿದ ತಿಪ್ಪರಸನು ಸ್ವತಃ ಕವಿಯಾಗಿದ್ದು ಕಾವ್ಯಾಲಂಕಾರಸೂತ್ರ ಮತ್ತು ಕಾಳಿದೀಪ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾನೆ (೧೩೫೭-೧೩೬೪). ಇದೇ ಸಂತತಿಯಲ್ಲಿ ಹುಟ್ಟಿದ ತಿಮ್ಮರಸನು ಇರಟ್ಟ್ಯ ಯ್ಯಾರ್ ಎಂಬ ತಮಿಳು ಗ್ರಂಥವೊಂದನ್ನು ಬರೆದಿರುತ್ತಾನೆ.

ಕಂಪರಾಜನ ರಾಣಿಯರಲ್ಲಿ ಒಬ್ಬಳಾಗಿದ್ದ ಗಂಗಾದೇವಿಯು '**ಕಂಪರಾಯ ಚರಿತಂ**' ಎಂಬ ಕಾವ್ಯವನ್ನು ಬರೆದಿರುವಳು. ಈ ಕಾವ್ಯವು ಸರಸವಾದ ಸಂಸ್ಕೃತಭಾಷೆಯಲ್ಲಿ ಬರೆಯಲ್ಪಟ್ಟಿರುವುದು. ರಾಜನ ವರ್ಣನೆ, ರಾಜಧಾನಿಯವರ್ಣನೆ, ಪ್ರಭುವಿನ ವಿಜಯ ಯಾತ್ರೆಗಳು ಮುಖ್ಯವಿಷಯಗಳಾಗಿರುವುವು

ಆಸೀತ್ಸಮಸ್ತಸಾಮಂತ ಮಸ್ತಕನ್ಯಸ್ತ ಶಾಸನ ।
ಬುಕ್ಕರಾಜ ಇತಿಖ್ಯಾತೋ ರಾಜಾ ಹರಿಹರಾನುಜ ॥
ತಸ್ಯಾಸೀದ್ವಿಜಯಾ ನಾಮವಿಜಯಾರ್ಜಿತಸಂಪದ ।
ರಾಜಧಾನೀಬುಧೈ' ಶ್ಲಾಘ್ಯಾಶಕ್ರಸ್ಯೇವಾಮರಾವತೀ॥

ಅಥ ಕಂಪನುಹೀಪಾಲಃ ಕಂಪಯನ್ ದ್ವಿಷತಾಂ ಮನಃ।
ಪ್ರತಿಷ್ಠಿತ ದಿಶಾಂಭೇಜೇ ಮಲಯಾಚಲಮುದ್ರಿತಾಂ ॥

ಈ ತೆರನಾದ ಮನೋಹರ ಶ್ಲೋಕಗಳಿಂದ ಸರಸವಾಗಿರುವ ಕಂಪರಾಯ ಚರಿತ್ರವು ಕ್ರಿಸ್ತ ಶಕಾಬ್ದ ೧೫೭೬ ಲ್ಲಿ ಬರೆಯಲ್ಪಟ್ಟಿದ ಆರವೀಡು ಸಂತತಿಗೆ ಮೂಲಪುರುಷನಾದ ಶ್ರೀರಂಗರಾಯನ ಮೊಮ್ಮಗ ಶ್ರೀರಂಗರಾಯನು ಕೊಂಡವೀಡು ಪ್ರಾಂತದ ಸರ್ವಾಧಿಕಾರಿಯಾಗಿದ್ದನು ಇವನು 'ಪರಮ ಯೋಗಿ ವಿಲಾಸಂ' ಎಂಬ ಗ್ರಂಥವನ್ನು ರಚಿಸಿರುವುದಾಗಿ ಚರಿತ್ರೆಯಿಂದ ತಿಳಿದುಬಂದಿದೆ ಸಾಳ್ವನರಸಿಂಹನ ಆಸ್ಥಾನದಲ್ಲಿ ಮಹಾಕವಿಯಾಗಿದ್ದ ರಾಜನಾಥ ಡಿಂಡಿಮನು ಸಾಳ್ವಾಭ್ಯುದಯ ವೆಂಬ ಕಾವ್ಯವನ್ನು ಸಂಸ್ಕೃತದಲ್ಲಿ ರಚಿಸಿರುವನು ಇದರಲ್ಲಿ ಸಾಳ್ವಮಂಗು ಎಂಬ ಪ್ರಖ್ಯಾತ ವೀರನ ಚರಿತ್ರೆಯು ವರ್ಣಿಸಲ್ಪಟ್ಟಿರುವುದು ಈ ವೀರನು ವಿಜಯನಗರದ ಸೇನೆಗೆ ದಳಪತಿಯಾಗಿದ್ದನು. ಇವನು ಸೇನಾಸಮೇತನಾಗಿ ಮಧುರೆಯ ಶಂಭುರಾಯನ ಮೇಲೆ ದಂಡೆತ್ತಿ ಹೋಗಿ ಕಾಳಗದಲ್ಲಿ ಆವನನ್ನುಗೆದ್ದು ಬಿರುದನ್ನು ಸಂಪಾದಿಸಿದನು ಈ ದಳಪತಿಯ ನಂತರದಲ್ಲಿ ಇವನ ವಂಶದವರೆ ವಿಜಯನಗರದ ಸೇನೆಗೆ ದಳಪತಿಗಳಾಗಿದ್ದರು ಈ ಸಾಳ್ವಮಂಗು ವೀರನು ಶ್ರೀರಂಗಕ್ಷೇತ್ರದ ಶ್ರೀರಂಗನಾಥ ದೇವಾಲಯಕ್ಕೆ ಸಾವಿರ ಸಾಲಿಗ್ರಾಮಗಳನ್ನು ದಾನಮಾಡಿದನಲ್ಲದೆ ನಾರಾಯಣಾಷ್ಟಾಕ್ಷರಿಯ ಮಂತ್ರಕ್ಕೆ ಅನುಗುಣವಾಗಿ ಎಂಟು ಗ್ರಾಮಗಳನ್ನು ಆ ದೇವಸ್ಥಾನಕ್ಕೆ ಕೊಡಿಸಿರುವನು. ಕ್ರಿ ಶ ೧೩೫೯ ರಿಂದ ೧೪೦೬ ರವರೆಗೆ ಎರಡನೆಯ ಬುಕ್ಕನು ದೊರೆಯಾಗಿದ್ದ ಕಾಲದಲ್ಲಿ ಕಂಪಣನು ಚೋಳ ಮತ್ತು ಪಾಂಡ್ಯದೇಶಗಳ ಮೇಲೆ ಜೈತ್ರಯಾತ್ರೆಯನ್ನು ನಡೆಸಿದ ಕಾಲದಲ್ಲಿ ಸಾಳ್ವ ಮಂಗುವು ದಳಪತಿಯಾಗಿದ್ದನು ಕ್ರಿ. ಶ. ೧೫೮೬ ರಿಂದ ೧೬೧೪ ರವರೆಗೆ ವೀರ ವೆಂಕಟಪತಿಯು ರಾಜ್ಯವಾಳುತ್ತಿರುವಲ್ಲಿ ಯವನರು ದಕ್ಷಿಣದೇಶದ ಪ್ರಖ್ಯಾತವಾದ ಶ್ರೀರಂಗಕ್ಷೇತ್ರವನ್ನು ಲೂಟಿ ಮಾಡಲಾರಂಭಿಸಿದರ ಆಗ ರಾಮಾನುಜ ಮತೀಯರಾಗಿದ್ದ ತೆಂಗಲೆ ಪಂಗಡದ ಪುಳುಲೋಕಾಚಾರ್ಯರೆಂಬ ಗುರುಗಳೂ ವಡಗಲೆ ಪಂಗಡದ ಗುರುಗಳಾಗಿದ್ದ ವೇದಾಂತದೇಶಿಕರೂ ಸಹ ಗೋಪಣ್ಣನೆಂಬ ವಿಜಯನಗರದ ವೀರ ದಳಪತಿಯ ಸಹಾಯ ಸಂಪತ್ತಿನಿಂದ ದೇವತಾ ವಿಗ್ರಹವನ್ನು ಕಾಪಾಡಿದರೆಂಬ ವಿಷಯವು ಅನಂತಾರ್ಯರೆಂಬ ಕವಿಗಳು ರಚಿಸಿದ ಪ್ರಪನ್ನಾಮೃತವೆಂಬ ಸಂಸ್ಕೃತಗ್ರಂಥದಲ್ಲಿ ಚೆನ್ನಾಗಿ ಹೇಳಲ್ಪಟ್ಟಿರುವುದು. ಶ್ರೀ ಹರಿಹರ ಮಹಾರಾಯನ ಕ್ರಿ ಶ. ೧೩೭೯ ರಿಂದ ೧೩೯೯ ರವರೆಗೆ ರಾಜ್ಯವಾಳುತ್ತಿದ್ದ ಕಾಲದಲ್ಲಿ ಆ ದೊರೆಯ ಪ್ರೋತ್ಸಾಹದಿಂದ ಚನ್ನಭಟ್ಟನೆಂಬ ತಾರ್ಕಿಕ ಮಹಾ ವಿದ್ವಾಂಸನು ತರ್ಕಭಾಷಾವ್ಯಾಖ್ಯೆಯೆಂಬ ಗ್ರಂಥವನ್ನು ವಿರಚಿಸಿರುವನು. ಕೃಷ್ಣದೇವಮಹಾರಾಯನು ಕ್ರಿ ಶ ೧೫೦೯ ರಿಂದ ೧೫೩೦ ರವರೆಗೆ ರಾಜ್ಯವಾಳಿದನು. ಇವನ ಕಾಲದಲ್ಲಿ ನೂರಾರು ಸಂಸ್ಕೃತಗ್ರಂಥಗಳೂ ಆಂಧ್ರಗ್ರಂಥಗಳೂ ಹುಟ್ಟಿರುವವು ತಮಿಳಿನಲ್ಲೂ ಅನೇಕ ಗ್ರಂಥಗಳು ಹುಟ್ಟಿರುವುವು. ರಾಯುವಾಚಕಮು, ಕೃಷ್ಣರಾಯ ವಿಜಯ ಗ್ರಂಥಗಳು ತೆಲಗಿನಲ್ಲಿ ಪ್ರಖ್ಯಾತಗಳಾಗಿರುವುವು. ಕೃಷ್ಣದೇವರಾಯನು ಕವಿಜನಗಳಿಗೆ ಆಶ್ರಯದಾತನಾಗಿದ್ದನಲ್ಲದೆ ಸ್ವತಃ ಕವಿಯೂ ಆಗಿದ್ದನು ಈತನು ಜಾಂಬವತೀ ಕಲ್ಯಾಣವೆಂಬ ಗ್ರಂಥವನ್ನು ರಚಿಸಿರುವನು. ಕೃಷ್ಣದೇವರಾಯನ ದಂಡಾಧಿಪತಿಯಾಗಿದ್ದ ಸಾಳ್ವ ತಿಮ್ಮನು ಅಗಸ್ತ್ಯನ ಬಾಲ ಭಾರತವೆಂಬ ಸಂಸ್ಕೃತ ಚಂಪೂಗ್ರಂಥಕ್ಕೆ ಮನೋಹರ ವೆಂಬ ವಾಖ್ಯಾನವನ್ನು ರಚಿಸಿರುವನು.

ವಿದ್ಯಾರಣ್ಯರ ಸಮಕಾಲೀನರಾದ ವಿದ್ಯಾತೀರ್ಥ, ಭಾರತೀಕೃಷ್ಣತೀರ್ಥ, ಶಂಕರಾನಂದ, ಶ್ರೀಕಂಠನಾಥ, ಸಾಯಣಾಚಾರ್ಯ, ಭೋಗನಾಥ, ಮೊದಲಾದ ಮಹನೀಯರು ಉತ್ತಮೋತ್ತಮ ಗ್ರಂಥರತ್ನಗಳನ್ನು ಬರೆದು ಸಾರಸ್ವತ ಸಂಪತ್ತನ್ನು ಜಗತ್ತಿನಲ್ಲಿ ಹರಡಿರುವರು. ಕ್ರಿ. ಶ. ೧೫೩೦ ರಿಂದ ೧೫೪೨ ರವರೆಗೆ ವಿಜಯನಗರದಲ್ಲಿ ಆಳಿದ ಅಚ್ಯುತರಾಯ ಮಹಾರಾಯನ ಅಸ್ಥಾನದಲ್ಲಿ ಕವಿಯಾಗಿದ್ದ ೧೬ನೆಯ ಶತಮಾನದ ರಾಜನಾಥನೆಂಬ ಕವಿ 'ಅಚ್ಯುತರಾಯಾಭ್ಯುದಯು'ವೆಂಬ ಸಂಸ್ಕೃತ ಕಾವ್ಯವನ್ನು ರಚಿಸಿರುವನು ಇದು ೧೨ ಸರ್ಗಗಳುಳ್ಳ ಕಾವ್ಯ. ಮೊದಲನೆಯ ಆರುಸರ್ಗಗಳು ಮಾತ್ರ ದೊರೆತು ಶ್ರೀರಂಗದಲ್ಲಿ ಅಚ್ಚಾಗಿದೆ ಅಚ್ಯುತರಾಯನ ವಂಶಾವಳಿಯನ್ನು ಮೊದಲು ಮಾಡಿಕೊಂಡು ಅವನ ದಿಗ್ವಿಜಯವನ್ನು ಅದರಲ್ಲಿ ಹೇಳುವುದಾಗಿದೆ.

ಕೃಷ್ಣದೇವ ಮಹಾರಾಯನು ಪ್ರಸಿದ್ಧರಾದ ಅಚಾರ್ಯ ದೀಕ್ಷಿತರೆ ಮೊದಲಾದ ಮಹಾ ವಿದ್ವಾಂಸರಿಗೆ ಆಶ್ರಯದಾತನಾಗಿದ್ದನೆಂತಲೂ ಆತನ ಆಶ್ರಯದಲ್ಲಿ ಅನೇಕ

ಮಹಾವಿದ್ವಾಂಸರುಗಳು ಶಾಸ್ತ್ರ ಸಾಹಿತ್ಯಗ್ರಂಥಗಳನ್ನು ರಚಿಸಿದರೆಂದೂ ಚರಿತ್ರೆಯಿಂದ ತಿಳಿದುಬರುತ್ತದೆ. ಕೃಷ್ಣದೇವರಾಯನು ಸಂಸಾರಸಮೇತನಾಗಿ ಕಾಂಚೀನಗರದ ವರದರಾಜಸ್ವಾಮಿಯ ದರ್ಶನಕ್ಕೆ ಹೋಗಿದ್ದ ವೇಳೆಯಲ್ಲಿ ಅನೇಕ ಶ್ಲೋಕಗಳನ್ನು ಕವಿತ್ವಮಾಡಿ ಪ್ರಭುಗೆ ಆಚಾರ್ಯ ದೀಕ್ಷಿತರು ಒಪ್ಪಿಸಿದರೆಂದು ಕಿಂವದಂತಿಯಿರುವುದು. ಅವರ ಅಸಾಧಾರಣ ಪಾಂಡಿತ್ಯವನ್ನು ನೋಡಿ ಕೃಷ್ಣದೇವರಾಯನು ಅವರನ್ನು ಆಸ್ಥಾನಕ್ಕೆ ಕರೆಸಿಕೊಂಡು ಸನ್ಮಾನಮಾಡಿದನೆಂದು ತಿಳಿದುಬಂದಿದೆ. ನೀಲಕಂಠವಿಜಯವೆಂಬ ಚಂಪೂಗ್ರಂಥವನ್ನು ಸಂಸ್ಕೃತದಲ್ಲಿ ಬರೆದ ನೀಲಕಂಠ ದೀಕ್ಷಿತರು ಕೃಷ್ಣದೇವರಾಯನ ಆಸ್ಥಾನ ಕವಿಗಳಲ್ಲಿ ರತ್ನಪ್ರಾಯರಾಗಿದ್ದರು. ಆಚಾರ್ಯ ದೀಕ್ಷಿತರ ಮಕ್ಕಳಾದ ಶ್ರೀರಂಗರಾಜಾಧ್ವರಿ ಎಂಬ ವಿದ್ವಾಂಸರು ತಮ್ಮ ತಂದೆಗಳಲ್ಲಿ ವ್ಯಾಸಂಗ ಮಾಡಿ ಮಹಾವಿದ್ವಾಂಸರಾಗಿ ಅದ್ವೈತಮುಕುರ, ವಿವರಣ ದರ್ಪಣಗಳೆಂಬ ಗ್ರಂಥಗಳನ್ನು ಬರೆದಿರುತ್ತಾರೆ. ಇವರ ಮಕ್ಕಳೆ ಪ್ರಸಿದ್ಧರಾದ ಅಪ್ಪಯ್ಯ ದೀಕ್ಷಿತರ. ಈ ಅಪ್ಪಯ್ಯ ದೀಕ್ಷಿತರು ಗೃಹಸ್ಥರಾದ ಕರ್ಮಠರು, ಯಜ್ಞಯಾಗಾದಿಗಳನ್ನು ಮಾಡಿದ ದೀಕ್ಷಿತರು. ಮೇಲಾಗಿ ಶಾಸ್ತ್ರಪಾರಂಗತರು ಕರ್ಮಯೋಗಿಗಳು ಮಹಾತ್ಮರು. ಇವರು ಗ್ರಂಥರಚನೆಯಲ್ಲಿ ಸಾಯಣಮಾಧವರಿಗೂ, ವಿದ್ಯಾರಣ್ಯರಿಗೂ ಸಮಾನರು ಇವರ ವಿಷಯವಾಗಿ ಶಿವಾನಂದ ಯೋಗೀಂದ್ರನು "ಅಪ್ಪಯ್ಯ ದೀಕ್ಷಿತೇಂದ್ರ ವಿಜಯ" ಎಂಬ ಗ್ರಂಥವನ್ನು ಬರೆದಿರುವನು. ಅಪ್ಪಯ್ಯ ದೀಕ್ಷಿತರ ಕಾಲದ ವಿಚಾರದಲ್ಲಿ ಅನೇಕ ಪರಿಶೋಧನೆಗಳು ನಡೆದಿವೆ.' ನಡೆಯುತ್ತಲೂ ಇವೆ. ವಿದ್ಯಾರಣ್ಯ, ಕಾಳಿದಾಸ, ಮೊದಲಾದವರ ಕಾಲನಿರ್ಣಯದಲ್ಲಿ ಮತಭೇದಗಳಿರುವಂತೆಯೇ ಇವರ ಕಾಲನಿರ್ಣಯ ವಿಚಾರದಲ್ಲೂ ಮತಭೇದಗಳಿವೆ ಅವು ಹೇಗಾದರೂ ಇರಲಿ. ದೀಕ್ಷಿತರು ಹದಿನಾರನೆಯ ಶತಮಾನದಲ್ಲಿ ಎಂದರೆ ಕ್ರಿ. ಶ. ೧೫೮೬ ರಿಂದ ೧೬೧೪ ರವರೆಗೆ ರಾಜ್ಯವಾಳಿದ ವೆಂಕಟಪತಿರಾಯನ ಆಶ್ರಯದಲ್ಲಿ ಕುವಲಯಾನಂದವೆಂಬ ಅಲಂಕಾರ ಗ್ರಂಥವನ್ನು ಬರೆದಿರುವುದಾಗಿ ಆ ಗ್ರಂಥದ ಕೊನೆಯ ಪದ್ಯದಿಂದ ತಿಳಿದುಬರುತ್ತದೆ.

ಅಮುಂಕುವಲಯಾನಂದ ಮಕರೋದಪ್ಪದೀಕ್ಷಿತಃ ।
ನಿಯೋಗಾದ್ವೇಂಕಟಪತೇ ರ್ನಿರುಪಾಧಿಕೃಪಾನಿಧೇ ॥

ಅಪ್ಪಯ್ಯ ದೀಕ್ಷಿತರು ೧೦೪ ಗ್ರಂಥಗಳನ್ನು ಬರೆದಿರುವರು. ಇವುಗಳಲ್ಲಿ ಅನೇಕ ಮತಗ್ರಂಥಗಳಾಗಿರುವುವು. ಕುವಲಯಾನಂದ, ಚಿತ್ರಮೀಮಾಂಸ, ವೃತ್ತಿವಾರ್ತಿಕ ಗ್ರಂಥಗಳು ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟವುಗಳು. ಇವರು ವೇದಾಂತ ದೇಶಿಕರ ಯಾದವಾಭ್ಯುದಯಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ಇವರು ಬರೆದಿರುವ ಗ್ರಂಥಗಳಾವುವೆಂಬುದರ ವಿವರಣೆಯನ್ನು ಸಂಸ್ಕೃತ ಕವಿ ಚರಿತ್ರೆಯ ದ್ವಿತೀಯ ಸಂಪುಟದ ೩೫೩ ನೆಯ ಪುಟದಲ್ಲಿ ಅಚ್ಚಾಗಿರುವ ೧೪ ಶ್ಲೋಕಗಳಲ್ಲಿ ನೋಡಬಹುದು. ಪಾಠಕರ ಪರಿಚಯಕ್ಕಾಗಿ ಅಲ್ಲಿರುವ ೨ ಪದ್ಯಗಳು ಮಾತ್ರ ಇಲ್ಲಿ ಉದ್ಧರಿಸಿ ಒರೆಯಲ್ಪಟ್ಟವೆ

ಶ್ರೀವೀರ ವೇಂಕಟಪತಿ ಕ್ಷೋಣಿಪಾಲಸ್ಯ ಸಾಹ್ಯತಃ ।
ಕೃತಃ ಕುವಲಯಾನಂದ ಶ್ಚಿತ್ರ ಮೀಮಾಂಸಯಾಸಹ॥
ಅಭಿಧಾ ಲಕ್ಷಣಾವ್ಯಕ್ತೀರ್ವಿ ವೃತ್ತಿರ್ವೃತ್ತಿ ವಾರ್ತಿಕಂ ॥
ಯಾದವಾಭ್ಯುದಯಾಖ್ಯಾಯಾ ವ್ಯಾಖ್ಯಾನಂಚ
ಕೃತಂಕೃತೇಃ ॥

ಅಪ್ಪಯ್ಯದೀಕ್ಷಿತರ ಸಿದ್ಧಾಂತ ಲೇಖಸಂಗ್ರಹ, ನ್ಯಾಯರಕ್ಷಾಮಣಿ, ಶ್ರೀಕಂಠಭಾಷ್ಯ, ಶಿವಾರ್ಕಮಣಿ ದೀಪಿಕಾ ಮೊದಲಾದ ಅದ್ವೈತ ಸಿದ್ಧಾಂತ ಗ್ರಂಥಗಳು ಜಗತ್ಪ್ರಸಿದ್ಧಗಳಾಗಿವೆ.

ದೀಕ್ಷಿತರಿಗೆ ಪ್ರಥಮಾಶ್ರಯದಾತನು ಚಿನ್ನತಿಮ್ಮ ಇವನ ಪ್ರಾರ್ಥನೆಯಂತೆ ದೀಕ್ಷಿತರು ಯಾದವಾಭ್ಯುದಯಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾರೆ

ದೀಕ್ಷಿತರು ಚಿನ್ನ ತಿಮ್ಮನನ್ನು (ರಾಮರಾಜಪುತ್ರ) ಶ್ಲೋಕಗಳಲ್ಲಿ ಇಂತು ವರ್ಣಿಸಿದಾರೆ.

ತೇಷು ಮಹಿತೇಷು ಜಯತಿ ತ್ರಿದಿವಾಧೀಶೇಷು
ಪದ್ಮಬಂಧುರಿವ ।
ಶ್ರೀಜನ್ನ ತಿಮ್ಮರಾಜಃ ಪ್ರತಾಪನೀರಾಜಿತ
ಕ್ಷಮಾವಲಯಃ ॥
ಪ್ಲವಮಾನಸ್ಯ ಸಮುದ್ರೇಸೇತೋಶ್ಶ್ಯಥಿಲ್ಯಶಂಕಯಾ
ನಿಹಿತಾಃ ।
ಕೀಲಾ ಇವಭಾಸಂತೇ ತತ್ರಯಾ ಯ ಸ್ಯಪೃಥು
ಜಯಸ್ತಂಭಾಃ ॥

ಈ ಚಿನ್ನ ತಿಮ್ಮನು ಸದಾಶಿವರಾಯನ ರಾಜ್ಯಾಧಿಕಾರ ಸಮಯದಲ್ಲಿ ಎಂದರೆ ಕ್ರಿ ಶ ೧೫೪೨ ರಲ್ಲಿ ದಕ್ಷಿಣದೇಶದಲ್ಲಿ ವಿಜಯನಗರ ಸಂಸ್ಥಾನದ ಸರ್ವಾಧಿಕಾರಿಯಾಗಿದ್ದನು. ಅಪ್ಪಯ್ಯ ದೀಕ್ಷಿತರು ಕೆಲವು

ಕಾಲ ವೆಲ್ಲೂರಿನ ಚಿನ್ನಬೊಮ್ಮ ನಾಯಕನ ಆಶ್ರಯ ದಲ್ಲಿದ್ದು ೧೫೮೫ ರಲ್ಲಿ ಪೆನಗೊಂಡೆಯ ವೆಂಕಟಪತಿ ರಾಜನ ಆಸ್ಥಾನಕ್ಕೆ ದಯಮಾಡಿಸಿದರು. ಇವರು ರಚಿಸಿರುವ ವಿಧಿರಸಾಯನವೆಂಬ ಗ್ರಂಥದಲ್ಲಿ ವೆಂಕಟಪತಿ ಮಹಾರಾಜನನ್ನು ಇಂತು ಪ್ರಶಂಸೆ ಮಾಡಿರುವರು.

ಪ್ರಾಪ್ತಂತ ತ್ಪ್ರಾಪಣೀಯಂ ಕಿಲಯದಿಹ
ಕಿಯಾನ್ ಪೂರಣೀಯೋಸ್ತಿನಾಂಶೋ ।
ನಾನಿಷ್ಟಂವಾನಿವರ್ತ್ಯಂ ನಿಜವಿಷಯತಯಾ
ದೃಶ್ಯತೇಕಿಂಚಿದತ್ರ ॥
ಕಿಂತುವ್ಯಾಪಾರ ಮೇಷಪ್ರಥಯತಿಫಲ
ಸಂಯೋಜನಾರ್ಥಂ ಪರೇಷಾಂ ।
ಪ್ರಾಪ್ತಃಪುಣ್ಯೈ ರಗಣ್ಯೈರಿವ ವಿಭುಧಗಣೋ
ವೆಂಕಟಕ್ಷೋಣಿಪಾಲಂ ॥

ವಿಜಯನಗರದ ಪ್ರಭುಗಳು ಇಂತಹ ಮಹಾ ವಿದ್ವಾಂಸರಿಂದಲೂ ಹೆಸರನ್ನು ಹೇಳಿಸಿಕೊಂಡರೆಂದ ಮೇಲೆ ಅವರೆಷ್ಟು ಧನ್ಯರೊ! "ವಿಜಯನಗರದ ಸಾಮ್ರಾಜ್ಯದಲ್ಲಿ ಸಾಹಿತ್ಯದ ಬೆಳವಣಿಗೆ" ಎಂಬ ವಿಷಯವು ತುಂಬಾ ದೊಡ್ಡದಾದುದು. ಆಂಧ್ರ ದ್ರವಿಡ ಕರ್ಣಾಟಭಾಷೆಗಳಲ್ಲೂ ಸಂಸ್ಕೃತಾಂಗ್ಲೇಯ ಭಾಷೆಗಳಲ್ಲೂ ಪರಿಪೂರ್ಣ ಜ್ಞಾನವನ್ನು ಸಂಪಾದಿಸಿ ಚರಿತ್ರೆಯ ಕ್ರಮದಲ್ಲಿ ಪರಿಶೋಧನೆಯನ್ನು ಮಾಡಿ ಪ್ರತಿಯೊಂದು ಅಂಶವನ್ನೂ ವಿವರವಾಗಿ ಬರೆಯಲು ಪಂಡಿತರಾದವರಿಗೆ ಬಹುಕಾಲವು ಹಿಡಿಯುವುದು. ಈ ಸಣ್ಣ ಬರವಣಿಗೆಯಲ್ಲಿ ಸಾಹಿತ್ಯವು ಏಳ್ಗೆ ಪಡೆದ ವಿಷಯವು ಸ್ಥಾಲೀಪುಲಾಕನ್ಯಾಯದಂತೆ ಏಕದೇಶ ದಲ್ಲಿ ದಿಙ್ಮಾತ್ರ ಪ್ರದರ್ಶನವಾಗಿ ಬರೆಯಲ್ಪಟ್ಟಿದೆ.

ವಿಜಯನಗರದ ಅರಸರ ಪ್ರೋತ್ಸಾಹದಿಂದ ಸಂಸ್ಕೃತಾಂಧ್ರ ದ್ರಾವಿಡ ಸಾಹಿತ್ಯದ ಅಭಿವೃದ್ಧಿ ಗೊಂಡಷ್ಟು ಕರ್ಣಾಟಕ ಸಾಹಿತ್ಯವು ಅಭಿವೃದ್ಧಿ ಗೊಳಲಿಲ್ಲ. ಆದರೆ ಅವರು ಕರ್ಣಾಟಕ ಕವಿಗಳಿಗೆ ಅವಲಂಬನೆಯನ್ನು ಕೊಡದೆ ಇರಲಿಲ್ಲ. ಮಧುರ ಮಂಗರಸ, ಕುಮಾರವ್ಯಾಸ, ಕುಮಾರ ವಾಲ್ಮೀಕಿ ನಿತ್ಯಾತ್ಮಶುಕ ಮೊದಲಾದ ಮಹಾಕವಿಗಳು-ಕ್ರಮ ವಾಗಿ ಧರ್ಮನಾಥಪುರಾಣ, ನಿಘಂಟು, ಭಾರತ, ರಾಮಾಯಣ, ಭಾಗವತಗಳನ್ನು ಬರೆದು ಪ್ರಖ್ಯಾತ ರಾಗಿದಾರೆ

---



ಪ್ರೊ. ವ್ಹಿ. ಕೆ. ಗೋಕಾಕ

ಎಂ. ಎ

ಫರ್ಗ್ಯೂಸನ್ ಕಾಲೇಜ ಪುಣೆ



ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು.

ತುಮಕೂರು.



ಶ್ರೀ ತಮ್ಮಣ್ಣಾ ಕುಬೇರಪ್ಪ ತುಕೋಲ

ಎಂ. ಎ. ಎಲ್. ಎಲ್. ಬಿ. ವಿಜಾಪೂರ.



ಶ್ರೀ ಕಟ್ಟಿ ಶೇಷಾಚಾರ್ಯರು.

ಬಿ. ಎ. ಎಲ್. ಎಲ್. ಬಿ.



# ತ್ಯಾಮಣನಾಯಕ.

(ಲೇಖಕರು:—ಪ್ರೊ. ವಿ. ಕೆ. ಗೋಕಾಕ ಎಮ್. ಎ; ಪುಣೆ)

ಇದೊ! ನನ್ನ ಸ್ಮೃತಿಪಥದಿ ಎಸೆದೆ ನೀ ಸಾಯಕವ.
ಹಾಳು ಹಂಪೆಯಲಿರುವ ಮೂಲಿ ಗುಂಪೆಯನೊಂದ
ಶೋಧಿಸುತ ನಡೆದಿರಲು ಹಾಳು ದೇಗುಲವೊಂದ
ಕಂಡೆ ಜನರರಗಿಯುತಿಹುದನು. ಅವರ ಕಾಯಕವ-

ನಿರೀಕ್ಷಿಸುತ ನಿಂತಿರಲು ಗುಡಿಯ ಕಲ್ಗಂಬದಡಿ-
ಗಿರುವ ಗುಹೆಯೊಂದರಲಿ ಒರ್ವ ವ್ಯಕ್ತಿಯ ಕಂಡೆ,
ಸುತ್ತುವರಿದಿಹ ಜನರ ಸಂದಣಿಯು. ಎನೆಂಬೆ!
ಅಂಕುರಿಸಿತೆನ್ನೆಯೊಳನುರಾಗದೊಂದು ಮಿಡಿ!

ಆಗ ಬಂದಿತು ಮುಂನೆ ವ್ಯಕ್ತಿ ಮತ್ತೆಂದಿತದು:
"ಮೂರು ಶತಮಾನದಾಚೆಗೆ ಜೀವಿಸಿದ ಬೊಂಬೆ-
ಯೆನಬೇಡಿ! ಮಾನಿಸನೆ ನಾನಿಹೆನು. ಕಂದಿತದು
ವಿಜಯನಗರದಪೆಂಪು. ಆ ಜನಸಿರಿಯ ರೆಂಬೆ,
ನಾನೊರ್ವನುಳಿದಿಹೆನು; ಅದರ ಸಂದೇಶವನು
ತಂದು ಮುಟ್ಟಿಸಲೆಂದು ನಿಮ್ಮ ಹೃದ್ದೇಶವನು!"

"ತಾಳಿಕೋಟೆಯ ರಣದಿ ಕಣ ಕಣವು ಸಹ ಹೋಗಿ
ಸಾಮ್ರಾಜ್ಯವಳಿದಿರುವ ಪರಿಯನಾ ಧೇನಿಸಿದೆ.
ನರಪತಿಯನುಳಿಸಲೆಂದತಿಯಾಗಿ ಹವಣಿಸಿದೆ.
ಮಾಡಲೇನಹುದಿನ್ನು ಕಾಲ ಬಂದಿರೆ ಮಾಗಿ?
ಅಸಹಾಯನಾಗಿರಲು ಇಂಥ ವೇದನೆ ತಾಗಿ
ರಾಜಧಾನಿಗೆ ಮರಳಿ ಕ್ಲೇಶವನು ಗಮನಿಸದೆ;
ರಾಣಿವಾಸವನುಳುಹಿ ಕಾರ್ಯವನು ಸಮನಿಸಿದೆ;
ಅಂದಿನಿಂದಿನ್ನುವರೆಗಿರುವೆನೆಲೆ ಬೈರಾಗಿ!"

"ವಿಜಯನಗರದಿ ಮೂರುದಿನವು ನಡೆದಿಹ ಕೊಲೆಯ
ನೋಡಲೆಂದವಿತು ಕುಳಿತಿದ್ದೆ ನೆಲಮನೆಯೊಳಕೆ:
ಅಂತೆ ನಿಮ್ಮನು ನಾನು ಕಾಂಬುದಕೆ ಕಾರಣನು!
ಆದರಂತೆ ಕಾಯ್ದುಕೊಂಡಿದ್ದೆ ನನ್ನಯ ತಲೆಯ!
ಇನಿತು ದಿನವಿರಲಿಲ್ಲವೆನಗೆ ಜನತೆಯ ಬಳಿಕೆ:

" ಅಡಗಿದೆನು ಮೂರು ದಿನವೀಗುಹಾಭಾಗದಲಿ
ತುಂಗಭದ್ರೆಯೂ ಹರಿದು ರಕ್ತಾನುರಕ್ತೆಯಿರೆ;
ಯುವನ ಸೇವೆಗೆ ಯುವನ ಸೇವೆಯಾಸಕ್ತಿಯಿಂದೆ
ಬಾಳಿದೆನು ಬಲು ಬಳಲಿ ಅತಿಭೀತಿರೋಗದಲಿ."

" ಆಮೇಲೆ ಬಂದು ಸುತ್ತೆಲ್ಲ ದಿಟ್ಟೆಯ ಚಲ್ಲೆ
ಸೂರ್ಯಾಸ್ತವಾಗಿತ್ತು. ಪರರಾಜಹಸ್ತವದು
ರಾಜ್ಯರವಿಗೆ ಹಿಡಿದುಕೂಲವ ಸೆಳೆಯೆ, ಗ್ರಸ್ತವಿದು.
ಅಭಿಮಾನಧನವೆಂದು ಒರಲಿದಳು ಆ ನಲ್ಲೆ!"

" ವಿಜಯನಗರವದಂದು, ಅಪಜಯನಗರವಾಗಿ
ಸುಖಿಕಿರುವ ನೆಲೆವೀಡು ದುಃಖದಾಗರವಾಗಿ
ಕೆನ್ನೀರು ಕಣ್ಣೀರು ನಿಲಲು ಸಾಗರವಾಗಿ
ಮನದಿ ಮಲ್ಲಳಿಗೊಂಡೆ—ಎಲೆ ಸ್ವಶಾಸನವಿದೇನು!
ಕನ್ನಡದ ಪೈಸಿರಿಯು ಬತ್ತಲಾಗಿಹುದೇನು!
ಕೊನೆವರೆಗು ನಮ್ಮ ನಾಡಿನಲಿ ದುರ್ಗತಿಯೇನು!"

" ಇಂತಲ್ಲ! ಹೊಸತೊಂದು ಸ್ಫೂರ್ತಿಯದು
ಜನಿಸುವದು:-
ನಾಡಿನೊಳು ಹೊಸತೊಂದು ಸಾಮ್ರಾಜ್ಯ ವೇಳುವುದು
ಕನ್ನಡಕೆ ಹೃದಯವಿರುವನಕ ನೆರೆ ಬಾಳುವೆದು;
ನಾಡ ಹಸುಮಕ್ಕಳಿಗೆ ಇದು ಕಾರ್ಯವೆನಿಸುವುದು."

" ನಾಡಿನವರೆದೆಯಲ್ಲಿ ಹೊನ್ನಕ್ಕರದಿ ಬರೆದ,
ಬಾಳುವರು ಕಬ್ಬಿಗರು, ತಮ್ಮ ಸಾಹಸಗಳನು.
ಅವರ ಸುಖದುಃಖವನು ಉಮ್ಮಳುಲ್ಲಸಗಳನು
ನೆನೆಯುವರು ನೆರೆನಾಡಿನವರು ತಮ್ಮನು ಮರೆದು."

"ಅವಳಂತೆ ಕರುನಾಡ ತುಂಬ ಸಂಚರಿಸುವೆನು
ಹಿಂದಿನವರೆಸಕ ಕಣಿಸದಿಹ ಬೆಂತರರಂತೆ:
ಇಂದಿನವರನು ಕನಸಿನಲಿ ಹೋಗಿ ಹರಸುವೆನು:
ಅವರೆದೆಯು ಪುಟಿಯುವದ ನೋಡಿ ತುಂತುರದಂತೆ
ಹಿಂದಿನವರನು ನೆನೆದು ಮುಂದಿಹುದ ಸ್ಮರಿಸುವೆನು:
ಕಂಡುಬರುತಿಹದೊಂದು ಯುಗ-ಯುಗಾಂತರದಂತೆ!"

# ವಿಜಯನಗರ ಸಾಮ್ರಾಜ್ಯದಿಂದ

# ವೀರಶೈವಧರ್ಮಕ್ಕಾದ ಸಹಾಯ.

( ಲೇಖಕ:—ಕೀರ್ತನ ಕೇಸರಿ ಕವಿರತ್ನ, ಬಿ. ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆಮಠ ತುಮಕೂರು. )

ಕರ್ನಾಟಕದೇಶದಲ್ಲಿ ಸ್ಮರಣೀಯಗಳಾದ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ದೇವಗಿರಿ ಯಾದವ ಮೊದಲಾದ ಹಲವು ಸಾಮ್ರಾಜ್ಯಗಳು ವೈಭವದಿಂದ ಆಗಿ ಹೋಗಿದ್ದರೂ ವಿಜಯನಗರ ಸಾಮ್ರಾಜ್ಯವು ಹಲಕೆಲವು ಕಾರಣಗಳಿಂದ ಕನ್ನಡಿಗರ ಮನಸ್ಸನ್ನು ಬಹಳವಾಗಿ ಆಕರ್ಷಿಸಿದೆ.

ಇದಕ್ಕೆ ಆ ರಾಜ್ಯಸ್ಥಾಪನೆಯ ಕಾಲದ ಮಹತ್ವ, ಮಹರ್ಷಿ ವಿದ್ಯಾರಣ್ಯನ ಘನತೆ, ಆ ರಾಯರ ಅದ್ಭುತ ಪರಾಕ್ರಮ, ಇವೆಲ್ಲಕ್ಕೂ ಮಿಗಿಲಾಗಿ ಪಂಪಾಪತಿಯ ದಿವ್ಯಾನುಗ್ರಹ ಇವೆಲ್ಲವೂ ಕಾರಣವಾಗಿರಬಹುದು.

ವಿಜಯನಗರಸಾಮ್ರಾಜ್ಯವು ಸ್ಥಾಪಿತವಾಗದಿದ್ದರೆ, ಅದು ಸುಮಾರು ೩೩೦ ವರ್ಷಗಳ ಕಾಲ ಹಿಂದೂ ಧರ್ಮ ಮತ್ತು ಹಿಂದೂ ಸಮಾಜಕ್ಕೆ ನೆರವಾಗದಿದ್ದರೆ ಇಂದಿನ ಹಿಂದೂ ಚರಿತ್ರೆಯು ಬೇರೊಂದು ವಿಧವಾಗಿ ಮಾರ್ಪಾಟಾಗುತ್ತಿತ್ತೆಂಬುದು ಸೂಕ್ಷ್ಮದರ್ಶಿಗಳಿಗೆಲ್ಲಾ ತಿಳಿದ ಮಾತು.

ವಿಜಯನಗರಸಾಮ್ರಾಜ್ಯದ ೬೦೦ ವರ್ಷದ ಸ್ಮಾರಕ ಮಹೋತ್ಸವವನ್ನು ಆ ಮಹಾಜನಪದದ ರಾಜಧಾನಿಯೆನಿಸಿದ ಪಂಪಾಕ್ಷೇತ್ರದಲ್ಲಿ ನೆರವೇರಿಸಬೇಕೆಂದು (೧೯೩೬ ರಲ್ಲಿ) ಕನ್ನಡಿಗರು ಸಂಕಲ್ಪಿಸಿದ ಮೇಲಂತೂ ಆ ರಾಜ್ಯದ ನೆನಪು ಎಲ್ಲರಿಗೂ ಅಡಿಗಡಿಗೆ ಆಗತ್ತಿದೆ.

ಈ ಮಹೋತ್ಸವವನ್ನು ಹುರುಪಿನಿಂದ ನೆರವೇರಿಸಿದ ಹೊರತು ಕನ್ನಡಿಗರಲ್ಲಿ ಒಂದು ನವಚೈತನ್ಯವು ಹುಟ್ಟುವಂತೆ ಕಾಣಲಿಲ್ಲ. ಕ್ರಿ. ಶ. ೧೫೬೫ ರಲ್ಲಿ ಕೃಷ್ಣಾತೀರದ ರಾಕ್ಷಸತಂಗಡಗಿ ಕಾಳಗದಲ್ಲಿ ವಿಜಯನಗರದ ವಿನಾಶದೊಂದಿಗೆ ಅಸ್ತಂಗತಳಾದ ಕರ್ನಾಟಕ ಸೌಭಾಗ್ಯಲಕ್ಷ್ಮಿಯು ಬಹಿರ್ಗತಳಾಗುವಂತೆಯೂ ಕಾಣಲಿಲ್ಲ.

ಈ ಮಹಾಕಾರ್ಯವನ್ನು ಕನ್ನಡಿಗರೆನಿಸಿದ ಎಲ್ಲ ಕುಲಜಾತಿಯವರೂ ಒಮ್ಮತದಿಂದ ಮಾಡಿ ವಿಶಾಲ ಭಾರತದಲ್ಲಿ ತಮ್ಮ ನಿರ್ಮಲ ಕೀರ್ತಿಯನ್ನು ಉಳಿಸಿಕೊಳ್ಳಬೇಕಾಗಿದೆ ಕರ್ನಾಟಕದ ಬಹುಸಂಖ್ಯಾಕ ಸಮಾಜವೆನಿಸಿದ ವೀರಶೈವರೂ ಈ ಕಾರ್ಯದಲ್ಲಿ ಹಿಂದೆ ಬೀಳದೆ ಕಾರ್ಯೋನ್ಮುಖರಾಗ ಬೇಕೆಂದೂ ಈ ಸಾಮ್ರಾಜ್ಯದಿಂದ ವೀರಶೈವಧರ್ಮಕ್ಕೂ ಅಪಾರವಾದ ಸಹಾಯವಾಗಿದೆಯೆಂದೂ ಸೂಚಿಸುವುದೇ ಈ ಲೇಖನದ ತಾತ್ಪರ್ಯವಾಗಿದೆ.

ವಿಜಯನಗರ ಸಾಮ್ರಾಜ್ಯದಿಂದ ಹಿಂದೂಧರ್ಮ, ಸಂಸ್ಕೃತ—ಕನ್ನಡ-ತೆಲಗು ಮೊದಲಾದ ಸಾಹಿತ್ಯ, ಸಂಗೀತ—ಶಿಲ್ಪ—ಚಿತ್ರ ಮೊದಲಾದ ಕಲೆಗಳು ಇವೆಲ್ಲಕ್ಕೂ ಅಪಾರವಾದ ಸಹಾಯವಾಗಿದೆ. ಹಂಪೆಯಲ್ಲಿರುವ ಜಿನ ಬಸ್ತಿಗಳನ್ನು ನೋಡಿದರೆ ಜೈನ ಧರ್ಮಕ್ಕೂ ಅಲ್ಲಿ ಆಶ್ರಯ ಸಿಕ್ಕಂತೆ ಕಾಣುತ್ತದೆ. ತನಗೆ ಕಡುವೈರಿಗಳೆನಿಸಿದ್ದ ತುರುಷ್ಕರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟು (ಮಸೀತಿಗಳನ್ನು ನಿರ್ಮಿಸಿ ಕೊಡುವುದರ ಮೂಲಕ) ತನ್ನ ಔದಾರ್ಯವನ್ನು ಬೀರಿದ ಆ ರಾಜ್ಯವು ಇನ್ನುಳಿದವರನ್ನೆತು ತಾನೇ ಮರೆತೀತು ?

ಕಲಚುರಿ ಸಾರ್ವಭೌಮ ಬಿಜ್ಜಳ ಭೂಪಾಲನು ಕಲ್ಯಾಣದ ಅರಸಾಗದಿದ್ದರೆ, ಶ್ರೀಬಸವೇಶ್ವರನು ಅವನ ಮಂತ್ರಿಯಾಗದಿದ್ದರೆ ಹೇಗೆ ಇಂದಿನ ವೀರಶೈವ ಸಮಾಜವು ಅಸ್ತಿತ್ವದಲ್ಲಿರುವುದು ಕಷ್ಟವಾಗುತ್ತಿತ್ತೋ ಹಾಗೆಯೇ ವಿಜಯನಗರದ ಭೂಪಾಲರು ವೀರಶೈವ ಧರ್ಮಕ್ಕೆ ನೆರವಾಗದಿದ್ದರೆ ಈ ಸಮಾಜವು ಇಂದಿನ ಸ್ಥಿತಿಯಲ್ಲಿರುತ್ತಿರಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ವೀರಶೈವ ಸಮಾಜ ಚರಿತ್ರೆಯ ಅತ್ಯುನ್ನತವಾದ ಕಾಲಗಳೆರಡು

೧. ಬಸವೇಶನು ಕಲ್ಯಾಣದಲ್ಲಿ ವೀರಶೈವ ಧರ್ಮಧ್ವಜವನ್ನು ಮೆರೆಯಿಸಿದುದು.

೨ ವಿದ್ಯಾನಗರಿಯಲ್ಲಿ ಪ್ರೌಢಪ್ರತಾಪದೇವ ರಾಯನು ಲಿಂಗಧಾರಿಯಾಗಿ ವೀರಶೈವಕ್ಕೆ ಆಶ್ರಯ ಕೊಟ್ಟಿರುವದು.

ಹಲವು ಲಿಂಗವಂತರು ಮೊದಲನೆಯ ಕಾಲವನ್ನು ಸ್ಮರಿಸುವಷ್ಟು ಎರಡನೆಯ ಸಮಯವನ್ನು ಸ್ಮರಿಸುವು ದಿಲ್ಲ. ಅದು ಕಾರಣವೇ ಅಂಥವರು ವಿಜಯನಗರದ ಬಗ್ಗೆ ಅಷ್ಟಾಗಿ ಶ್ರದ್ಧಾನ್ವಿತರಾಗುವದೂ ಇಲ್ಲ. ಇದು ವ್ಯಸನಕರವಾದ ಸಂಗತಿಯಾಗಿದೆ

ವಿಜಯನಗರದ ಸಂಸ್ಥಾಪಕರಾದ ಹುಕ್ಕ ಬುಕ್ಕರು ವೀರ ಕ್ಷತ್ರಿಯರು ಅದ್ವೈತ ಗುರುವಾದ ವಿದ್ಯಾರಣ್ಯ ಸ್ವಾಮಿಯ ಪರಮ ಭಕ್ತರು. ಪಂಪಾವಿರೂಪಾಕ್ಷನೇ ಇವರ ಕುಲದೇವತೆ. ಬುಕ್ಕರಾಯನ ಕಾಲದಲ್ಲಿದ್ದ ದಂಡಾಧಿಪತಿಗಳಲ್ಲಿ ರಣಧೀರ ಬಸವಯ್ಯನೆಂಬ ಓರ್ವ ವೀರಶೈವ ದಂಡನಾಯಕನು ಪ್ರಸಿದ್ಧನಾಗಿದ್ದನೆಂದು ಇತಿಹಾಸದಿಂದ ತಿಳಿದು ಬರುತ್ತದೆ. ವಿಜಯನಗರದಲ್ಲಿ ಪ್ರಸಿದ್ಧರಾದ ಲಿಂಗವಂತರಲ್ಲಿ ಈತನೇ ಮೊದಲಿಗ ನೆಂದು ಕಾಣುತ್ತದೆ

ಅನಂತರ ಆಳಿದ ಇಮ್ಮಡಿ ಹರಿಹರರಾಜನ ಕಾಲ ದಲ್ಲಿಯೂ (೧೩೭೭-೧೪೦೪) ವೀರಶಿರೋಮಣಿ ಮುದ್ದನೆಂಬ ಮತ್ತೊಬ್ಬ ಲಿಂಗವಂತ ದಂಡನಾಯಕನು ಆಗಿಹೋದನು. ವಿಜಯನಗರದ ಅರಸರ ಕಾಲದಲ್ಲಿ ಇವನು ಪ್ರಸಿದ್ಧರಾದ ವೀರಶೈವರಲ್ಲಿ ಎರಡನೆಯವ ನೆಂದು ತೋರುತ್ತದೆ.

ಕ್ರಿ ಶ ೧೪೧೯-೧೪೪೬ ರ ವರೆಗೆ ವಿಜಯನಗರ ದಲ್ಲಿ ಆಳಿದ ಪ್ರೌಢದೇವರಾಯನು ಲಿಂಗವಂತನೇ ಆಗಿದ್ದನೆಂದು ತಿಳಿದುಬರುತ್ತದೆ. ಇವನ ಆಸ್ಥಾನದಲ್ಲಿ ಲಕ್ಕಣಾಮಾತ್ಯ, ಜಕ್ಕಣಾರ್ಯ ಎಂಬ ಇಬ್ಬರು ಪ್ರಸಿದ್ಧ ರಾಜ್ಯಾಧಿಕಾರಿಗಳಿದ್ದರು. ಈ ಉಭಯರೂ ಪ್ರಸಿದ್ಧ ರಾಜಕಾರಣಪಟುಗಳಾಗಿದ್ದುದಲ್ಲದೆ ಮಹಾ ವಿದ್ವಾಂಸ ರಾಗಿಯೂ ಕವಿಗಳಾಗಿಯೂ ಕವಿಜನಾಶ್ರಯರಾ ಗಿಯೂ ಇದ್ದರು. ಲಕ್ಕಣಾಮಾತ್ಯನು "ಶಿವತತ್ವ ಚಿಂತಾಮಣಿ" ಎಂಬ ಶ್ರೇಷ್ಠತಮವಾದ ಷಟ್ಪದಿ ಕಾವ್ಯವನ್ನು ಕನ್ನಡದಲ್ಲಿ ಬರೆದಿದ್ದಾನೆ. ಈತನು ಪ್ರೌಢದೇವರಾಯನಿಗೆ ಪರಮ ಪುತ್ರನಾಗಿದ್ದಂತೆಯೂ ಗ್ರಂಥಗಳಲ್ಲಿ ಉಲ್ಲೇಖವಿದೆ.

ಲಕ್ಕಣಾಮಾತ್ಯನಂತೆಯೇ ಜಕ್ಕಣಾರ್ಯನೂ ರಾಜಾ ಸ್ಥಾನದಲ್ಲಿ ಉನ್ನತಾಧಿಕಾರಿಯಾಗಿದ್ದನು ಇವನಿಗೆ "ಭಕ್ತಿ ಭಂಡಾರಿ" ಎಂಬ ಬಿರುದಿರುವುದರಿಂದ ಇವನು ಮಹಾಮಹಿಮನಾಗಿದ್ದಂತೆ ತೋರುತ್ತದೆ. ಈ ಬಿರುದು ಬಸವೇಶ್ವರನಿಗೆ ಹೊರತು ಇನ್ನಾರಿಗೂ (ಇವನಹೊರತು) ಇದ್ದಂತೆ ತೋರುವುದಿಲ್ಲ. ಈ ಪ್ರೌಢದೇವರಾಯನಆಸ್ಥಾನದಲ್ಲಿಪ್ರಭುಲಿಂಗಲೀಲೆಯ ಕರ್ತೃವಾದ ಮಹಾಕವಿ ಚಾಮರಸನಿದ್ದನು. ಈ ಕವಿಯನ್ನು ರಾಜನು ಬಹುವಾಗಿ ಮನ್ನಿಸಿದನೆಂದು ತಿಳಿದು ಬರುತ್ತದೆ. ಹಾಗೆ ರಾಜಮಾನ್ಯವಾದುದರಿಂ ದಲೇ ಈತನ ಗ್ರಂಥವು ಸಂಸ್ಕೃತ, ತೆಲುಗು, ತಮಿಳು, ಮರಾಠಿ ಭಾಷೆಗಳಲ್ಲಿ ಭಾಷಾಂತರವಾಗಿ ಜಗನ್ಮಾನ್ಯ ವಾಯಿತು. ಕನ್ನಡ ಸಂಸ್ಕೃತೋಭಯ ಮಹಾ ಕವಿ ಯಾದ ಮಗ್ಗೆಯ ಮಾಯಿದೇವನೂ ಸಪ್ತಕಾವ್ಯದ ಗುರುಬಸವನೂ ಮಹಾಲಿಂಗದೇವ ಕುಮಾರ ಬಂಕನಾಥ ಕಲ್ಲುಮಠದ ಪ್ರಭುದೇವ ಶ್ರೀಗಿರೀಂದ್ರ ಕವಿ,ಕರಸ್ಥಳದ ನಾಗಿದೇವ, ಬತ್ತಲೇಶ್ವರ, ಚಂದ್ರಕವಿ ಇತ್ಯಾದಿ ಕವಿಗಳೂ ಶಾಸ್ತ್ರನೇತ್ರರೂ . ಈ ಪ್ರೌಢ ದೇವನ ಆಸ್ಥಾನದಲ್ಲಿಯೇ ವಿರಾಜಮಾನರಾದರು. ಇವನ ಕಾಲದಲ್ಲಿಯೇ ೧೦೧ ಮಂದಿ ವಿರಕ್ತರು ಪ್ರಸಿದ್ಧ ರಾದರೆಂದು ಐತಿಹ್ಯವುಂಟು. ಚಾಮರಸಾದಿಗಳೆಲ್ಲರೂ ವಿರಕ್ತರೆಂದೇ ತಿಳಿದುಬರುತ್ತದೆ

ಈ ಪ್ರೌಢದೇವನ ಕಾಲದಲ್ಲಿಪ್ರಭುದೇವ,ಬಸವೇಶ, ಚನ್ನಬಸವೇಶ ಮೊದಲಾದ ಪ್ರಮಥರ ಗ್ರಂಥಗಳು ಟೀಕೆ ಟಿಪ್ಪಣಿಯಿಂದ ಬಲಗೊಂಡುವಲ್ಲದೆ ಇವರ ಚರಿತ್ರೆಗಳೂ ಚಾಮರಸಾದಿ ಕವಿಗಳ ಕೈಗುಣದಿಂದ ಮೊದಲಿಗಿಂತಲೂ ಮಿಗಿಲಾಗಿ ಪ್ರಕಾಶಮಾನವಾದುವು. ಅಂತು ವೀರಶೈವ ಧರ್ಮಕ್ಕೆ ಈ ರಾಜನ ಕಾಲದಲ್ಲಿ ಲಭಿಸಿದ ಸಹಾಯವು ಸಾಮಾನ್ಯವಾದುದಲ್ಲ. ಲಿಂಗ ಧಾರಿಗಳೆನಿಸಿದ ಹಲವು ರಾಜರುಗಳಾಗಿದ್ದರೂ ಇತಿ ಹಾಸದಲ್ಲಿ ಸಾರ್ವಭೌಮನೊಬ್ಬನು ಲಿಂಗವಂತ ನಾದುದು, ಅದಕ್ಕೆ ಅಪಾರವಾದ ಆಶ್ರಯವನ್ನಿತ್ತುದು ಸಾಮಾನ್ಯ ವಿಚಾರವಲ್ಲ. ೧೫೮೦ ರಲ್ಲಿ ಸಿದ್ಧಾದೃಶ್ಯ ಕವಿಯೆಂಬುವನು ಪ್ರೌಢದೇವರಾಯನ ಹೆಸರನ್ನು ವೀರಶೈವ ಸಾಹಿತ್ಯದಲ್ಲಿ ಶಾಶ್ವತ ಮಾಡುವ ಸಲು ವಾಗಿ "ಪ್ರೌಢರಾಯನ ಕಾವ್ಯ" ಎಂಬ ಒಂದು ಷಟ್ಪದಿ ಗ್ರಂಥವನ್ನೇ ಬರೆದಿದ್ದಾನೆ. ಇದು ವೀರ ಶೈವರಲ್ಲಿ ಬಹಳವಾಗಿ ಬಳಕೆಯಲ್ಲಿರುವ ಗ್ರಂಥಗಳ ಲ್ಲೊಂದಾಗಿದೆ. ವಿಜಯನಗರದ ವಿರೂಪಾಕ್ಷರಾಯನ ಕಾಲದಲ್ಲಿಯೇ ಭಗವಾನ್ ತೋಂಟದಾರ್ಯರೂ ಅವರ ಶಿಷ್ಯ ವೃಂದವೂ ವಿಖ್ಯಾತವಾಗಿದೆ, ಪ್ರಖ್ಯಾತನಾದ

ಕೃಷ್ಣದೇವರಾಯನ ಆಳಿಕೆಯಲ್ಲಿ ಎಲ್ಲ ಮತದವರಿಗೂ ಸಮನಾಗಿ ಆಶ್ರಯ ಲಭಿಸಿತು. ಇವನ ಆಸ್ಥಾನದ ಕವಿಗಳಲ್ಲಿ ಆಂಧ್ರ ಕವಿಪುಂಗವನಾದ 'ಮಾದಯ್ಯ ಗಾರಿಮಲ್ಲನ್ನ'' ಎಂಬುವನು ಲಿಂಗವಂತನಾಗಿದ್ದನು. ವಿಜಯನಗರ ಸಾಮ್ರಾಜ್ಯದ ಕಡೆಗಾಲದಲ್ಲಿ ವಿದ್ಯಾನಗರಿಯಲ್ಲಿ ಓರ್ವ ಲಿಂಗವಂತ ಮಹಾ ಕವಿಯಾಗಿ ಹೋದನು. ಅವನೇ ವಿಜಯನಗರದ ಹಿರಿಯಮಠಾಧೀಶ ಸಿದ್ಧವೀರಗುರುವಿನಕರಕಂಜಸಂಜಾತ ವಿರೂಪಾಕ್ಷ ಪಂಡಿತ. ಈತನು ವೀರಶೈವರಲ್ಲಿಯೇ ಏಕೆ ಕನ್ನಡ ಸಾಹಿತ್ಯದಲ್ಲಿಯೇ ಪ್ರಸಿದ್ಧನಾದ ಕವಿ ಇವನ 'ಚನ್ನಬಸವ ಪುರಾಣ' ವೆಂಬ ಕಾವ್ಯವು ವಿದ್ವಜ್ಜನ ಮಾನ್ಯವಾಗಿದೆ. ಇವನು 'ನೂತನ ಪಂಡಿತಾರಾಧ್ಯ' ನೆಂಬ ಪ್ರಶಸ್ತಿಗೆ ಪಾತ್ರನಾಗಿರುವನು ಲೋಕವಂದ್ಯ ಸರ್ವಜ್ಞನೂ ಈ ರಾಯರ ಕಾಲದವನೇ ಎಂದು ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಸಮ್ರಾಟ ಕೃಷ್ಣದೇವರಾಯನಿಂದ ವೀರಶೈವ ಧರ್ಮಕ್ಕೆ ಆದ ಸಹಾಯವು ಇನ್ನೂ ಮಿಗಿಲಾದುದು ಹಿಂದಣ ಪ್ರೌಢದೇವರಾಯನು ತಾನು ವೀರಶೈವ ನಾದುದಲ್ಲದೆ ಲಕ್ಕಣಾಮಾತ್ಯ ಜಕ್ಕಣಾಚಾರ್ಯ ಮೊದಲಾದವರಿಗೆ ಉನ್ನತ ಸ್ಥಾನವನ್ನು ಕೊಟ್ಟುದೂ ಅಲ್ಲದೆ ಕರಸ್ಥಲದ ವೀರಣ್ಣೊಡೆಯನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದನೆಂದೂ ತಿಳಿದು ಬರುತ್ತದೆ ಕೃಷ್ಣದೇವರಾಯನೂ ಸ್ವಾದಿಯ ಅರಸರ ಪೂರ್ವಿಕನಾದ ಅರಸಪ್ಪನಾಯಕನೂ ಬಂಧುಗಳು. ಅಂದರೆ ಕೃಷ್ಣದೇವನ ಸೋದರಿಯ ಮಗನೇ ಅರಸಪ್ಪ ನಾಯಕ ಕೃಷ್ಣದೇವರಾಯನಿಗೆ ಮಕ್ಕಳಿಲ್ಲದಿರಲು ಈ ಅರಸಪ್ಪನನ್ನೇ ಮುಂದಿನ ವಿದ್ಯಾನಗರಿಯ ಸಿಂಹಾಸನಕ್ಕೆ ತರಬೇಕೆಂದು ಆಲೋಚಿಸಿದ್ದನೆಂದೂ ಮುಂದೆ ದೈವಾನುಗ್ರಹದಿಂದ ರಾಯನಿಗೆ ಮಕ್ಕಳಾದ್ದರಿಂದ ಆ ಯೋಚನೆಯು ಮಾನಸಿಕವಾಯಿತೆಂದೂ ತಿಳಿದು ಬರುತ್ತದೆ ಸ್ವಾದಿಯ ಅರಸರು ಲಿಂಗವಂತರೆಂಬುದೂ ವೀರಶೈವ ಧರ್ಮಕ್ಕೆ ಅಪಾರವಾಗಿ ಸಹಾಯ ಮಾಡಿದವರೆಂಬುದೂ ಪ್ರಸಿದ್ಧವಾದ ವಿಚಾರ.

ಕೆಳದಿಯ ಅರಸರೇ ವೀರಶೈವ ರಾಜರಲ್ಲಿ ಹೆಸರಾದವರು. ಬಹುಕಾಲ ಬಾಳಿದವರು. ಇವರು ಬಹುಕಾಲ ವಿಜಯನಗರದವರ ಮಾಂಡಲಿಕರಾಗಿದ್ದು ಆ ರಾಜ್ಯವು ನಾಶವಾದ ಮೇಲೆ ಸ್ವತಂತ್ರರಾದರು. ಈ ರಾಜ್ಯವನ್ನು ಚೌಡಪ್ಪ ನಾಯಕನು ಸ್ಥಾಪಿಸಿದರೂ ಅದು ಕೃಷ್ಣದೇವರಾಯನ ಅನುಗ್ರಹವೂ ಸಹಾಯವೂ ಇಲ್ಲದಿದ್ದರೆ ಉಳಿಯುತ್ತಿರಲಿಲ್ಲ. ಮುಂದೆ ಅದೊಂದು ರಾಜ್ಯವೆಂಬಂತೆ ಪರಿಗಣಿತವಾಗುತ್ತಲೂ ಇರಲಿಲ್ಲ. ಈ ರಾಜ್ಯವನ್ನು ಗಳಿಸಿದ ಕೀರ್ತಿಯಲ್ಲಿ ಬಹುಭಾಗವು ಕ್ಷತ್ರಿಯ ಚೂಡಾಮಣಿ ಕೃಷ್ಣದೇವರಾಯನಿಗೆ ಸಲ್ಲತಕ್ಕುದೆಂಬುದನ್ನು ಇತಿಹಾಸವಿದರೆಲ್ಲರೂ ಒಪ್ಪಬೇಕಾಗಿದೆ. ಈ ಕಾಲದಲ್ಲಿ ವಿದ್ಯಾನಗರಿಯಲ್ಲಿ ಲಿಂಗವಂತರ ಹಿರಿಯಮಠ ಕಲ್ಲಮಠ ಮೊದಲಾದ ಅಸಂಖ್ಯಾತ ಮಠಗಳು ವಿಖ್ಯಾತವಾಗಿದ್ದಂತೆ ಕಾಣುತ್ತದೆ

ಸ್ವಾದಿ, ಕೆಳದಿಯ ಅರಸರಿಗೇ ಅಲ್ಲದೆ ಬಿಜ್ಜವರ ಮೊದಲಾದ ಸಣ್ಣ ಪುಟ್ಟ ಲಿಂಗವಂತ ಅರಸರಿಗೂ ವಿಜಯನಗರವು ಆಶ್ರಯ ಸ್ಥಳವಾಗಿತ್ತು. ಈ ಪ್ರಕಾರ ಪ್ರೌಢ ದೇವರಾಯನಂತೆಯೇ ಕೃಷ್ಣದೇವರಾಯನಿಂದಲೂ ವೀರಶೈವ ಧರ್ಮಕ್ಕೆ ಅಪಾರವಾದ ಸಹಾಯವಾಯಿತೆಂದು ತಿಳಿದು ಬರುತ್ತದೆ.

ಕಲ್ಪವೃಕ್ಷದಂತೆ ಕೇಳಿದವರಿಗೆ ಬೇಡಿದಿತ್ತುವನ್ನೀವ ಆ ಮಹಾ ಸಾಮ್ರಾಜ್ಯವು ಹಿಂದೂ ಸಮಾಜಕ್ಕೂ ಕರ್ನಾಟಕ ಸಂಸ್ಕೃತಿಗೂ ಸಂರಕ್ಷಕವಾಗಿದ್ದಂತೆಯೇ ವೀರಶೈವ ಧರ್ಮಕ್ಕೂ ನೆರವಾಗಿತ್ತೆಂಬುದನ್ನು ಈ ಲೇಖನವನ್ನು ಓದುವುದರಿಂದ ವಾಚಕರು ಮನಗಾಣಬಹುದಾಗಿದೆ ಅಂಥ ರಾಜ ಮಹಾರಾಜರ ಆಶ್ರಯವಿಲ್ಲದಿದ್ದರೆ ಇಂದಿನ ವರೆಗೆ ವೀರಶೈವ ಸಮಾಜವು (ಈಗಿನಂತೆ) ಇರಲೂ ಸಾಧ್ಯವಾಗುತ್ತಿರಲಿಲ್ಲವೆಂಬುದನ್ನು ಎಲ್ಲರೂ ಒಪ್ಪಬೇಕಾಗುತ್ತದೆ.

ವೀರಶೈವರು ಭಾಷಾದೃಷ್ಟಿಯಿಂದಲೇ ಅಲ್ಲದೆ ಧಾರ್ಮಿಕ ದೃಷ್ಟಿಯಿಂದಲೂ ವಿಜಯನಗರಕ್ಕೆ ಕೃತಜ್ಞರಾಗಿರಬೇಕಾಗಿದೆ ಆ ಕೃತಜ್ಞತೆಯನ್ನು ಕಾರ್ಯತಃ ತೋರಿಸಲೂ ಬೇಕಾಗಿದೆ ಅಂತಹ ಕಾಲವೂ ಈಗ ಸನ್ನಿಹಿತವಾಗಿದೆ. ಅಖಿಲ ಕರ್ನಾಟಕವು ಎಂದೂ ಮರೆಯದ ಆ ಮಹಾ ಸಾಮ್ರಾಜ್ಯದ ಸ್ಮಾರಕೋತ್ಸವವನ್ನು ಆಚರಿಸಲಿಕ್ಕೆ ಮುಂದೆ ನುಗ್ಗುವಾಗ ವೀರಶೈವರು ಹಿಂಜಗ್ಗುವರೇ ? ಹೀಗಾದರೆ ಆಗ "ವೀರ'' ಎಂಬ ಬಿರುದು ಹಾಸ್ಯಾಸ್ಪದವಾಗುವುದಿಲ್ಲವೇ ? ಕೈಲಾಸದಲ್ಲಿ ಶಿವನ ಸಭೆಯನ್ನಲಂಕರಿಸಿರುವ ಪ್ರೌಢದೇವರಾಯ, ಲಕ್ಕಣಾಮಾತ್ಯ, ಜಕ್ಕಣಾಚಾರ್ಯ, ದಂಡನಾಯಕ ಬಸವಯ್ಯರು, ಹರಿಕವಿ ಚಾಮರಸ ಮೊದಲಾದ ಪ್ರಮಥರು ಕರ್ತವ್ಯಚ್ಯುತರಾದ ಲಿಂಗವಂತರನ್ನು ನೋಡಿ ಮರುಗುವುದಿಲ್ಲವೇ ?

(ಶಿವಂ ಭೂಯಾತ್)

# ಹಿಂದೂಸಂಸ್ಕೃತಿಯು ವಿಜಯನಗರರಾಜ್ಯಕ್ಕೆ ಋಣಿಯಾಗಿಲ್ಲವೇ?

( ಲೇಖಕರು:— **ಶ್ರೀ. ತಮ್ಮಣ್ಣ ಕುಬೇರಪ್ಪ ತುಕೋಲ** ಎಮ್. ಎ. ಎಲ್ಎಲ್. ಬಿ ವಿಜಯಪುರ. )

ವಿಜಯನಗರ ರಾಜ್ಯದ ಶ್ಯಾಸನಾಕಾಲವು ಹಿಂದೂ ಸಂಸ್ಕೃತಿಯ ಇತಿಹಾಸದಲ್ಲಿ ಮಹತ್ವದ್ದೆಂದು ಹೇಳಿದರಷ್ಟೇ ಸಾಲದು; ಅದೊಂದು ಸುವರ್ಣಾಕ್ಷರಗಳಿಂದ ಬರೆದಿಡತಕ್ಕ ಕಾಲ. ಹಿಂದೂ ಧಾರ್ಮಿಕ ಸಂಸ್ಕೃತಿಯು ಅಳಿಯದೆ ಉಳಿಯಲು, ಮತ್ತು ಹದಿನೇಳನೇ ಶತಮಾನದಲ್ಲಿ ಹಿಂದೂರಾಜ್ಯ ಪುನರ್ಘಟನೆಗೆ ಸಹಾಯ ಕರ್ತೃವಾದ ಈ ರಾಜ್ಯಕ್ಕೆ ಇಡೀ ಹಿಂದುಸ್ಥಾನವೇ ಋಣಿಯಾಗಿದೆಯೆಂದು ಅವ್ಯಾಹತವಾಗಿ ಸಾರುವ ಸಂಗತಿಯೆಂದರೆ ಇದೊಂದೇ.

ವ್ಯಕ್ತಿಯ ಅಥವಾ ರಾಷ್ಟ್ರದ ಉತ್ಸಾಹಝರಿಯು ತಡೆಯಿಲ್ಲದೆ ಹರಿದರೆ, ಏಳಿಗೆಗಳಾಗುವುದು ಅಶಕ್ಯ; ಝರಿಗೆ ಆಗಾಗ್ಗೆ ತಡೆಬಿದ್ದರೆ ಪ್ರವಾಹವು ಇಮ್ಮಡಿ ಭರದಿಂದ ಸಾಗುವುದು. ಮಧ್ಯದಲ್ಲಿ ಕುಗ್ಗಿದ ಓಘವು ಮುಂದೆ ಗರ್ಜನೆ ಮಾಡುತ್ತ ಖಡಖಡಾಟದಿಂದ ಓಡುತ್ತದೆ ಅದೊಂದು ಊರ್ಜಿತಾವಸ್ಥೆಯ ಕಾಲ ಹರಿಬಿಟ್ಟ ಹಾವಿನಂತೆ ಎಲ್ಲೆಲ್ಲಿ ಕಾರುಣ್ಯ ಸಂಚಾರ; ಜಯಭೇರಿಯನ್ನುಳಿದು ಬೇರೆ ನಿನಾದವು ಅಲ್ಲಿ ಕೇಳಬರುವುದಿಲ್ಲ. ಇಂಥ ಕಾಲವೊಂದು ಕರ್ನಾಟಕಕ್ಕೆ ಹದಿಮೂರನೇ ಶತಮಾನದ ಪಶ್ಚಿಮಾರ್ಧದಲ್ಲಿ ಮತ್ತು ಹದಿನಾಲ್ಕನೇ ಶತಮಾನದ ಪೂರ್ವಾರ್ಧದಲ್ಲಿ ಒದಗಿತು. ಚದುರಿ ಹೋದ ಕರ್ನಾಟಕಕ್ಕೆ ಆಗಬೇಕಾದದ್ದು ಒಕ್ಕಟ್ಟು; ಸ್ವಾಭಿಮಾನವು ನಡಿಸಿದಾಗ ಹೊಸ ಜೀವಕಳೆಯನ್ನು ತುಂಬಿ ಹುರಿದುಂಬಿಸುವ ಶಕ್ತಿಯು ಆವಶ್ಯವೆನಿಸಿತ್ತು. ಹೊಯ್ಸಳರು ದಕ್ಷಿಣದಲ್ಲಿ ಬಹುಭಾಗವನ್ನು ಆಕ್ರಮಿಸಿದ್ದರು ವರಂಗಲ್ಲದಲ್ಲಿ ಕಾಕತೀಯರು, ಅವರ ರಾಜ್ಯದ ದಕ್ಷಿಣಕ್ಕೆ ಚೋಳರು, ಮತ್ತು ಮಧುರೆಯಲ್ಲಿ ಪಾಂಡ್ಯರೂ ರಾಜ್ಯವಾಳುತ್ತಿದ್ದರು. ದೇವಗಿರಿಯಲ್ಲಿ ಆಳುತ್ತಿದ್ದ ಯಾದವರು ಮಾತ್ರ ರಾಜಕೀಯ ಮಹತ್ವಾಕಾಂಕ್ಷೆಯಿಂದ, ಹೊಯ್ಸಳರನ್ನು ಹೆಣ್ಮೆಟ್ಟಲು ಯತ್ನಿಸುತ್ತಿದ್ದರು. ಸುಮಾರು ಕ್ರಿ. ಶ. ೧೨೭೮-೭೯ ರಲ್ಲಿ ಕೃಷ್ಣದೇವನ ಮಗನಾದ ರಾಮಚಂದ್ರದೇವನು ಪಟ್ಟವೇರಿ ಈಗಿನ ಮುಂಬೈ ಇಲಾಖೆಯ ಮಧ್ಯ ಮತ್ತು ದಕ್ಷಿಣ ಭಾಗಗಳನ್ನು ಆಕ್ರಮಿಸಿದನು. ಆದರೆ ಹೊಯ್ಸಳರಂತೆಯಾದವರು ರಾಜ್ಯಸ್ವಾತಂತ್ರ್ಯತೆಯನ್ನಾಗಲೀ, ಹಿಂದೂ ಸಮಾಜಘಟನಾರಕ್ಷಣೆಗೆ ಬೇಕಾದ ಬಂಧನಗಳನ್ನಾಗಲೀ ಕಾಯ್ದುಕೊಳ್ಳಲು ಶಕ್ತರಾಗದಿದ್ದುದೇ, ಮಹಮ್ಮದೀಯರ ದಕ್ಷಿಣದೇಶಾಕ್ರಮಣಕ್ಕೆ ಎಡೆಗೊಟ್ಟಿತೆಂಬುದು ಇತಿಹಾಸ ಸಮ್ಮತವಾದ ಮಾತು

ಹಿಂದುಸ್ಥಾನದಲ್ಲಿ ಪರರಾಷ್ಟ್ರದವರು ಬಂದೊಡನೆಯೇ ಇದ್ದ ಸಂಸ್ಕೃತಿಯು ಪೋಷಣೆ ಗೈಯದೆ ಸ್ವಸಂಸ್ಕೃತಿಯ ಬೀಜ ಬಿತ್ತಿ ಬೆಳೆಸಲೆತ್ನಿಸುವುದೇ ಅವರ ಊರ್ಜಿತಾವಸ್ಥೆಗೂ, ಅಂತಿಮ ಅವನತಿಗೂ ಕಾರಣೀಭೂತವೆಂದು ಈ ಕಾಲದ ಇತಿಹಾಸದಿಂದ ಬೋಧವಾದಷ್ಟು ಇನ್ನಾವ ಸಂಗತಿಯಿಂದಲೂ ಇಲ್ಲೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಉತ್ತರ ಹಿಂದುಸ್ಥಾನದಲ್ಲಿ ಹತ್ತನೇ ಶತಮಾನದ ಕೊನೆಯಲ್ಲಿಯೇ ಮಹಮ್ಮದೀಯರ ಉಪಟಳಕ್ಕೆ ಆರಂಭವಾಯಿತು. ಕಾಬೂಲ ಕಂದಹಾರ ಮೊದಲಾದ ವಾಯವ್ಯಪ್ರಾಂತಗಳಿಂದ ನುಗ್ಗಿ ಹತ್ತಿದ ಸುಲ್ತಾನರ ಹೊಡತಗಳಿಂದ ಸಣ್ಣಪುಟ್ಟ ಹಿಂದೂರಾಜ್ಯಗಳು ಒಂದರ ಹಿಂದೊಂದು ಜರ್ಜರವಾಗಹತ್ತಿದವು. ಮೂರ್ತಿ ಪೂಜಕರಾದ ಹಿಂದೂರಾಜರನ್ನು ಸದೆಬಡೆಯುವುದು ಧರ್ಮಯುದ್ಧವೆಂದು ಬಗೆದ ಗಝನೀ ಮಹಮ್ಮದನು ಸುಮಾರು ಕ್ರಿ ಶ. ೯೯೭ ರಲ್ಲಿ ಪಟ್ಟವೇರಿದ ಮೇಲಂತೂ ಹಿಂದೂಧರ್ಮದ ಕೇಳುವ ಬಲಾಢ್ಯರು ಅಡಗಹತ್ತಿದರು ಹನ್ನೆರಡನೇ ಶತಮಾನದ ಆರಂಭವೆನ್ನುವಷ್ಟರಲ್ಲಿಯೇ ದಿಲ್ಲಿ, ಅಜಮೀರ, ಬಿಹಾರ ಮತ್ತು ಗುಜರಾತ ಪ್ರಾಂತಗಳಲ್ಲಿ ಮಾತ್ರ ಹಿಂದೂರಾಜ್ಯಗಳು ಉಳಿದಿದ್ದವು. ಆದರೆ ಕ್ರಿ. ಶ, ೧೨೦೭ ರಲ್ಲಿ ಕುತುಬುದ್ದೀನನು

ದಿಲ್ಲಿಯ ಸುಲ್ತಾನನಾಗಿ ಮುಹಮ್ಮದೀಯ ಕಲೆ ಮತ್ತು ಸಂಸ್ಕೃತಿಯ ಪೋಷಣೆಗೆ ಅನುವು ಮಾಡಿ ಕೊಟ್ಟನು.

ನರ್ಮದೆಯ ದಕ್ಷಿಣಕ್ಕೆ ಮುಸಲ್ಮಾನ ಸೈನ್ಯದ ಮೊಟ್ಟಮೊದಲನೆಯ ಮುತ್ತಿಗೆಯೆಂದರೆ ಅಲ್ಲಾಉದ್ದೀನ ಖಿಲ್ಜಿಯದು. ಅವನು ಕ್ರಿ. ಶ. ೧೨೯೪ ರಲ್ಲಿ ಯಾದವ ಅರಸನಾದ ರಾಮಚಂದ್ರದೇವನಿಂದ ಎಲಿಚಪುರವನ್ನು ಕಸಿದುಕೊಂಡು, ಅಪಾರ ದ್ರವ್ಯವನ್ನು ಸೆಳೆದು ಕೊಂಡು ದಿಲ್ಲಿಗೆ ಹೋದನು ನಂತರ ಪಟ್ಟವೇರಿದ ಕುತುಬುದ್ದೀನ ಮುಬಾರಕನು ದೇವಗಿರಿ ಯಾದವ ರಾಜನಾದ ಹರಪಾಲನನ್ನು ಸೋಲಿಸಿ, ಜೀವಂತ ಅವನ ಚರ್ಮವನ್ನು ಸುಲಿಸಿದನು. ೧೩೧೦ ರಲ್ಲಿ ಮಲಿಕಕಾಫರನು ಹೊಯ್ಸಳರ ದ್ವಾರಸಮುದ್ರವನ್ನು ಕೈವಶ ಮಾಡಿಕೊಂಡನು.

ಈ ರೀತಿ ಉತ್ತರಹಿಂದುಸ್ತಾನವನ್ನು ಅಧೀನದಲ್ಲಿ ತೆಗೆದು ಕೊಂಡು, ಪ್ರಭುತ್ವವನ್ನು ಬೆಳೆಸ ಹತ್ತಿದ ಮುಸಲ್ಮಾನರ ಪೆಟ್ಟಿಗೆ ಹಿಂದೂರಾಜರು ಜರ್ಜರಿತರಾದರು. ಯಾದವ ಅರಸನಾದ ಹರಪಾಲನನ್ನು ಜೀವಂತ ಸುಲಿಸಿದಸುದ್ದಿ ತಿಳಿದ ಮೇಲಂತೂಹಾಹಾಕಾರವೆದ್ದಿತು. ಮಧುರೆಯನ್ನು ನೆಲಸಮನ ಮಾಡಿದ್ದು ಮುಹಮ್ಮದೀಯರ ಉಪಟಳದ ಸೀಮೆಯ ಮೇರೆಯನ್ನು ಮೀರಿದಂತಾಯಿತು. ಕ್ರಿ ಶ, ೧೩೨೫ರಲ್ಲಿ ಪಟ್ಟವೇರಿ, ದಿಲ್ಲಿಯಿಂದ ದೌಲತಾಬಾದಕ್ಕೆ ( ದೇವಗಿರಿ ) ಹೊದ ಮಹಮ್ಮದ ತಘಲಖನ ಐತಿಹಾಸಿಕ ಕಾರ್ಯವನ್ನು ಇಬನ್ ಬಟೂಟನಂಥ ಪಾಶ್ಚಿಮಾತ್ಯ ಪ್ರವಾಸಿಕರು ಹೃದಯವೇದನೆಯಾಗುವಂತೆ ವರ್ಣಿಸಿದ್ದಾರೆ ಆ ಹಿಂಸೆಯ ಕಲ್ಪನೆ ಬರುತ್ತಲೇ ಕಾರುಣ್ಯವುಳ್ಳವನು ಕರುಗಲೇಬೇಕು ಹಿಂದುಗಳಿಗೆ ಒಂದುಕಡೆ ಪ್ರಾಣ ಸಂಕಟ, ಇನ್ನೊಂದು ಕಡೆಗೆ ಧರ್ಮಸಂಕಟ. ಮೂರ್ತಿಪೂಜಕರಾದ ಹಿಂದು, ಜೈನ, ಬುದ್ಧ ಮತದವರು ಯಾಯಿಗಳೆಲ್ಲರನ್ನೂ ತಿರಸ್ಕರಿಸುತ್ತಿದ್ದ ಮುಸಲ್ಮಾನ ಅರಸರು ಉಂಟು ಮಾಡಿದ ಯಾತನೆಗಳಿಗೆ ಎಣೆ ಇರಲಿಲ್ಲ. ಚಿಕ್ಕ ಪುಟ್ಟ ಹಿಂದೂ ಅರಸುಗಳೆಷ್ಟೋ ಮುಹಮ್ಮದೀಯರ ವೇಷದಲ್ಲಿ ಹೋಗಬೇಕಾಗುತ್ತಿತ್ತು. ಮುಸಲ್ಮಾನರ ಸಂಖ್ಯೆಯು ಪ್ರತಿದಿವಸ ಬೆಳೆಯುತ್ತ ನಡೆದು, ಹಿಂದುಸ್ತಾನದ ಎಲ್ಲಭಾಗಗಳಲ್ಲಿಯೂ ಹಬ್ಬುತ್ತ ನಡೆದಿತ್ತು. ಹಿಂದುಗಳಾದರೋ, ತಮ್ಮ ಅಂತಃಕಲಹಗಳಿಂದ ಸ್ವಾಭಾವಿಕವಾದ ಉದಾಸೀನತೆಯಿಂದ, ಪ್ರತಿಸ್ಪರ್ಧಿಗಳು ಬಲವಂತರಾದರೂ ಲಕ್ಷಿಸಲಿಲ್ಲ ಅವರೆ ದಬ್ಬಾಳಿಕೆಯಿಂದ ಕಂದಿದ ಬೆಂಕಿಗೆ ಬೂದಿ ಮುಚ್ಚಿದರೂ ಬಿಸಿ ಹೋಗಲಿಲ್ಲ; ಧರ್ಮಾಭಿಮಾನವೆಂಬ ಒಡವಾಗ್ನಿಯು ಹಿಂದುಗಳ ಒಡಲೊಳಗೇ ಉರಿಯಹತ್ತಿತ್ತು. ಮುಹಮ್ಮದೀಯರನ್ನು ಉನ್ನತಿಗೊಯ್ದ ಕಾರಣಗಳೇ ಅವರ ಅವನತಿಯು ಮೆಟ್ಟಲುಗಳಾದವು.

ಇಂಥ ಕಾಲದಲ್ಲಿ ದಕ್ಷಿಣ ಹಿಂದುಸ್ತಾನಕ್ಕೆ ಒಬ್ಬ ವೀರನ ಕೊರತೆ ಮಾತ್ರ ಇತ್ತು ಚದರಿ ಹೋದ ರಾಜ್ಯಗಳನ್ನು ಒತ್ತಟ್ಟಿಗೆ ಕೂಡಿಸಿ, ಹೊಸತೊಂದು ಬಲವಾದ ಹಿಂದೂರಾಜ್ಯವನ್ನು ನಿರ್ಮಿಸುವುದು ಅವಶ್ಯವಾಗಿತ್ತು. ರಾಜಕಾರಣಕ್ಕೂ ಮತ್ತು ಧರ್ಮಕ್ಕೂ ಇದ್ದ ನಿಕಟಸಂಬಂಧವು ಈಗ ಒಡೆದು ಕಂಡಷ್ಟು, ಬೇರಾವಾಗಲೂ ಕಾಣಲಿಲ್ಲವೆಂದರೂ ಸಲ್ಲುವುದು. ಉತ್ತರದಲ್ಲಿಯಾದಂತೆ ದಕ್ಷಿಣದಲ್ಲಿ ಮಸೀದೆಗಳು ಬೆಳೆಯಹತ್ತಿದವು. ಪ್ರಾಣಿಹಿಂಸೆಯೊಂದಿಗೆ ಮಾನವ ಹಿಂಸೆಯೂ ಹೆಚ್ಚಾಯಿತು. ರಾಷ್ಟ್ರಕೂಟ, ಗಂಗ ಮುಂತಾದ ಹಿಂದೂ ಅರಸರ ಕಾಲಗಳಲ್ಲಿ ಸಾಹಿತ್ಯ ಕಲೆಗಳಿಗೆ ದೊರೆತ ಪ್ರೋತ್ಸಾಹನವು ಸಿಗದಂತಾಯಿತು ಇದೆಲ್ಲವೂ ರಾಜಕೀಯ ಅಬಲತೆಯಿಂದಲೇ ಎಂದು ಹಿಂದುಗಳಿಗೆ ತೀವ್ರ ಹೊಳೆಯ ಹತ್ತಿದುದು ಸುದೈವ.

ವಿಜಯನಗರ ರಾಜ್ಯವು ಸ್ಥಾಪಿತವಾದುದು ಇಂಥ ಸಮಯದಲ್ಲಿ. ಸಂಗಮನೆಂಬುವವರ ಮಕ್ಕಳಾದ ಹರಿಹರ, ಕಂಪ, ಬುಕ್ಕ, ಮಾರಪ, ಮತ್ತು ಮುದ್ದಪ ಎಂಬೈವರೂ ಈ ಕಾರ್ಯದಲ್ಲಿ ಜಾಗ್ರತರಾಗಿದ್ದರೆಂದು ಆ ಕಾಲದ ಉಲ್ಲೇಖಗಳಿಂದ ಊಹಿಸಬಹುದು. ಆದರೆ ಹರಿಹರ ಮತ್ತು ಬುಕ್ಕಇವರೇ ವಿಜಯನಗರದ ಮೂಲ ಅರಸರೆಂದು ಎಲ್ಲ ಇತಿಹಾಸಕಾರರು ಒಪ್ಪಿದ್ದಾರೆ ಇತಿಹಾಸವನ್ನು ಬಿಟ್ಟರೆದಂತಕಥೆಗಳಿಗೇನೂ ಕಡಿಮೆಯಿಲ್ಲ ಇವೆಲ್ಲವುಗಳ ಸಾರಾಂಶವಿಷ್ಟೇ: ಹರಿಹರನು ವಿದ್ಯಾರಣ್ಯರ ಸಹಾಯವನ್ನು ಪಡೆದುದು ದೈವೇಚ್ಛೆಯು ಆನೆಗೊಂದಿಯಲ್ಲಿ ಆಳುತ್ತಿದ್ದ ಜಂಬುಕೇಶ್ವರನು ಶೌರ್ಯದಿಂದ ಮುಹಮ್ಮದೀಯ ವೈರಿಯೊಡನೆ ಕೆಲಕಾಲ ಹೋರಾಡಿದನಂತರ, ಬಹಿಉದ್ದೀನನು ಬಂದು ಅವನನ್ನು ಆಶ್ರಯಿಸಲು, ಮುಸಲ್ಮಾನರಿಗೂ ಅವನಿಗೂ ಯುದ್ಧವಾಗಿ, ಜಂಬುಕೇಶ್ವರನು ಅಪಜಯಹೊಂದಿದನು. ಜಂಬುಕೇಶ್ವರನ ಮರಣದ ನಂತರ, ಅವನ ಮಂತ್ರಿಯಾಗಿದ್ದ ಹರಿಹರನನ್ನೇ

ಸುಲ್ತಾನನು ಪಟ್ಟಕ್ಕೆ ಕೂಡ್ರಿಸಿದನೆಂದು ಇಟಾಲಿಯನ್ ಪ್ರವಾಸಿಕರಾದ ಇಬನ್‌ಬಟೂಟ, ನ್ಯೂನಿಜ ಇವರು ಬರೆದಿದ್ದಾರೆ ಬೇರೆ ಕೆಲವರು ೧೩೩೪ ರಲ್ಲಿ ಜಂಬುಕೇಶ್ವರನು ಮರಣ ಹೊಂದಿದನೆಂತಲೂ, ವಿದ್ಯಾರಣ್ಯರ ಅನುಗ್ರಹದಿಂದ ೧೩೪೬ ರಲ್ಲಿ ಹರಿಹರನು ಪಟ್ಟಾಧಿಷ್ಠಿತನಾದನೆಂತಲೂ ಅಭಿಪ್ರಾಯಪಟ್ಟಿದ್ದಾರೆ

ಹರಿಹರನು ಅಧಿಕಾರ ಸಂಪನ್ನನಾಗುತನೆಯೇ ಹಿಂದೂರಾಜರಲ್ಲಿ ಹೊಸ ಚೈತನ್ಯ ಉಂಟಾಯಿತು. ಹೊಯ್ಸಳರ ಅರಸನಾದ ಬಲ್ಲಾಳನು ತನ್ನ ಮಗನನ್ನು ಕೊಟ್ಟು, ಇವನು ಶರೀರಸವ್ಯಂಧವನ್ನು ಬೆಳೆಸಿದ ಮೇಲಂತೂ, ದಕ್ಷಿಣ ದೇಶದ ಹಿಂದೂರಾಜರಲ್ಲಿ ಒಕ್ಕಟ್ಟಿನ ಬೀಜವನ್ನೂರಿದಂತಾಯಿತು. ವರಂಗಲ್ಲಿನ ಪ್ರತಾಪದೇವರ ಮಗನಾದ ಕೃಷ್ಣದೇವನು ಬಲ್ಲಾಳದೇವನೊಡನೆ ಸಂಧಾನ ನಡೆಸಿ, ಮುಸಲ್ಮಾನರನ್ನು ಹೊಡೆದೋಡಿಸುವ ವಿಚಾರದಲ್ಲಿ ಸಹಾಯವನ್ನಿತ್ತನು. ದ್ವಾರಸಮುದ್ರದ ಮಂಡಳೇಶ್ವರರೂ ಸುಮ್ಮನೆ ಕೂಡ್ರಲಿಲ್ಲ. ಧರ್ಮ ರಕ್ಷಣೆಗಾಗಿ ಕಂಕಣಬದ್ಧರಾದ ಅರಸರು ಒಂದಾಗಿ ತುಸು ದಿವಸಗಳಲ್ಲಿಯೇ ಮಹಮ್ಮದ ತಘಲಖನನ್ನು ಓಡಿಸಿದರು ದಕ್ಷಿಣಹಿಂದುಸ್ತಾನದಲ್ಲಿ ದೌಲತಾಬಾದದ ಹೊರತು, ಅವನಿಗೆ ಬೇರಾವ ಪ್ರಾಂತವೂ ಉಳಿಯದಂತೆ ಮಾಡಿದರು.

ರಾಜಕಾರಣ ಮತ್ತು ಧರ್ಮ ಇವುಗಳ ಸಂಯೋಜನೆಯಾದ ಉದಾಹರಣೆಗಳು ಹಿಂದುಸ್ತಾನದ ಇತಿಹಾಸದಲ್ಲಿ ಅನೇಕ ಇವೆ ನಾಲ್ಕನೇ ಶತಮಾನದಲ್ಲಿ ಜೈನಶ್ರವಣರು ವನಗಳಲ್ಲಿ ವಾಸಮಾಡುತ್ತಿದ್ದರೆಂತಲೂ, ಅರಸನಾದವನು ಮಂತ್ರಾಲೋಚನೆಗಾಗಿ ನೇಲಿಂದ ಮೇಲೆ ಅವರೆಡೆಗೆ ಹೋಗುತ್ತಿದ್ದನೆಂತಲೂ ಮೆಗ್ಯಾಸ್ಥನೀಸನು ಬರೆದಿದ್ದಾನೆ ಅಶೋಕನು ಕೂಡ ಬೌದ್ಧಯತಿಗಳಿಂದ ಯೋಜನೆಗಳನ್ನು ಪಡೆಯುತ್ತಿದ್ದನೆಂದು ರಾಜಶಾಸನಗಳಿಂದ ವಿದಿತವಾಗುತ್ತದೆ ಎರಡನೇ ಶತಮಾನದಲ್ಲಿಗಂಗರಾಜ್ಯವನ್ನು ಸ್ಥಾಪಿಸಲು ಮಾಘನಂದಿಯು ಮಾಡಿದ ಯತ್ನವು ಇತಿಹಾಸ ಪ್ರಸಿದ್ಧವಾದುದು. ಹನ್ನೊಂದನೆಯ ಶತಮಾನದಲ್ಲಿ ಹೊಯ್ಸಳರಿಗೆ ಜೈನ ಯತಿಯೊಬ್ಬನು ಸಹಾಯಕನಾಗಿದ್ದನೆಂಬ ಮಾತು ದಿಟವಾದುದು ಹನ್ನೆರಡನೆಯ ಶತಮಾನದಲ್ಲಿ ವಿಷ್ಣುವರ್ಧನನಿಗೆ ರಾಮಾನುಜನು ಸಹಾಯಕನಾಗಿದ್ದನು ಅದರಂತೆಯೇ ವಿಜಯನಗರ ರಾಜ್ಯವಾದರೂ ವಿದ್ಯಾರಣ್ಯರ ಅನುಗ್ರಹದಿಂದ ಸ್ಥಾಪಿತವಾಯಿತು

ರಾಜಕಾರಣ ಮತ್ತು ಧರ್ಮ ತತ್ವಗಳ ಸಂವರ್ಧನದಿಂದ ಧಾರ್ಮಿಕ ಕಲ್ಪನೆಗಳೇ ಜನಜೀವನದ ರಹಸ್ಯವಾದುವು ಮುಖ್ಯ ಸಾಂಸ್ಕೃತಿಕ ಆದರ್ಶವೆಂದು ಹೇಳಬಹುದು. ರಾಜಕಾರಣದಲ್ಲಿ ಕ್ರೌರ್ಯವು ಶೌರ್ಯದ ಪರಿಹಾಸವೆಂದೂ, ಸರ್ವಪ್ರಜೆಗಳ ಸರಿಸಮಾನತೆಯಿಲ್ಲದ ಅರಸೊತ್ತಿಗೆಯು ಅನನ್ವರ್ಥಕವೆಂದೂ, ವಿಚಾರ ಮತ್ತು ಆಚಾರಗಳ ಸಮರಸತೆಯೇ ಉತ್ಕರ್ಷದ ಬೀಜವೆಂದೂ ಉಪದೇಶ ಮಾಡಿದ ವಿದ್ಯಾರಣ್ಯರ ಮಹತ್ವವು ಅರ್ಥಾತ್ ಈ ಸಂಸ್ಕೃತಿಗೆ ಜೀವನಕೊಟ್ಟ "ಕನ್ನಡ ರಾಜ್ಯ" ದ ಮಹತ್ವವು ಸಹಜವಾಗಿ ಹೊಳೆಯುತ್ತದೆ. ವಿದ್ಯಾರಣ್ಯರು ರಾಜ್ಯವೈಭವವನ್ನು ಅನುಭವಿಸಲು ಗುರುತ್ವವನ್ನು ಕೈಕೊಂಡವರಲ್ಲ, ಅವರೆ 'ಧರ್ಮಾಲಯದ ಹೊಂಗಳಸವು ಕಳಚು' ತಿದ್ದಾಗ ಕನ್ನಡ ಧ್ವಜಗಳು ಅದಿರುಹತ್ತಿದಾಗ, ಮೂಗು ಹಿಡಿದುಕೊಂಡು ಕೂಡ್ರುವದು ಅವರಿಗೆ ಯೋಗ್ಯವೆನಿಸಲಲ್ಲ ಸ್ವತಂತ್ರ ರಾಜ್ಯಸ್ಥಾಪನೆಗೆ ಬೇಕಾದ ಧೀರ ಮಂತ್ರವನ್ನು ಉಸುರಿದರು

' ಏಳು ಸಾಯಣ ಕಟ್ಟು ಗ್ರಂಥನ ।
ನೇಳು ಪಂಪಾ ಕ್ಷೇತ್ರಕೆ ॥
ಗಾಳಿ ಗಂಟುಗಳೋದಿದೇತಕೆ ।
ಏಳು ಈ ಕ್ಷಣ ಮಾತ್ರಕೆ ||
ಲಕ್ಷ ಶಾಸ್ತ್ರಗಳೇಕೆ ಸಾಯಣ ।
ಲಕ್ಷ ಸೂತ್ರಗಳೇತಕೆ॥
ಮೋಕ್ಷ ಸಂಪಾದನಕೆ ನಿಶ್ಚಯ ।
ಮೋಕ್ಷ ಕೇಳು ಸ್ವತಂತ್ರತೆ ॥ ೩ ||
ಪಾರತಂತ್ರ್ಯವು ಮೋಕ್ಷ ಸುಖಕಪ ।
ಕಾರಿಯದುವೆಯಧೋಗತಿ॥
ಪಾರತಂತ್ರ್ಯ ಸ್ಥಿತಿಯ ಕುಲಸಂ ।
ಹಾರವೇ ಸುತಪಃಕೃತಿ ॥ ೪ ॥
ಸ್ವತ್ವದರ್ಥವ ತಿಳಿಯದಲೆ ಬರೆ ।
ತತ್ವದರ್ಥಗಳೇತಕ ॥
ಸ್ವತ್ವವಂ ತಿಳಿಸದಲೆ ಲೋಕಕೆ ॥
ತತ್ವಸಾಧನಗಳೇತಕ್ಕೆ ॥ ೫ ॥
ಸ್ವತ್ವವಂ ಪ್ರೀತಿಸದೆ ಬರಿದೆ ।
ತತ್ವದರ್ಶನ ವೇತಕ್ಕೆ ॥

ಸ್ವತ್ವವನ್ನಾಚರಿಸದೆ ನಿ।
ಸ್ಸತ್ವ ಜೀವನ ವೇತಕ್ಕೆ ॥ ೬ ॥

**ಶಾಂತಕವಿ ( ವಿದ್ಯಾರಣ್ಯ ಚರಿತ್ರ )**

ಸ್ವಧರ್ಮಕ್ಕಾಗಿ, ಸ್ವದೇಶಕ್ಕಾಗಿ, ಸ್ವಾಭಿಮಾನದ ಚೇತನವನ್ನು ತಂದುಕೊಟ್ಟ ಮಹಾಶಕ್ತಿ ಇವರದು. ಸಂಕಟ ಬಂದಾಗ ಬೇಕಾದುದು ಕ್ಷಾತ್ರತೇಜ; ಹರಿ ಗೋವಿಂದ! ಎಂದು ಕೈಮುಚ್ಚಿಕೊಂಡು ಕೂಡ್ರು ವುದು ಹೇಡಿತನ.

ಹಿಂದೂ ನಿವಾಸಿಗಳು ದೈವೋಪಾಸಕರು; ಕರ್ತೃ ತ್ವಶಕ್ತಿ ಅವರಲ್ಲಿಲ್ಲ-ಎಂದು ಕೂಗುವವರಿಗೆ, ಉಜ್ವಲ ವಾದ ಕಾರಣೀ ಪುರುಷನ ದೃಷ್ಟಾಂತವು ಇಲ್ಲಿದೆ ಸನ್ಯಾಸದಲ್ಲಿ ಪರಮಾರ್ಥ ಸಾಧನೆಯೇ ಮುಖ್ಯವಾಗಿ ದ್ದರೂ, ರಾಷ್ಟ್ರದ ಸ್ವತಂತ್ರತೆಗೆ ಭಂಗ ಬಂದಾಗ ಪರಾರ್ಥ ಸಾಧನೆಗೆ ಎದೆಗೊಡಲಿಕ್ಕೆ ಬೇಕು ಎಂಬ ತತ್ವವು, ರಾಜಕಾರ್ಯಧುರಂಧರರ ವಿಚಾರ, ತೇಜೋವಿಹೀನ ರಾಷ್ಟ್ರದಲ್ಲಿ ಕೇಳಬರುವಂತಹದಲ್ಲ. ಪರಾರ್ಥಕ್ಕಾಗಿ ಸ್ವಸುಖವನ್ನು ತ್ಯಜಿಸಿದ ವಿದ್ಯಾರಣ್ಯ ರೆತ್ತ! ಮತ್ತು ಧರ್ಮಗುರುಗಳೆಂದು ಧರ್ಮದ ಹೆಸರಿ ನಿಂದ ನೀಚಕಾರ್ಯಗಳಿಗೆ ಪ್ರತಿದಿವಸವೂ ಪ್ರವೃತ್ತ ರಾಗುತ್ತಿರುವ ಈಗಿನ ಗುರುಗಳೆತ್ತ! ಧರ್ಮಜಾಗ್ರ ತೆಯು ಈಗಿನವರ ಗುರಿಯಲ್ಲ, ಇವರಿಗೆ ಬೇಕಾದುದು ಧನಸಂಚಯ, ಐಹಿಕ ಭೋಗ. ಪಾರಮಾರ್ಥದ ಗಾಳಿ ಸೋಂಕದಿದ್ದಷ್ಟು ಶ್ರೇಯವೆಂದು ಕಲ್ಪಿಸುವ ಜಗದ್ಗುರು(?) ಗಳಿಂದ ಆಗಬೇಕಾದ ಕಾರ್ಯವೇನು? ತತ್ವವಿವೇಚನೆ ಮಾಡಬೇಕೆಂದರೆ ಸಾಕಷ್ಟು ಜ್ಞಾನ ವಿಲ್ಲ; ಸ್ವಧರ್ಮವನ್ನು ಎತ್ತಿ ಹಿಡಿಯಲು ಆತ್ಮವಿಶ್ವಾಸ ವಿಲ್ಲ; ವಿಮರ್ಶಕ ಬುದ್ಧಿ ಇಲ್ಲ ಆದರೆ ವಿದ್ಯಾರಣ್ಯರ ಸ್ಥಿತಿಯೇ ಬೇರೆ. ಸಂಸ್ಕೃತದಲ್ಲಿ ಪಾರಂಗತರು, ವೇದಗಳಲ್ಲಿ ನಿಷ್ಣಾತರು, ಸಾಯಣಾಚಾರ್ಯರಂಥ ಮೇಧಾವಿಗಳು ಬಂಧುಗಳು. ಹರಿಹರ ಬುಕ್ಕ ನೃಪತಿಗಳ ಪ್ರೋತ್ಸಾಹನ; ಅಂದ ಮೇಲೆ ಸಾಹಿತ್ಯ ಸೇವೆಗೆ ಮಿತಿಯುಂಟೇ ? "ಸರ್ವದರ್ಶನಸಂಗ್ರಹ" " ಪರಾಶರಸ್ಮೃತಿ ವ್ಯಾಖ್ಯಾನ " " ಮನುಸ್ಮೃತಿ ವ್ಯಾಖ್ಯಾನ," "ವೇದಗಳ ಭಾಷ್ಯಗಳು" "ವ್ಯವಹಾರ ಮಾಧವ" ಇತ್ಯಾದಿ ಗ್ರಂಥಗಳ ರಾಶಿಯನ್ನೇ ನಿರ್ಮಾಣ ಮಾಡಿ ಧಾರ್ಮಿಕ ಸಾಹಿತ್ಯವನ್ನು ಹೆಚ್ಚಿಸಿದ ಶ್ರೇಯವು **ಕರ್ನಾಟಕಸಿಂಹಾಸನ ಸ್ಥಾಪನಾಚಾರ್ಯರಿಗೇ.**

ಧಾರ್ಮಿಕ ಸಾಹಿತ್ಯಕ್ಕೆ ದೊರೆತ ಪ್ರೋತ್ಸಾಹವು ಕನ್ನಡ ಭಾಷಾ ಸಾಹಿತ್ಯಕ್ಕೂ ದೊರೆಯಿತು. ವಿಜಯ ನಗರದ ಅರಸರು ಉಳಿದ ದೊರೆಗಳಂತೆ ಅನೇಕ ಕವಿಗಳಿಗೆ ಆಶ್ರಯವನ್ನಿತ್ತು ಸಾಹಿತ್ಯಸೇವೆಯನ್ನು ಮಾಡಿದ್ದಾರೆ. ಹರಿಹರನ ಆಳಿಕೆಯಲ್ಲಿಯೇ ಮೊದಲ ನೆಯ ಮಂಗರಸನೆಂಬ ಜೈನಕವಿಯು ' ಖಗೇಂದ್ರ ಮಣಿದರ್ಪಣ" ವೆಂಬ ವೈದ್ಯಗ್ರಂಥವನ್ನುರಚಿಸಿದನು " ಧರ್ಮನಾಥ ಪುರಾಣ " ವನ್ನು ಬರೆದ ಮಧುರನೂ ಇದೇ ಕಾಲದವನು. ಎರಡನೇ ದೇವರಾಜನ ಮಂತ್ರಿ ಯಾದ ಲಕ್ಕಣದಂಡೇಶನು " ಶಿವತತ್ವ ಚಿಂತಾ ಮಣಿ " ಯೆಂಬ ಗ್ರಂಥದಲ್ಲಿ ಶಿವಲೀಲೆ, ಷಟ್ಸ್ಥಲ ಮುಂತಾದ ಶೈವಧರ್ಮ ವಿಚಾರಗಳನ್ನು ಪ್ರತಿಪಾದಿಸಿ ದನು. ಚಾಮರಸನ " ಪ್ರಭುಲಿಂಗಲೀಲೆ " ಮಗ್ಗೆಯ ಮಾಯಿದೇವನ " ಶತಕತ್ರಯ" ಕುಮಾರ ವ್ಯಾಸನ " ಭಾರತ " ಮುಂತಾದ ಉದ್ಗ್ರಂಥಗಳು ಯಾವ ಸಾಹಿತ್ಯಕ್ಕೂ ಯೋಗ್ಯತೆಯನ್ನು ತರು ವಂಥವು. ತಿಮ್ಮಣಕವಿ, ಚಾಟುಲ ವಿಠ್ಠಲನಾಥ, ತೋಂಟದ ಸಿದ್ಧಲಿಂಗ ಇತ್ಯಾದಿ ಕವಿಗಳು ಆಗಿ ಹೋದ ಕಾಲದ ವಾಙ್ಮಯ ವೈಖರಿಯನ್ನು ಸ್ವಲ್ಪದರಲ್ಲಿ ಬರೆಯಲು ಸಾಧ್ಯವಿಲ್ಲ. ವಿಜಯನಗರದ ಅರಸರು ಬೇರೆ ಕನ್ನಡ ಅರಸರಂತೆ ಜೈನ ಬ್ರಾಹ್ಮಣ ಶೈವ ಕವಿ ಗಳಿಗೆ ಆಶ್ರಯವನ್ನಿತ್ತರು. ಸಾಹಿತ್ಯಸೇವೆಯಲ್ಲಿ ಜಾತಿಭೇದವಿಲ್ಲ; ದೇಶ ಕೋಶಗಳ ವಿಭೇದಗಳಿಲ್ಲ. ಸಾಹಿತಿಗಳೆಲ್ಲರೂ ಸರಸತಿಯ ಉಪಾಸಕರು.

ಆಗಿನ ಸಂಸ್ಕೃತಿಯು ಆದರ್ಶಗಳು ಕಂಡು ಬರು ವುದು ಸಾಹಿತ್ಯದಲ್ಲಷ್ಟೇ ಅಲ್ಲ ಶಿಲ್ಪಕಲೆಯೂ ವೈಭವ ಶಿಖರಕ್ಕೆ ಮುಟ್ಟಿತ್ತೆಂಬುದಕ್ಕೆ ಈಗಿನ ಹಾಳು ಹಂಪೆಯೇ ಸಾಕ್ಷಿ. ಮೂರ್ತಿಗಳ ಕೆತ್ತಿಗೆ, ನಾನಾಜಾತಿಯ ಪ್ರಾಣಿಗಳನ್ನು ಕೊರೆದ ಸೊಗಸು, ಗೋಪುರಗಳ ವೈಚಿತ್ರ್ಯ, ನಕ್ಷೆಗಳ ಚಾತುರ್ಯ, ದೇವಾಲಯಗಳ ಭವ್ಯತೆ—ಇವೆಲ್ಲ, ಆ ಶಿಲ್ಪಿಗಳಲ್ಲಿದ್ದ ಬುದ್ಧಿಚಾತುರ್ಯ ಸೌಂದರ್ಯ ಲಾಲಸೆ, ಕಲೋಪಾಸನೆ, ಕಲ್ಪನಾ ಸಾಮರ್ಥ್ಯ, ರಚನಾಶಕ್ತಿ ಮುಂತಾದ ಗುಣಗಳ ದರ್ಶಕ ಗಳಾಗಿವೆ. ನೀಚರಲ್ಲಿ ಉಚ್ಚ ವಿಚಾರಗಳ ಮೊಳಕೆ ಯೊಡೆಯುವುದು ಅಶಕ್ಯವಿದ್ದಷ್ಟೇ, ಸಾಮಾನ್ಯ ರಾಷ್ಟ್ರ ದಲ್ಲಿ ಅಸಾಮಾನ್ಯ ಕಲ್ಪನೆಗಳು ಉದ್ಭವಿಸಲಾರವು. ತೇಜೋಪುರುಷರ ನೆರೆಯಲ್ಲಿಯೇ ತೇಜಸ್ಸಿನ ಹೊಂ ಬೆಳಕು ಕನ್ನಡಿಗರ ಆ ರಾಜ್ಯವೆಂದರೆ ಸಾಮಾನ್ಯ

ರಾಜ್ಯವಾಗಿರಲಿಲ್ಲ ಕೇವಲ ಭೋಗಕ್ಕಾಗಿ ಸ್ಥಾಪಿತವಾದ ರಾಜ್ಯವದಲ್ಲ ಧರ್ಮ ಜಾಗ್ರತೆ ರಕ್ಷಣಗಳಿಗಾಗಿ ಜನ್ಮವೆತ್ತ ರಾಜಮನೆತನವದು ಅವರ ಕಲ್ಪನೆ ಶೌರ್ಯ ಸೇವೆಗಳೂ ಅಷ್ಟೇ ಅಗವ್ಯಾವವುಗಳು ಗಂಗಾದೇವಿಯು "ಮಧುರಾವಿಜಯ" ದಲ್ಲಿ ಬರದ ವಿಜಯನಗರದ ವರ್ಣನೆಯನ್ನು ಓದಿದರೆ ಆ ನಗರದ ಸೊಬಗಿನ ಕಲ್ಪನೆಯೂ, ಆಗಿನ ಕಲೆಯ ವೈಭವವೂ ಹಗುರಾಗಿ ಬಿಂಬಿಸುವುದು ಆ ನಗರದಲ್ಲಿ "ವಿಶಾಲವಾದ ಅರಮನೆಗಳಿದ್ದು, ಪಟಾಂಗಣದಲ್ಲಿ ಕಾರಂಜಿಗಳೂ, ಚಿಕ್ಕ ಚಿಕ್ಕ ಹೊಂಡಗಳಲ್ಲಿ ಮೀನಗಳೂ, ಹೂದೋಟಗಳೂ, ಸುವಾಸನೆಯ ಕಂಟಿಗಳೂ" ಇದ್ದುವೆಂದು ಡುಆರ್ಟೆ ಬಾರ್ಬೋಸಾ ಎಂಬ ಪಾಶ್ಚಾತ್ಯ ಪ್ರವಾಸಿಯು ಬರೆದಿದ್ದಾನೆ. ಈಗಿನ ವಿಜಯನಗರದ ಅವಶೇಷಗಳಿಂದ ಭವ್ಯತೆಯ ಕಡೆಗಷ್ಟೇ ಆಗಿನವರ ಲಕ್ಷ್ಯವಿತ್ತೆಂದು ಅನೇಕರು ಊಹಿಸುವರು ಆದರೆ ಸೃಷ್ಟಿಯ ಅಗಾಧಶಕ್ತಿಯ ಸಾಕಾರಗಳೆಂದು ತೋರಿಸುವ ಭವ್ಯ ದೇವಾಲಯ ಅರಮನೆಗಳನ್ನು ಕಟ್ಟಿಸಿದರೂ, ಸೃಷ್ಟಿಸೌಂದರ್ಯವನ್ನು ಹಿಮ್ಮೆಟ್ಟುವಂಥ ಉದ್ಯಾನಗಳನ್ನು ನಿರ್ಮಿಸಲು ಮರೆಯಲಿಲ್ಲವೆಂದು ನ್ಯೂನಿಜ, ಪೀಜ, ಬಾರ್ಬೋಸಾ ಮೊದಲಾದವರು ಬರೆದಿಟ್ಟ ವರ್ಣನೆಗಳಿಂದ ವಿದಿತವಾಗುವುದು

ಕಲೆ, ಧರ್ಮ, ಸಾಹಿತ್ಯ ಮತ್ತು ಸೃಷ್ಟಿಸೌಂದರ್ಯಗಳಿಗಿದ್ದ ಆದರ ಮತ್ತು ಪ್ರೀತಿಯನ್ನು ವ್ಯಕ್ತಮಾಡಿದ ರಾಷ್ಟ್ರದ ಸಂಸ್ಕೃತಿಯು ನಿಜವಾಗಿಯೂ ಉಚ್ಚವಾದುದಲ್ಲವೇ ?

ವಸ್ತುಗಳಲ್ಲಿ ನಾವೀನ್ಯತೆಯನ್ನು ಕಾಣುವುದು ಅಥವಾ ಹುಟ್ಟಿಸುವುದೇ ಜೀವನಕಲೆಯ ಮುಖ್ಯೋದ್ದೇಶ. ಹಳೆತಾದುದನ್ನು ಹೊಸ ರೂಪದಲ್ಲಿ ಮಾರ್ಪಡಿಸುವುದೊಂದು ಮಹತ್ಕಾರ್ಯ. ಜಗತ್ತಿನಲ್ಲಿ ಹೊಸತೆಂದು ನಾವು ಕಾಣುವುದು ರೂಪದ ನವೀನ ಆಭಾಸ ಆ ಆಭಾಸಕ್ಕೆ ಮೂರ್ತಸ್ವರೂಪವನ್ನು ಕೊಡುವುದಕ್ಕಾಗಿಯೇ ಕಲೆ ಮತ್ತು ಸಾಹಿತ್ಯಗಳು ಉದ್ಭವಿಸಿದುವು ಈ ನಾವೀನ್ಯತೆಗಳನ್ನು ಅಡಕಗೊಂಡ ಕಲಾಸಾಹಿತ್ಯಗಳ ಧ್ಯೇಯಗಳೇ ಉಚ್ಚ ಸಂಸ್ಕೃತಿಯ ಆದರ್ಶಗಳು.

ವಿಜಯನಗರ ರಾಜ್ಯವು ಹಿಂದುಸ್ತಾನದ ಜೀವನಕ್ರಮದಲ್ಲಿ ಇಂಥ ನಾವೀನ್ಯತೆಯನ್ನು ಉಂಟುಮಾಡಿತು ಮಹಮ್ಮದೀಯ ದಾಳಿಗಳಿಂದ ಅಳಿದು ಹೋಗಹತ್ತಿದ ಹಿಂದೂ ಧರ್ಮವನ್ನು ರಕ್ಷಿಸಿದ್ದಲ್ಲದೆ, ಅದು ಮುಂದೆ ಸುಮಾರು ಇನ್ನೂರು ವರುಷಗಳ ವರೆಗೆ ಧರ್ಮಧ್ವಜವನ್ನು ಎತ್ತಿಹಿಡಿಯಿತು. ವಿಜಯನಗರ ರಾಜ್ಯವಿಲ್ಲದಿದ್ದರೆ, ಎರಡನೇ ದೊಡ್ಡ ಹಿಂದೂ ರಾಜ್ಯವಾದ ಮರಾಠಾ ಸಾಮ್ರಾಜ್ಯದ ಉದಯವು ಸಂಭವನೀಯವಾಗುತ್ತಿದ್ದಲ್ಲವೆಂದು ನಿಷ್ಪಕ್ಷಪಾತಿಯಾದ ಇತಿಹಾಸಜ್ಞನು ಒಪ್ಪಬೇಕಾಗುವುದು

## ಇಮ್ಮಡಿ ಹರಿಹರನ ಬಿರುದಾವಳಿ

ಹರಿಹರ ಬುಕ್ಕರ ತರುವಾಯ ವಿಜಯನಗರದ ರತ್ನಸಿಂಹಾಸನ ವನ್ನೇರಿದವನು, ಬುಕ್ಕನ ಮಗನಾದ ಇಮ್ಮಡಿ ಹರಿಹರನು ಹರಿಹರ ಬುಕ್ಕರು " ಮಹಾಮಂಡಲೇಶ್ವರ " ಎಂಬ ಬಿರುದನ್ನು ಧರಿಸುತ್ತಿದ್ದರು. ಆದರೆ, ಇಮ್ಮಡಿ ಹರಿಹರನು, ಆ ಬಿರುದನ್ನು ತೊರೆದು, " ಶ್ರೀ ಮದ್ರಾಜಾಧಿರಾಜ ಪರಮೇಶ್ವರ " ಎಂಬ ಬಿರುದನ್ನು ವಹಿಸಹತ್ತಿದನು ಇಮ್ಮಡಿ ಹರಿಹರನು, ೧೩೯೫ನೇ ಇಸ್ವಿಯ ಅಕ್ಟೋಬರ ೧೫ನೇ ತಾರೀಖಿನ ದಿನ, ಚಂದ್ರ-ಗ್ರಹಣದ ಸಮಯದಲ್ಲಿ ನಲ್ಲೂರಿನ ಇಬ್ಬರು ಬ್ರಾಹ್ಮಣರಿಗೆ ದತ್ತಿಯನ್ನಿತ್ತನು. ಅದರ ಬಗ್ಗೆ ಬರಯಿಸಲಾದ ಶಿಲಾಲೇಖವು, ಹಂಸೆಯೊಳಗಿನ ಭಾಸ್ಕರಕ್ಷೇತ್ರದಲ್ಲಿರುವ ವಿರುಪಾಕ್ಷ ದೇವಾಲಯದಲ್ಲಿದೆ ಅದರೊಳಗಿರುವ ಇಮ್ಮಡಿ ಹರಿಹರನ ಬಿರುದಾವಳಿಯನ್ನು ಕೆಳಗೆ ಕೊಡಲಾಗಿದೆ.—

**ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ, ಪೂರ್ವಪಶ್ಚಿಮದಕ್ಷಿಣೋತ್ತರಸಮುದ್ರಾಧೀಶ್ವರ, ಅನಿವಾರಿತದುಷ್ಟರಾಜನ್ಯಭುಜಂಗವೈನತೇಯ, ಶರಣಾಗತವಜ್ರಪಂಜರ, ಕಲಿಕಾಲಧರ್ಮ, ಕರ್ಣಾಟಲಕ್ಷ್ಮೀಕರ್ಣಾವತಂಸ, ಚತುವರ್ಣಾಶ್ರಮಪಾಲಕ, ಕುಲಗಿರಿತಟಲಿಖಿತಘೋಷಣ, ರಣರಂಗಭೀಷಣ, ಪರರಾಜರಾಜೀವಸುಧಾಕರ, ಪರನಾರೀಸಹೋದರ, ಪುಣ್ಯಶ್ಲೋಕ ಪ್ರಥಪರ. ಶಾರ್ದೂಲಮದಭಂಜನ, ಚೇರಚೋಳಪಾಂಡ್ಯಸ್ಥಾಪನಾಚಾರ್ಯ, ವೇದಭಾಷ್ಯಪ್ರಕಾಶಕ, ವೈದಿಕಮಾರ್ಗಸ್ಥಾಪನಾಚಾರ್ಯ, ಕರ್ಮೋಪದೇಶಾಧ್ವರ್ಯು, ರಾಜಕಲ್ಯಾಣಶೇಖರ, ಸಿದ್ಧಸಾರಸ್ವತ, ಶ್ರೀವೀರ ಪ್ರತಾಪ ಹರಿಹರದೇವಮಹಾರಾಂ**

# ವಿಜಯನಗರದ ಉಗಮವು.

(ಲೇಖಕರು:—ಶ್ರೀ ಕಟ್ಟಿ ಶೇಷಾಚಾರ್ಯರು ಬಿ ಎ ಎಲ್‌ಎಲ್. ಬಿ ಬೆಳಗಾವಿ).

ವಿಜಯನಗರದ ರಾಯರ ಪರಂಪರೆಯಲ್ಲಿ ನಾಲ್ಕು ಮನೆತನಗಳಾಗಿ ಹೋದವು. ಮೊದಲನೆಯ ಮನೆತನಕ್ಕೆ ಸಂಗಮ ವಂಶವೆಂದು ಕರೆಯುವದುಂಟು. ಆ ಸಂಗಮ ವಂಶವನ್ನು ಸ್ಥಾಪಿಸಿದವರು ಹರಿಹರ ಬುಕ್ಕರೆಂಬ ಇಬ್ಬರು ಅಣ್ಣತಮ್ಮಂದಿರು ಅವರ ಪೂರ್ವೇತಿಹಾಸವು ಇನ್ನೂ ಸಾಕಷ್ಟು ಬೆಳಕನ್ನು ಕಂಡಿರುವದಿಲ್ಲ. ಹರಿಹರ ಬುಕ್ಕರು ತೆಲುಗು ಪ್ರದೇಶದಿಂದ ಬಂದವರಾಗಿದ್ದುದರಿಂದ ಅವರು ತೆಲಗರೆ ಇದ್ದರೆಂದು ಆಂಧ್ರ ಇತಿಹಾಸಕಾರರು ಸಾಧಿಸುತ್ತಿರುವರು ಕರ್ನಾಟಕದೊಳಗಿನ ಸಂಶೋಧಕರು ಹಾಗೂ ಲೇಖಕರು, ಅವರು ಕನ್ನಡರೇ ಇದ್ದರೆಂದು ಪ್ರತಿಪಾದಿಸುತ್ತಿರುವರು. ಈ ವಿಷಯವನ್ನು ಕುರಿತು ಇಲ್ಲಿ ಕೊಂಚ ಮಟ್ಟಿಗೆ ವಿವೇಚಿಸಲಾಗುವದು.

ಫ್ರಾನ್ಸಿಸ ಬುಕ್ಯಾನನ್, ಕರ್ನಲ್ ವಿಲ್‌ಕ್ಸ, ಸೀವೆಲ್, ಸೂರ್ಯನಾರಾಯಣರಾವ ಮುಂತಾದವರು, ಹರಿಹರ ಬುಕ್ಕರು ತೆಲುಗರೆ ಆಗಿದ್ದರೆಂದು ಹೇಳುವರು ರಾಯಿಸ ಸಾಹೇಬರು, ಅವರಿಬ್ಬರು ಬಲ್ಲಾಳರ ಇಲ್ಲವೆ ಕಾಕತೀಯರ ಮಾಂಡಲಿಕರ ವಂಶಜರಾಗಿರಬೇಕೆಂದು ಊಹಿಸಿರುವರು. ಈ ವಿಷಯದಲ್ಲಿ ಹೊಸ ಸಂಶೋಧನೆಗಳು ತಲೆಗೋರಹತ್ತಿವೆ. ತೆಲುಗರು, ಕಾಕತೀಯರ ಸಂಬಂಧವನ್ನು ತೋರಿದು ಹರಿಹರ ಬುಕ್ಕರು ಬೇರೆ ರೀತಿಯಿಂದ ಆಂಧ್ರರಾಗಿದ್ದರೆಂಬುದನ್ನು ಪ್ರತಿಪಾದಿಸತೊಡಗಿದ್ದಾರೆ. ಅಂಥವರಲ್ಲಿ, ಮೊನ್ನೆ ತಾನೆ, ೧೯೩೩ ರಲ್ಲಿ ಮದ್ರಾಸು ವಿಶ್ವವಿದ್ಯಾಲಯದ ಪರವಾಗಿ ಪ್ರಕಟಿಸಿದ, "ವಿಜಯನಗರ ಪಟ್ಟಣ ಹಾಗೂ ಸಾಮ್ರಾಜ್ಯದ ಪ್ರಾರಂಭ" ಎಂಬ ಹೊತ್ತಿಗೆಯನ್ನು ಬರೆದ ಡಾ. ಎನ್. ವೆಂಕಟರಮಣಯ್ಯಾ ಎಂ. ಎ, ಪಿ ಎಚ್. ಡಿ ಎಂಬುವವರು ಅಗ್ರಗಣ್ಯರೆಂದು ಹೇಳಬಹುದು

ಡಾ. ವೆಂಕಟರಮಣಯ್ಯನವರ ಅಭಿಪ್ರಾಯಗಳ ಸಾರಾಂಶ.—

(೧) ಓರುಗಲ್ಲು ಹಾಳಾದ ಮೇಲೆ, ದಿಲ್ಲಿಯ ಸುಲ್ತಾನನು, ಆ ಭಾಗದಲ್ಲಿ, ಮಲಿಕ ಮಕ್ಬುಲ್ ಎಂಬೊಬ್ಬ ಅಧಿಕಾರಿಯನ್ನು ನೇಮಿಸಿದನು. ಹಿಂದುಗಳು ಕಾನ್ಯನಾಯಕನೆಂಬುವವನ ನೇತೃತ್ವದಲ್ಲಿ ಬಂಡಾಯವನ್ನೆಬ್ಬಿಸಿ, ಓರುಗಲ್ಲನ್ನು ಕೈವಶ ಮಾಡಿಕೊಂಡರು. ಕಂಪಿಲದೇವನ ಕೊಲೆಯಾದ ಮೇಲೆ, ಆತನ ರಾಜ್ಯದ ಮೇಲೆ, ಕುಲಗೆಟ್ಟ ಮುಸಲ್ಮಾನನಾದ ಒಬ್ಬ ಕಾನ್ಯನಾಯಕನ ಅಪ್ತನನ್ನು, ಆಳಲಿಕ್ಕೆ ಕಳುಹಲಾಯಿತ ಅವನು ಮರಳಿ ಹಿಂದು ಧರ್ಮವನ್ನು ಸ್ವೀಕರಿಸಿ ಕಂಪಿಲನ ದೇಶದಲ್ಲಿ ಬಂಡನ್ನೆಬ್ಬಿಸಿದನು. ಆಮೇಲೆ ಅಲ್ಲಿ ಅರಸನಾದನು

(೨) ಹರಿಹರಬುಕ್ಕರ ತಂದೆಯ ಹೆಸರು, ಸಂಗಮ. ಸಂಗಮನ ತಂದೆಯ ಹೆಸರು, "ಬುಕ್ಕರಾಯಲು" ಎಂದಿದ್ದಿತು. ನೆಲ್ಲೂರು ಜಿಲ್ಲೆಯೊಳಗೆ ಗೋಜಲವೀಡು ಎಂಬಲ್ಲಿ ದೊರೆತ ಒಂದು ಶಿಲಾಲೇಖದಲ್ಲಿ, "ಮಂಡಲೇಶ್ವರ ಮೂರು ರಾಯರಗಂಡ ಅರಿರಾಯವಿಭಾಳ ಭಾಷದಪ್ಪುವರಾಯಗಂಡ ನವಖಂಡ ಪೃಥ್ವೀಶ್ವರ ವಿರೂಪಾಕ್ಷದೇವದಿವ್ಯಶ್ರೀಪಾದಪದ್ಮಾರ ಘ ಸುಲ್ತಾನ ಶ್ರೀ. ಬುಕ್ಕರಾಯ ಒಡೆಯಲು," ಎಂದು ಇರುವದರಿಂದ ಅವನು ಸಂಗಮನ ತಂದೆಯಾಗಿರಬಹುದು.

(೩) ವಿಜಯನಗರದವರಲ್ಲಿ ಆಂಧ್ರರ ವೈಶಿಷ್ಟ್ಯಗಳನ್ನು ತೋರಿಸುವ ಅನೇಕ ಕುರುಹುಗಳಿರುವವು.

(ಅ) ಓರುಗಲ್ಲಿನ ಕಾಕತೀಯರ ಮುದ್ರಿಕೆಯಲ್ಲಿ, ವರಾಹವ ಮೂರ್ತಿಯಿದ್ದು, ಅದರ ಮುಂದೆ ಹಿಡಿಕೆ ಕೆಳಗಾಗಿ ನಿಂತ ಕತ್ತಿಯು ಇದ್ದಿತು ವಿಜಯನಗರದವರ ಮುದ್ರಿಕೆಯಲ್ಲಿಯೂ ವರಾಹವಿದ್ದಿತು. ಅದರ ಮುಂದೆಯೂ ಕತ್ತಿಯಿದ್ದಿತು. ಆದರೆ, ಅದು ತುದಿ ಕೆಳಗಾಗಿ ಇಳಿಬಿದ್ದದ್ದು ಇದ್ದಿತು.

(ಬ) ವಿಜಯನಗರದವರು ಕಾಕತೀಯರಿಂದ ರಾಜ್ಯವ್ಯವಸ್ಥೆಯನ್ನು ಕಲಿತುಕೊಂಡರು. ಕಾಕತೀಯರ ಆಡಳಿತದಲ್ಲಿ, ಹಳ್ಳಿಯು ತೀರ ಕಡೆಯ ತರಗತಿಯ ರಾಜ್ಯಘಟಕವಾಗಿದ್ದಿತು. ಕೆಲಹಳ್ಳಿಗಳಿಗೆ ಸ್ಥಳ; ಕೆಲ ಸ್ಥಲಗಳಿಗೆ ನಾಡು; ಕೆಲ ನಾಡುಗಳಿಗೆ ಸೀಮೆ; ಕೆಲ ಸೀಮೆಗಳಿಗೆ ಒಟ್ಟಾರೆ, ರಾಜ್ಯವೆಂದು

ಕರೆಯಲಾಗುತ್ತಿದ್ದಿತು ಸ್ಥಳ ಜಾಗೂ ರಾಜ್ಯ ಇವು ಗಳು, ಹೊಯ್ಸಳ, ಸೇವುಣ, ವಾತ್ತು ಚಾಲುಕ್ಯರಲ್ಲಿ ಇದ್ದವು. ಆದರೆ, "ಸೀಮೆ" ಎಂಬ ಭಾಗವು ಅವರಲ್ಲಿ ಇಲ್ಲವೆ ಇಲ್ಲ ಅದು ಕಾಕತೀಯರಿಂದ ವಿಜಯ ನಗರ ರಾಜ್ಯದಲ್ಲಿ ಸೇರ್ಪಡೆ ಹೊಂದಿತು.

(ಕ) "ನಾಯಕರ" ಪದ್ಧತಿಯು ಕೇವಲ ಕಾಕತೀಯರದು. ಆ ಪದ್ಧತಿಯೆಂದರೆ, ರಾಜ್ಯದಲ್ಲಿ ಕೆಲ ಭಾಗಗಳನ್ನು ಕೆಲ ಜನರಿಗೆ ಕೊಟ್ಟು, ಅದರಿಂದ ಅರಸನಿಗೆ ಇಂತಿಷ್ಟು ಸೈನ್ಯದ ಸಹಾಯವಾಗಬೇಕು, ಅದಕ್ಕಾಗಿ ಅವನು ಇಂತಿಷ್ಟು ಸೈನಿಕರನ್ನೂ ಆನೆ ಗಳನ್ನೂ ಇಟ್ಟುಕೊಳ್ಳಬೇಕು, ಮುಂತಾದ ನಿರ್ಬಂಧ ವನ್ನು ಹಾಕುವ ಪರಿಪಾಠವಿದ್ದಿತು ಈ ಪದ್ಧತಿಯನ್ನು ವಿಜಯನಗರದವರು ಕರ್ನಾಟಕದಲ್ಲಿಯೂ ಹರಡಿ ದರು.

(ಳ) ಹೊಯ್ಸಳ ಮುಮ್ಮಡಿ ಬಲ್ಲಾಳನ ರಾಜ್ಯವು, ಹರಿಹರ ಬುಕ್ಕರ ಕಾಲಕ್ಕೆ, ಬಳ್ಳಾರಿ ಜಿಲ್ಲೆಯಲ್ಲಿ ಇರಲೇ ಇಲ್ಲ. ಆದ್ದರಿಂದ ಅವನು, ಹರಿಹರನನ್ನು, ಅಲ್ಲಿ, ತನ್ನ ಮಹಾಮಂಡಲೇಶ್ವರನನ್ನಾಗಿ ನೇಮಿ ಸುವ ಕಾರಣವೇ ಇರಲಿಲ್ಲ.

(ಙ) ಕಾನ್ಯನಾಯಕ ಅಥವಾ ಕಾಪಯ್ಯ ನಾಯಕ ನಿಗೂ, ಹರಿಹರ ಬುಕ್ಕರಿಗೂ ರಕ್ತಸಂಬಂಧವಿದ್ದು ದರಿಂದ, ಅವರಲ್ಲಿ ಸಹಕಾರ್ಯವಿದ್ದಿತು

(೬) ಹರಿಹರ ಬುಕ್ಕರು ಯಾದವ ಕುಲದವರಲ್ಲ. ಬಲ್ಲಾಳದೇವನು ಅವರ ಸಂಬಂಧಿಕನಾಗಿರಲಿಲ್ಲ ಇಷ್ಟೇ ಅಲ್ಲ ಬಲ್ಲಾಳದೇವನಿಗೂ ಹರಿಹರನಿಗೂ ಹಗೆತನವಿದ್ದಿತು.

ಹರಿಹರಬುಕ್ಕರ ತಂದೆಯು ಸಂಗಮನೆಂಬುವವ ನಿದ್ದನೆಂದು ಎಲ್ಲರೂ ಒಪ್ಪುವದುಂಟು. ಸಂಗಮನ ತಂದೆಯ ಹೆಸರು ಗೊತ್ತಾಗಿರುವದಿಲ್ಲ. ಕೆಲವೆಡೆಯಲ್ಲಿ ಸಂಗಮನ ತಂದೆಗೆ ಬುಕ್ಕನೆಂದು ಕರೆದುದು ಕಂಡು ಬರುವದು. ಕೆಲವೆಡೆಯಲ್ಲಿ ಅವನಿಗೆ ಅನಂತನೆಂಬ ಹೆಸರಿದ್ದಿತೆಂದು ತಿಳಿಯುತ್ತದೆ ಹುಕ್ಕ ಬುಕ್ಕರು ತೆಲು ಗರೆ ಇದ್ದರೆಂದು ಸಿದ್ಧಗೊಳಿಸಬೇಕಾಗಿದ್ದುದರಿಂದ, ಡಾ. ವೆಂಕಟರಮಣಯ್ಯನವರು, ಸಂಗಮನನ್ನು, ನೆಲ್ಲೂರು ಜಿಲ್ಲೆಯೊಳಗಿರುವ ಗೋಜಲವೀಡು ಎಂಬ ಲ್ಲಿಯ ಶಿಲಾಶಾಸನದೊಳಗಿರುವ, "ಬುಕ್ಕರಾಯ ಒಡೆ ಯಲು" ಎಂಬವನಿಗೆ ದತ್ತಕ ಕೊಡಲು ಪ್ರಯತ್ನಿಸು ತ್ತಿರುವರು. ಗೋಜಿಗದ ಸಂಗತಿಯೆಂದರೆ, "ಮೂರು ರಾಯರಗಂಡ ಅರಿರಾಯವಿಭಾಳ ಭಾಷೆಗೆತಪ್ಪುವ ರಾಯರಗಂಡ ನವಖಂಡಪೃಥ್ವೀಶ್ವರ ವಿರೂಪಾಕ್ಷ ದೇವದಿವ್ಯಶ್ರೀಪಾದ ಪದ್ಮಾರಾಧ ಸುಲ್ತಾನ" ಎಂಬ ಕನ್ನಡ ಬಿರುದು ಅವನಿಗೆ! ತೆಲುಗು ನಾಡಿನಲ್ಲಿ ದ್ದವನಾದರೂ, ತನ್ನ ಮೊಮ್ಮಕ್ಕಳು ಹಂಪಿಯ ವಿರೂ ಪಾಕ್ಷನ ಆರಾಧಕರಾಗುವರೆಂಬ ಭವಿಷ್ಯಜ್ಞಾನದಿಂದ ಸತತ, "ವಿರೂಪಾಕ್ಷದೇವ ದಿವ್ಯ ಶ್ರೀಪಾದಪದ್ಮಾ ರಾಧಕ" ನಾಗಿದ್ದನು! ಸುದೈವದಿಂದ ಈ "ಮೂರು ರಾಯರ ಗಂಡನು" ಶಿಲಾಲೇಖದಲ್ಲಿ ಉಲ್ಲೇಖವನ್ನು ಕಾಣದಿದ್ದರೆ, ಅವನು ವಿಸ್ಮೃತಿಪಥದೊಳಗೆ ಬಿದ್ದು ಹೋಗುವ ಸಂಭವವಿದ್ದಿತು. ಇತಿಹಾಸಸಂಶೋಧ ನದ ಕಾರ್ಯದಲ್ಲಿ ಪರಿಶ್ರಮಪಟ್ಟು ಹುಡುಕಿ ತೆಗೆದ ಡಾ. ವೆಂಕಟರಮಣಯ್ಯನವರ 'ಮಂಡಲೇಶ್ವರನು' ಸಂಗಮನ ಮನೆತನದವರಿಗೂ ಗೊತ್ತಿದ್ದಂತೆ ತೋರು ವದಿಲ್ಲ. ಇಮ್ಮಡಿ ಹರಿಹರನ ನಲ್ಲೂರ ಶಾಸನದಲ್ಲಿ ರುವದೇನಂದರೆ,

आसीत् त्रैलोक्य जीवातुरानद इव मूर्तिमान् ।
परमेश्वरकोटीरे प्रथमाभरणं शशी ॥ ६ ॥
तदन्वये महातेजा यदुरासीन्महीपतिः ।
सोमवंश्या यतः श्लाघ्यायादवा इति विश्रुताः ॥ ७॥
तस्मिन्न्ययदुकुले श्लाघ्ये सोभूत् श्रीसंगमेश्वरः ।
येन पूर्वं विधानेन पालिताः सकलाः प्रजाः ॥८॥
तस्य श्रीसगमेंद्रस्य पुत्रोभूत्पुण्य वैभवात्
वीरश्रीमंगलादर्शो वीरश्रीबुक्कभूपतिः ॥ १० ॥

ಗೋಜಲವೀಡುವಿನ 'ಬುಕ್ಕರಾಯನು' ಸಂಗ ಮನ ತಂದೆಯೆ ಆಗಿದ್ದ ಪಕ್ಷದಲ್ಲಿ, ತನ್ನ ಹಿಂದೆ ಮೂರೇ ತಲೆಗಳಲ್ಲಿರುವ, 'ನವಖಂಡ ಪೃಥ್ವೀಶ್ವರ' ನಾದ ಮುತ್ತಜ್ಜನನ್ನು ಇಮ್ಮಡಿ ಹರಿಹರನು ಮರೆತಿ ರುವದು ಹೇಗೆ? ಈ ಶ್ಲೋಕದಲ್ಲಿ ಬುಕ್ಕನು ಯದು ವಂಶದವನೆಂದೂ ಹೇಳಲಾಗಿದೆ.

ಸಂಗಮನು ಅಪ್ರಸಿದ್ಧ ಪುರುಷನಾಗಿರಲಿಲ್ಲ. ಅವ ನನ್ನು ಅಲ್ಲಲ್ಲಿ ಹೊಗಳಿದ್ದು ಕಂಡುಬರುವದು. 'ಸಂಗಮನಲ್ಲಿ ಶ್ರೀ. ಸರಸ್ವತಿಗಳಜೊತೆಯಿದ್ದಿತು.' 'ಸಂಗಮನ ಭುಜಬಲಸಾಹಸವು ಕೊಂಡಾಡುವಂತಹ ದಿದೆ.' 'ಶೌರ್ಯದಲ್ಲಿ ಕಾರ್ತವೀರ್ಯನಂತೆ, ಸ್ಥೈರ್ಯ ದಲ್ಲಿ ಹಿಮಾಚಲದಂತೆ, ತೇಜಸ್ಸಿನಲ್ಲಿ ಸೂರ್ಯನಂತೆ, ಅವನು ಶೋಭಿಸುವನು.' ಸಂಗಮನ ಧರ್ಮಾಭಿ ಮಾನವನ್ನೂ ಕೊಗಳಲಾಗಿ. "ಂಗವ ನು ರಾವೇ

ಅಚ್ಯುತರಾಯನ ಗುಡಿ



ಕೃಷ್ಣದೇವರಾಯನ ಅರಮನೆ ( ಪೆನುಗೊಂಡೆ )



ಶ್ವರದ ಯಾತ್ರೆಯನ್ನು ಮಾಡಿ, ಅಲ್ಲಿ ಹದಿನಾರು ಮಹಾದಾನಗಳನ್ನು ಮಾಡಿದನು.' 'ಸಂಗಮನ, ಚೋಳ, ಚೇರ, ಪಾಂಡ್ಯ ಅರಸರನ್ನು ಸೋಲಿಸಿದನು ಮಧುರೆಯನ್ನು ಕೈವಶಮಾಡಿಕೊಂಡನು; ತುರುಷ್ಕ ಗಜಪತಿ ಅರಸರನ್ನು ಹಣ್ಣು ಮಾಡಿದನು' ಮೇಲಾಗಿ **"ಸಂಗಮೇಂದ್ರನು ಕರ್ಣಾಟಲಕ್ಷ್ಮಿಯ ಕರ್ಣಾವತಂಸನಾಗಿದ್ದನು."** ಸಂಗಮನ ತೆಲುಗು ತನವನ್ನು ಸಿದ್ಧಪಡಿಸಲು ಡಾ. ವೆಂಕಟರಮಣಯ್ಯನವರು ಒಂದೂ ಉದಾಹರಣೆಯನ್ನು ಕೊಟ್ಟಿರುವದಿಲ್ಲ

ಸಂಗಮನ ಪೂರ್ವದ ಸ್ಥಳವು ಇನ್ನೂ ಗೊತ್ತಾಗಿರುವದಿಲ್ಲ. ಸೊರಬ ತಾಲೂಕಿನೊಳಗೆ ಒಂದು ಶಿಲಾಶಾಸನವು ದೊರೆತಿದೆ. ಅದರಲ್ಲಿ ಸಂಗಮನ ಮಗನಾದ 'ಮಾರಪನು ಕಳಸದಿಂದ ಪಶ್ಚಿಮದಲ್ಲಿ ರಾಜ್ಯವನ್ನು ಸಂಪಾದಿಸಿದನು' ಎಂದು ಬರೆದಿದೆ ಕಳಸದ ಪಶ್ಚಿಮದಲ್ಲಿ ಚಂದ್ರಗುತ್ತಿಯ ಪ್ರದೇಶವಿರುವದು ಚಂದ್ರಗುತ್ತಿಯು ಬನವಾಸಿಯ ಹನ್ನೆರಡು ಸಾಸಿರದ ಮುಖ್ಯ ಪಟ್ಟಣವಾಗಿದ್ದಿತು. ಅಲ್ಲಿ ಮಾರಪನು ಆಳುತ್ತಿದ್ದನು ಆದ್ದರಿಂದ ಕಳಸವು, ಸಂಗಮನ ಪೂರ್ವಸ್ಥಳವಾಗಿರಬೇಕೆಂದು ಫಾ. ಹೇರಾಸರ ಮತ ತಮ್ಮ ಈ ಮತಕ್ಕೆ ಪುಷ್ಟಿಯನ್ನೀಯಲು ಅವರು ಮುಂದೆ ಅನ್ನುವದೇನಂದರೆ, "೧೩೪೬ ರಲ್ಲಿ ಹರಿಹರನು ತನ್ನ ಜಯೋತ್ಸವದ ಮೂಲಕ ಶ್ರೀಂಗೇರಿಗೆ ಹೋದುದೂ, ಕಳಸವು ಅದರ ಸಮೀಪದಲ್ಲಿಯೆ ಇದ್ದುದೂ ಪೂರ್ವದ ಸಂಬಂಧವನ್ನೇ ಸೂಚಿಸುತ್ತವೆ ಕಳಸದಿಂದ ೧೫ ಮೈಲುಗಳ ಅಂತರದ ಮೇಲೆ ಭದ್ರಾನದಿಗೆ ಅನೆಬಿದ್ದ ಹಳ್ಳವು ಕೂಡುತ್ತದೆ. ಆ ಸಂಗಮದ ಹತ್ತಿರದಲ್ಲಿಯೆ ಸಂಗಮವೆಂಬ ಗ್ರಾಮವಿದೆ. ಆ ಗ್ರಾಮದಿಂದ ಸಂಗಮನಿಗೆ ಅವನ ಹೆಸರು ಪ್ರಾಪ್ತವಾಗಿರಬಹುದು." ಫಾ. ಹೇರಾಸರ ಮತವು ವಿಚಾರಾರ್ಹವಾಗಿರಬಹುದು ಏಕಂದರೆ, ರಾಯಿಸ ಸಾಹೇಬರ ಮತದಂತೆ, ಮೈಸೂರು ನಾಡಿನ ವಾಯವ್ಯದ ಮೂಲೆಯಲ್ಲಿ ವಿಜಯನಗರದ ನರಪತಿಗಳ ತೀರ ಹಳೆಯ ಶಾಸನಗಳು ದೊರೆಯುತ್ತವೆ. ಆದರೆ, ಈ ವಿಷಯದಲ್ಲಿ, ನಿಶ್ಚಯಾತ್ಮಕವಾಗಿ ಏನೂ ಹೇಳಲಿಕ್ಕಾಗದು. ಸಂಗಮನ ಆಲೆದಾಟ ಬಿರುದುಗಳನ್ನು ಅವಲೋಕಿಸಿದಲ್ಲಿ, ಅವನು ಹೊಯ್ಸಳರ ಮಾಂಡಲಿಕನಾಗಿರಬಹುದೆಂದು ಊಹಿಸಬಹುದು.

ಸಂಗಮನಿಗೆ ಐದು ಮಂದಿ ಮಕ್ಕಳಿದ್ದರು. ಅವರ ಹೆಸರುಗಳು ಅನುಕ್ರಮವಾಗಿ, ಹರಿಹರ, ಕಂಪ, ಬುಕ್ಕ, ಮಾರಪ ಮತ್ತು ಮುದ್ದಪ ಎಂದಿದ್ದವು. ನೆಲ್ಲೂರು ಜಿಲ್ಲೆಯೊಳಗಿರುವ 'ಬಿಟ್ಟರಗುಂಟ' ಎಂಬ ಗ್ರಾಮದೊಳಗಿರುವ ಶಿಲಾಶಾಸನದಿಂದ ಇದನ್ನು ಮನಗಾಣಿಸಿಕೊಳ್ಳಬಹುದು. ಆ ಶಾಸನವನ್ನು ಬರೆದವನು, ಮಾಧವಸಾಯಣರ ತಮ್ಮನಾದ ಭೋಗನಾಥಕವಿಯು. ಆ ಶಾಸನದಲ್ಲಿರುವದು,

अस्ति × × ×

राजी नीराजमानस्फुरदुरुचरणांभोरुहस्संगमेंद्रः ॥

तस्मादुदभवन् पचतनयाः शौर्य शालिनः ।

कल्पावनिरुहाः पूर्वं कलशांबुनिधेरिव ॥

आद्यो हरिहरक्ष्माभृदथ कंपमहीपतिः ।

ततो बुक्कमहीपालः पश्चान्मारपमुद्दपौ ॥

ಸಂಗಮನ ಮಕ್ಕಳು ನೆರವೇರಿಸಿದ ಕಾರ್ಯದ ಮಹತ್ವವನ್ನು ಕಂಡು ಹಿಡಿಯ ಬೇಕಾದರೆ, ಅವರ ಕಾಲದೊಳಗಿದ್ದ ಪರಿಸ್ಥಿತಿಯನ್ನು ಮೊದಲು ತಿಳಿದುಕೊಳ್ಳಬೇಕಾಗುವದು. ಯಾದವ ರಾಮದೇವರಾಯನು ದೇವಗಿರಿಯೊಳಗೆ ಆಳುತ್ತಿರುವಾಗ, ಅವನ ರಾಜ್ಯದಮೇಲೆ ಅಲ್ಲಾಉದ್ದೀನ ಖಿಲಜಿಯ ದಾಳಿಗಳು ಪ್ರಾರಂಭವಾದವು. ಅಲ್ಲಾಉದ್ದೀನನು ೧೩೦೭ ರಲ್ಲಿ ದೇವಗಿರಿಯನ್ನು ಕೈವಶ ಮಾಡಿಕೊಂಡನು. ಗುಜರಾಥವು ೧೨೯೭ ರಲ್ಲಿ ಮುಸಲ್ಮಾನರ ಕೈವಶವಾಯಿತು. ಓರುಗಲ್ಲಿಗೆ ೧೩೨೩ ರಲ್ಲಿ ಮುತ್ತಿಗೆ ಬಿದ್ದಿತು. ದೇವಗಿರಿಯ ಮೇಲೆ, ೧೩೧೮ ರೊಳಗೆ ಮತ್ತೆ ದಾಳಿಯಾಯಿತು. ಅಲ್ಲಾಉದ್ದೀನನ ಸರದಾರನಾದ ಮಲಿಕ ಕಾಫುರನು ಸೇತುಬಂಧ ರಾಮೇಶ್ವರದ ವರೆಗೆ ಸಾಗಿ ಅಲ್ಲಿ ಒಂದು ಮಸೀದೆಯನ್ನು ಕಟ್ಟಿದನು ಮುಬಾರಕ ಖಿಲಜಿಯು, ೧೩೧೮ ರಲ್ಲಿ, ದೇವಗಿರಿಯ ಮೇಲೆ ದಾಳಿ ಮಾಡಿ, ಅಲ್ಲಿಯ ಅರಸನಾದ ಹರಿಪಾಲದೇವನ ಚರ್ಮವನ್ನು ಸುಲಿಸಿ, ಅವನ ರುಂಡವನ್ನು ದೇವಗಿರಿಯ ಅಗಸೆಯ ಬಾಗಿಲಿಗೆ ಕಟ್ಟಿದನು. ಪಾಂಡ್ಯರ ಪುರಾತನ ರಾಜಧಾನಿಯಾದ ಮಧುರೆಯು ಮುಸಲ್ಮಾನರ ಕೈವಶವಾಯಿತು, ಅಲ್ಲಿಯ ಪ್ರಸಿದ್ಧ ದೇವಸ್ಥಾನದೊಳಗಿನ ದೇವರ ವಿಗ್ರಹವನ್ನು, ವೇದಾಂತದೇಶಿಕಾಚಾರ್ಯನು, ಮಲೆಯಾಳಿಗೆ ಒಯ್ದನು. ಮಧುರೆಯ ಗುಡಿಗೋಪುರಗಳು ನೆಲಸಮವಾದವು. ಅಲ್ಲಿ ಮುಸಲ್ಮಾನ ಅಧಿಕಾರಿಯು ಇರಲಾರಂಭಿಸಿದನು.

ಗರ್ಭ ಗುಡಿಯೊಂದೇ ಮುಸಲ್ಮಾನರ ಕೃಪೆಯಿಂದ ಉಳಿಯಿತು. ಕಾಕತೀಯರ ಓರುಗಲ್ಲು, ೧೩೨೩ ರಲ್ಲಿ, ಹಾಳಾಯಿತು ಅಲ್ಲಿಯ ಅರಸನಾದ ಪ್ರತಾಪರುದ್ರ ದೇವನನ್ನು, ಮುಸಲ್ಮಾನರು ದಿಲ್ಲಿಗೆ ಒಯ್ಯಲು ಪ್ರಯತ್ನಿಸಿದಂತೆ ಕಾಣುತ್ತದೆ ಆದರೆ ಅವನು ಪಾರಾಗಿ ಮುಂದೆ ಕೆಲವರ್ಷ ಅಪ್ರಸಿದ್ಧನಾಗಿ ಕಾಲ ಕಳೆದಂತೆ ತೋರುತ್ತದೆ. ಮಹಮ್ಮದ ತಗಲಖನು, ೧೩೨೫ ರಲ್ಲಿ ಪಟ್ಟವನ್ನೇರಿದ ಮೇಲಂತೂ ಮುಸಲ್ಮಾನರ ಉಪಟಳಕ್ಕೆ ಮೇರೆಯೇ ಉಳಿಯಲಿಲ್ಲ ಮಹಮ್ಮದನು ತನ್ನ ಅಳಿಯನಾದ, ಬಹಾಉದ್ದೀನಗುಸ್ತಾಸ್ಪ (ಖೂರಶರೀಫ) ಎಂಬುವವನನ್ನು ದಕ್ಷಿಣದ ಸುಭೇದಾರನನ್ನಾಗಿ ಮಾಡಿದನು ಅವನು ಮಹಮ್ಮದನ ವಿರುದ್ಧ ಬಂಡಾಯವನ್ನೆಬ್ಬಿಸಿದ್ದರಿಂದ, ಅವನನ್ನು ದಂಡಿಸುವಗೋಸ್ಕರ ಮಹಮ್ಮದನು ಒಂದು ದೊಡ್ಡ ಸೈನ್ಯವನ್ನು ಕಳುಹಿದನು. ಬಹಾಉದ್ದೀನನು ಕಂಪಿಲದೇವನ ಆಶ್ರಯವನ್ನು ಪಡೆದನು ಮಹಮ್ಮದನ ಸೈನ್ಯವು ಕಂಪಿಲದೇವನನ್ನು ಮುತ್ತಿತು. ಆದ್ದರಿಂದ ಅವನು ಬಹಾಉದ್ದೀನನನ್ನು ದೋರಸಮುದ್ರದ ಬಲ್ಲಾಳದೇವನ ಕಡೆಗೆ ಕಳುಹಿದನು. ಕಂಪಿಲದೇವನು, ೧೩೨೭ ರಲ್ಲಿ, ಆ ಯುದ್ಧದಲ್ಲಿ ಮಡಿದನು ಅವನ ರಾಜಧಾನಿಯು ಹಾಳಾಯಿತು ಬಳಿಕ ಮುಸಲ್ಮಾನರು ದೋರಸಮುದ್ರದ ಕಡೆಗೆ ಹೊರಳಿದರು. ಬಲ್ಲಾಳದೇವನು ಬಹಾಉದ್ದೀನನನ್ನು ಮುಸಲ್ಮಾನರಿಗೆ ಒಪ್ಪಿಸಿ, ಅವರೊಡನೆ ಒಪ್ಪಂದವನ್ನು ಮಾಡಿಕೊಂಡನು. ಹೀಗಾಗಿ, ದಕ್ಷಿಣದೊಳಗಿನ ದೇವಗಿರಿಯ ಯಾದವರು, ಕಂಪಿಲಿಯ ಅರಸರು, ಮತ್ತು ಓರಂಗಲ್ಲಿನ ಕಾಕತೀಯರು ಹೇಳ ಹೆಸರಿಲ್ಲದೆ ಮಾಯವಾದರು. ಅವರ ಆಡಳಿತದಲ್ಲಿದ್ದ ವಿಸ್ತಾರವಾದ ಪ್ರದೇಶವು, ದಿಲ್ಲಿಯ ಬಾದಶಹನ ಕೈವಶವಾಯಿತು.

ಮಹಮ್ಮದ ತಗಲಖನು ಬುದ್ಧಿಶಾಲಿಯಾಗಿದ್ದನು ಆದರೆ, ಅವನ ಕ್ರೂರತನ ವಿಕ್ಷಿಪ್ತತನಗಳು, ಆ ಗುಣವನ್ನು ಮುಚ್ಚಿ ಬಿಡುವಂಥವಿದ್ದವು. ಇಬನ್ ಬಟ್ಯೂಟನು ವರ್ಣಿಸಿದ ಅವನ ಕ್ರೂರತನದ ಉದಾಹರಣೆಗಳನ್ನೋದಿದರೆ, ಮೈಮೇಲೆ ಮುಳ್ಳುಗಳೇಳುವವು. ಅವನ ಸಾಹಸಗಳೂ ತೀರ ತಲೆತಿರುಕತನದ್ದಿದ್ದವು ಅವನು ತನ್ನ ರಾಜಧಾನಿಯನ್ನು ದೇವಗಿರಿಗೆ ಒಯ್ಯಬೇಕೆಂದಿಚ್ಛಿಸಿ ದಿಲ್ಲಿಯ ಜನರೆಲ್ಲರಿಗೂ ಅಲ್ಲಿಗೆ ಹೋಗಬೇಕೆಂದು ಆಜ್ಞಾಪಿಸಿದನು. ದಿಲ್ಲಿಯು ಹಾಳಾಗಿ ಹೋಯಿತು. ದೇವಗಿರಿಗೆ ಹೊರಟ ದಿಲ್ಲಿಯ ನಿವಾಸಿಗಳು ದಾರಿಯಲ್ಲಿ ಮಡಿದು ಹೋದರು. ಮಹಮ್ಮದನು ಚೀನದೇಶವನ್ನು ಗೆಲ್ಲಬೇಕೆಂದು ಒಂದು ಲಕ್ಷ ಸೈನ್ಯವನ್ನು ಕಲೆಹಾಕಿ ಅದನ್ನು ಹಿಮಾಲಯದೊಳಗಿಂದ ಚೀನಕ್ಕೆ ಕಳುಹಿದನ. ಈ ಸೈನ್ಯವು ಪರಾಭವವನ್ನು ಹೊಂದಿ ತಿರುಗಿ ಬರುವ ದಾರಿಯಲ್ಲಿಯೆ ಮಾಯವಾಯಿತು. ಆ ಸುದ್ದಿಯನ್ನು ಹೇಳಲು ಹತ್ತುಜನ ಸಿಪಾಯಿಯರು ಮಾತ್ರ ದಿಲ್ಲಿಗೆ ಮರಳಿ ಬಂದರು. ಆಮೇಲೆ ಮಹಮ್ಮದನು ಇರಾಣ ತುರ್ಕಸ್ಥಾನಗಳನ್ನು ಗೆಲ್ಲಲು ದೊಡ್ಡ ಸೈನ್ಯವನ್ನು ಸಜ್ಜು ಮಾಡಿದನು ಈ ಸೈನಿಕರು ಏನೂ ಕೆಲಸ ಮಾಡದಲೆ ಒಂದು ವರ್ಷ ವೇತನವನ್ನುಂಡು ಬೊಕ್ಕಸವನ್ನು ಬರಿದು ಮಾಡಿದರು. ಹೀಗಾಗಿ, ಮಹಮ್ಮದನ ಹುಚ್ಚತನಕ್ಕೆ ಎಲ್ಲರೂ ಬೇಸತ್ತರು ಎಲ್ಲ ಕಡೆಯಲ್ಲಿ ಬಂಡಾಯಗಳೇಳಹತ್ತಿದವು ದಕ್ಷಿಣದಲ್ಲಿ ಬಂದ ಮುಸಲ್ಮಾನ ಸರದಾರರೂ ಸ್ವತಂತ್ರರಾಗುವ ಹವಣಿಕೆಯಲ್ಲಿದ್ದರೆಂಬು ಹೇಳಲಿಕ್ಕೆ, ೧೩೪೭ ರಲ್ಲಿ ಸ್ಥಾಪಿತವಾದ ಬಾಮನಿರಾಜ್ಯವೇ ಸಾಕ್ಷಿಯಾಗಿದೆ ಕಡೆಗೂ ಸಾಮ್ರಾಜ್ಯದ ಮೇಲೆ ಸಾಮ್ರಾಜ್ಯವನ್ನಾಳಿದ ಗೋದಾವರಿ ತುಂಗಭದ್ರೆಗಳ ನಡುವಣನಾಡು, ಸ್ವತಂತ್ರವಾಗಲಿಕ್ಕೆ ಟೊಂಕಕಟ್ಟಿತು. ಕಾಲವೂ ಅನುಕೂಲವಾಗಿದ್ದಿತು ಹಿಂದುಗಳ ಧರ್ಮಾಭಿಮಾನ ಸ್ವಾತಂತ್ರ್ಯಪ್ರಿಯತೆಗಳಿಗೆ ಜೊತೆ ಬಿದ್ದಿತು ದಿಲ್ಲಿಯ ರಾಜ್ಯಸೂತ್ರಗಳು, ದಕ್ಷಿಣದಲ್ಲಿ ಸಡಿಲಾದುದೂ, ಈ ಪರಿಸ್ಥಿತಿಗೆ ಪುಟ ಕೊಟ್ಟಿತೆಂದು ಹೇಳಬಹುದು

ದಕ್ಷಿಣದೊಳಗಿನ ಹಿಂದು ಅರಸರಲ್ಲಿ ದೋರಸಮುದ್ರದ ಮುಮ್ಮಡಿ ಬಲ್ಲಾಳನೆ ಬಲಶಾಲಿಯಾಗಿದ್ದನು. ಅವನು ತನ್ನ ಪೂರ್ವಜರ ಬನವಾಸಿಯ ಹನ್ನೆರಡುಸಾವಿರ ನಾಡನ್ನು ಗೆಲ್ಲಲು ಸಿರಸಿಯ ವರೆಗೆ ಸಾಗಿ ಬಂದು ಸೇವುಣರ ಗೂಡ ಹೋರಾಡಿದನ. ಕಂಪಿಲನ ದೇಶದಲ್ಲಿ ೧೩೨೮ ರ ವರೆಗೆ ದಾಳಿ ಮಾಡುತ್ತಲೆ ಇದ್ದನು. ತುಳುವರನ್ನುಗೆದ್ದು ಪಾಂಡ್ಯ ಚಕ್ರವರ್ತಿಯೆಂದು ಕರೆಯಿಸಿಕೊಂಡನು. ದಕ್ಷಿಣದಲ್ಲಿ ರಾಮೇಶ್ವರದ ವರೆಗೆ ದಾಳಿಮಾಡಿ ಅಲ್ಲಿ ಜಯಸ್ತಂಭವನ್ನು ಕಟ್ಟಿಸಿದನು. ಕಟ್ಟ ಕಡೆಗೆ ಮಧುರೆಯ ಮುಸಲ್ಮಾನರೊಡನೆ ಹೋರಾಡುತ್ತಿರುವಾಗ್ಗೆ ಅವನು ಧಾರಾತೀರ್ಥದಲ್ಲಿ [೧೩೪೨] ಅಸುವನ್ನು ತೊರೆದನು.

ಹರಿಹರನಿಗೂ ಬಲ್ಲಾಳನಿಗೂ ಸಂಬಂಧವಿದ್ದಂತೆ ತೋರುತ್ತದೆ. ಮಲಿಕ ಕಾಫುರನು ದೋರಸಮುದ್ರದ ಮೇಲೆ ಮೊತ್ತಮೊದಲು ದಾಳಿಮಾಡಿದಾಗ್ಗೆ,

ಮುಮ್ಮಡಿ ಬಲ್ಲಾಳನಿಗೆ, ಹದವಳಿಕೆ ನಾಡಿನ "ದೇವಪ್ಪ ಹರಿಯಪ್ಪ" ನೆಂಬುವವನು ಸರ್ವಾಧಿಕಾರಿಯಾಗಿದ್ದನು. ಈ ದೇವಪ್ಪನೆ ವಿಜಯನಗರದ ಮೊದಲನೆಯ ನರಪತಿಯಾದ ಹರಿಹರನಾಗಿರಬಹುದ. ಬುಕ್ಕನ ಮಕ್ಕಳಾದ ಕಿರಿಯಹರಿಹರ, ಕಂಪಣರು ಆ ಬಲ್ಲಾಳದೇವನ ಊಳಿಗದಲ್ಲಿದ್ದರು ಕಿರಿಯ ಹರಿಹರನು ಕುಕ್ಕಲನಾಡು ಮುಂತಾದ ಸೀಮೆಗಳಲ್ಲಿ ಬಲ್ಲಾಳನ ಮಹಾಮಂಡಲೇಶ್ವರನಾಗಿದ್ದನು ಕಂಪಣನು ಬಲ್ಲಾಳದೇವನ ದ್ವಾರಪಾಲಕನಾಗಿದ್ದನು ಮುಮ್ಮಡಿ ಬಲ್ಲಾಳನಿಗೆ ದಾದಿಯ ಸೋಮಯ್ಯನೆಂಬ ಮಹಾಮಂತ್ರಿಯಿದ್ದನು ಸೋಮಯ್ಯನು ಬಲ್ಲಾಳನ ಮನೆತನದವನು ಅಂದರೆ ಅವನು ಹೊಯ್ಸಳನಾಗಿದ್ದನು ಅವನ ತರುವಾಯ ೧೩೪೩ ರಲ್ಲಿ ಬಳ್ಳಪ್ಪನೆಂಬವನು ಬಲ್ಲಾಳನ ಮಂತ್ರಿಯಾಗಿದನು. ಈ ಬಳ್ಳಪ್ಪನು ಸೋಮಯ್ಯನ ಮಗನು ಶ್ರಿಂಗೇರಿಯೊಳಗಿನ ಹರಿಹರನ ಶಾಸನದಲ್ಲಿ [೧೩೪೬] ಬಳ್ಳಪ್ಪನಿಗೆ ಅಳಿಯ ಬಳ್ಳಪ್ಪ ಡಣ್ಣಾಯಕನೆಂದು ಸಂಬೋಧಿಸಲಾಗಿದೆ. ಆದ್ದರಿಂದ ಬಳ್ಳಪ್ಪನು ಹರಿಹರನ ಅಳಿಯನಾಗಿದ್ದನೆಂದು ಕಂಡುಬರುತ್ತದೆ

ಹರಿಹರನು ೧೩೩೯ ರಲ್ಲಿ, ತನ್ನ ನೆಲೆವೀಡಾದ ಚಂದ್ರಗುತ್ತಿಯಲ್ಲಾಳುತ್ತಿದ್ದನೆಂದ. ತಿಳಿಯುತ್ತದೆ ಅವನು ೧೩೪೦ ರೊಳಗೆ ಮಲಪ್ರಭೆಯ ಉತ್ತರ ಸೀಮೆಯ ಒಡೆಯನಾಗಿದ್ದನೆಂದು ಹೇಳಬಹುದು ಅದೇ ವರ್ಷ ಬಾದಾಮಿಯೊಳಗಿರುವ ಚಾವರಸನೆಂಬ ಅವನ ಮಾಂಡಲಿಕನು ಅಲ್ಲಿಯ ಕೋಟೆಯನ್ನು ಕಟ್ಟಿಸಿದನೆಂದು ತಿಳಿಯುತ್ತದೆ ಅಲ್ಲಿಯ ಶಿಲಾಲೇಖದಲ್ಲಿ, **ಮಹಾಮಂಡಲೇಶ್ವರ ಅರಿರಾಯವಿಭಾಡ ಭಾಷೆಗೆ ತಪ್ಪಿದವರ ಗಂಡ ಪೂರ್ವ-ಪಶ್ಚಿಮಸಮುದ್ರಾಧಿಪತಿ"** ಎಂದು ಹೊಗಳಲಾಗಿದೆ. ಕೆಲಕಾಲದ ಮೇಲೆ ಅವನು ಶ್ರೀಶೈಲ ಪರ್ವತದ ಹತ್ತರ ಆಳುತ್ತಿದ್ದನೆಂದು ತಿಳಿಯುತ್ತದೆ. ೧೩೫೨ ರಲ್ಲಿ ಕೊಂಕಣವು, ಕಾಫರನಾದ (ಹಿಂದುವಾದ) ಹರಿಬ್ ಎಂಬುವವನ ಆಧಿಪತ್ಯಕ್ಕೆ ಒಳಪಟ್ಟಿತೆಂದೂ ಅವನ ಕೈಕೆಳಗೆ ಹೊನ್ನಾವರದಲ್ಲಿ ಜಮಾಲದ್ದೀನನೆಂಬ ಒಬ್ಬ ಮುಸಲ್ಮಾನ ಅಧಿಕಾರಿಯಿದ್ದನೆಂದೂ ಇಬನ್ ಬಟೂಟನು ಬರೆಯುತ್ತಾನೆ. ೧೩೪೪ ರೊಳಗಿನ ಒಂದು ಶಿಲಾಲೇಖದಿಂದ ತಿಳಿಯುವದೇನಂದರೆ, ಹರಿಹರನ ತಮ್ಮನಾದ ಬುಕ್ಕನು, ವಿದ್ಯಾನಗರದಲ್ಲಿ ರಾಜ್ಯವನ್ನಾಳುತ್ತಿದ್ದನು ಈ ಉದಾಹರಣೆಗಳ ಮೇಲಿಂದ, ಹರಿಹರನು ೧೩೫೦ ರ ಹಿಂದೆ, ಎಷ್ಟೋ ವರ್ಷಗಳ ವರೆಗೆ ಮಹಾಮಂಡಲೇಶ್ವರನಾಗಲಿಕ್ಕೂ **ಪೂರ್ವಪಶ್ಚಿಮ ಸಮುದ್ರಾಧಿಪತಿ**ಯಾಗಲಿಕ್ಕೂ ಹೆಣಗಿರಲಿಕ್ಕೆ ಸಾಕು ಅವನ ಉದಯಕಾಲವು ಆದರ ಹಿಂದೆ ಇರಲಿಕ್ಕೆಬೇಕು. ಆದ್ದರಿಂದ ಅವನ ಪ್ರಯತ್ನಗಳು ೧೩೩೬ ರಲ್ಲಿ ರೂಪುಗೊಂಡವೆಂದು ತಿಳಿಯುವದು ತಪ್ಪಾಗಲಾರದು. ವಿಜಯನಗರದ ಸ್ಥಾಪನೆಯು ಅದೇ ವರ್ಷ ಜರುಗಿತೆಂದು ಕೆಲ ತಾಮ್ರಶಾಸಗಳೂ ಹೇಳುತ್ತವೆ. ಆದರೆ, ಅವು ವಿಶ್ವಸನೀಯವಾಗಿರುವದಿಲ್ಲೆಂದು, ಫಾದರ ಹೇರಾಸರೂ ಡಾ ಸಾಲೆತೊರೆ ಅವರೂ ಪ್ರತಿಪಾದಿಸುವರು ಜನಸಾಮಾನ್ಯದಲ್ಲಂತೂ ಅದೇ ವರ್ಷದಲ್ಲಿಯೆ ವಿಜಯನಗರದ, "ಕೆಸರ್ಗಲ್ಲ" ಮಹೋತ್ಸವವಾಯಿತೆಂದು ದೃಢವಿಶ್ವಾಸವಿದೆ. ವಿದ್ಯಾರಣ್ಯ ಕಾಲಜ್ಞಾನ ಶ್ಲೋಕದಲ್ಲಿ ಇರುವದೇನಂದರೆ,

दिक्सङ्ख्याबाणयुक्तद्विचद्रयुक्तशकान्विते
धात्वब्दे सितसप्तम्या वशाखेमासि भास्करे ॥
सुलग्ने शुभनक्षत्रे माघःध्येच वि ोषत. ।
राचिता नगरीरम्या पुरुष.कृ.ति शालिनी ॥

ಆ ತಿಥಿಯು ಶಕ ವರ್ಷ ೧೨೫೮, ಧಾತುನಾಮ ಸಂವತ್ಸರ, ಶುಕ್ಲಪಕ್ಷ ಸಪ್ತಮಿ ಆದಿತ್ಯವಾರ ದಿವಸ ಬೀಳುತ್ತದೆ ಇದಕ್ಕೆ ಡಾ. ಸಾಲೆತೊರೆಯವರ ಒಪ್ಪಿಗೆಯಿಲ್ಲ. ಆದರೆ, ಫಾ. ಹೇರಾಸರು, ಈ ಸುಮಾರದಲ್ಲ ಹರಿಹರನು ಮುಮ್ಮಡಿ ಬಲ್ಲಾಳನ ಮಹಾಮಂಡಲೇಶ್ವರನಾಗಿರಬಹುದೆಂದು ಊಹಿಸುತ್ತಾರೆ

ಹರಿಹರ ಬುಕ್ಕರು ತಮಗೆ ಮಹಾಮಂಡಲೇಶ್ವರರೆಂದು ಅನ್ನುಕೊಳ್ಳುತ್ತಿದ್ದರು. ಮಹಾಮಂಡಲೇಶ್ವರನಿಗೆ ಅಧಿರಾಜನು ಬೇಕೇಬೇಕು ಅಂದ ಮೇಲೆ ಹರಿಹರನ ಅಧಿರಾಜನಾರು ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಹರಿಹರನ ಏಳಿಗೆಯ ಕಾಲದಲ್ಲಿ, ದೇವಗಿರಿಯ ಯಾದವರು, ಓರಂಗಲ್ಲಿನ ಕಾಕತೀಯರು, ಕಂಪಿಲಿಯ ಅರಸರು ಲಯವಾಗಿ ಹೋಗಿದ್ದರು. ಹರಿಹರನು ಅವರಮಾಂಡಲಿಕನಾಗಿರಲಾರನು. ದಿಲ್ಲಿಯ ಮುಸಲ್ಮಾನ ಸುಲ್ತಾನನ ಕೈಕೆಳಗೆ ಹರಿಹರನು ಮಹಾಮಂಡಲೇಶ್ವರನಾಗಿದ್ದನೆಂದು ತಿಳಿಯುವದು ತೀರ ಅಭದ್ರವಾಗಿರುವದು ಆದ್ದರಿಂದ, ಅವನು, **" ಕರ್ನಾಟಕದ ಅರಸ " ನಾದ ಪ್ರತಾಪ ಚಕ್ರವರ್ತಿ ಹೊಯ್ಸಣ ವೀರ ಬಲ್ಲಾಳದೇವರಸನ**

ಮಹಾಮಂಡಲೇಶ್ವರನಾಗಿರಬಹುದೆಂಬದೇ ಸಯುಕ್ತಿಕವಾಗಿ ತೋರುತ್ತದೆ

ನಿಜವಾಗಿ ಹರಿಹರನು ಸ್ವತಂತ್ರನಾಗಿರಬಹುದು. ತಾನು ಬಲ್ಲಾಳನ ಮಂಡಲೇಶ್ವರನಾಗಿರುವನೆಂದು ಹೇಳುವದು ಸುರಕ್ಷಿತವಾಗಿ ಕಂಡುಬಂದಿರಬಹುದು. ಮೇಲಾಗಿ ಕರ್ನಾಟಕದೊಳಗೆ ಪೂರ್ವದಿಂದ ನಡೆದು ಬಂದ ಹೊಯ್ಸಳರಿಗೆ ಆದರ ವಿದ್ದಿತು. ತಮ್ಮ ಕಾರ್ಯ ಸಾಧಿಸಿಕೊಳ್ಳಲಿಕ್ಕೆ ಹರಿಹರನಿಗೆ ಮಹಾಮಂಡಲೇಶ್ವರ ಪದವಿಯು ಅನುಕೂಲವಾಗಿ ಕಂಡುಬಂದಿರಬಹುದು. ಹೊಯ್ಸಳ ನಾಡಿನ ಉತ್ತರ ಪ್ರದೇಶದಲ್ಲಿ ಹರಿಹರನು ಪ್ರಬಲನಾಗಿದ್ದದರಿಂದ, ಉತ್ತರದ ಮುಸಲ್ಮಾನರ ಬಾಧೆಯು ಕಡಿಮೆಯಾಗಬಹುದೆಂದು, ಹೊಯ್ಸಳರು ಹರಿಹರನ ಗೋಜಿಗೆ ಹೋಗಿರಲಿಕ್ಕಿಲ್ಲ ಆ ಪರಿಸ್ಥಿತಿಗೆ ಆವರೀರ್ವರ ನಡುವಣ ಸಂಬಂಧವು ಕೆಲಮಟ್ಟಿಗೆ ಕಾರಣವಾಗಿರಬಹುದು.

"ಹರಿಹರನು, ಕಾನ್ಯನಾಯಕ ಅಥವಾ ಕಾಪಯ್ಯನಾಯಕನ ಆಪ್ತನಾಗಿರಬೇಕು. ಅವನು ಮಹಮ್ಮದೀಯ ಧರ್ಮವನ್ನು ಸ್ವೀಕರಿಸಿ, ಕಂಪಿಲದೇವನ ರಾಜ್ಯದ ಮೇಲೆ, ದಿಲ್ಲಿಯ ಸುಲ್ತಾನನ ಅಧಿಕಾರಿಯಾಗಿ ಆಳಿದನು," ಎಂಬೆನ್ನುವ ಬರಾಣಿಯ ಮಾತು ವಿಶ್ವಸನೀಯವಾಗಿರುವದಿಲ್ಲ ಆದರೂ ಡಾ ವೆಂಕಟರಮಣಯ್ಯನವರು ಅದನ್ನು ನಿಜವೆಂದು ಅಂಗೀಕರಿಸಿರುವರು "೧೩೧೦ ರಲ್ಲಿ ಮಲಿಕಕಾಫರನು, ದೋರಸಮುದ್ರದ ಮೇಲೆ ದಾಳಿ ಮಾಡಿ, ಬಲ್ಲಾಳದೇವನನ್ನು ಸೆರೆಹಿಡಿದು ದಿಲ್ಲಿಗೆ ಕಳುಹಿದನು," ಎಂದು ಬರೆದ ಬರಾಣಿಯ ವಾಕ್ಯವನ್ನು ಖಂಡಿಸಿ, ಡಾ. ವೆಂಕಟರಮಣಯ್ಯನವರೇ, ಬಲ್ಲಾಳದೇವನು ದೋರಸಮುದ್ರದಲ್ಲಿಯೆ ಇದ್ದನೆಂದು ಸಿದ್ಧಗೊಳಿಸಿರುವರು. ಆದ್ದರಿಂದ ನೀಲಿಕೆಟ್ಟ ಬರಾಣಿಯ ಮಾತನ್ನು ಮುಂದೆ ಮಾಡಿ, ಕಾನ್ಯನಾಯಕನಿಗೂ ಹರಿಹರನಿಗೂ ಸಂಬಂಧವುಂಟಾಗುವದೆಂದು ತಿಳಿದು, ಅವನ ಕತೆಯಲ್ಲಿ ವಿಶ್ವಾಸವನ್ನಿಡುವದು ಅವಾಸ್ತವವೇ ಸರಿ. ವಿದ್ಯಾತೀರ್ಥರಾಗಲಿ, ವಿದ್ಯಾರಣ್ಯರಾಗಲಿ ಕುಲಗೇಡಿಯಾದ ಹರಿಹರನಿಗೆ ಎಂದೂ ಆಶ್ರಯವನ್ನೀಯುತ್ತಿರಲಿಲ್ಲ. ಕ್ರಿಯಾಶಕ್ತಿಯು ಅವನ ರಾಜಗುರುವಾಗಿರಲಿಕ್ಕಿಲ್ಲ. ಇಬನ್ ಬಟ್ಟೂಟನೂ ಆದೇ ಕಾಲದಲ್ಲಿ ಹಿಂದುಸ್ಥಾನದೊಳಗಿದ್ದನು. ಆದರೆ, ಅವನು ಕಂಪಿಲದೇವನ ವಧೆಯಾದ ಮೇಲೆ ಅವನ ರಾಜ್ಯದ ಗತಿಯೇನಾಯಿತೆಂಬದನ್ನು ಬರೆದಿರುವದಿಲ್ಲ. ಬರಾಣಿಯ ಮತದಂತೆ, ಕುಲಗೆಟ್ಟ ಮುಸಲ್ಮಾನನು ಎಂದು ಆಳತೊಡಗಿದನೆಂಬುದು ತಿಳಿಯುವಂತಿಲ್ಲ, ಮತ್ತು ಅವನು ಮರಳಿ ಎಂದು ಹಿಂದುವಾದನೆಂಬುದೂ ಗೊತ್ತಾಗುವದಿಲ್ಲ. ಇಬನ್ ಬಟ್ಟೂಟನು 'ಹರಿಬ'ನಿಗೆ ಕಾಫರ (ಹಿಂದು) ಎಂದು ೧೩೪೩ ರಲ್ಲಿ ಕರೆದಿರುವದರಿಂದ, ಅವನು ಆ ವರ್ಷದ ಹಿಂದೆ ಮರಳಿ ಹಿಂದುವಾಗಿರಬಹುದೆಂದು ತಿಳಿಯಬಹುದು. ಹೀಗಿದ್ದ ಪಕ್ಷದಲ್ಲಿ, ಅವನ ಕೈಕೆಳಗಿರುವ ಹೊನ್ನಾವರದ ಮುಸಲ್ಮಾನ ಅಧಿಕಾರಿಯು ಅವನ ವಿರುದ್ಧ ಬಂಡಾಯವನ್ನೇಕೆಬ್ಬಿಸಲಿಲ್ಲ? ದಿಲ್ಲಿಯ ಸುಲ್ತಾನನು ಸುಮ್ಮನೆ ಕುಳಿತ ಕಾರಣವೇನು? ಕಾನ್ಯನಾಯಕನು, ಓರುಗಲ್ಲಿನ ಪ್ರದೇಶದಲ್ಲಿ ದಿಲ್ಲಿಯ ಮುಸಲ್ಮಾನರ ವಿರುದ್ಧ ಬಂಡಾಯವನ್ನೆಬ್ಬಿಸಿದ್ದನು ಅಂಥವನ ಆಪ್ತರಲ್ಲೊಬ್ಬನನ್ನು ಕಂಪಿಲಿನ ಪ್ರದೇಶವನ್ನಾಳಲಿಕ್ಕೆ ನಿಯೋಜಿಸಲು ದಿಲ್ಲಿಯ ಸುಲ್ತಾನನಿಗೆ ಅವಶ್ಯಕತೆ ಯಾವದಿದ್ದಿತು? ಇವೇ ಮುಂತಾದ ಪ್ರಶ್ನೆಗಳಿಗೆ ಡಾ. ವೆಂಕಟರಮಣಯ್ಯನವರ ಹೊತ್ತಿಗೆಯು, ಉತ್ತರವನ್ನೀಯುವದಿಲ್ಲ. ಆದ್ದರಿಂದ ಅದು ವಿಶ್ವಸನೀಯವಾಗಿರುವದಿಲ್ಲವೆಂದು ಧಾರಾಳವಾಗಿ ಹೇಳಬಹುದು

ಹರಿಹರ ಬುಕ್ಕರು ಕೂಡಿಯೆ ಆಳಿದಂತೆ ತೋರುತ್ತದೆ. ೧೩೭೮ ನೇ ಇಸ್ವಿಯ ಒಂದು ಶಾಸನದಲ್ಲಿ, "ಹರಿಹರನು, ಬುಕ್ಕನನ್ನು ಯುವರಾಜನನ್ನಾಗಿ ಮಾಡಿಕೊಂಡಿದ್ದನೆಂದು" ತಿಳಿಯುತ್ತದೆ ಬೆಂಗಳೂರು ತಾಲೂಕಿನೊಳಗಿನ ಒಂದು ಶಿಲಾಲೇಖದೊಳಗೆ, "ಮಹಾಮಂಡಲೇಶ್ವರ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ ಅರಿಯಪ್ಪ ಒಡೆಯರು ಹಾಗೂ ಬುಕ್ಕಒಡೆಯರು ಶಾಸನಂಗೆಯ್ಯುತ್ತಿರಲು," ಎಂದು ಮುಂತಾಗಿ ಬರೆದಿರುವದರಿಂದ ಅವರೀರ್ವರ ಆಳಿಕೆಯು ಜೊತೆಯಿಂದಲೆ ನಡೆದಿದ್ದಿತೆಂದು ಹೇಳಬಹುದು.

ಹರಿಹರನ ತಮ್ಮನಾದ ಕಂಪನು ನೆಲ್ಲೂರು ಜಿಲ್ಲೆಯೊಳಗಿನ ಪ್ರದೇಶದಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದನು. ಅವನು, ೧೩೪೩ ರಲ್ಲಿ, ಇಲ್ಲವೆ, ಅದರಕಿಂತಲು ಮುಂಚಿತ ಅಲ್ಲಿ ನೆಲಸಿರಬಹುದು. ಈ ಕಂಪರಾಯನಿಗೆ ಸಾಯಣಾಚಾರ್ಯರು ಮಹಾಮಂತ್ರಿಯಾಗಿದ್ದರು.

ಮಾರಪನು ಗೋಮಂತ ಶೈಲದಲ್ಲಿ (ಚಂದ್ರಗುತ್ತಿಯಲ್ಲಿ) ಆಳುತ್ತಿದ್ದನು. ಅವನ ಅಂಕಿತದಲ್ಲಿ ಬನವಾಸಿಯ ಹನ್ನೆರಡುಸಾವಿರ ನಾಡು ಇದ್ದಿತು ಅವನ ಸಚಿವನು "ಮಾಧವ ಮಂತ್ರಿ" ಯೆಂಬವನಿದ್ದನು.

'ಹರಿಹರ ಬುಕ್ಕ, ಕಂಪ, ಮಾರಪರು ಆಳಿದ ರಾಜ್ಯವಿಸ್ತಾರವನ್ನವಲೋಕಿಸಿದರೆ, ಅವರು ಅರಬೀಸಮುದ್ರದಿಂದ ಬಂಗಾಲ ಉಪಸಾಗರದ ವರೆಗಿರುವ ಹೊಯ್ಸಳ ರಾಜ್ಯದ ಉತ್ತರ ಸೀಮೆಯಲ್ಲಿ ನೆಲಸಿದ್ದರೆಂದು ಹೇಳಬಹುದು ಮುಮ್ಮಡಿ ಬಲ್ಲಾಳನು ಮಧುರೆಯ ಸುಲ್ತಾನನ ಸಂಗಡ ಹೋರಾಡುತ್ತಿರುವಾಗ್ಗೆ ಮಡಿದನೆಂದು ಹಿಂದೆ ಹೇಳಿದೆಯಷ್ಟೆ. ಅವನ ತರುವಾಯ ಅವನ ಮಗ ನಾಲ್ಕಡಿವೀರವಿರೂಪಾಕ್ಷ ಬಲ್ಲಾಳನು ದೋರಸಮುದ್ರದ ಪಟ್ಟವನ್ನೇರಿದನು ಆವನು ೧೩೪೬ ರಲ್ಲಿ ತೀರಿಕೊಂಡನು. ಅವನ ತರುವಾಯ ಕರ್ನಾಟಕ ಸಾಮ್ರಾಜ್ಯವನ್ನಾಳುವ ಅರಸನು ಹೊಯ್ಸಳರಲ್ಲಿ ಉಳಿಯಲಿಲ್ಲ ಸಂಗಮನ ಮಕ್ಕಳಿ ಸ್ವಾಭಾವಿಕವಾಗಿ ಕರ್ನಾಟಕದ ಹಿರಿಯ ಹುದ್ದೆಗಳಾದರು ಅಖಿಲ ಹಿಂದುಸ್ಥಾನದಲ್ಲಿ ಸಾಧುವರ್ಯರೂ ಉದ್ದಾಮ ಪಂಡಿತರೂ ಆದ ವಿದ್ಯಾತೀರ್ಥರು, ವಿದ್ಯಾರಣ್ಯರು ಸಾಯಣಾಚಾರ್ಯರೇ ಮುಂತಾದವರು ಅವರಿಗೆ ಧರ್ಮಕಾರಣದಲ್ಲಿಯೂ ರಾಜಕಾರಣದಲ್ಲಿಯೂ ಸಹಾಯ ಮಾಡುತ್ತಿದ್ದುದರಿಂದ, ಅವರಿಗೆ ಜನಸಾಮಾನ್ಯದ ಬೆಂಬಲ ದೊರಕಿದುದು ಆಶ್ಚರ್ಯದ ಮಾತಲ್ಲ ಮುಸಲ್ಮಾನರಿಂದ ಭಯಗ್ರಸ್ತವಾದ ಕನ್ನಡ ನಾಡು ನಿಸ್ಸಪತ್ನವಾಗಿ, ನಿರಾತಂಕವಾಗಿ, ಧರ್ಮವೀರರಾದ ಸಂಗಮನ ಮಕ್ಕಳಿಗೆ ವಶವಾಯಿತು !

ಈ ವಿಜಯ ಮಹೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಲು, ಹರಿಹರನು ತನ್ನ ಆಪ್ತೇಷ್ಟರೊಂದಿಗೆ ೧೩೪೬ ರಲ್ಲಿ ಶ್ರೀಂಗೇರಿಗೆ ಹೋಗಿ, ಅಲ್ಲಿ ವಿದ್ಯಾತೀರ್ಥರ ಅಡಿದಾವರೆಗಳಲ್ಲಿ ದಾನಧರ್ಮವನ್ನು ಮಾಡಿದನು. ಆ ಶಿಲಾಶಾಸನದಲ್ಲಿ, जयोत्सव व्यापयितुं अकरोद् धर्ममुत्तमम् । ಎಂದು ಉಲ್ಲೇಖಿಸಲಾಗಿದೆ. ಆ ಶಾಸನದ ಸಾರಾಂಶವೇನೆಂದರೆ, "ಮಹಾಮಂಡಲೇಶ್ವರ ಅರಿರಾಯ ವಿಭಾಡ ಭಾಷೆಗೆ ತಪ್ಪಿದ ಅರಸರಗಂಡ ವೀರಹರಿಯಪ್ಪ ಒಡೆಯರು ಕಂಪಣ್ಣೊಡೆಯರು, ಬುಕ್ಕಣ್ಣೊಡೆಯರು ಮಾರಪೊಡೆಯರು, ಮುದ್ದಪೊಡೆಯರು, ಅಳಿಯ ಬಲ್ಲಪ್ಪ ದಣ್ಣಾಯಕರು, ಕುಮಾರ ಸೋವಣ್ಣೊಡೆಯರು ಮುಂತಾದವರಿಂದ, ಶ್ರೀಭಾರತೀತೀರ್ಥ ಶ್ರೀಪಾದಂಗಳವರು ಅವರ ಶಿಷ್ಯರು ಮೊದಲಾದವರಿಗೆ ಹಾಗೂ ಶ್ರಿಂಗಗಿರಿಯೊಳಗಿರುವ ನಾಲ್ವತ್ತು ಜನ ಬ್ರಾಹ್ಮಣರಿಗೆ ಪೂಜೆಅರ್ಚನೆಗಳಿಗಾಗಿ ಈ ಶಿಲಾಶಾಸನದ ಮೂಲಕ ದಾನವನ್ನು ಮಾಡಲಾಯಿತು" ಆದರಲ್ಲಿ ಇದಕ್ಕೂ ಹೆಚ್ಚಿಗೆ ಇರುವದೇನೆಂದರೆ, 'ಹರಿಹರರಾಯನು ಪೂರ್ವಪಶ್ಚಿಮ ಸಮುದ್ರಗಳ ನಡುವಿರುವ ಪ್ರದೇಶವನ್ನು ಗೆದ್ದ ಮೇಲೆ ವಿಜಯ ಮಹೋತ್ಸವದ ಸಮಯದಲ್ಲಿ ದತ್ತಿಯನ್ನ ಪಿಡಿಸಲಾಯಿತು" ಇಮ್ಮಡಿ ಹರಿಹರನ ಶ್ರಿಂಗೇರಿಯ ಶಾಸನದಲ್ಲಿ, "ಹೊಯ್ಸಳರಾಜ್ಯವನ್ನು ಹಿರಿಯ ಹರಿಯಪ್ಪ ಒಡೆಯರು ಶಾಸನಂಗೆಯ್ಯುತ್ತಿರಲು, ಹರಿಹರರಾಯರು, ತಮ್ಮ ತಮ್ಮಂದಿರೊಡನೆ ಮತ್ತು ಬಳ್ಳಪನಾಯಕರೊಡನೆ ವಿದ್ಯಾತೀರ್ಥ ಶ್ರೀಪಾದಂಗಳವರ ಸನ್ನಿಧಿಯಲ್ಲಿ, ಪಾರ್ಥಿವ ನಾಮ ಸಂವತ್ಸರದೊಳಗೆ (೧೩೪೬) ಶ್ರಿಂಗೇರಿಗೆ ಬಿಜಯಂಗೈಸಿದ್ದರು," ಎಂದು ಹೇಳಿರುವದರಿಂದ **ಹರಿಹರನು ಬಲ್ಲಾಳ ದೇವನ ನಂತರ ಹೊಯ್ಸಳರಾಜ್ಯಕ್ಕೆ ಒಡೆಯನಾದನೆಂದು ತಿಳಿಯುತ್ತದೆ.** ಈ ರೀತಿಯಾಗಿ ಹೊಯ್ಸಳರ ತರುವಾಯ ಹರಿಹರ ಬುಕ್ಕರು ಕರ್ನಾಟಕನಾಡಿಗೆ ಸಾರ್ವಭೌಮರಾದರು

ಡಾ. ವೆಂಕಟರಮಣಯ್ಯನವರನ್ನುವಂತೆ, ವಿಜಯನಗರದ ಆಡಳಿತದಲ್ಲಿ ನೆರೆಮನೆಯವರಾದ ಕಾಕತೀಯರ ವೈಶಿಷ್ಟ್ಯಗಳು ಕಂಡುಬಂದರೂ ಬರುತ್ತಿರಬಹುದು. ಆದರೆ, ಕರ್ನಾಟಕದ ದಕ್ಷಿಣಭಾಗದಲ್ಲಿ ಬಹು ಕಾಲದವರೆಗೆ ವೈಭವದಿಂದಾಳಿದ ಹೊಯ್ಸಳರ ಕುರುಹುಗಳು ವಿಜಯನಗರದವರಲ್ಲಿ ಹೇರಳವಾಗಿ ಕಂಡುಬರುವದುಂಟು ಸಾಮ್ರಾಜ್ಯ ಧುರಂಧರರಾದ ವಿಜಯನಗರದ ರಾಯರು, ತಮ್ಮ ಆಡಳಿತವು ಸುಸೂತ್ರವಾಗಿ ಸಾಗಬೇಕೆಂದು, ನೆರೆಮನೆಯವರ ಕೆಲವು ಅನುಭವಗಳನ್ನು ಅಂಗೀಕರಿಸಿರಬಹುದು, ಕಾಕತೀಯರ-ಕೆಲ ಅಂಶಗಳು ವಿಜಯನಗರದವರ ಆಡಳಿತದಲ್ಲಿ ದೊರೆತ ಕ್ಷಣಕ್ಕೆ ಅವರು ತೆಲುಗರೆ ಇದ್ದರೆಂದು ಸಿದ್ಧವಾಗಲಾರದು. ವಿಜಯನಗರದ ರಾಯರು, ತಮ್ಮ **ಪೂರ್ವದ ಮರ್ಯಾದೆಯನ್ನು** ಎಂದೂ ತೊರೆಯಲಿಲ್ಲ. ಅಂತಹ ಕೆಲವು ಉದಾಹರಣೆಗಳನ್ನು ಕೆಳಗೆ ಕೊಡಲಾಗಿದೆ

೧. ಹೊಯ್ಸಳರ ತರುವಾಯ ತಾವೇ ಕರ್ನಾಟಕ ಸಾಮ್ರಾಜ್ಯದ ಕ್ರಮಪ್ರಾಪ್ತರಾದ ಒಡೆಯರೆಂದು

ವಿಜಯನಗರದ ಅರಸರು ತಿಳಿದುಕೊಳ್ಳುತ್ತಿದ್ದರು. ಹೊಯ್ಸಳರ ರಾಜ್ಯಕ್ಕೆ "ಹೊಯ್ಸಣ" ರಾಜ್ಯವೆಂದು ಕರೆಯಲಾಗುತ್ತಿತ್ತು. ಆದ್ದರಿಂದ ಹರಿಹರ ಬುಕ್ಕರಿಂದ ಕೃಷ್ಣದೇವರಾಯ ಅಚ್ಯುತರಾಯರ ವರೆಗೆ, ಅಷ್ಟೇಕೆ ಚಂದ್ರಗಿರಿಯನ್ನಾಳಿದ ನಾಲ್ಮಡಿ ವೆಂಕಟನ ಕಾಲದಲ್ಲಿಯೂ, ವಿಜಯನಗರದ ಅರಸರು ಹೊಯ್ಸಳರಾಜ್ಯವನ್ನಾಳುತ್ತಿದ್ದರೆಂದು ಹೇಳಲಾಗಿದೆ.

೨. ಬುಕ್ಕರಾಯನ ಸೈನ್ಯಕ್ಕೆ ಹೊಯ್ಸಳ ಸೈನ್ಯವೆಂದು ಸಂಬೋಧಿಸಲಾಗಿದೆ.

೩. ವಿಜಯನಗರದ ರಾಯರು, ಹೊಯ್ಸಳರ ಬಿರುದುಗಳನ್ನು ಅಭಿಮಾನದಿಂದ ಧರಿಸಿದ್ದರೆಂದು ತೋರುತ್ತದೆ. "ಯಾದವ ಕುಲದ ಶೂರ ಮೌಕ್ತಿಕಮಣಿ" ಎಂದು ಒಬ್ಬ ವಿಜಯನಗರದ ಅರಸನಿಗೆ ಕರೆದಿರುವದುಂಟು. ಇಮ್ಮಡಿ ಹರಿಹರರಾಯನಿಗೆ. "ದ್ವಾರಾವತೀ ಪುರವರಾಧೀಶ್ವರ," ಎಂಬ ಬಿರುದಿದ್ದಿತು ಇಮ್ಮಡಿ ದೇವರಾಯನಿಗೆ, "ಹೊಯ್ಸಣ ನಾಡಿನ ಮರ್ಯಾದೆ ಪರಂಪರೆಗಳನ್ನು ಪೊರೆವವ" ಎಂದು ಸಂಬೋಧಿಸಲಾಗಿದೆ.

೪. ಬೇಲೂರಿನ ಚನ್ನಕೇಶವನು, ಹೊಯ್ಸಳರ ಕುಲದೈವತವು. ವಿಜಯನಗರದವರ ಕುಲಸ್ವಾಮಿಯು ಹಂಪೆಯ ವಿರೂಪಾಕ್ಷನಾಗಿದ್ದರೂ, ಅವರು, ಬೇಲೂರಿನ ಚನ್ನಕೇಶವನನ್ನು ಬೇರೆಯಾಗಿ ನೋಡುತ್ತಿರಲಿಲ್ಲ. ಬೇಲೂರಿನಲ್ಲಿ ವಿಜಯನಗರದ ರಾಯರ ಅನೇಕ ದತ್ತಿಗಳಿರುವವು ಬರಬರುತ್ತ ಚನ್ನಕೇಶವನೆ ವಿಜಯನಗರದ ರಾಯರ ಕುಲಸ್ವಾಮಿಯಾದನು.

ಹರಿಹರ ಬುಕ್ಕರು ತೆಲುಗರೆ ಇದ್ದ ಪಕ್ಷದಲ್ಲಿ, ಅವರಿಗೆ ಆಂಧ್ರನಾಡಿನಲ್ಲಿ, ಬಹುಮಟ್ಟಿಗೆ ಬೆಂಬಲ ದೊರೆಯಬಹುದಾಗಿತ್ತು. ಆದರೆ ಬುಕ್ಕ ಹಾಗೂ ಇಮ್ಮಡಿ ಹರಿಹರರ ಕಾಲದ ಶಿಲಾಲೇಖಗಳಿಂದ ತಿಳಿಯುವದೇನಂದರೆ, ಅವರು ತೆಲುಗುನಾಡಿನೊಳಗಿನ ಬಂಡಾಯವನ್ನು ಮುರಿದು ಜಯಶಾಲಿಗಳಾದರು. ಹೀಗಿದ್ದರೂ, "ಬುಕ್ಕಹರಿಹರರಿಂದ ಗೆಲ್ಲಲಾದ ತೆಲಗು ನಾಡು, ರಾಜವೀಡು ಕೊಂಡವೀಡುಗಳ ರಾಜ್ಯಕ್ಕೆ ಸೇರಿದ ಆಂಧ್ರದೇಶವಾಗಿದ್ದುದರಿಂದ, ಅವುಗಳನ್ನು ಅವರು ಗೆದ್ದುಕೊಂಡ ವಿಷಯವು, ವಿಜನಗರದ ಸಂಸ್ಥಾಪಕರ ತೆಲುಗುತನದ ಸಂಬಂಧವಾಗಿ ಬಾಧೆಯನ್ನು ತರುವಂತಿಲ್ಲ," ಎಂದು ಡಾ. ವೆಂಕಟರಮಣಯ್ಯನವರು ಮತಪಟ್ಟಿರುವದು, ಸೋಜಿಗದ ಮಾತು.

ಹರಿಹರ ಬುಕ್ಕರ ಬಿರುದು ಕನ್ನಡ. ಅವರಾಳಿದ ನಾಡು ಕರ್ನಾಟ. ಬುಕ್ಕನ ಸೊಸೆಯಾದ ಗಂಗಾದೇವಿಯು ಮಧುರಾವಿಜಯಂ ಎಂಬ ತನ್ನ ಕಾವ್ಯದಲ್ಲಿ ಬರೆದಿರುವದೇನೆಂದರೆ.

कर्णाटलोकनयनोत्सवपूर्णचंद्रः ।
साकं तया हृदयसम्मतया नरेंद्रः ॥
कालोचितान्यनुभवन् क्रमशः सुखानि ।
वीराश्रिराय विजयापुरमध्यवात्सीत् ॥

ಬುಕ್ಕ ರಾಯನು, ಕರ್ನಾಟಕದ ಜನರ ನಯನಗಳಿಗೆ ಚಂದ್ರನಂತೆ ಆಲ್ಹಾದಕರನಾಗಿದ್ದನೆಂದು ಹೇಳಲಾಗಿರುವದರಿಂದ. ಅವನು, ಕನ್ನಡನೆ ಇರಲಿಕ್ಕೆ ಬೇಕು- ವಿಜಯನಗರದವರ ಶಾಸನಗಳಲ್ಲಿ, 'ವಿರೂಪಾಕ್ಷ' ಎಂಬ ಮುದ್ರಿಕೆಯ ಲಿಪಿಯು ಕನ್ನಡವಿದ್ದಿತು. ಕೆಲ ಕಾಲದ ಮೇಲೆ ಚನ್ನಕೇಶವನು ವಿಜಯನಗರದವರ ಕುಲಸ್ವಾಮಿಯಾದರೂ, ಮೊದಲಿನ ಮೂರು ಮನೆತನದವರು ಪೂರ್ವದ ವಿರೂಪಾಕ್ಷನ ಕನ್ನಡ ಮುದ್ರಿಕೆಯನ್ನೇ ಉಪಯೋಗಿಸುತ್ತಿದ್ದರು. ಚಂದ್ರಗಿರಿಯ ಇಮ್ಮಡಿ ವೆಂಕಟಪತಿದೇವರಾಯನ ಅವಸಾನಕಾಲದ ವರೆಗೆ, "ರಾಮ" ಎಂಬ ಕನ್ನಡಲಿಪಿಯ ಮುದ್ರಿಕೆಯು ಬಳಿಕೆಯಲ್ಲಿದ್ದಿತು. ಹರಿಹರ ಬುಕ್ಕರ ರಾಜಗುರುಗಳು ಧರ್ಮಗುರುಗಳು ಕನ್ನಡರು. ವಿಜಯನಗರ ಸಾಮ್ರಾಜ್ಯಕ್ಕೆ ಕರ್ನಾಟಕ ಸಾಮ್ರಾಜ್ಯವೆಂದು ಯಾವಾಗಲೂ ಸಂಬೋಧಿಸಲಾಗಿರುತ್ತದೆ.

# ಶ್ರೀವಿದ್ಯಾರಣ್ಯರ ರಾಜ್ಯ ಮುಳುಗಿತು—
# ಸಾಮ್ರಾಜ್ಯ ಬೆಳೆಯಿತು.

ಲೇಖಕರು:—**ವೈದ್ಯಭಾನು ಶ್ರೀ ದ. ಕೃ ಭಾರದ್ವಾಜ** ಎಂ ೧. ( ಆಯುರ್ವೇದ ),
ಎಂ. ಬಿ. ( ಬಾಯೊಕೆಮಿಕ್ ), ಬೆಂಗಳೂರು.

'ಎಂದಿಗೂ ಮರೆಯಲಾಗದ ಸಾಮ್ರಾಜ್ಯ'ದ ರಾಜಧಾನಿಯಾಗಿದ್ದ ವಿಜಯನಗರವು ಸ್ಥಾಪಿತವಾಗುವದಕ್ಕೆ ಮುಂಚೆ, ಆ ಪ್ರದೇಶದಲ್ಲಿ ಹರಿಯುತ್ತಿರುವ ತುಂಗಭದ್ರೆಯು ಇಬ್ಭಾಗವಾಗಿ ಒಂದು ಸಣ್ಣ ಗುಡ್ಡದಂತಿರುವ ಪ್ರದೇಶವನ್ನು ಬಳಸಿಕೊಂಡು ಹೋಗಿದ್ದ ಸ್ಥಳದಲ್ಲಿ ಒಬ್ಬ ತಪಸ್ವಿಯು ಧ್ಯಾನಮಗ್ನನಾಗಿ ಕುಳಿತಿದ್ದಾನೆ. ಆತನ ತಪೋಜ್ವಾಲೆಯನ್ನು ಸಹಿಸಲಾರದೆಯೆ ಕಿರೀಟಧಾರಿಣಿಯೂ ಸುಂದರಿಯೂ ಆದ ರಮಣಿಯೊಬ್ಬಳು ಕೈಯಲ್ಲಿ ಕಮಲ ಪುಷ್ಪವನ್ನು ಧರಿಸಿ, ತನ್ನ ಕಾಂತಿಪ್ರಭೆಯಿಂದ ತಪಸ್ವಿಯ ಕಣ್ಣನ್ನು ಬಿಡಿಸಿದಳು ಜನರು ಬರುವದಕ್ಕೆ ಅವಕಾಶವಿಲ್ಲದಿದ್ದ ಆ ಸ್ಥಳದಲ್ಲಿ ಒಬ್ಬಳು ಸುಂದರಿಯಾದ ಕಾಂತಿಯುಕ್ತಳಾದ ಯುವತಿ! ತಪೋನಿಧಿಗೆ ಆಶ್ಚರ್ಯವಾಯಿತು ತಪಸ್ವಿಯು ಕೇಳಿದನು:—'ಹೇ ಸುಂದರಿ! ನೀನು ಯಾರು? ಇಲ್ಲಿಗೇಕೆ ಬಂದೆ?'— ಸುಂದರಿಯು ಹೇಳಿದಳು —"ತಪೋಧನ! ನೀನು ನನ್ನನ್ನೆ ಕುರಿತು ತಪಸ್ಸು ಮಾಡಲಿಲ್ಲವೆ? ನಿನ್ನ ತಪಸ್ಸಿಗೊಲಿದು ನಾನುಈಗ ನಿನಗೆ ಪ್ರತ್ಯಕ್ಷಳಾಗಿರುವೆನು." ಮುನಿಯು ಮಾರುತ್ತರವಿತ್ತನು— "ಹೇ ದೇವಿ! ಲಕ್ಷ್ಮಿ! ನಾನು ಈಗ ಸನ್ಯಾಸಿ. ನಿನ್ನಿಂದ ನನಗೇನೂ ಪ್ರಯೋಜನವಿಲ್ಲ. ಆದ್ದರಿಂದ ಹೊರಟು ಹೋಗು. ಚಂಚಲೆಯಾದ ನಿನಗಿಂತಲೂ ಈಗ ನಿನ್ನ ಸೊಸೆಯಾದ ಸರಸ್ವತಿಯಿಂದ ಮಾತ್ರ ನನಗೆ ಪ್ರಯೋಜನವಿದೆ. ನಾನು ಅವಳನ್ನೇ ಒಲಿಸಿಕೊಳ್ಳುವೆನು." ಲಕ್ಷ್ಮಿಯು ನುಡಿದಳು— "ನಿನಗೆ ಹಿಂದಿನ ಜನ್ಮದಲ್ಲಿ ನಾನು ಒಲಿಯಲಾಗಲಿಲ್ಲ. ಈಗ ನೀನು ಸನ್ಯಾಸಿಯಾದುದರಿಂದ ನಿನ್ನ ಹುಟ್ಟು ಬದಲಾಯಿತು. ಆದ್ದರಿಂದ ಈಗ ಪ್ರತ್ಯಕ್ಷಳಾಗಿದ್ದೇನೆ. ನಿನ್ನ ತಪಸ್ಸಿನ ಫಲವಾಗಿ ಬಂದ ನಾನು ಹಿಂತಿರುಗಿ ಹೋಗಲಾರೆ. ನನ್ನಿಂದ ಆವುದಾದರೊಂದು ಪ್ರಯೋಜನವನ್ನು ನೀನು ಹೊಂದಲೇಬೇಕು!"

**ಮುನಿ:**— ಹೇ ಮುಗ್ಧೆ! ಚಂಚಲೆ! ನಿನ್ನಿಂದ ಸ್ಥಿರವಾದ ಕಾರ್ಯವು ಯಾವುದಾಗುವುದು? ನಿನ್ನ ಸಹಾಯದಿಂದ ಯಾವ ಕಾರ್ಯ ಮಾಡಿದರೂ ಅದು ಶಾಶ್ವತವಾಗಿ ನಿಲ್ಲದು

**ಲಕ್ಷ್ಮಿ:**—ಮುನಿವರ! ನಿಜ! ನನ್ನ ಸ್ವಭಾವವನ್ನು ಬದಲಾಯಿಸಬಲ್ಲವರಾರು? ಆದರೆ ತಪಸ್ಸಿದ್ಧಿಯ ಪ್ರಭಾವವನ್ನು ನೀನು ಜಗತ್ತಿಗೆ ಒಂದು ಬಾರಿ ತೋರು ಈಗ ದೇಶದಲ್ಲಿ ರಾಜ್ಯದ ರಾಕ್ಷಸೀ ಕಾಂಕ್ಷೆಯಿಂದ ಉನ್ಮತ್ತರಾದವರ ಪ್ರಾಬಲ್ಯವು ಹೆಚ್ಚುತ್ತಿದೆ. ಸನಾತನಧರ್ಮಿಗಳೆನಿಸಿಕೊಂಡು, ಕೇವಲ ಐಹಿಕ ಸುಖಮಗ್ನರಾಗಿ, ತಮ್ಮ ಧರ್ಮವನ್ನೂ ಅದರ ಆಚರಣೆಯಿಂದ ಲಭಿಸುವ ಶಕ್ತಿಯನ್ನೂ ಮರೆತು, ಕೇವಲ ಐಹಿಕ ಸುಖಲಾಲಸೆಯಿಂದ, ತಮ್ಮ ಧರ್ಮಕ್ಕಾಗಿ ಕಾದಾಡಲಾರದೆ, ದುರ್ಬಲ ಮನರಾಗಿ ಪರಧರ್ಮಾವಲಂಬಿಗಳಾಗುತ್ತಿರುವರು ಆದರೆ ತಪೋನಿಧಿಯಾದ ನೀನು ರಾಜ್ಯವನ್ನೂ ರಾಜರನ್ನೂ ನಿರ್ಮಾಣ ಮಾಡುವ ಶಕ್ತಿಯು ಸನಾತನವಾದ ತಪೋಧರ್ಮದಲ್ಲಿದೆ ಎಂಬುದನ್ನು ತೋರು. ಅವರಿಗೆ ಸ್ವಧರ್ಮದಲ್ಲಿ ನಂಬಿಕೆಯನ್ನು ಹುಟ್ಟಿಸು. ಅದಕ್ಕಾಗಿ ನನ್ನನ್ನು ಉಪಯೋಗಿಸು ನಾನು ಈಗ ಹಿಂತಿರುಗಲಾರೆ ಈ ಜನರು ಎಂದು ನೀನು ತೋರಿದ ಮಾರ್ಗದಿಂದ ಹಿಮ್ಮೆಟ್ಟಿ, ನನ್ನನ್ನು ದುರುಪಯೋಗಪಡಿಸಲಾರಂಭಿಸುವರೊ ಅಂದು ಅವರ ವೈಭವವನ್ನು ನಾನು ನಾಶಗೊಳಿಸಿ ಹಿಂತಿರುಗುವೆನು."

**ಮುನಿ:**—ಹೇ ಚಂಚಲೇ! ಆಗಲಿ. ನಿನ್ನ ಇಚ್ಛೆಯಂತಾಗಲಿ. ನಿನ್ನ ಸಹಾಯದಿಂದ ನಾನು ರಾಜ್ಯವನ್ನೂ ರಾಜರನ್ನೂ ಇಲ್ಲಿಯೆ ನಿರ್ಮಿಸುವೆನು. ಆದರೆ ಆ ರಾಜ್ಯವು ಎಷ್ಟುದಿನ ಬಾಳುವುದು?

**ಲಕ್ಷ್ಮಿ:**—ಆ ರಾಜರು ಧರ್ಮಮಾರ್ಗವನ್ನನು

ಸರಿಸುತ್ತ ರಾಜ್ಯವಾಳುವವರೆಗೆ. ಆದರೆ ನೀನು ನನ್ನ ಸೊಸೆಯಾದ ಸರಸ್ವತಿಯು ಸಹಾಯದಿಂದ ಸ್ಥಾಪಿಸ ಲೆಳಸುವ ಮನೋರಾಜ್ಯವು, ಮುಂದೆ ಸಾಮ್ರಾಜ್ಯ ವಾಗಿ ಇಡೀ ಜಗತ್ತನ್ನೆ ಬೆಳಗುವಂತಾಗುವುದು.

**ಮುನಿ:**—ನಿನ್ನ ಇಚ್ಛೆಯಂತಾಗಲಿ! ಒಂದು ಬಾರಿ ಈಗ ಸುವರ್ಣವೃಷ್ಟಿಯನ್ನು ಸುರಿಸು.

ಸುವರ್ಣವೃಷ್ಟಿಯಾಯಿತು. ಸುತ್ತಲೂ ನಿಸರ್ಗ ದೇವಿಯು ಕಟ್ಟಿದ ಕೋಟೆಯ ಎಂಬತ್ತಿಗ್ಗ ಸುಮಾರು ಮೂವತ್ತು ಚದರ ಮೈಲಿ ವಿಸ್ತೀರ್ಣವುಳ್ಳ ಪ್ರದೇಶದಲ್ಲಿ ವಿಜಯನಗರ ಸ್ಥಾಪನೆಯಾಯಿತು ನಗರದಲ್ಲಿ ಅರಮನೆ, ರಾಜಬೀದಿ, ದೇವಾಲಯಗಳು ವಿಜೃಂಭಿ ಸಿದವು ತಪೋಧನರಾದ ವಿದ್ಯಾರಣ್ಯರು ಸ್ಥಾಪಿಸಿದ ನಗರದಲ್ಲಿ ಕಲೆಗಾರರು, ಶಿಲ್ಪಿಗಳು, ಕೈಗಾರಿಕೆಯವರು ವ್ಯಾಪಾರಗಾರರು, ಸಾಹುಕಾರರು ಮೊದಲಾದವರೆಲ್ಲ ಬಂದು ನೆಲಸಿದರು ನಗರದಲ್ಲಿ ಎಲ್ಲಿ ನೋಡಿದರೂ ಬಂಗಾರದ ಹೊಗೆಯು ಸೂಸಲಾರಂಭಿಸಿತು. ನಗರದ ಅಂದ, ಚಂದ, ಸೊಬಗುಗಳು ಪರಕೀಯರ ದೃಷ್ಟಿ ಯನ್ನು ಎಳೆದವು ಪರಕೀಯರು ಬಂದರು, ನೋಡಿ ದರು ನಗರದ ವೈಭವವನ್ನು! ಆನಂದದಿಂದ ತಲೆ ದೂಗಿ, ವಿಜಯನಗರದ ಆತಿಥ್ಯಸುಖವನ್ನು ಸವಿದು, ಆ ನಗರವನ್ನೂ ರಾಜ್ಯವನ್ನೂ ಹೊಗಳುತ್ತ ಹಿಂತಿರುಗಿದರು. ಸುಮಾರು ೫೦ ವರುಷಗಳವರೆಗೆ ಅಲ್ಲಿನ ರಾಜರಿಗೆ ರಾಜಧರ್ಮವನ್ನು ಬೋಧಿಸುತ್ತ, ವಿದ್ಯಾರಣ್ಯರು ವಿಜಯನಗರ ರಾಜ್ಯವು ಪಶ್ಚಿಮದಲ್ಲಿ ಸಮುದ್ರ ತೀರದವರೆಗೆ ಹರಡುವಂತೆ ಮಾಡಿದರು ಅಂತಹರಿಗಲ್ಲದೆ ಮತ್ತಾರಿಗೆ **'ಕರ್ನಾಟಕ ಸಿಂಹಾ ಸನಸ್ಥಾಪನಾಚಾರ್ಯ'** ರೆಂಬ ಬಿರುದು ಸಲ್ಲುವುದು? ಈ ಬಗೆಯಾಗಿ ಮಾಧವನೆನಿಸಿದ್ದ, ವಿದ್ಯಾತೀರ್ಥರ ಶಿಷ್ಯರಾದವರು 'ವಿದ್ಯಾರಣ್ಯ'ರು, ತಮ್ಮಾತಪೋ ಬಲದಿಂದ 'ಕರ್ನಾಟಕ ಸಿಂಹಾಸನ' ವನ್ನು ಸ್ಥಾಪಿ ಸಿದರು ಇವರು ಸನ್ಯಾಸಾಶ್ರಮವನ್ನು ತೆಗೆದು ಕೊಳ್ಳುವುದಕ್ಕೆಮುಂಚೆಯೇ ಸರಸ್ವತಿಯನ್ನು ಒಲಿಸಿ ಕೊಂಡು (೧) 'ಪರಾಶರ ಸ್ಮೃತಿ ವ್ಯಾಖ್ಯಾನ (೨) ಮನುಸ್ಮೃತಿ ವ್ಯಾಖ್ಯಾನ, (೩) ವೇದಭಾಷ್ಯ, (೪) ಜೈಮಿನಿ ನ್ಯಾಯಮಾಲಾ ವಿಸ್ತಾರ, (೫) ಕಲಾ ಮಾಧವ್ಯಂ, (೬) ವ್ಯವಹಾರ ಮಾಧವ್ಯಂ, (೭) ಶಂಕರ ವಿಜಯ, (೮) ಸರ್ವದರ್ಶನ ಸಂಗ್ರಹ ಮೊದಲಾದ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಮುದ್ರಾಭೂತ ಶ್ಲೋಕಗಳಿಂದ ತಮ್ಮ ಪೂರ್ವಾ ಶ್ರಮವನ್ನು ಸೂಚಿಸಿದ್ದಾರೆ ಸನ್ಯಾಸಿಗಳಾದ ಬಳಿಕ ಉತ್ತರಾಶ್ರಮ ಧರ್ಮಾನುಸಾರವಾಗಿ ಆ ಬಗೆಯ ಶ್ಲೋಕಗಳನ್ನು ಬಿಟ್ಟು (೧) ವೇದಾಂತ ಪಂಚದಶಿ (೨) ವಿವರಣ ಪ್ರಮೇಯ ಸಂಗ್ರಹ, (೩) ಬ್ರಹ್ಮ ವಿದಾಶೀರ್ವಾದಪದ್ಧತಿ, (೪) ಜೀವನ್ಮುಕ್ತಿ ವಿವೇಕ, (೫) ದೇವ್ಯಪರಾಧ ಸ್ತೋತ್ರ ಮೊದಲಾದ ಗ್ರಂಥ ಗಳನ್ನು ರಚಿಸಿದರು.

ಈ ಜಗತ್ತಿನ ಇತಿಹಾಸದಲ್ಲಿ ಖ್ಯಾತಿವೆತ್ತು ಮಣ್ಣು ಗೂಡಿದ ಎಲ್ಲ ಸಾಮ್ರಾಜ್ಯಗಳ ಇತಿಹಾಸದ ಹಾಡು ಒಂದೆಯಾಗಿರುವುದು. ಸಾಮ್ರಾಜ್ಯಸ್ಥಾಪಕರ ಮೂಲ ಉದ್ದೇಶಗಳನ್ನು, ಬಳಿಕ ಬಂದ ರಾಜರು ಮರೆತು, ಕೇವಲ ಪಾಶವೀ ಸುಖಗಳಿಗಾಗಿ ತಮ್ಮ ತನುಮನ ಗಳನ್ನು ಧಾರೆಯೆರೆದು ದುರ್ಬಲರಾದಾಗ ಪರಕೀ ಯರು ಬಂದು ಆ ಸಾಮ್ರಾಜ್ಯವನ್ನು ನಾಶಗೊಳಿ ಸಿದುವರು ಆದರೆ ಆ ಗತಸಾಮ್ರಾಜ್ಯದವರ ಚೇತನವು ಪುನರುಜ್ಜೀವನಗೊಳ್ಳಬೇಕಾದರೆ, ಅವರಿಗೆ ಗತವೈಭವದ ನೆನಪಲ್ಲದೆ ಮತ್ತಾವ ಸಹಾಯವಿರು ವುದು! ಅದಕ್ಕಾಗಿ ಆಗ ಅವರು ಹಿಂದಿನ ವೈಭವದ ಇತಿಹಾಸವನ್ನು ಶೋಧಿಸಲಾರಂಭಿಸುವರು. ಇಂದು ಅದೇ ಬಗೆಯ ಪ್ರಯತ್ನವು ಸುಮಾರು ೬೦೦ ವರುಷಗಳ ಹಿಂದೆ ಸ್ಥಾಪಿತವಾಗಿ ಕರ್ನಾಟಕದ ವೈಭವವನ್ನು ದಶದಿಶೆಗಳಲ್ಲಿಯೂ ಸೂರೆಗೊಳಿಸಿದ ವಿಜಯನಗರ-ವಿದ್ಯಾನಗರದ ವಿಚಾರದಲ್ಲಿ ನಡೆಯು ತ್ತಲಿದೆ ಕುರಿಮರೆಯಲ್ಲಿಯೇ ಬೆಳೆದುಬಾಳಿದ ಸಿಂಹದ ಮರಿಗೆ ಎಚ್ಚರಿಕೆಯುಂಟಾದಂತೆ, ಈಗ ಕನ್ನಡಿಗರಿಗೆ ನಾವೂ ಮಾನವರು, ನಮ್ಮಲ್ಲಿಯೂ ಸೃಷ್ಟಿಶಕ್ತಿಯಾಂಶ ವಿದೆ ಎಂಬ ಅರಿವು ಉಂಟಾಗಿದೆ ಅದ್ದರಿಂದಲೆ ಈಗ ತಮ್ಮ ಪೂರ್ವೇತಿಹಾಸವನ್ನು ಬೆಳಕಿಗೆ ತರಲಪೇಕ್ಷಿ ಸಿರುವರು ಈ ಪೂರ್ವೇತಿಹಾಸ ಪರಿಚಯದಿಂದ ಕನ್ನಡಿಗರೆಲ್ಲರಿಗೂ ಆತ್ಮಪರಿಚಯವೂ ಸ್ಫೂರ್ತಿಯೂ ಉಂಟಾಗಲಿ.

ಮತ್ತೆ, ಹಿಂದಿನ ವಿದ್ಯಾನಗರದ ರಾಜ್ಯವು ಮುಳುಗಿ ಹೋದರೂ, ವಿದ್ಯಾರಣ್ಯ ಸಾಮ್ರಾಜ್ಯವು ಮಾತ್ರ ಈಗ ವಿಶ್ವದಲ್ಲಿ ಸುಶಿಕ್ಷಿತರ ಮಾನಸಿಕ ಜಗತ್ತಿ ನಲ್ಲಿ ವಿಸ್ತರಿಸಿರುವದೆಂದು ತಿಳಿಯಲಿ. ವಿದ್ಯಾರಣ್ಯರ ಕಾಲದಲ್ಲಿ ಅವರ ಹೆಸರು ಕೇವಲ ಸಾಹಿತಿ, ವೇದಾಂತಿ, ಐತಿಹಾಸಿಕ ವ್ಯಕ್ತಿಯಾಗಿ ಹಿಂದುಸ್ಥಾನಕ್ಕೆ

ವೈದ್ಯಭಾನು ದ. ಕೃ. ಭಾರದ್ವಾಜರು
ಎಂ. ಡಿ. ( ಆಯುರ್ವೇದ ) ಬೆಂಗಳೂರು.



ಶ್ರೀ. ಎಂ. ಎಸ್. ಸರದಾರ
ಎಂ. ಎ. [ಆಕ್ಸನ್] ಬಾರ ಆ್ಯಟಲಾ ಸೊಲ್ಲಾಪೂರ.



ಪಂಡಿತ ಕೇಶವಶರ್ಮಾ ಗಲಗಲಿ.



ಪಂಡಿತ ಬುರ್ಲಿ ಶ್ರೀನಿವಾಸಾಚಾರ್ಯರು
ಬಾಗಿಲುಕೋಟೆ



ಮಾತ್ರ ತಿಳಿದಿತ್ತು, ಈಗ ಅಮರವಾದಾ ಅವರ ವೇದ ಭಾಷ್ಯ ಮತ್ತು ಇತರ ಗ್ರಂಥಗಳು ಪ್ರಪಂಚದ ವಿಶ್ವ ವಿದ್ಯಾಲಯಗಳಲ್ಲೆಲ್ಲ ಹೊಕ್ಕು, ವಿದ್ಯಾರಣ್ಯರ ಸಾಮ್ರಾಜ್ಯವನ್ನು ವಿಸ್ತರಿಸಿ, ಬೆಳಗುತ್ತವೆ ಇಂತಹ ವ್ಯಕ್ತಿ ಕಾರ್ಯಕ್ಕೆ ತಕ್ಕ ಸ್ಮಾರಕವನ್ನು ಸ್ಥಾಪಿಸಿ, ಈ ವ್ಯಕ್ತಿ ಕಾರ್ಯವು **ಕರ್ನಾಟಕದ** ವ್ಯಕ್ತಿಯಿಂದಲೆ ಆಯಿತೆಂದು ಕನ್ನಡಿಗರು ಜಗತ್ತಿಗೆ ತೋರುವರೇನು? ಮತ್ತಿ ಅದರಿಂದ ಸ್ಫೂರ್ತಿಹೊಂದಿ ಮತ್ತೊಮ್ಮೆ ಕರ್ನಾಟಕ ಸಾಮ್ರಾಜ್ಯ ವೈಭವವು ಬೆಳಗುವಂತೆ ಮಾಡುವರೇನು ?

# ವಿಜಯದಶಮಿ.

೧

ಅಂಜಬೇಡಿರಿ! ಅಂಜಬೇಡಿರಿ!
ಮಂಜುದಶಮಿಯು ಬಂದಿದೆ!
ಮಂಜು ಮಂಜುಳಗಾನದಿಂದಲಿ
ಸಂಜೆ ಸರಿ ಸರಿಸಾಡಿದೆ.
ಹುಂಜರಾಗಿರಿ ಪುಂಜರಾಗಿರಿ
ನಂಜನೆರೆ ಸಿಡಿದಾಡಿರಿ.

೨

ವೀರಧೀರರೆ ಧೀರವೀರರೆ
ಸಾರಿ ಸಂಗರದಾಣಕೆ
ತೋರ ತನುವಿನ ವೀರ ತನಿರಸ
ಸೂರೆಗೊಳ್ಳಿರಿ ದೇಶಕೆ
ಸಾರಿ ಹೇಳುವೆ ದೂರಿ ಹೇಳುವೆ
ಮೂರು ನುಡಿಯದೆ ಮಡಿಯಿರಿ

೩

ಆರ್ಯ ವೀರರೆ ಕಾರ್ಯ ವೀರರೆ
ಆರ್ಯಮಾತೆಯ ತೇಜವ
ತೂರ್ಯತಾನದಿ ಕಾರ್ಯರೂಪದಿ
ಆರ್ಯರೂಪದಿ ತೋರಿರಿ.
ಆರ್ಯವಿಶ್ವವೊ ವಿಶ್ವವಾರ್ಯವೊ
ಆರ್ಯವಿಶ್ವವಗೈಯಿರಿ.

೪

ಹೊಂದಿ ಹೊದ್ದಿಹ ಕನ್ನಡಮ್ಮನ
ಕಂದನೆದ್ದಿಹ ಗೇಹದಿ
ಮುಂದೆ ಬರುತಿಹ ಸಂದ ಬವರವ
ಸಂದು ಸಾರಿಹ ಗಾನದಿ
ಬಂಧುರಾಂಬರ ಭಾರತಾಂಬೆಯು
ಗಂಧಗೂಡಿಹ ತಾನದಿ.

೫

ತೋರ ಹಿಮಗಿರಿ ಸೇತುಬಂಧನ
ಸಿಂಧು-ಮಣಿಪುರದಂಚನು
ಮೀರಿ ಮೆರೆಯಿರಿ ಮಾನವಾಂಬುಧಿ
ಹಿಂದೊಗೆದು ಮುಂದಾಗಿರಿ.
ಹಾರಿ ಹರುಷದೆ ವಿಶ್ವರೂಪದಿ
ಮಿಂದು ಮೈಗಲಿಯಾಗಿರಿ

೬

ಜೀವನದ ಜರಿ ಜಾಗ್ರುತಿಯ ಜರಿ
ವಿಜಯದಶಮಿಯು ಬಂದಿದೆ.
ಹುಟ್ಟುಸಾವಿನ ಸೃಷ್ಟಿಯೆಲ್ಲವ
ಸುಟ್ಟುತಾನುರೆ ನಿಂದಿದೆ.
ದುಷ್ಟಶಾಸನ ಶಿಷ್ಟರಕ್ಷಣ
ಇಷ್ಟ ಭಾರತ ಸೃಷ್ಟಿಗೆ.

೭

ಕನ್ನಡದ ಕವಿ ಪಕ್ಷಿ ಚೆನ್ನನ
ಉನ್ನತದ ಸಾಮ್ರಾಜ್ಯದಿ
ಇನ್ನು ನನ್ನೆಯ ಚೆನ್ನೆ ಚೆನ್ನರು
ನನ್ನಿ ಸುಖಸಲ್ಲಾಪದಿ
ಉನ್ನತೋನ್ನತ ನಿತ್ಯ ವಿಜಯದಿ
ಹೊನ್ನ ಹೊಯ್ಮಳೆ ಹೊಯ್ಸಿರಿ.

—ಸ. ಪ. ಗಾಂವಕರ, ಹೆಬ್ಬುಳ್ಳಿ

# ವಿಜಯನಗರ ಸಾಮ್ರಾಜ್ಯದಲ್ಲಿ ಸ್ತ್ರೀಯರ ಸ್ಥಾನ.

ಲೇಖಕರು:—ಶ್ರೀ ಎ ಎಮ್ ಪಾಟೀಲ. ಬಿ. ಏ. ( ಆನರ್ಸ )
ಹುಬ್ಬಳ್ಳಿ ಅವಧೂತ ಗ್ರಂಥಮಾಲೆಯ ಪರವಾಗಿ.

ವಿಜಯನಗರದ ಸಾಮ್ರಾಜ್ಯದಲ್ಲಿ ಸ್ತ್ರೀಯರಿಗೆ ಒಂದು ಮಹತ್ವದ ಸ್ಥಾನವಿತ್ತು; ಉನ್ನತಾವಸ್ಥೆಯಿತ್ತು. ವಿಜಯನಗರದ ವೈಭವವನ್ನು ವಿಶಾಲಗೊಳಿಸಿದವರಲ್ಲಿ ಇವರಿಗೂ ಎಡೆಗೊಡಲೇ ಬೇಕು; ಇವರಿಗೂ ಒಂದು ವಿಶಿಷ್ಟಸ್ಥಾನವನ್ನೀಯಲೇಬೇಕು. ಇದು ಬರಿಯ ಬೂಟಾಟಿಕೆಯ ಮಾತಲ್ಲ; ಆಧಾರವಿಲ್ಲದೆ ಆವೇಶದಿಂದ ಆಡುವ ಪೊಳ್ಳು ನುಡಿಯಲ್ಲ ಸಾಧಾರವಾಗಿ ಸಾಧಿಸಿ, ಸಿದ್ಧಿಸಿ, ಸಾಕ್ಷಾತ್ಕರಿಸಿ ತೋರಿಸುವ ಸತ್ಯವಿದು. ಪುರುಷರಂತೆ ಅವರಾದರೂ ಸಾಮ್ರಾಜ್ಯದ ಹೊಣೆಗಾರಿಕೆಯನ್ನು ಹೊತ್ತವರು. ಅವರು ಬರಿಯ ಪುರುಷನ ವಿಲಾಸದ ವಸ್ತು ಆಗಿದ್ದಿಲ್ಲ ಅಂತೆಯೇ ಸಾಮ್ರಾಜ್ಯದ, ಸಂಸ್ಕೃತಿಯ ಸಿರಿಯು ಹೆಚ್ಚಿತು ಆದರೆ ಆ ಸಂಸ್ಕೃತಿಯು ಈಗೆಲ್ಲಾ ಅಳಿದಿದೆ; ಅಳಿಸಿಗೆ. ಆಗಿನ ವಿಲಾಸವೊಂದೇ ಹೊಳೆಯುವದು. ಅರಮನೆಯ ದಾಸಿಯರ ವೈಭವ, ಸೂಳೆಯರ ಸೂಳೆಗಾರಿಕೆಯೊಂದೇ ನೆನಪಿನಲ್ಲಿ ಅದೆ. ಇದು ಸಾಮ್ರಾಜ್ಯದ ತಪ್ಪಲ್ಲ ಸಾಮ್ರಾಜ್ಯದ ನಿಜವಾದ ಇತಿಹಾಸಕ್ಕೆ ಬೇಕಾಗುವ ಸಾಮಗ್ರಿಗಳನ್ನು ಕೂಡಿಸುವ ಶಕ್ತಿ ಇಲ್ಲದೆ, ಅಲ್ಲೊಮ್ಮೆ ಇಲ್ಲೊಮ್ಮೆ ಮಿಣುಕುವ ಮಾಯಾಜಲದಂತಿರುವ ಮಿಣುಕು ಹುಳಗಳನ್ನು ಕಂಡು ಅವುಗಳನ್ನೇ ಮೂಲವಾಗಿಟ್ಟುಕೊಂಡು ಅಲಕ್ಷ್ಯದ ಮಾತುಗಳನ್ನು ಆಡುವ ನಮ್ಮಂಥವರ ತಪ್ಪು

ಸಾಮಾನ್ಯ ಜನತೆಯನ್ನು ನೋಡಿದರೇ ಸಾಮ್ರಾಜ್ಯದ ಕಾಲದ ಸ್ತ್ರೀಯರು ಪುರುಷರೊಡನೆ ಹೊರಗಿನ ಜೀವನದಲ್ಲಿ ಬೆರೆತು ಕೂಡಿ ನಡೆಯುವವರಲ್ಲ. ಬೆರೆತು ನಡೆಯುವ ವಿಚಾರವೂ ಅವರಿಗೆ ಹೊಳೆದಿರಲಿಕ್ಕಿಲ್ಲ; ಅಂಥ ಸಂಸ್ಕೃತಿಯ ಸಂಪರ್ಕವು ಇನ್ನೂ ಅವರಿಗೆ ಆಗಿದ್ದಿಲ್ಲ ಹಿಂದಿನಿಂದ ಬಂದ ಆಚಾರವನ್ನೇ ಅವರು ಮೂಲವಾಗಿಟ್ಟುಕೊಂಡು ನಡೆದವರು, ಆದರೂ ಈಗಿನ ರೂಢಿಗಳು ಇನ್ನೂ ಆಗ ಮೂಡಿದ್ದಿಲ್ಲವೆಂದು ಹೇಳಬಹುದು. ಕೃಷ್ಣರಾಯನ ಕಾಲದಲ್ಲಿ ವಿಜಯನಗರಕ್ಕೆ ಬಂದ 'ಪೇಜ' ನೆಂಬ ಪೋರ್ತುಗೀಜ ಪ್ರವಾಸಿಯು ತಾನು ಬರೆದ ವೃತ್ತಾಂತದಲ್ಲಿ ಬ್ರಾಹ್ಮಣ ಸ್ತ್ರೀಯರ ವಿಷಯವಾಗಿ ಹೇಳುವ ಮುಂದೆ "ಉಳಿದವರಂತೆ ಇವರಾದರೂ ಹೊರಗೆ ಬಂದು ಪುರುಷರೊಡನೆ ಕೂಡಿನಡೆಯುವವರಲ್ಲ" ಎಂದು ಹೇಳಿದ್ದಾನೆ. ಆದರೂ ಇವರು ತಮ್ಮದೊಂದು ವಿಶಿಷ್ಟವಾದ ಸ್ವತಂತ್ರ ವಾತಾವರಣವನ್ನು ಮಾಡಿಕೊಂಡಿದ್ದರು; ತಮ್ಮದೊಂದು ಪುರುಷರಂತೆ ಬೇರೆಯಾದ ಪ್ರಪಂಚವನ್ನೇ ಹೂಡಿಕೊಂಡಿದ್ದರು. ಅಲ್ಲಿ ಆ ಪ್ರಪಂಚದಲ್ಲಿ ಅಡಿಗೆಯಿಂದ ಕಾಳಗದವರೆಗೆ ಯಾವತ್ತೂ ಮಾರ್ಗಗಳಲ್ಲಿ ಯಾವತ್ತೂ ವಿದ್ಯೆಗಳಲ್ಲಿ ಶಿಕ್ಷಣಪಡೆಯುತ್ತಿದ್ದರು.

ಕೃಷ್ಣರಾಯನು ೧೫೧೫ರಲ್ಲಿ ಕೊಂಡವೀಡಿಗೆ ದಂಡೆತ್ತಿ ಹೋದಾಗ್ಗೆ ಅವನ ಹೆಂಡಂದಿರಾದ ಚಿನ್ನದೇವಿಯಮ್ಮ ತಿರುಮಲದೇವಿಯಮ್ಮ ಇವರಿಬ್ಬರೂ ರಾಯನನ್ನು ಕಾಳಗಕ್ಕೆ ಹಿಂಬಾಲಿಸಿದ್ದರು. ( Archaeological Survey Reports for 1908-9 page 108) ಬುಕ್ಕರಾಯನ ಮಗನಾದ ಇಮ್ಮಡಿ ಕಂಪಣ್ಣನು ತೊಂಡಮಂಡಲದ ಅರಸನಾದ ಚಂಪರಾಯನ ಮೇಲೆ ದಂಡೆತ್ತಿ ಹೋದಾಗ್ಗೆ ಅವನ ಹೆಂಡತಿಯಾದ ಗಂಗಾದೇವಿಯು ಕಂಪಣ್ಣನನ್ನು ಅನುಸರಿಸಿರಲೇಬೇಕು. ಅಂತೆಯೇ 'ವೀರ ಕಂಪಣರಾಯಚರಿತಂ' ಎಂಬ ಗಂಗಾದೇವಿಯೇ ಬರೆದ ಸಂಸ್ಕೃತ ಕಾವ್ಯದಲ್ಲಿ ಕಾಳಗದ ವರ್ಣನೆಗಳು ವಿಶದವಾಗಿವೆ; ನೈಜವಾಗಿವೆ. ೧೩೭೭ ರಲ್ಲಿ ಆದ ಒಂದು ಕಾಳಗದಲ್ಲಿ ಮಹಾವೀರ ಮಾದರ ಕಾಳನು ಯುದ್ಧದಲ್ಲಿ ಮಡಿಯಲು ಅವನ ಹೆಂಡತಿಯಾದ ಬೊಮ್ಮಾಂಬೆಯು ಹಿಂಜರಿಯದೆ

ಸಂಗ್ರಾಮವನ್ನು ಸಾಗಿಸಿ ಕಾಳಗದಲ್ಲಿ ಮಡಿದಳೆಂದು ಉಲ್ಲೇಖಿಸಿದೆ. ( Mysore Archaeological Reports for 1923 pags 90-91) ೧೪೪೬ ರ ಒಂದು ವೀರಗಲ್ಲ ಮೇಲೆ ಹರಿಯಕ್ಕ ಎಂಬವಳು ತನ್ನ ತಂದೆ ಮಾದಿಗೌಡನು ಮಲ್ಲಯುದ್ಧ ಮಾಡಿ ಮಡಿಯಲು ಆ ಮಲ್ಲನೊಡನೆ ತಾನೂ ಮಲ್ಲಯುದ್ಧ ಮಾಡಿ ಮಡಿದಳೆಂದು ಉಲ್ಲೇಖಿಸಿದೆ

ಇವೆಲ್ಲ ಉಲ್ಲೇಖಗಳು ಅಲ್ಲೊಂದು ಇಲ್ಲೊಂದು ಸಿಗುವದರಿಂದ ಜನತೆಗೆ ಅಪವಾದಗಳೇ ಹೊರ್ತು ಈ ಅಪವಾದಗಳಿಂದ ಸಮಾಜದ ಸಂಸ್ಕೃತಿಯನ್ನು ಕಲ್ಪಿಸುವದಕ್ಕೆ ಯೋಗ್ಯವಾಗುವದಿಲ್ಲವೆಂದನ್ನಬಹುದು. ಆದರೆ ಇವು ಅಲ್ಲೊಂದು ಇಲ್ಲೊಂದು ಸಿಗುವಷ್ಟು ವಿರಳವಲ್ಲ. 'ಬಾವಿ ತೋಡಿದಂತೆ ಬೇತಾಳ ಹೊರಟ ತಂತೆ' ಎಂದು ಅನ್ನುವ ಹಾಗೆ ಶೋಧಿಸಿದಂತೆ ಹೆಚ್ಚುಚ್ಚು ಸಿಕ್ಕೇ ಸಿಗುವವು ಸಾಮ್ರಾಜ್ಯದ ಕಾಲದಲ್ಲಿ ಬಂದ ಪರದೇಶದ ವರ್ತಕರ ವೃತ್ತಾಂತಗಳಿಂದಲೂ ಇದನ್ನು ಧೃಢಮಾಡಿಕೊಳ್ಳಬಹುದು ಪೇಜನು ತನ್ನ ವೃತ್ತಾಂತದಲ್ಲಿ " ಈ ಸ್ತ್ರೀಯರಲ್ಲಿ ಕೆಲವರು ಕತ್ತಿ ಢಾಲುಗಳ ವಿದ್ಯೆಗಳಲ್ಲಿ ಕೈಚಳಕವನ್ನು ತೋರಿಸ ಬಲ್ಲರು; ಕೆಲವರು ಮಲ್ಲಯುದ್ಧದಲ್ಲಿ ನಿಪುಣರು. ಮತ್ತೆ ಕೆಲವರು ಕಹಳೆ-ತುತ್ತೂರಿಗಳನ್ನು ಊದುವದರಲ್ಲಿ ಕುಶಲರು " ಎಂದು ಅರಮನೆಯ ಹೆಂಗಳೆಯರ ವರ್ಣನೆ ಮಾಡುವಾಗ ಹೇಳಿದ್ದಾನೆ ನಿಕೊಲೋ ಡಿ ಕಾಂಟಿ ( Nicolo De Canti ) ಎಂಬ ಮತ್ತೊಬ್ಬ ಪ್ರವಾಸಿಯು ಇವರ ವರ್ಣನೆ ಮಾಡುವಾಗ್ಗ " ಇವರಲ್ಲಿ ಅನೇಕರು ಚಂದವಾಗಿ ತೊಡವು ತೊಟ್ಟು ಕುದುರೆಗಳನ್ನು ಹತ್ತುವರು. " ಎಂದು ಹೇಳಿದ್ದಾನೆ. ( Major India P. 6 ) ನೂನಿಝು(Nuniz) ನೆಂಬ ಮತ್ತೊಬ್ಬ ಪ್ರವಾಸಿಯು 'ಇವನ ಬಳಿಯಲ್ಲಿ ಕೆಲವು ಕುಸ್ತಿಯಾಡುವ ಹೆಂಗಳೆಯರಿರುವರು " ಎಂದು ಬರೆದಿರುವನು.

ಈ ಸ್ತ್ರೀಯರು ಪುರುಷರಿಗೂ ಯೋಗ್ಯವಾದ ವಿದ್ಯೆಗಳನ್ನು ಬಲ್ಲವರಾಗಿದ್ದರಲ್ಲದೆ ಸ್ತ್ರೀಯರಿಗೆ ಯೋಗ್ಯವಾಗಿರುವ ಲಲಿತಕಲೆ, ವಾಙ್ಮಯದಲ್ಲಿಯೂ ನುರಿತವರು, ಅರಿತವರು. ಪೂರ್ಣನಿಷ್ಣಾತರು ಇದ್ದರು.

ರಾಯರ ಕಾಲದಲ್ಲಿ ಸ್ತ್ರೀಯರು ನೃತ್ಯಕಲೆಗೆ ಮನ್ನಣೆಯಿತ್ತು, ನೃತ್ಯವನ್ನು ವಿಶಾಲಗೊಳಿಸಿದಂತೆ ಮತ್ತಾರ ಕಾಲದಲ್ಲಿಯೂ ಆಗಿಲ್ಲ. ಬರಿಯ ಮನ್ನಣೆಯಲ್ಲ; ಕಲೆಯಲ್ಲಿ ವೈವಿಧ್ಯವನ್ನು ಹುಟ್ಟಿಸಿ ಸರ್ವ ವಿವಿಧತೆಗಳಲ್ಲಿ ಸಂಪೂರ್ಣತೆಯನ್ನು ತಂದುಕೊಟ್ಟು ನೃತ್ಯಕಲೆಯನ್ನು ಪರಿಪೂರ್ಣತೆಗೆ ಮುಟ್ಟಿಸಿದರು. ಇದರ ಉನ್ನತಿಯ ಶ್ರೇಯಸ್ಸು ಸಲ್ಲತಕ್ಕದ್ದು ಈ ಸ್ತ್ರೀಯರಿಗೆಯೇ. ಇವರಲ್ಲಿ ಕೆಲವರು ನೃತ್ಯವನ್ನು ಕಲೋಪಾಸನೆಯ ಸಲುವಾಗಿಯೇ ಕೈಕೊಂಡಿದ್ದರು; ಅಲ್ಲದೆ ಕೆಲವರು ( ಸೂಳೆಯರಲ್ಲಿ ಕೆಲವರು ) ಜೀವನದ ಮಾರ್ಗಕ್ಕೆ ಅನುಕರಿಸಿದ್ದರು; ಮತ್ತೆ ಕೆಲವರು 'ಇದೊಂದು ವಿಲಾಸ' ವೆಂದು ಕಲ್ಪಿಸಿ ಸತ್ಕರಿಸಿದ್ದರು. ರಾಯರ ಅರಮನೆಯಲ್ಲಿ ನೃತ್ಯಕ್ಕಾಗಿ ಬೇರೊಂದು ಶಾಲೆಯೇ. ರಾಣೀವಾಸದಲ್ಲಿ " ಪಟ್ಟದ ನಾಟಕ ಶಾಲೆ, ಎಂಬ ಬೇರೊಂದು ಭಾಗವೇ ಇತ್ತು. ಪೇಜನು ತನ್ನ ವೃತ್ತಾಂತದಲ್ಲಿ ಈ ಶಾಲೆಯ ವರ್ಣನೆಯನ್ನು ಈ ರೀತಿ ಮಾಡಿದ್ದಾನೆ. " ಈ ಕಂಬಗಳ ಮೇಲೆಯೂ ಕಮಾನುಗಳ ಮೇಲೆಯೂ ಬೇರೆ ಬೇರೆ ಕುಣಿತಗಳ ಕಡೆಯ ನಿಲುವಿಕೆಯ ಚಿತ್ರಗಳು ಬೇರೆ ಬೇರೆ ಮಣಿತಗಳ ಚಿತ್ರಗಳು ಅವೆ. ಈ ಚಿತ್ರಗಳು ಹೆಂಗಳೆಯರಿಗೆ ಕುಣಿತವನ್ನು ಕಲಿಸುವದಕ್ಕೆ ಬರೆದವುಗಳು. ಯಾರಾದರೂ ಕುಣಿತದ ಕೊನೆಯ ನಿಲುವಿಕೆಯನ್ನು ಮಣಿತವನ್ನು ಮರೆತರೆ ಆ ಕಂಬದ ಮೇಲಿರುವ ಆ ಕುಣಿತದ ನಿಲುವಿಕೆಯನ್ನು ನೋಡಿಯೇ ಕಲಿಯಬೇಕಾಗುವದು. ಇದರಿಂದಲೇ ಇವರು ತಾವು ಮಾಡಬೇಕಾದುದನ್ನು ಅರಿತುಕೊಳ್ಳುವರು. " ಉದಯಶಂಕರನಂಥ ಆಧುನಿಕ ನೃತ್ಯವಿಶಾರದರು ನೃತ್ಯವನ್ನು ಅರಿತದ್ದು ಇಂಥ ಚಿತ್ರಗಳಿಂದಲೇ ಈ ಶಾಲೆಯಲ್ಲಿ ಅರಸಿಯರು, ರಾಣೀವಾಸದವರು, ಅವರ ಬಳಗದವರು ನೃತ್ಯವನ್ನು ಕಲಿಯುತ್ತಿದ್ದರು. ಇಲ್ಲಿಯೇ ಇವರು ಅಂಗಾಂಗಗಳನ್ನು ಚಲಿಸುವದನ್ನು, ಅಂಗಾಂಗಗಳ ಮಣಿತಗಳಿಂದ, ಚಲನೆಯಿಂದ ಭಾವ ಭಂಗಿಗಳನ್ನು ಮಾಡಿಸುವದನ್ನು, ಅವಯವಗಳಲ್ಲಿ ಬೇಕಾಗುವ ಸರಳತೆಯನ್ನು, ಚಮತೆಯನ್ನು ಸೂಕ್ಷ್ಮತನವನ್ನು ಅರಿತುಕೊಳ್ಳುತ್ತಿದ್ದರು. " ಈ ಶಾಲೆಯ ಅಂತ್ಯದಲ್ಲಿ ಎಡಭಾಗದಲ್ಲಿ ಚಿತ್ರಗಳಿಂದ ರಂಜಿಸುವ ಮೂಲೆಯದೆ ಇದಕ್ಕೆ ಹೆಂಗಳೆಯರು ತಮ್ಮ ಕೈಗಳನ್ನು ಆನಿಸಿ ಕೈಕಾಲುಗಳನ್ನು ಸಡಿಲಿಸಿಕೊಳ್ಳುವದು. ಇಲ್ಲಿಯೇ ಇವರು ಕುಣಿತಕ್ಕೆ ಕಳೆಯೇರಿಸುವ ಅಂಗಾಂಗಗಳ ಚಲನವಲನಗಳನ್ನು ಕಲಿತುಕೊಳ್ಳುವದು " ಎಂದು ಪೇಜನು ಹೇಳಿದ್ದಾನೆ. ಇಂಥ ಶಾಲೆಗಳಿಂದ, ರಾಯರು ಆಗಾಗ್ಗೆ ಉತ್ಸವಗಳ ನಿಮಿತ್ತ

ದಿಂದ ಕೂಡಿಸುವ ಸ್ಪರ್ಧೆಗಳಿಂದ, ಅಲ್ಲದೆ ಉಂಬಳಿ, ಬಹುಮಾನಗಳನ್ನು ಕೊಟ್ಟು ಉತ್ತೇಜಿಸುವದರಿಂದ ಈ ಕಲೆಯು ನಾಡಿನ ಎಲ್ಲ ಭಾಗಗಳಲ್ಲಿಯೂ ಹಬ್ಬಿತ್ತು. ಅಂತೆಯೇ "ನಾಡಹಬ್ಬಕಾಗಿ ರಾಯನು ಈ ನರ್ತಕಿಯರನ್ನು ನಾಡಿನ ಎಲ್ಲ ಭಾಗಗಳಿಂದ ಆಮಂತ್ರಿಸುತ್ತಿದ್ದ." ಈ ಕಲೆಯ ಉನ್ನತಿಗೆ ರಾಯರು ಆಧಾರವಾದರೂ ಸ್ತ್ರೀಯರ ಆದರವೂ ಬಹಳ ಮಹತ್ವದ್ದು. ಅಂತೆಯೇ ಈ ಕಲೆಯು ಇದು ವರೆಗೆ ಸ್ವಲ್ಪಾದರೂ ಬಾಳಿದೆ.

ನೃತ್ಯಕ್ಕೂ ಸಂಗೀತಕ್ಕೂ ಸಾಮೀಪ್ಯವಿರುವದರಿಂದಲೇ ನೃತ್ಯದ ಸೊಬಗಿನ ಹೆಚ್ಚಳಕ್ಕೆ ಸಂಗೀತದ ಸವಿಯ ಜೋಡಣೆಯು ಬೇಕೇ ಬೇಕು ಸಂಗೀತದ ಬೆಳೆಯೇ ನೃತ್ಯಕ್ಕೆ ಕಳೆಯು. ನೃತ್ಯವು ಏರಿದೊಡೆ ಸಂಗೀತವು ಮರೆಯಾಗುವದೇ? ರಾಯರ ಕಾಲದಲ್ಲಿ ನೃತ್ಯವು ಹೆಚ್ಚಿದಂತೆ ಸಂಗೀತವೂ ಹೆಚ್ಚಿತು. ಇದಕ್ಕೆ ರಾಯರ ಕಾಲದ ಸ್ತ್ರೀಯರೂ ಕಾಣರು. ರಾಮಭದ್ರಾಂಬಳು ತನ್ನ ರಘುನಾಥಾಭ್ಯುದಯದಲ್ಲಿ ಅನೇಕ ರಾಗಗಳನ್ನು (ಜಯ, ಮಂಗಳ, ಸಿಂಹಳಲೀಲ, ಜಯನಿಸ್ಸಾರ, ಕಚ್ಛಚರಿತ್ರ) ಅನೇಕ ತಾಳಗಳನ್ನೂ (ರತಿತಾಳ, ತುರಂಗ ಲೀಲ, ರಂಗಾಭರಣ, ಅನಂಗ ಪರಿಕ್ರಮಣ, ಅಭಿನಂದನ, ನಂದನಂದನ, ಅಭಿಮಾಲಾ,) ಹೇಳಿದ್ದಾಳೆ. ಈ ಹೆಸರುಗಳ ನೆನಪೂ ಸಹ ಈಗ ಉಳಿದಿಲ್ಲ. ರಾಮಭದ್ರಾಂಬಳಿಗೆ ಇವುಗಳ ಪರಿಚಯವು ವಿಶೇಷವಾಗಿ ಇರಲೇಬೇಕು. ಆಗಿನ ವಾತಾವರಣವೇ ಹಾಗೆ. ನೂನಿಝುನು ತನ್ನ ವೃತ್ತಾಂತದಲ್ಲಿ "ಇವರಲ್ಲಿ ಸಂಗೀತದಲ್ಲಿ ಪ್ರವೀಣರಾದ ಹೆಂಗಳೆಯರಿರುವರು. ವಾದ್ಯಗಳನ್ನು ಬಾರಿಸುವವರಿರುವರು. ಅಲ್ಲದೆ ಕೆಲವರು ಉತ್ತಮವಾಗಿ ಹಾಡುವರು. ಅರಸನ ರಾಣಿಯರು ಕೂಡ ಸಂಗೀತದಲ್ಲಿ ಪ್ರವೀಣರು." ಎಂದು ಹೇಳಿದ್ದಾನೆ. ವಿಜಯನಗರ ಸಾಮ್ರಾಜ್ಯವು ಕೊನೆಯಾದ ಸ್ವಲ್ಪಾವಧಿಯಲ್ಲಿ ಬಾಳಿದ ರತ್ನಾಕರವರ್ಣಿಯ 'ಭರತೇಶ ವೈಭವ' ದಲ್ಲಿಯ ನೃತ್ಯಸಂಗಿತಗಳ ಮನೋಹರ ವರ್ಣನೆಗಳಿಂದ ರಾಯರ ಕಾಲದ ಸ್ತ್ರೀಯರಿಗೆ ಈ ಕಲೆಗಳಲ್ಲಿರುವ ವಿಶಾರದತೆಯನ್ನು ಗೊತ್ತು ಮಾಡಿಕೊಳ್ಳಬಹುದು.

ಅಲ್ಲದೆ ಕೆಲವು ಸ್ತ್ರೀಯರು ಸಾಹಿತ್ಯದಲ್ಲಿಯೂ ಅನುಭವಿಕರು. ಬುಕ್ಕರಾಯನ ಸೊಸೆಯಾದ ಗಂಗಾದೇವಿಯು 'ವೀರಕಂಪಣ ಚರಿತಂ' ಎಂಬ ಸಂಸ್ಕೃತ ಗ್ರಂಥವನ್ನು ಬರೆದಳು. ಶೋಧಿಸಿದಂತೆ ರಾಯರ ಕಾಲದ ಸ್ತ್ರೀಯರು ಬರೆದ ಇನ್ನೂ ಕೆಲವು ಗ್ರಂಥಗಳು ಸಿ ಬಹುದು. ಇದರಿಂದ ರಾಯರ ಕಾಲದಲ್ಲಿಯ ಸ್ತ್ರೀಯರು ಹೊಂದುವ ಶಿಕ್ಷಣವನ್ನು ಕಲ್ಪಿಸಬಹುದು.

ಜೀವನದ ಎಲ್ಲ ಮಾರ್ಗಗಳಲ್ಲಿಯೂ ಸ್ತ್ರೀಯರು ಸಂಸ್ಕೃತಿ ಹೊಂದಿ ಮನೆಯ ಜೀವನದಲ್ಲಿ(Domestic life) ಹೊರಗಿನ ಜೀವನದಲ್ಲಿ (outward life) ಪುರುಷರಿಗೆ ನೆರವಾಗಿ ನಿಂತರು, ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಸಹಾಯ ಮಾಡಿದರು. ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಹೊಂದಿರುವದರಿಂದಲೇ ಸಾಮ್ರಾಜ್ಯದ ಪ್ರಪಂಚದ ಇತಿಹಾಸದಲ್ಲಿ(Social History) ಈ ಸ್ತ್ರೀಯರಿಗೆ ಅತ್ಯುನ್ನತವಾದ ಸ್ಥಾನವಿದೆ.

---



# ವಿಜಯನಗರ ಸಾಮ್ರಾಜ್ಯದ ಘನತೆ.

ಲೇಖಕರು:—ಎಚ್. ಎಸ್. ಸರದಾರ ಬಿ. ಎ. ( ಆಕ್ಸನ್ ). ಬಾರ್-ಎಟ್-ಲಾ. ಸೋಲ್ಲಾಪೂರ.

ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನೂ ವರ್ಣನೆಯನ್ನೂ ಓದಿ ಕೇಳುವದೆಂದರೆ ಒಂದು ಕಾದಂಬರಿಯನ್ನು ಓದಿದಂತಾಗುತ್ತದೆ. ಈ ಸಾಮ್ರಾಜ್ಯದ ಘನತೆಯನ್ನು ಸಂಶೋಧಿಸಿದ ಪರಕೀಯ ಪಂಡಿತರು ಸಹ ಆಗಿನ ಕಾಲದ ಐಶ್ವರ್ಯದ ಬಗ್ಗೆಯೂ ಸಂಸ್ಕೃತಿಯ ಬಗ್ಗೆಯೂ ಬೆರಗಾಗಿ ಬಟ್ಟು ಕಚ್ಚಿಕೊಂಡಿದ್ದಾರೆ. ಇಂಥ ಘನತರವಾದ ಸಾಮ್ರಾಜ್ಯದ ಬಗ್ಗೆ ನಾನಾತರದ ಲೇಖಗಳಿಂದ ಕೂಡಿದ ವಿಶೇಷ ಸಂಚಿಕೆಯನ್ನು ಹೊರಡಿಸಿರುವ ಅರುಣೋದಯ ಕರ್ತರು ನಮ್ಮ ಧನ್ಯವಾದಗಳಿಗೆ ಅರ್ಹರಾಗಿರುತ್ತಾರೆ.

ವಿಜಯನಗರ ಸಾಮ್ರಾಜ್ಯದ ಇತಿಹಾಸವು ವಿಶಾಲವಾಗಿಯೂ ಬಹು ಉದ್ಬೋಧಕವಾಗಿಯೂ ಇರುತ್ತದೆ. ಅದರ ಕಾಲಾವಧಿಯು ಕೇವಲ ೨೩೦ ವರ್ಷಗಳು ಈ ಸಾಮ್ರಾಜ್ಯವು ವಿದ್ಯಾರಣ್ಯ ಮಹಾಮುನಿಗಳ ಸ್ಫೂರ್ತಿಯಿಂದ ಹರಿಹರ ಬುಕ್ಕರೆಂಬ ವೀರಬಂಧುಗಳ ಸಹಾಯದಿಂದ ೧೩೩೬ನೇ ವರ್ಷದಲ್ಲಿ ತುಂಗಭದ್ರೆಯ ದಡದಲ್ಲಿ ಪ್ರಸ್ಥಾಪಿತವಾಯಿತು. ಈ ಸಾಮ್ರಾಜ್ಯವು, ದಕ್ಷಿಣದಲ್ಲಿ ದಂಡೆತ್ತಿ ಬಂದು ಅಲ್ಲಿಯ ಹಿಂದೂ ರಾಜ್ಯಗಳನ್ನು ಒಳನುಗ್ಗಿ ತಮ್ಮ ಪ್ರಾಬಲ್ಯವನ್ನು ಬೆಳೆಸಲಿಕ್ಕೆ ಪ್ರಯತ್ನಿಸುತ್ತಿದ್ದ ಮುಸಲ್ಮಾನರಿಗೆ ವಿರೋಧಿಸುವ ಉದ್ದೇಶದಿಂದಲೂ, ಮತ್ತು ಹಿಂದೂ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಉದ್ದೇಶದಿಂದಲೂ ಪ್ರಸ್ಥಾಪಿಸಲ್ಪಟ್ಟಿತು. ಒಟ್ಟಿಗೆ ಈ ಸಾಮ್ರಾಜ್ಯವನ್ನು ಮೂರು ಅರಸುಮನೆತನದವರು ಆಳಿದರು. ಹರಿಹರನೇ ಇದರ ಮೊದಲನೇ ಅರಸನು. ಇವನ ಕಾಲದಲ್ಲಿ ಮುಸಲ್ಮಾನರ ವಿರುದ್ಧವಾಗಿ ಅನೇಕ ಕಾಳಗಗಳಾಗಿ ಸಾಮ್ರಾಜ್ಯವು ನಾನಾತರದ ಹಾನಿಯನ್ನು ಸಹಿಸಿತು. ೧೪೧೯ ರಿಂದ ೧೪೪೦ ರ ವರೆಗೆ ದ್ವಿತೀಯ ದೇವರಾಯನು ಸಾಮ್ರಾಜ್ಯದ ಅಧಿಪತಿಯಾಗಿದ್ದನು ಈತನ ಆಳಿಕೆಯಲ್ಲಾದರೂ ಮುಸಲ್ಮಾನರ ವಿರುದ್ಧವಾಗಿ ಅನೇಕ ಕಾಳಗಗಳೆಸಗಿದವು. ಆದಾಗ್ಯೂ ಈ ಅವಧಿಯಲ್ಲಿ ಸಾಮ್ರಾಜ್ಯದ ಜನಸಂಖ್ಯೆಯು ಬೆಳೆದು, ಐಶ್ವರ್ಯವಾದರೂ ಹೆಚ್ಚಿತು. ಆಹೊತ್ತಿನ ವಿಜಯನಗರದ ವರ್ಣನೆಯನ್ನು ಮಾಡುವಾಗ ನಿಕೊಲ್ ಕಾಂಟೇಬರ್ನು ಈ ಪಟ್ಟಣವು ಬಹುಶ: "ಇಡೀ ಜಗತ್ತಿಗೆ ಒಂದನೇ ಪಟ್ಟಣವೆಂದು" ವರ್ಣನೆಯನ್ನು ಮಾಡಿರುತ್ತಾರೆಂದ ಮೇಲೆ ಪಟ್ಟಣದ ಘನತೆಯನ್ನು ಸಹಜವಾಗಿ ಊಹಿಸಬಹುದು ೧೫೦೯ ರಿಂದ ೧೫೩೦ ರ ವರೆಗೆ ತುಳು ಅರಸುಮನೆತನಕ್ಕೆ ಸೇರಿದ ಕೃಷ್ಣದೇವರಾಯನೇ ವಿಜಯನಗರದ ಎಲ್ಲ ಅರಸರಲ್ಲಿ ಅತ್ಯಂತ ಪ್ರತಿಭಾಶಾಲಿಯಾದವನು ಈತನು ಒಳ್ಳೇ ಶೂರನಾದ ಸೈನಿಕನಾಗಿದ್ದನಲ್ಲದೆ ಚತುರನಾದ ಮುತ್ಸದ್ದಿಯೂ ಆಗಿದ್ದನು. ಈತನ ಅರಸುತನದ ಅವಧಿಯಲ್ಲಿ ಸಾಮ್ರಾಜ್ಯವು ಬೆಳೆಯಿತು. ಸಾಮ್ರಾಜ್ಯದ ಗಡಿಗಳು ಉತ್ತರಕ್ಕೆ ಓಡಿಸಾದ ವರೆಗೂ ದಕ್ಷಿಣಕ್ಕೆ ಲಂಕಾದ್ವೀಪದ ವರೆಗೂ ಪೂರ್ವಕ್ಕೂ ಪಶ್ಚಿಮಕ್ಕೂ ಸಮುದ್ರಗಳ ವರೆಗೂ ಬೆಳೆದವು. ವ್ಯಾಪಾರ, ಸಂಪತ್ತು, ವಾಙ್ಮಯವೃದ್ಧಿ, ಕಲೆಗಳ ವೃದ್ಧಿ ಮೊದಲಾದವೆಲ್ಲವುಗಳಲ್ಲಿ ಸಾಮ್ರಾಜ್ಯವು ಉನ್ನತಿಯನ್ನು ಹೊಂದಿತು ಈತನಿಗಾದರೂ ೧೫೨೦ ರಲ್ಲಿ ರಾಯಚೂರಿನಲ್ಲಿ ವಿಜಾಪುರದ ಅರಸನಾದ ಆದಿಲ್‌ಶಹನ ಕೂಡ ಯುದ್ಧ ಮಾಡಬೇಕಾಯಿತು. ಈ ಸಂಗ್ರಾಮದಲ್ಲಿ ಕೃಷ್ಣದೇವರಾಯನ ಸೈನಿಕರು ಅತ್ಯಂತ ಶೌರ್ಯದಿಂದ ಕಾದಾಡಿ, ಮುಸಲ್ಮಾನರ ಅಂತಃಕರಣದಲ್ಲಿ ಭೀತಿಯನ್ನು ಬೀರಿದರು ಆದುದರಿಂದಲೇ ದಕ್ಷಿಣದ ಎಲ್ಲ ಮುಸಲ್ಮಾನ ಅರಸರಲ್ಲಿ ಒಕ್ಕಟ್ಟು ಹುಟ್ಟಿತು. ತನ್ಮೂಲಕವೇ ಸಾಮ್ರಾಜ್ಯದ ಕಟ್ಟಕಡೆಯ ಅರಸನಾದ ರಾಮರಾಯನಿಗೆ ವಿಜಾಪೂರ, ಗೋವಳಕೊಂಡ, ಅಹಮದನಗರ, ಮತ್ತು ಬೀದರ ಈ ನಾಲ್ಕೂ ಒಕ್ಕಟ್ಟಾದ ರಾಜ್ಯಗಳ ವಿರುದ್ಧವಾಗಿ ನಿಲ್ಲಬೇಕಾಯಿತು ಇಂದಿಗೆ ವಿಜಯನಗರ ಸಾಮ್ರಾಜ್ಯದ ಪುಣ್ಯವು ಸುಟ್ಟು ಹೋಗಿತ್ತೋ! ಏನೋ ಅನ್ನುವಂತೆ ರಾಮರಾಯನ ಅತಿ ಬಲಾಢ್ಯವಾದ ಸೈನ್ಯವು ಸಹ, ಕರ್ನಾಟಕದ ವೈಭವಕ್ಕೆ ಕತ್ತಲವನ್ನುಂಟು ಮಾಡಿದ ೧೫೬೫ ನೇ ಇಸ್ವಿಯ ತಾಳೀಕೋಟೇ ಸಂಗ್ರಾಮದಲ್ಲಿ ಪರಾಭವ

ಹೊಂದಿತು. ರಾಮರಾಯನು ಈ ಕಾಲಕ್ಕೆ ೯೬ ವರ್ಷದ ಮುದುಕನಾಗಿದ್ದರೂ ಕೂಡ ರಣಾಂಗಣದಲ್ಲಿ ನಿಂತು ತನ್ನ ಸೈನಿಕರಿಗೆ ತುಂಬಾ ಹಣಗಳಿಕ್ಕೆ ಸ್ಫೂರ್ತಿಯನ್ನು ಕೊಡುತ್ತಿದ್ದನಂತೆ. ತಿಲೋತ್ತಮರಾಜ ಹಾಗೂ ವೆಂಕಟಾದ್ರಿ ಎಂಬಿವನ ಪಕ್ಷವವರು ಅತ್ಯಂತ ಶೌರ್ಯದಿಂದ ಕಾದಿದರಂತೆ ಆದಾಗ್ಯೂ ಶತ್ರುಗಳು ಒಮ್ಮಿಂದೊಮ್ಮೆ ರಾಮರಾಯನ ಸೈನ್ಯದಲ್ಲಿ ಮುದ್ದಾನೆಗಳನ್ನು ಬಿಟ್ಟು ಭೀತಿಯನ್ನುಂಟು ಮಾಡಿದ್ದರಿಂದ ಸೈನ್ಯದಲ್ಲಿ ಗೊಂದಲವಾಗಿ ರಾಮರಾಯನು ಪರಾಭವಿಸಲ್ಪಟ್ಟು ಆತನು ರಣಾಂಗಣದ ಮೇಲೆಯೇ ಮಡಿದನು ಅನಪೇಕ್ಷಿತವಾಗಿ ದೊರಕಿದ ವಿಜಯದಿಂದ ಮುಸಲ್ಮಾನರ ದಂಡು ದಿಙ್ಮೂಢವಾಗಿ ವಿಜಯನಗರದ ಪಟ್ಟಣವನ್ನು ಸೇರಿ ಮನಸಿಗೆ ಬಂದಂತೆ ಅತ್ಯಾಚಾರಗಳನ್ನು ಮಾಡಿದರಂತೆ ಸಾಮ್ರಾಜ್ಯಕ್ಕೆ ಆಭರಣಗಳಾಗಿದ್ದ ದೇವಾಲಯ, ಅರಮನೆ ಮೊದಲಾದ ಕಟ್ಟಡಗಳೆಲ್ಲ ಶತ್ರುಪಿನ ಕೈಸೇರಿ ಅವೆಲ್ಲ ಒಡೆದು ಪುಡಿಮಾಡಲ್ಪಟ್ಟವು. ಈ ದಾಳಿಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ. ಅದೆಂತೇ ಇರಲಿ. ತಾಳೀಕೋಟೆಯ ಪರಾಭವವೆಂದರೆ ಕರ್ನಾಟಕದ ದುರ್ದೈವದ ದಿನದ ಪ್ರಾರಂಭವು ನಂತರ ಸಾಮ್ರಾಜ್ಯವು ತುಂಡು ತುಂಡುಗಳಾಗಿ ಎಲ್ಲಕಡೆಗೆ ದಾಳಿಗಳು ಪ್ರಾರಂಭವಾಗಿ ರಾಜ್ಯವು ನಷ್ಟವಾಯಿತು. ಇದೇ ಸಾಮ್ರಾಜ್ಯದ ಸಂಕ್ಷಿಪ್ತ ಚರಿತ್ರೆಯು.

ಮುಸಲ್ಮಾನರ ದಾಳಿಗೆ ವಿರೋಧಿಸುವ ಉದ್ದೇಶದಿಂದ ಈ ಭವ್ಯವಾದ ಸಾಮ್ರಾಜ್ಯವು ಸ್ಥಾಪಿತವಾದಾಗ್ಯೂ ಅದು ತುಂಬಾ ಪರಧರ್ಮ ಸಹಿಷ್ಣುವಾದ ರಾಜ್ಯವಾಗಿತ್ತು. ಈ ರಾಜ್ಯದಲ್ಲಿ ಹಿಂದುಗಳಿಂದ ಮುಸಲ್ಮಾನರಿಗೆ ಯಾವತರದ ಪೀಡೆಯೂ ಆಗಿರಲಿಲ್ಲ. ಈ ಪರಧರ್ಮ ಸಹಿಷ್ಣುತೆಯು ಇಂದಿಗಾದರೂ ಕರ್ನಾಟಕದಲ್ಲಿ ಸ್ಥಿರವಾಗಿ ನಿಂತಿರುತ್ತದೆ. ಹಿಂದುಸ್ಥಾನದ ಮಿಕ್ಕ ಭಾಗಗಳಲ್ಲಿ ಕಂಡುಬರುವಂತೆ, ಕರ್ನಾಟಕದಲ್ಲಿ ಮಾತ್ರ ಹಿಂದೂ ಮುಸಲ್ಮಾನರ ವೈಮನಸ್ಸು ಕಂಡುಬರುವದಿಲ್ಲ. ಇದು ವಿಜಯನಗರ ಸಾಮ್ರಾಜ್ಯವು ಹಾಕಿಕೊಟ್ಟ ಮೇಲ್ಪಂಕ್ತಿಯ ಪರಿಣಾಮವೇ ಅನ್ನಬೇಕು

ವಿಜಯನಗರ ಸಾಮ್ರಾಜ್ಯದ ಘನತೆಯು ಯಾವ ಪ್ರಕಾರ ಪರಧರ್ಮ ಸಹಿಷ್ಣುತೆಯಲ್ಲಿ ಮುಂದುವರಿದಿರುವದೋ ಅದೇಪ್ರಕಾರ ಇನ್ನುಳಿದ ಸಾಂಸ್ಕೃತಿಕ ವಿಷಯಗಳಲ್ಲಿ ಸಹ ಅದರ ಘನತೆಯು ಸಂಸ್ಮರಣೀಯವಾಗಿರುತ್ತದೆ. ಉದಾಹರಣಾರ್ಥವಾಗಿ— ಈ ಸಾಮ್ರಾಜ್ಯದ ಶಿಲ್ಪಕಲೆಯು, ವಿರೂಪಾಕ್ಷನ ಹಾಗೂ ಹಜಾರರಾಮನ ಗುಡಿಗಳು, ವಿಜಯವಿಟ್ಠಲನ ಅತ್ಯಂತ ಮನೋಹರವಾದ ಕಟ್ಟಡವು, ಇದಲ್ಲದೆ ಹಂಪಿಯಲ್ಲಿ ಇಂದಿಗೂ ಕಾಣಬಹುದಾದ ಅನೇಕ ಮುರುಕು ಕಟ್ಟಡಗಳು ಆ ಸಾಮ್ರಾಜ್ಯದ ಶಿಲ್ಪಕಲೆಯ ಏಳ್ಗೆಯ ಸಾಕ್ಷಿಯಾಗಿರುವವು "ಹಂಪಿಯನ್ನು ನೋಡದವನು ಪಾಪಿ" ಯೆಂದು ಇಂದಿಗೂ ಜನರು ಅನ್ನುತ್ತಾರೆ. ನಿಜವಾಗಿಯೂ ಈ ಸ್ಥಳವನ್ನು ನೋಡಲಿಕ್ಕೆ ಎರಡು ಕಣ್ಣುಗಳು ಸಾಲಲಾರವು ಅಂದಮೇಲೆ ಆ ಕಾಲದ ಶಿಲ್ಪಕಲೆಯ ಘನತೆಯನ್ನೂ ಐಶ್ವರ್ಯವನ್ನೂ ಊಹಿಸಬಹುದು.

ವಿಜಯನಗರ ಸಾಮ್ರಾಜ್ಯದ ಚರಿತ್ರೆಯು ಕೇವಲ ಕನ್ನಡಿಗರಿಗೇ ಅಲ್ಲ, ಆದರೆ ಎಲ್ಲ ಭಾರತೀಯರಿಗೂ ಅತ್ಯಂತ ಬೋಧಪ್ರದವಾಗಿಯೂ, ಸ್ಫೂರ್ತಿದಾಯಕವಾಗಿಯೂ ಇರುತ್ತದೆ. ಆದಾಗ್ಯೂ ಈ ಸಾಮ್ರಾಜ್ಯದ ಚರಿತ್ರೆಯು ಕನ್ನಡವನ್ನರಿಯದ ಭಾರತೀಯರಿಗೆ ತಿಳಿಯುವಂತೆ ಇನ್ನುಳಿದ ಭಾರತೀಯ ಭಾಷೆಗಳಲ್ಲಿ ಬರೆಯಲ್ಪಡುವದು ಅತ್ಯವಶ್ಯಕವಾಗಿರುತ್ತದೆ ಕನ್ನಡ ಭಾಷೆಯಲ್ಲಿಯೂ ಈ ಸಾಮ್ರಾಜ್ಯದ ವಿಷಯಕವಾಗಿ ಸಂಶೋಧಕ ದೃಷ್ಟಿಯಿಂದ ಗ್ರಂಥಗಳು ವಿಪುಲವಾಗಿ ಹೊರಡುವದು ಅವಶ್ಯವು ಬರುವ ವರುಷದಲ್ಲಿ ಈ ಸಾಮ್ರಾಜ್ಯದ ಷಟ್‌ಶತಸಾವಂತ್ಸರಿಕ ಮಹೋತ್ಸವವು ಹಂಪಿಯಲ್ಲಿ ಆಗತಕ್ಕದ್ದಿರುತ್ತದೆ. ಇದು ಬಹಳೇ ಮಹತ್ವದ ಸಂಗತಿಯಾಗಿರುತ್ತದೆ. ಅದರೊಳಗಾಗಿ ಅರುಣೋದಯ ಕರ್ತರು ಈ ವಿಶೇಷ ಸಂಚಿಕೆಯ ಮೂಲಕ ವಿಜಯನಗರ ಸಾಮ್ರಾಜ್ಯದ ಚರಿತ್ರೆಯನ್ನು ಪ್ರಸಿದ್ಧಿಸುವ ಕಲ್ಪನೆಯನ್ನು ತೆಗೆದಿರುವದು ಬಹಳೇ ಸ್ತುತ್ಯವಾಗಿರುತ್ತದೆ.

---

# ವಿಜಯನಗರಕಾಲೀನ ಕುಂಡಲಿಗಳು.

ಲೇಖಕರು:—**ಪಂಡಿತ ಕೇಶವಶರ್ಮಾ, ಗಲಗಲಿ.**

ವಿಜಯನಗರವು ನಿಜವಾಗಿ ವಿದ್ಯಾನಗರವಾಗಿತ್ತು ರಾಜಾಶ್ರಯದ ಚೂತ ತರುವಿನ ತಣ್ಣೆಳಲಲ್ಲಿ ಕವಿ ಕೋಕಿಲಗಳು ಮಧುರ ಸ್ವರವನ್ನು ಮಾಡುವದು ಶಕ್ಯವಾಗಿದೆ 'ವಿನಾಶ್ರಯಂ ನಶೋಭಂತೇ ಪಂಡಿತಾ. ವನಿತಾ ಲತಾ:' ಎಂಬ ಗಾದೆಯಮಾತು ಯಥಾರ್ಥವಾಗಿರುವದು. ವಿಜಯನಗರದ ರಾಜ್ಯೈಶ್ವರ್ಯವು ವೈಭವದಿಂದ ಮೆರೆಯುತ್ತಿದ್ದಾಗ ಆರ್ಯವಿದ್ಯೆಗೆ ಅಪಾರವಾದ ಆಶ್ರಯವಿದ್ದಿತು. ಗಂಗಾಂಬಿಕೆಯಂತಹ ಪಂಜರಬದ್ಧ ಸಾರಿಕೆಯು ವೀರ ಕಂಪಣರಾಜ ಚರಿತದಿಂದ ಇಂಪಾದ ಗಾನವನ್ನು ಮಾಡಿದಂತೆ, ಅಪ್ಪಯ್ಯದೀಕ್ಷಿತರಂತಹ ದಿಗ್ಗಜಗಳಂತಿರುವ ವಿದ್ವಾಂಸರು ಆಗ ವಿದ್ಯೋನ್ಮಾದದಿಂದ ಸಂಚರಿಸಲಿಕ್ಕೆ ಅವಕಾಶವಾಯಿತು. ವಿಜಯನಗರದ ಅರಸರ ಕಾಲದಲ್ಲಿ ಸಿಕ್ಕಬಹುದಾದ ಇಂತಹ ವಿದ್ಯಾವಂತರ ಕುಂಡಲಿಯನ್ನಿಲ್ಲಿ ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸುವೆವು

ಶ್ರೀಮದಪ್ಪಯ್ಯ ದೀಕ್ಷಿತರು ವಿಜಯನಗರದವರ ಆಶ್ರಯದಲ್ಲಿ ಬೆಳೆದ ಪಂಡಿತರು. ಇವರ ಖ್ಯಾತಿಯು ಸರ್ವತೋಮುಖವಾಗಿದೆ. ಇವರು ಸಂಸ್ಕೃತದಲ್ಲಿ ಚತುರಾಧಿಕಶತಪ್ರಬಂಧನಿರ್ಮಾತಾ ಎಂದು ಹೆಸರಾಗಿರುವರು ಇವರು ಕೃಷ್ಣರಾಜನ ಆಸ್ಥಾನದ ಅಷ್ಟದಿಗ್ಗಜರಲ್ಲಿ ಒಬ್ಬರೆಂದು ಪ್ರತೀತಿ ಇದೆ. ಫಾದರ ಹೆರಾಸ ಇವರು ಬರೆದ ಅರವೀಡು ಡೈನಾಸ್ಟಿಯಲ್ಲಿ ಇದರಬಗ್ಗೆ ಕೆಲಮಟ್ಟಿಗೆ ವಿಶ್ವಸನೀಯವಾದ ಸಂಗತಿಗಳು ಸಿಕ್ಕಿರುವವು. ಇವರು ವೆಂಕಟಪತಿರಾಜನ ಕಾಲವಲ್ಲಿಯೂ ಇದ್ದರು ಯಾಕಂದರೆ ದೀಕ್ಷಿತರು ಕುವಲಯಾನಂದದ ಕಡೆಯಲ್ಲಿ ''ಅಮುಂ ಕುವಲಯಾನಂದ ಮಕರೋದಪ್ಪದೀಕ್ಷಿತ:। ನಿಯೋಗಾದ್ವೆಂಕಟಪತೇಃ ನಿರುಪಾಧಿಕೃಪಾನಿಧೇ:॥'' ಎಂದು ಹೇಳಿರುವರು. ಇಲ್ಲಿರುವ ವೆಂಕಟಪತಿಪದವು ಗಿರಿಯವೆಂಕಟರಮಣಗೆ ಅನ್ವಯಿಸುವಂತೆ ವೆಂಕಟಪತಿರಾಯನನ್ನೂ ಸೂಚಿಸುವದೆಂದು ತಿಳುವಳಿಕೆ ಇರುವದು. ಇವರು ವಿಜಯನಗರದ ಓರ್ವ ಸಂಸ್ಥಾನಿಕನಿಂದ ಕನಕಾಭರಣತುಲಾಭಾರದಿಂದ ಮಾನ್ಯರಾದರೆಂಬ ಬಗ್ಗೆಯೂ ಆಧಾರಗಳು ದೊರೆಯುವವು, ಇರಲಿ

ದೀಕ್ಷಿತರ ಜನನಕಾಲ- ೪೬೨೪ ಕಲಿವರ್ಷ ಪ್ರಮಾಥೀ ಸಂವತ್ಸರದಲ್ಲಿ ಕನ್ಯಾಮಾಸ ಕೃಷ್ಣಪಕ್ಷದಲ್ಲಿ ಪ್ರತಿಪತ್ ತಿಥಿಯ ಉತ್ತರಭಾದ್ರಪದಾನಕ್ಷತ್ರ ಕನ್ಯಾಲಗ್ನದಲ್ಲಿ ಜನನವೆಂದು ಬರೆಯಲ್ಪಟ್ಟಿದೆ ( ಮಾತುಲ ಮಂದಿರದಲ್ಲಿ ಜನನ )

**ಜನ್ಮಲಗ್ನಸ್ಥಿತಿ:—**

' ಲಗ್ನೇರವೀಂದು ಸುತಯೋಃಮಕರೇ ಚಮಾಂದೌ।
ಮೀನೇಃ ಶಿನ್ಯಧವೃಷೇರವಿಜೇಧರಾಹೌ ।
ಚಾಪೇಗುರೌಕ್ಷಿತಿಸುತೇ ಮಿಥುನೇತುಲಾಯಾಂ ।
ಶುಕ್ರೇಶಿಖಿನ್ಯಲಿಗತೇ ಶುಭಲಗ್ನ ಏವಂ ”

**ಇದು ದೀಕ್ಷಿತಚರಣರ ಲಗ್ನಕುಂಡಲಿಯು.**




ಜನ್ಮಸ್ಥಳದ ಅಕ್ಷಾಂಶ ( ಕಾಂಚಿಯಹತ್ತರ ) ದಿಂದ ಸಾಯನಭಾವಚಲಿತ ಕುಂಡಲಿಯನ್ನು ಹಾಕಿದರೆ ಸೂಕ್ಷ್ಮಾಂಶಗಳು ತಿಳಿಯಬಹುದು. ಆದರೆ ಈಗ ಸಿಕ್ಕಿರುವ ಉಪಕರಣಗಳಿಂದಲೇ ದೀಕ್ಷಿತರ ಕುಂಡಲಿಯನ್ನು ವಿವೇಚಿಸಬೇಕಾಗುವದು. ಶಾಸ್ತ್ರೀಯ ತತ್ವಗಳ ದೃಷ್ಟಿಯಿಂದ ದೀಕ್ಷಿತರಿಗೆ ಇದೆಷ್ಟರ ಮಟ್ಟಿಗೆ ಸರಿಹೋಗುವದೋ ನೋಡುವಾ.

ದೀಕ್ಷಿತರು ಕನ್ಯಾಲಗ್ನದಲ್ಲಿ ಜನಿಸಿದ್ದಾರೆ. ದೀಕ್ಷಿತ

ರಂತಹ ಸರಸತಿಯ ಪುತ್ರರು ಕನ್ಯಾಲಗ್ನದಲ್ಲಿ ಜನಿಸಿದ್ದು ಯಥಾರ್ಥವದೆ. ಯಾಕಂದರೆ,

कन्या लग्नभवः क्रियासुनिपुणः ।
श्रीमान् सुधीः पण्डितः ॥
मेधावी वनिताविलासरसिको ।
बधुप्रियः सात्विकः ॥

ಎಂದು ಜಾತಕ ಶಾಸ್ತ್ರವು ಸಾರುತ್ತಿರುವದು.

ದೀಕ್ಷಿತರು ಶ್ರೀಮಾನ್ ಇದ್ದರು. ಸುಧೀ ಇದ್ದರು. ಮೇಧಾವಿಗಳಾಗಿದ್ದರೆಂಬದು, ಪಂಡಿತವರ್ಯರಾಗಿದ್ದರೆಂಬದು ಕುವಲಯಾನಂದ ಚಿತ್ರಮೀಮಾಂಸಾ ಗ್ರಂಥಗಳು ಸಾರಿ ಸಾರಿ ಹೇಳುವವು. ಕ್ರಿಯಾನಿಪುಣರಾದ ಅವರು ದೀಕ್ಷಿತರಾಗಿದ್ದರು ಅವರಲ್ಲಿ ಕ್ರಿಯಾನೈಪುಣ್ಯವು ಚೆನ್ನಾಗಿ ವ್ಯಕ್ತವಾಗಿರಬೇಕು. ಅವರು ಸಾತ್ವಿಕರೆಂಬುದಕ್ಕೆ ಶಂಕೆಯೇ ಇಲ್ಲ. ಅವರ ಧರ್ಮಪ್ರವಣತೆಯೇ ಇದಕ್ಕೆ ಸಾಕ್ಷಿಯಾಗಿದೆ. 'ಪುರಾಕಾಚ ಮರಾಕಾಚನಭೇದಃಪಾರಮಾರ್ಥಿಕಃ' ಇದೂ ಸಾಕ್ಷಿ.

ಪಾಶ್ಚಾತ್ಯರು ಕನ್ಯಾಲಗ್ನದ ಲಕ್ಷಣಗಳನ್ನು ಈ ರೀತಿ ಹೇಳುವರು.

Middle stature, inclined to be tall; a slender figuer, neat and wellformed dark brown hair, dark complexion. Well favoured, but not handsome, face more round than oval; voice weak and unmusical; mind ingenious; pleasant in conversation; given to study; fond of learning but fickle and bashful as a Virgin.

ಕುಶಲ ಚಿತ್ರಕಾರರು ಕಲ್ಪಿತ ಭಾವಚಿತ್ರವನ್ನು ತೆಗೆದರೆ ಹೀಗೆ ತೆಗೆಯಬಹುದು. ಇಲ್ಲವೆ ಇತಿಹಾಸ ಸಂಶೋಧಕರು ಇಂತಹ ಚಿತ್ರವನ್ನು ಶೋಧಿಸಬಹುದು. ದೀಕ್ಷಿತರು ಪ್ರತಿಭಾ ಶಾಲಿಗಳೂ ಶಾಸ್ತ್ರಾಭ್ಯಾಸಿಗಳೂ, ವಿದ್ಯಾಪ್ರೇಮಿಗಳೂ ಇದ್ದರೆಂಬದು ವಿದಿತವೇ ಇರುವದು

ದೀಕ್ಷಿತರ ಕುಂಡಲಿಯಲ್ಲಿ ಕೂಡಲೆ ದೃಕ್ ಪಥಕ್ಕೆ ಬರುವ ಬುಧ, ಚಂದ್ರ, ಶುಕ್ರಗುರು ಈ ನಾಲ್ಕು ಶುಭ ಗ್ರಹಗಳೆಲ್ಲವೂ ಬಲವಾನ್ ಇರುತ್ತವೆ. ಚತುರ್ಥ ಕೇಂದ್ರದಲ್ಲಿದ್ದ ಗುರು ಸ್ವಕ್ಷೇತ್ರದಲ್ಲಿರುವನು. ಕೇಂದ್ರ ಗುರುವಿನ ಮಹತಿಯನ್ನು ಎಲ್ಲ ಜಾತಕಜ್ಞರೂ ಒಡಂಬಟ್ಟಿರುವರು. ಅದರಲ್ಲಿ ಧನುರಾಶಿಯ ಗುರು. 'नून कार्तस्वरे कल्याणो गंधः' ಮಹನೀಯರ ಕುಂಡಲಿಯಲ್ಲಿ ಹೀಗೆಯೇ ಯೋಗಗಳಿರುವವು. ಚತುರ್ಥಸ್ಥಾನವು ಮಾನವನ ಆಯುಷ್ಯದ ಕಡೆಯ ಭಾಗವನ್ನು ತೋರಿಸುವದು. ಇಲ್ಲಿರುವ ಬಲಿಷ್ಠ ಗುರುವು ಅವರ ಕಡೆಯ ಆಯುಷ್ಯವು ಶಾಂತಿಸುಖಮಯವಾಗಿತ್ತೆಂದು ತೋರಿಸುವದು. ಯಾಕಂದರೆ ಗುರುವು ಶಾಂತಿ ಸೌಖ್ಯದಾಯಕನು. ಚತುರ್ಥದಲ್ಲಿ ಅಂತಿಮ ಪರಿಣಾಮ ಸೂಚಕಸ್ಥಾನದಲ್ಲಿರುವನು. ಇದಕ್ಕೆ ದೀಕ್ಷಿತರ ಮುಖದಿಂದ ಹೊರಟ ಶ್ಲೋಕವೇ ಉತ್ತರವಾದಿಯಾಗಿರುತ್ತದೆ.

चिदम्बरमिदं प्रथितमेव पुण्यस्थलं ।
सुताश्चविनयोज्ज्वलाः सुकृतश्चकाश्चित् कृताः ।
वयांसि ममसप्ततेरुपरिनैव भोगेस्पृहा ।
नकिंचिदहमर्थये शिवपदंदिदृक्षे परं ॥

೭೦ ವರುಷವಾದ ಬಳಿಕ ಈ ತರಹದ ಉದ್ಗಾರಗಳನ್ನು ತೆಗೆಯುವ ಭಾಗ್ಯವು ಪುಣ್ಯವಂತರಿಗಲ್ಲದೆ ಇತರರಿಗೆ ಲಭಿಸುವದು ಅಸಾಧ್ಯ. ಇದೊಂದೇ ಶ್ಲೋಕದಿಂದ ಮೇಲಿನ ಕುಂಡಲಿಯು ನಿಜವಿರುವದೆಂದು ನಾವು ಭಾವಿಸುವೆವು.

ಲಗ್ನದಲ್ಲಿಯೇ ಲಗ್ನಾಧಿಪತಿ ಬುಧನು. ಕೇಂದ್ರದಲ್ಲಿ ಸ್ವಕ್ಷೇತ್ರದ ಗುರು. ಕೇಂದ್ರದಲ್ಲಿ ಮೀನದ ಬಲವಾನ್ ಚಂದ್ರನು ದೀಕ್ಷಿತರಿಗೆ ದೀರ್ಘಾಯುಸ್ಸನ್ನು ಕೊಟ್ಟರಲಿಕ್ಕೆ ಸಾಕು.

ಇಲ್ಲಿ ರವಿಯು ಬಲವನ್ನೂ ಮಂಗಲನ ಬಲವನ್ನೂ ಪೂರ್ಣವಾಗಿ ನಿರೀಕ್ಷಿಸುವದು ಅಸಾಧ್ಯವಾಗಿದೆ. ಯಾಕಂದರೆ ಇದು ಅಂಶಾತ್ಮಕ ಕುಂಡಲಿಯಿರುವದಿಲ್ಲ.

ಶಾಸ್ತ್ರೀಯ ರಾಶಿಯಲ್ಲಿ ಮಂಗಳಶುಕ್ರರು ಇರುವರು ಶುಕ್ರನಂತೂ ಸ್ವಗೃಹದವನು; ಬಲಶಾಲಿ. ಇವನು ನವಮಾಧಿಪತಿ (ಧರ್ಮ, ಶಿಕ್ಷಣ.) ಅವನೊಡನೆ ಶಾಸ್ತ್ರೀಯ ರಾಶಿಯಲ್ಲಿದ್ದ ಹುಟ್ಟುಗುಣವನ್ನು ತೋರಿಸುವ ತೃತೀಯಸ್ಥಾನದ ಅಧಿಪತಿಯಾದ ಮಂಗಳನ ತ್ರಿಕೋಣ (ದೀಪ್ತಾಂಶದಲ್ಲಿ) ಇದ್ದರೂ ಇದ್ದಿರಬಹುದು. ಇಲ್ಲಿ ರೂಲಿಂಗ ಪ್ಲಾನೆಟ್ ಬುಧನು. ಅವನು ತನ್ನ ಉಚ್ಚಾಧಿಕಾರದಲ್ಲಿ. ಲಗ್ನದಲ್ಲಿ ಅವನೊಬ್ಬನೇ ಸಾಕು ದೀಕ್ಷಿತರ ಎಲ್ಲ ಆಯುಷ್ಯ

ಕಮಲಮಹಾಲು.



ನಗಾರಖಾನೆ



ವಿಜಯನಗರದ ಗಜಶಾಲೆ.



ವನ್ನು ಶಾಸ್ತ್ರಸೇವೆಯಲ್ಲಿ ಕಳೆಯಲಿಕ್ಕೆ ಲಗ್ನಸ್ಥ ಉಚ್ಚ ಬುಧನು ನಿಸ್ಸಂಶಯವಾಗಿ ವಿದ್ವಾಂಸರನ್ನು ಹುಟ್ಟಿಸುವನು.

ದೀಕ್ಷಿತರ ಕುಂಡಲಿಯ ದ್ವಿತೀಯ ಸ್ಥಾನದಲ್ಲಿ ಸ್ವಕ್ಷೇತ್ರದ ಶುಕ್ರನಿರುವನು. ಚಂದ್ರನು ಕೇಂದ್ರದಲ್ಲಿ ಬಲಶಾಲಿ ಪಂಚಮಾಧಿಪತಿ ಶನಿ ಸ್ಥಿರರಾಶಿಯಲ್ಲಿ, ಕೋಣದಲ್ಲಿ ಲಾಭಾಧಿಪತ್ಯವು ಚಂದ್ರನ ಕಡೆಗಿರು ವನು ಇವೆಲ್ಲ ಸುಲಕ್ಷಣಗಳಿಂದ ದೀಕ್ಷಿತರು ದರಿದ್ರ ಪಂಡಿತರಾಗಿರಲಿಲ್ಲವೆಂದೂ, ಅವರ ಪಾಂಡಿತ್ಯಕ್ಕೆ ಯೋಗ್ಯ ಪಾರಿತೋಷಕಗಳು ದೊರೆಯುತ್ತಿದ್ದು ಅವರ ಸಾಂಪತ್ತಿಕ ಸ್ಥಿತಿ ಚೆನ್ನಾಗಿದ್ದಿರಬೇಕೆಂದೂ ಊಹೆ. ಅವರು ಸುವರ್ಣತುಲಾಭಾರವನ್ನು ಮಾಡಿಸಿಕೊಂಡ ರೆಂದು ಇತಿಹಾಸವು ಹೇಳುವದು. ಅವರ ಧನಸ್ಥಾನ ದಲ್ಲಿದ್ದ ತುಲಾಶುಕ್ರನು ಇವರ ಸಮನ್ವಯವನ್ನು ಚೆನ್ನಾಗಿ ಒಡಗೂಡಿಸಿರುವನು.

ದ್ವಿತೀಯ ಶುಕ್ರನ ಬಗ್ಗೆ ಸಫಾರಿಯಲ್ಲರು ಹೀಗೆ ಬರೆದಿದ್ದಾರೆ "Money comes readily and is frequently gained by artistic pursuits or drama ... ..... ... money is always ready at hand" ಧನಸ್ಥಾನದ ಶುಕ್ರನು ರತ್ನಾ ಲಂಕಾರಗಳನ್ನು ಸಹ ಕೊಡುವನು. ಇಲ್ಲಿ ಬಲವಾನ್ ಶುಕ್ರನಿರುವನು. ದೀಕ್ಷಿತರ ಕಾಲದಲ್ಲಿ ಅಂತಹ ವಿದ್ವಾಂಸರಿಗೆ ಇದೂ ಅಶಕ್ಯವಾಗಿರಲಿಲ್ಲ.

ಇನ್ನು ಆರ್ಯರ ಜಾತಕ ಪದ್ಧತಿಯಂತೆ ದೀಕ್ಷಿತರ ಕುಲದೀಪಕರಾಗಿದ್ದರಲ್ಲಿ ಸಂದೇಹವಿಲ್ಲ ಬುಧ ಗುರು ಚಂದ್ರರು ಬಲವಾನ್ ಇದ್ದು ಕೇಂದ್ರದಲ್ಲಿರು ವರು ದಶಮದಲ್ಲಿ ಮಂಗಳನಿರುವನು

ಮಂಗಳನು ಸಾಮಾನ್ಯ ಬಲಶಾಲಿ (ಮಿಥುನದಲ್ಲಿ) ಆದರೂ ಶಾಸ್ತ್ರೀಯ ರಾಶಿಯಲ್ಲಿರುವನು. ಮಂಗಳನು ಕರ್ಮದಲ್ಲಿರುವನು. ಮಂಗಳನು ಕಲಹಕಾರಿಯು ಅವನು ಶಾಸ್ತ್ರೀಯ ರಾಶಿಯಲ್ಲಿರುವದರಿಂದ ಆ ಕಾಲದ ಶಾಸ್ತ್ರ ವಾದವಿವಾದದಲ್ಲಿ ದೀಕ್ಷಿತರು ಮುಂದಾಳು ಗಳಾಗಿರುವದು, ಸ್ವಾಭಾವಿಕವಾಗಿದೆ.

...... . बुधो यस्य केन्द्री बृहस्पतिः ।
दशमोगारको यस्य- स जातः कुलदीपकः ॥

ಇನ್ನು ಪಾಶ್ಚಾತ್ಯರ ಪದ್ಧತಿಯಂತೆ ವಿಚಾರಿಸಿದರೆ ಗ್ರಹಗಳಿರುವ ಅಂಶಾತ್ಮಕ ಯೋಗಗಳನ್ನು ನೋಡ ಬೇಕಾಗುವದು. ಅದಕ್ಕೆ ನಮ್ಮ ಹತ್ತರ ಸಾಧನಗಳಿಲ್ಲ ಪ್ರಾಯಶ ನವಮದ ಶನಿಯೊಡನೆ ದೀಪ್ತಾಂಶದ ಲ್ಲಿಯೇ ಏಕಾಗಲೊಲ್ಲದು ಚಂದ್ರನ ತ್ರಿರೇಕಾದಶ ಯೋಗವೂ ಲಗ್ನದ ಒಡೆಯನಾದ ಬುಧನ ತ್ರಿಕೋಣ ಯೋಗವೂ ಇದ್ದಿರಬೇಕು. ಬುಧ-ಶನಿ ತ್ರಿಕೋಣ ಯೋಗವು ಸೂಕ್ಷ್ಮವಿಮರ್ಶಕ ಶಕ್ತಿಗೆ,ಮೀಮಾಂಸಾ ಶಾಸ್ತ್ರಾದಿ ನೈಪುಣ್ಯಕ್ಕೆ ಒಳ್ಳೇ ಅನುಕೂಲ ಯೋಗವು. ಅದು ಲಗ್ನನವಮದಲ್ಲಿ ಉಂಟಾಗಿರುವದು. ಇವೆರಡೂ ಶುಭಯೋಗಗಳ ಗ್ರಂಥೋಕ್ತಫಲಗಳನ್ನು ಕೆಳಗೆ ಕೊಟ್ಟಿರುವದು.

ಬುಧಶನಿ ಶುಭಯೋಗ:—Thought under control A collcted mind,very accurate. careful, thoughtful, deep planning mind. Fine economist Goes down to the root of things, works according to the principles, very sure of his opinions and conclusions"

ಇವೆಲ್ಲ ಗುಣಗಳು ಅಪ್ಪದೀಕ್ಷಿತರಲ್ಲಿ ಅಕ್ಷರಶಃ ಇದ್ದ ವೆಂದು ಅವರ ಶಾಸ್ತ್ರೀಯ ಪ್ರಬಂಧಗಳನ್ನು ನೋಡಿ ದವರಿಗೆ ಅರಿಯದ ವಿಷಯವಲ್ಲ

ಚಂದ್ರ ಶನಿ ಶುಭಯೋಗದ ಫಲವು ಹೀಗೆ —

Careful and economical most methodical very attentive to duties

ಚಂದ್ರಶುಕ್ರರು ಕುಂಡಲಿಯಲ್ಲಿ ಬಲವಾನ್ ಇರುವರು. ಚತುರ್ಥದಲ್ಲಿ ಬೃಹಸ್ಪತಿ ಬಲವಾನ್. ಗೃಹ ಸೌಖ್ಯ ಸ್ತ್ರೀಸೌಖ್ಯಾದಿಗಳು ದೀಕ್ಷಿತರಿಗೆ ಚೆನ್ನಾಗಿದ್ದ ವೆಂದು ಊಹಿಸಲು ಅವಕಾಶವಿದೆ. ಅವರಿಗೆ ವಿನೀತ ರಾದ ಮಕ್ಕಳೂ ಇದ್ದರೆಂದು ಮೇಲಿನ ಶ್ಲೋಕದಲ್ಲಿ ಹೇಳಿದೆ ಪಂಚಮಾಧಿಪತಿಶನಿ ಬಲವಾನ್ ವೃಷಭದಲ್ಲಿ ಇದ್ದಾನೆ ಪಂಚಮದಲ್ಲಿ ಮಾಂದಿ ಮಾತ್ರ ಇರುವನು ಅವನು ವಿಘ್ನಕಾರಿ ಏನಾದರೂ ಕೊರತೆ ಇದ್ದಿರಬಹುದು.

ಇನ್ನು ಹರ್ಶಲ ( ಪ್ರಜಾಪತಿ ) ವರುಣ ( ನೇಪ ಚ್ಯೂನರ ಬಗ್ಗೆ ).ಆಗ ಅವರು ಪ್ರಜಾಪತಿಯು ಕು ಯಲ್ಲಿ, ವರುಣನು ವೃಷಭದಲ್ಲಿ, (ಇಸ್ವಿ ಸನ್ನ ೧೫೫೩ ಇದ್ದರೆಂದು ತಿಳಿಯುವದು. ವರುಣನು ದೀಕ್ಷಿತ ಕುಂಡಲಿಯಲ್ಲಿ ಧರ್ಮಸ್ಥಾನದಲ್ಲಿರುವದು ಸಹಜ ಹರ್ಶಲನು ವಾಯುರಾಶಿಯಲ್ಲಿದ್ದಾನೆ. ಎಲ್ಲ ಗ್ರ ಗಳ ಅಂಶಾತ್ಮಕಸ್ಥಿತಿ ತಿಳಿಯದೆ ಈ ಎರ ಅಲೌಕಿಕ ಅದ್ಭುತ ಗ್ರಹಗಳ ಪರಿಣಾಮವನ

ವಿವರಿಸಿ ಹೇಳುವದು ಸಾಧ್ಯವಿಲ್ಲ. ರಾಹು ಕೇತು ಗಳಾದರೂ ಸ್ವೋಚ್ಚದಲ್ಲಿರುವರು.

राहोश्चवृषभकेतोः ।

वृश्चिकंतुंगसंज्ञितम् ॥

ಯಾರಾದರೂ ಜ್ಯೋತಿರ್ಗಣಿತ ಪಂಡಿತರು ಸ್ಪಷ್ಟ ಗ್ರಹದ ಸಾಯನಭಾವಚಲಿತ ಕುಂಡಲಿಯನ್ನು ಸಿದ್ಧ ಪಡಿಸಬಹುದು. ರವಿಯು ಲಗ್ನದಲ್ಲಿರುವದರಿಂದ ಮುಂಜಾವಿನ ಸಮಯದಲ್ಲಿ ಜನನವೆಂದು ತಿಳಿಯುವದು. ಪ್ರಮಾಥಿಸಂವತ್ಸರ ಉತ್ತರಾಭಾದ್ರಪದಾ ನಕ್ಷತ್ರಪ್ರತಿಪತ್ ತಿಥಿ ಇವೆಲ್ಲ ಸಿಕ್ಕುವವು. ಇತಿಹಾಸ ಸಂಶೋಧಕರೂ ಜ್ಯೋತಿಃಶಾಸ್ತ್ರದ ಅಭಿಮಾನಿಗಳೂ ಇತ್ತ ಗಮನಿಸಬೇಕಾಗಿ ಬಿನ್ನಹ.

---

# ವಿಜಯನಗರ ವೈಭವ.

ಚಿರಶಾಂತಿ ಸೌಂದರ್ಯ ಸಿರಿಪ್ರಕೃತಿಯಾಲಯಂ !
ವೈಭವದ ಸಿರಿನಾಡು, ಸಂಪದದ ನೆಲೆಯುಂ !
ವಿಜಯವಧು ಕಾರುಣ್ಯಮಯ ಪ್ರೇಮ ವೀಕ್ಷಣದಿ
ಮೆರೆದಿರ್ದ ಸುಂದರ ಮಂಗಳ ನಿಜಾಗರಂ ! ॥ ೧ ॥

ಅಮರ ಸೌಂದರ್ಯನೆಲೆ ಸಿಂಗರದ ಭವನಮಂ
ವಿರಚಿಸಿದ ಎನಿತೆನಿತೊ ವರ ಶಿಲ್ಪಿವರ್ಯರುಂ !
ಸತ್ಕಾವ್ಯ ಕೋಟಿಯಿಂ—ವರರತ್ನಮಾಲೆಯಂ
ಎಸಗಿರ್ದ ವರಕವಿಗಳಮಿತ ಕೌಶಲ್ಯದಿಂ ! ॥ ೨ ॥

ಎನಿತೆನಿತೊ ಶೂರಸಾಹಸಿಗಳೀ ಮಂದಿರದಿ
ಜಯಘೋಷ ಮಂತ್ರದಿಂ ಮಡಿದೆನಿತೊವೀರಾದಿ—
ಗಳು ಮೆರೆಯುತಿರೆ ವಿಜಯಾಂಗನೆಯ ಪದತಲದಿ
ದಶದಿಶಾ ವಿಶ್ರುತ ಸತ್ಕೀರ್ತಿ ವೈಭವದಿ ! ॥ ೩ ॥

ವೈಭವದ ಸಾಮ್ರಾಜ್ಯ ವಿಜಯನಗರವದಿಂದು,
ಸತ್ಕೀರ್ತಿ ಸಾಮ್ರಾಜ್ಯ ಸುರನಗರವೇಕೆಂದು,
ಅರೆ ಚಣವು ಕಣ್ಮುಂದೆ ಮೆರೆದೀಗ ಮರೆಯಾಯ್ತು
ಕನಸಿನೊಲು ಮಿಂಚಳಿದ ಸಾಮ್ರಾಜ್ಯವೇಕಾಯ್ತು ! ॥ ೪ ॥

‡ ‡ ‡ ‡ ‡

ಇಹದ ಅಮರಾವತಿಯು ವಿಜಯನಗರವು ಇಂದು
ಮರೆಯಪ್ಪುದೇ ಇನ್ನೊಮ್ಮೆ ಮಳಿಯದಲೆ ಎಂದು !

—ಡಿ. ತ್ರಿವಿಕ್ರಮ, ಬೆಂಗಳೂರು.

# ವಿಜಯನಗರ ಸಂಸ್ಥಾಪಕರ ರಾಜಗುರುಗಳು,
## ಹಾಗು
# ಶೃಂಗೇರಿಮಠದ ಜಗದ್ಗುರುಗಳು.

(ಲೇಖಕರು.—**ಡಾ ಬಿ ಎ ಸಾಲೆತೊರೆ** ಎಂ. ಎ, ಪಿ ಎಚ್. ಡಿ)

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಲ್ಲಿ ವಿದ್ಯಾರಣ್ಯ ಶ್ರೀಪಾದರ ಹೆಸರಿನ ಸಂಬಂಧವುಂಟಾಗುವುದಕ್ಕೆ ಅವರು ಬೌದ್ಧಿಕ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಸಂಪಾದಿಸಿದ ಪ್ರಸಿದ್ಧಿಯೆ ಕೆಲಮಟ್ಟಿಗೆ ಕಾರಣವಾಗಿದೆ. "ವಿದ್ಯಾರಣ್ಯರೆಂದರೆ, ಮಾಧವಾಚಾರ್ಯರೆ?" ಎಂಬ ಅಪ್ರಸ್ತುತ ವಾದದ ಸೆಳವಿಗೆ ಕೆಲವು ಪಂಡಿತರು ಹರಿಬಿದ್ದಿರುವರು (I) ಇಲ್ಲಿ ಆ ವಿಷಯವು ಅಪ್ರಸ್ತುತ ವಿಜಯನಗರ ಸಂಸ್ಥಾಪಕರ ರಾಜಗುರುಗಳ ಹಾಗು ಶೃಂಗೇರಿ ಗುರುಗಳ ಸಂಬಂಧವಾಗಿ ಬೇರೊಂದು ಕಡೆಗೆ ಬರೆದಿರುವೆವು. ಆ ವಿಷಯಕ್ಕೆ ಪುಷ್ಟಿಯನ್ನೀಯಬೇಕೆಂದು, ಈ ಲೇಖದಲ್ಲಿ ಕೆಲವು ಹೆಚ್ಚಿನ ಸಂಗತಿಗಳನ್ನು ಕೊಡಲಿರುವೆವು. ವಿಜಯನಗರದ ಮೊದಲಿನ ಕುಲವೆಂದು ಗೊತ್ತಾದ ಮನೆತನಕ್ಕೆ ಕಾಶೀವಿಲಾಸ ಕ್ರಿಯಾಶಕ್ತಿ ಆಚಾರ್ಯರೆಂಬ ರಾಜಗುರುಗಳಿದ್ದರೆಂಬುದನ್ನು ಶಿಲಾಶಾಸನಗಳಿಂದಲೂ ಆ ಕಾಲದ ಸಾಹಿತ್ಯದ ಆಧಾರದಿಂದಲೂ ಸಂಪೂರ್ಣವಾಗಿ ಸಿದ್ಧ ಮಾಡಿರುವೆವು (2)

---

(1) Read the **Indian Historical Quarterly**, VIII, pp. 611, seq; **ibid**, IX pp. 801-810; Journal of Indian History, XII, P II, pp 241 seq Mr Rama Rao's arguments, especially those relating to the relations of Vidyaranya with Harihara I (**vide** IHQ. IX p. 805 seq) collapse when he identifies the Harihara Raya mentioned in two later stone records dated respectively **A. D** 1538 and A.D. 1559 (**Epigraphica Carnatica** XI. Cd 54, Cl. 54, pp. 12. 103) with Harihara I. Such an identification is historically wrong As regards the opinion that Madhava and Vidyaranya were two different persons, it was expressed long ago by Messrs Srinivasa **R**ao and Krishnaswami Ayyar in their edition of Panchadasi of **V**idyaranya, Intr. p. XL B A. S )

(2) Read Saletore, **Social and Political Life in the Vijayanagara Empire**, I pp. 14, 17, 26, 95, 108-9, 110 (n) 257-8, 262-3 II. pp 130, 235. The following may also be read in this connection.—**Epigraphical Report for the Southern Circle** for 1913, p. 119, seq, **ibid** for 1924-5, pp. 88-9, **No 1 of Appendix 1927-8, 467 of 1928-9, Mysore Archl Rep** for 1911, p 47, **ibid** for 1918, p. 51 where Kriyasakti Acarya is identified with Candrabhusana Odeyar. Kasivilasa Kriyasakti Acarya was, we may also note here, the spiritual guide of Madhava who was the great minister of Marapa, one of the five famous brothers. This is related in A. D 1347 and again in A. D 1368 E. C VIII. Sb. 375, pp. 65-6, **Mys. Archl. Rep**. for 1929, p. 168 seq. E. C. VII. Sk. 281, p 146 In the light of these documents my statement (**vide S.P. Life** I. p. 110 n. [2]) that Kasivilasa **K**riyasakti Acarya belonged to the Srikanthagama is to be rectified. B. A S.

(೨)

ಕರ್ನಾಟಕದೊಳಗೆ ರಾಜ್ಯವನ್ನಾಳಿದ ಹೆಸರಾದ ಕೆಲವು ಅರಸುಮನೆತನಗಳಿಗೆ ಕಾಲಮುಖ ಪಂಥದ ಧರ್ಮಗುರುಗಳಿದ್ದರೆಂಬುದು ೧೧ ನೆಯ ಶತಮಾನದ ಮಧ್ಯದಿಂದ ೧೩ನೆಯ ಶತಮಾನದ ಕೊನೆಯವರೆಗಿನ ಶಿಲಾಲೇಖಗಳನ್ನೋದಿದರೆ ಗೊತ್ತಾಗುವುದು ಬಳ್ಳಿಗಾವೆ, ಕುಪ್ಪಟೂರು, ಇಲ್ಲವೆ ಕರ್ನಾಟಕದೊಳಗಿನ ಬೇರೆ ಕೇಂದ್ರ ಸ್ಥಳಗಳಿಂದ ಆ ಧರ್ಮಗುರುಗಳನ್ನು ಆಯ್ದುಕೊಂಡಂತೆ ಕಂಡುಬರುವದು. ವಿಜಯನಗರದ ಸಂಸ್ಥಾಪಕರ ಧರ್ಮಗುರುಗಳ ಸಂಬಂಧವಾಗಿರುವ ಸಮಸ್ಯೆಯನ್ನು ಬಿಡಿಸಬೇಕಾದರೆ, ಅವರ ರಾಜಗುರುಗಳ ಐತಿಹ್ಯದ ಅವಲೋಕನವು ಅವಶ್ಯವಾಗಿರುವುದು.

ಪಶ್ಚಿಮ ಚಾಲುಕ್ಯರ ಶಾಸನಗಳಲ್ಲಿ ಕಾಲಮುಖ ಪಂಥದ **ರಾಜಗುರುಗಳ** ಉಲ್ಲೇಖವಿದೆ ೧೦೩೯ ನೆಯ ಇಸ್ವಿಯ ಒಂದು ಶಿಲಾಲೇಖದಲ್ಲಿ **ಪರ್ವತಾವಳಿಯ ಕಾಲಮುಖಗಂಡ....ಕ್ರಿಯಾಶಕ್ತಿ ಪಂಡಿತದೇವನು** ಪಶ್ಚಿಮ ಚಾಲುಕ್ಯ (ಜಯ) ಸಿಂಗದೇವನಿಗೆ **ರಾಜಗುರು**ವಾಗಿದ್ದನು ಎಂದಿದೆ (3) ಜಯಸಿಂಗದೇವನು, ಕ್ರಿಯಾಶಕ್ತಿ ಪಂಡಿತದೇವನ ಪಾದಗಳನ್ನು ತೊಳೆದು ಬೆನಕನಕೊಳ್ಳದ ಸಿದ್ಧೇಶ್ವರನಿಗೆ ಕೆಲವು ದತ್ತಿಗಳನ್ನಿತ್ತನೆಂಬುದು ಕ್ರಿಯಾಶಕ್ತಿದೇವನು ಆ ಪಶ್ಚಿಮಚಾಲುಕ್ಯ ಅರಸನ ರಾಜಗುರುವಾಗಿದ್ದನೆಂಬುದನ್ನು ಸ್ಪಷ್ಟಪಡಿಸುತ್ತದೆ. **ಏಕೋಟಿ ಸಮಯ ಚಕ್ರವರ್ತಿ, ಎಪ್ಪತ್ತೇಳು ದೇವಸ್ಥಾನಗಳ ಆಚಾರ್ಯ, ಸರ್ವೇಶ್ವರ ಶಕ್ತಿದೇವನು** ಪಶ್ಚಿಮ ಚಾಲುಕ್ಯರಾಜನಾದ ಸೋಮೇಶ್ವರದೇವನ ರಾಜಗುರುವಾಗಿದ್ದನೆಂಬುದು, ೧೦೭೦ ರ ಶಾಸನದಲ್ಲಿ ಹೇಳಿದೆ. (4) ಈ ಶಿಲಾಶಾಸನದೊಳಗಿನ ಸರ್ವೇಶ್ವರ ಶಕ್ತಿದೇವನ ಬಿರುದುಗಳೂ, ಜಯಸಿಂಗನ ರಾಜಗುರುವಿನ ಬಿರುದುಗಳೂ ಒಂದೇ ಆಗಿರುವದಿಲ್ಲ ಆದರೂ ಕುಪ್ಪಟೂರಿನ ನಿಸರ್ಗಸೌಂದರ್ಯದ ಸವಿಸ್ತರ ವರ್ಣನೆಯಿಂದ ಆ ಶಿಲಾಲೇಖವು ಪ್ರಾರಂಭವಾದುದೂ, ಸರ್ವೇಶ್ವರ ಶಕ್ತಿದೇವನು ಆ ಗ್ರಾಮದ ಆಚಾರ್ಯನಿರುವನೆಂಬುದೂ, ೧೦೭೦ ರಲ್ಲಿ ಪಶ್ಚಿಮ ಚಾಲುಕ್ಯ ಅರಸನ ರಾಜಗುರುವು ಕುಪ್ಪಟೂರಿನವನಾಗಿದ್ದನೆಂದು ಸಿದ್ಧಗೊಳಿಸುತ್ತವೆ

ಆದರೆ, ಅರ್ಧ ಶತಮಾನದ ನಂತರ ರಾಜಗುರುವನ್ನು ಒದಗಿಸಿಕೊಡುವ ಮರ್ಯಾದೆಯು ಪ್ರಸಿದ್ಧ ಬಳ್ಳಿಗಾವೆ ಗ್ರಾಮಕ್ಕೆ ಹೋಯಿತು ಇಲ್ಲಿಯೆ ೧೧೨೯ ರೊಳಗೆ ಪಶ್ಚಿಮ ಚಾಲುಕ್ಯ ರಾಜನಾದ ಭೂಲೋಕಮಲ್ಲನ, ಕದಂಬ ಮಂಡಲೇಶ್ವರನಾದ ತೈಲನು ವಾಮಶಕ್ತಿ ಪಂಡಿತನೆಂಬ ಹೆಸರಾದ ಗುರುವಿಗೆ ಕೊಟ್ಟ ದಾನಕ್ಕೆ, "ಆ ಭೂಸುರನ ಪಾದಗಳನ್ನು ತೊಳೆದು, ಅರ್ಘ್ಯವನ್ನು ಕೊಟ್ಟು" ಮನ್ನಣೆಯಿತ್ತನು (5) ಕಾಲಮುಖ ಪಂಥದ ಗುರುಗಳೊಳಗೆ ಪ್ರಸಿದ್ಧರಾದವರಲ್ಲಿ, ವಾಮಶಕ್ತಿ ಪಂಡಿತನು ಒಬ್ಬನಾಗಿದ್ದನು. ೧೧೫೩ ನೆಯ ಇಸ್ವಿಯ ಒಂದು ಶಾಸನದಲ್ಲಿ ಅವನ ಕೀರ್ತಿಯನ್ನು ಹೊಗಳಲಾಗಿದೆ ಇದರಲ್ಲಿಯೂ ಅವನಿಗೆ ರಾಜಗುರುವೆಂಬು ಸಂಭೋಧಿಸಲಾಗಿದೆ ಪರ್ವತಾವಳಿ ಪೀಳಿಗೆಯ, **ಮೂವರ ಕೋಣೆಯ ಸಂತತಿಗೆ** ಸಂಬಂಧಿಸಿದವನೂ, ಗೌತಮ ಪಂಡಿತದೇವನ ಶಿಷ್ಯನೂ, ರಾಜಗುರುಗಳ ಪರಂಪರೆಯಲ್ಲಿ ಪ್ರಸಿದ್ಧನೂ ಆದ ಈ ವಾಮಶಕ್ತಿ ಪಂಡಿತನ ಮಹತ್ವವನ್ನು ವರ್ಣಿಸುವದು ಇಲ್ಲಿ ಅಪ್ರಸ್ತುತವಾಗಲಾರದು

"ತಪಸ್ವಿಗೆ ಅವಶ್ಯಕವಾದ ಎಲ್ಲ ಗುಣಗಳು ಅವನಲ್ಲಿದ್ದವು. ಅಷ್ಟಾಂಗ ಯೋಗವನ್ನು ಕಲಿಯಲಿಕ್ಕೆಂದು ಬಂದ ಹಲವರು ಶಿಷ್ಯರು ಇವನ ಹತ್ತಿರ ಇದ್ದುಕೊಂಡು ಅದನ್ನಭ್ಯಸಿಸುತ್ತಿದ್ದರು ಅವನ ಅನುಗ್ರಹವನ್ನು ಬಯಸಿ ಬಂದ ಅರಸರ ಮುಕುಟಗಳೊಳಗಣ ನೀಲಮಣಿಗಳು,ಆತನ ಪಾದಕಮಲಗಳ ಮೇಲೆ ಭೃಂಗದೋಪಾದಿಯಲ್ಲಿ ಕಂಗೊಳಿಸುತ್ತಿದ್ದವು. ಕವಿಗಳಿಗೂ, ವಕ್ತಾರರಿಗೂ, ವಾದವಿವಾದ ಪಟುಗಳಿಗೂ, ಇನ್ನಿತರ ವಿದ್ವಾಂಸರಿಗೂ, ಅವನು ಕಲ್ಪವೃಕ್ಷದಂತೆ ಮುದವನ್ನೀಯುತ್ತಿದ್ದನು. ವಾಮಶಕ್ತಿದೇವನು, ವೇದಾಂತ ಸಿದ್ಧಾಂತ. ಆಗಮ, ಷಡ್ವಿಧ ತರ್ಕಪದ್ಧತಿ, ಧರ್ಮಶಾಸ್ತ್ರಗಳು ಮೊದಲಾದವುಗಳಲ್ಲಿಯೂ, ವ್ಯಾಕರಣದ ಪ್ರತಿಯೊಂದು ಶಾಖೆಯಲ್ಲಿಯೂ ಪಾರಂಗತ

(3) E. C. VII. Sk. 153, pp, 109, 260.
(4) E. C. VIII. Sb. 276, p. 47.
(5) Ibid VII, Sk, 100, p. 70.

ನಾಗಿದ್ದನು......ಅನ್ನದಾನ, ಸುವರ್ಣದಾನ, ಕನ್ಯಾದಾನ, ಗೋದಾನ, ಭೂದಾನ, ಅಭಯದಾನ, ಆಗದದಾನ. ಮುಂತಾದ ಎಲ್ಲ ವಿಶೇಷಣಗಳಲ್ಲಿ ಅವನು ಹೆಸರಾದವನಿದ್ದನು ಅವನನ್ನಾಶ್ರಯಿಸಿದವರು ಅವನಲ್ಲಿ ತುಂಬಾ ಪ್ರೀತಿಯುಳ್ಳವರಾಗಿದ್ದರು. ಎಲ್ಲ ತರಹದ ಮಂತ್ರ ತಂತ್ರಗಳಲ್ಲಿಯೂ ಅವನು ನಿಷ್ಣಾತನಿದ್ದನು. '' ( 6 ).

ವಾಮಶಕ್ತಿ ಪಂಡಿತನ ಅಸಾಧಾರಣವಾದ ವರ್ಚಸ್ಸು ಕಳಚೂರಿಯರ ಮೇಲೂ ಬಿದ್ದಂತೆ ತೋರುತ್ತದೆ. ಚಾಲುಕ್ಯರ ರಾಜಗುರುವಾದವನೆ ಕಳಚೂರಿಯರ ರಾಜಗುರುವಾಗಿರುವದು ಸಕೃದ್ದರ್ಶನದಲ್ಲಿ ವಿಚಿತ್ರವಾಗಿ ತೋರಬಹುದು. ಆದರೆ, ಅದರ ಕಾರಣ ವಸ್ತು ಹುಡುಕಲು ಬಲುದೂರ ಹೋಗಬೇಕಾಗಿಲ್ಲ ಕಳಚೂರಿಯ ಅರಸನಾದ ಬಿಜ್ಜಳದೇವನು, ಪಶ್ಚಿಮ ಚಾಲುಕ್ಯರಾಜನಾದ ತ್ರೈಲೋಕ್ಯಮಲ್ಲ ದೇವನ ಮಾಂಡಲಿಕನಾಗಿದ್ದನೆಂಬದು ೧೧೫೭ನೆಯ ಇಸ್ವಿಯ ಶಿಲಾಶಾಸನದಿಂದ ಸಿದ್ಧವಾಗುತ್ತದೆ. ಆ ಶಾಸನದಿಂದ ತಿಳಿಯುವದೇನಂದರೆ, ತ್ರೈಲೋಕ್ಯಮಲ್ಲನು ವೈಭವಶಾಲಿಯಾದ ತನ್ನ ರಾಜ್ಯವನ್ನು ಆಳುತ್ತಿರಲು, ಬಿಜ್ಜಳದೇವರಸು ಆ ರಾಯನ ಅಧಿಪತ್ಯಕ್ಕೊಳಗಾದ ಎಲ್ಲ ಪ್ರದೇಶಕ್ಕೂ ಮಹಾಮಂಡಲೇಶ್ವರನಾಗಿದ್ದನು ಮಹಾಮಂತ್ರಿಯಾದ ಮಾಯಿದೇವರಸನೇ **ಪರ್ವತಾವಳಿಯ ಮೂವರ ಕೋಣೆಯ ಸಂತತಿಯ** ರಾಜಗುರು ವಾಮಶಕ್ತಿ ಪಂಡಿತದೇವನಿಗೆ ವೃತ್ತಿಸ್ವಾಸ್ಥ್ಯಗಳನ್ನು ಹಾಕಿಸಿಕೊಟ್ಟಿದ್ದನೆಂಬುದು ಸ್ಪಷ್ಟವಿದೆ (7)

ಬಿಜ್ಜಳನು ಸ್ವತಂತ್ರನಾಗಿ, ಭುಜಬಲ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಳದೇವ ಎಂಬ ಬಿರುದನ್ನು ೧೧೬೨ನೆಯ ಇಸ್ವಿಯಲ್ಲಿ ಧರಿಸದ ಮೇಲೆ, ಇದೇ ಕಾಳಮುಖ ಗುರುವಿಗೆ ಅನನ್ಯ ಭಕ್ತಿಯನ್ನು ತೋರಿಸಿದನೆಂಬುದು ಅದೇ ಕಾಲದ ಮತ್ತೊಂದು ಶಿಲಾಲೇಖದಿಂದಲೂ ಸಿದ್ಧವಾಗುತ್ತದೆ. ಆಶಾಸನದಲ್ಲಿರುವದು:- "ಬಿಜ್ಜಳದೇವನು "ದಕ್ಷಿಣ ರಾಜ್ಯವನ್ನು ಗೆಲ್ಲಲು ಬಂದು" ಬಳ್ಳಿಗಾಮೆಯಲ್ಲಿ ಪಾಳ್ಯದೊಂದಿಗೆ ಇಳಿದಾಗ್ಗೆ ರವಿದೇವ ಮೊದಲಾದ ಮಹಾಮಂತ್ರಿಗಳು ಅವನ ಮುಂದೆ ಬಳ್ಳಿಗಾಮೆಯ ಮಹತ್ವವನ್ನೂ, ಅಲ್ಲಿಯ ಪ್ರಮುಖ ಆಚಾರ್ಯನೂ ಕೋಡಿಯ ಮಠದ ಅಧಿಪತಿಯೂ ಆದ ವಾಮಶಕ್ತಿದೇವನ ಪವಿತ್ರಯನ್ನೂ ವರ್ಣಿಸಿದರು. ಆ ಮಹಾಮಂತ್ರಿಯು ತನ್ನ ಅಧಿರಾಜನಿಗೆ "ಮಠದಲ್ಲಿ ಪುಣ್ಯಕರ್ಮವನ್ನು ಮಾಡಬೇಕು '' ಎಂದು ಕೇಳಿಕೊಳ್ಳಲಾಗಿ, ರಾಯನು 'ಮನದಲ್ಲಿ ವಿಚಾರಿಸಿ' ಗೌತಮಾಚಾರ್ಯನ ಶಿಷ್ಯನಾದ ವಾಮಶಕ್ತಿ ಪಂಡಿತದೇವನ ಪಾದಗಳನ್ನು ತೊಳೆದು " ಮೂರು ತಲೆಗಳವರೆಗೆ ಅನುಭವಿಸುವಂತೆ ಅನೇಕ ಸ್ಥಳಗಳನ್ನು ದಾನವಾಗಿ ಕೊಟ್ಟನು.'' (8)

ವಾಮ ಶಕ್ತಿ ಪಂಡಿತದೇವನ, ಬಿಜ್ಜಳದೇವನ (ಹಿರಿಯ) ಮಗನಾದ ರಾಯಮುರಾರಿ ಸೋಯಿದೇವನ ರಾಜಗುರುವೂ ಆಗಿದ್ದನೆಂಬುದೂ ೧೧೬೮ನೆಯ ಇಸ್ವಿಯ ಶಿಲಾಲೇಖದಿಂದ ತಿಳಿದುಬರುತ್ತದೆ ಅದರಿಂದ ತಿಳಿಯುವದೇನಂದರೆ. ರಾಯಮುರಾರಿ ಸೋಯಿದೇವನ ಮಹಾಮಂತ್ರಿಯೂ ದಣ್ಣಾಯಕನೂ ಆದ ಬ್ಯಾಳಿಕೆ ಕೇಶವಯ್ಯನು, ತನ್ನ ರಾಜ್ಯವ್ಯವಸ್ಥೆಯ ಮೇಲ್ವಿಚಾರಣೆ ಮಾಡುತ್ತ ಸೊಬಗಿನ ಬಳ್ಳಿಗಾಮೆಗೆ ಬಂದಾಗ ಅಲ್ಲಿಯ ದೇವಸ್ಥಾನದ ಆಚಾರ್ಯನಾದ ರಾಜಗುರುದೇವ ವಾಮದೇವನ ಬಳಿಗೆ ಬಂದು ಬಹು ಕಾಲ ನಿಂತು, ಅವನು ಸಕಲ ಶಾಸ್ತ್ರಪಾರಂಗತನಿದ್ದನೆಂಬುದನ್ನು ಅರಿತುಕೊಂಡನು.

ಇದಲ್ಲದೆ ಆ ಶಿಲಾಶಾಸನದಲ್ಲಿ ಆ ಮಹಾಪಂಡಿತನ ಪ್ರಾವಿಣ್ಯತೆಯನ್ನು ಕುರಿತು ಈ ರೀತಿ ಬರೆದಿದೆ "ಇವನು ವ್ಯಾಕರಣದಲ್ಲಿ ಪಾಣಿನಿ ಪಂಡಿತನು, ರಾಜ್ಯನೀತಿ ವಿವೇಕಗಳಲ್ಲಿ ಶ್ರೀಭೂಷಣಾಚಾರ್ಯನು, ನಾಟ್ಯ ಹಾಗೂ ಸಂಗೀತ ಕಲೆಗಳಲ್ಲಿ ಭರತಮುನಿಯು, ಕಾವ್ಯದಲ್ಲಿ ಸಾಕ್ಷಾತ್ ಸಬಂಧುವೂ, ಸಿದ್ಧಾಂತಗಳಲ್ಲಿ ಲಕುಲೀಶ್ವರನು. ಶಿವಭಕ್ತಿಯಲ್ಲಿ ಸ್ಕಂದನು ಆಗಿದ್ದನು (9) ರಾಯಮುರಾರಿ ಸೋಯಿದೇವನ ತಮ್ಮನಾದ ನಿಸ್ಸಂಕಮಲ್ಲ ಅಥವಾ ಸಂಕಮದೇವನ ಕಾಲದಲ್ಲಿಯೂ, ವಾಮಶಕ್ತಿದೇವನೆ, ರಾಜಗುರುವಾಗಿದ್ದನೆಂದು ೧೧೭೯ ನೆಯ ಇಸ್ವಿಯ ಒಂದು ಶಿಲಾಲೇಖದಿಂದ ಊಹಿಸಬಹುದು ಆ ಶಾಸನದ ಆಶಯವೆಂದರೆ, "ಸಂಕಮನು ತನ್ನ ಎಲ್ಲ ಮಂತ್ರಿ

(6) **E. C.** VII Sk. 105, p. 77.
(7) **Ibidk.** 104 pp. 75-76.
(8) **Ibid Sk.** 102, pp. 73-74.
(9) **E C** VII Sk 92, pp 59 60

ಗಳೊಂದಿಗೆ ಬಳ್ಳಿಗಾವೆಯಲ್ಲಿ ಪಾಳ್ಯ ಹೊಡೆದಾಗ **ರಾಜಗುರು** ವಾಮಶಕ್ತಿ ಪಂಡಿತದೇವನ "ಸ್ವಭಾವಿಕ ಗುಣಗಳಿಗೆ ಮೆಚ್ಚಿ" "ದೇವಸ್ಥಾನ ಆಚಾರ್ಯನಾದ ರಾಜಗುರುವಿನ ಪಾದಗಳನ್ನು ತೊಳೆದು" ಜಿದ್ದುಳಿಗೆ ಕಂಪಣ ನಾಡಿನೊಳಗಿರುವ ಒಂದು ಗ್ರಾಮವನ್ನು ದಾನಕೊಟ್ಟನು (೧೦)

ಪಶ್ಚಿಮ ಚಾಲುಕ್ಯರೂ ಕಳಚೂರಿಯರೂ, [ ಕೆಲವು ಅಪವಾದಗಳನ್ನುಳಿದು ] ತಮ್ಮ **ರಾಜಗುರುಗಳು** ಬಳ್ಳಿಗಾವೆಯವರಾಗಿದ್ದುದರಿಂದ, ಆ ಸ್ಥಳಕ್ಕೆ ಆಗಾಗ್ಗೆ ಭೆಟ್ಟಿಯನ್ನು ಕೊಡುತ್ತಿದ್ದರು. ಆದರೆ, ಯಾದವರಾಗಲಿ, ಸೇವುಣರಾಗಲಿ ಸೊಬಗಿನ ನಾಗರ ಖಂಡದಲ್ಲಿರುವ ಕುಪ್ಪಟೂರಿನಿಂದ ತಮ್ಮ ಧರ್ಮಗುರುಗಳನ್ನು ಆಯ್ದುಕೊಂಡರು. ಅಲ್ಲಿಯೂ ಕೋಟಿನಾಥನ ಅಥವಾ ಕೋಟೀಶ್ವರನ ದೇವಸ್ಥಾನವಿದ್ದಿತು ಈ ಕುಪ್ಪಟೂರಿನೊಳಗೆ, **ಎಪ್ಪತ್ತೇಳು ದೇವಸ್ಥಾನಗಳ ಆಚಾರ್ಯ, ಏಕೋಟಿ ಸಮಯದ ಚಕ್ರವರ್ತಿ** ರುದ್ರಶಕ್ತಿದೇವನು ಇರುತ್ತಿದ್ದನು, ಸಿಂಹಣರಾಯನು ಅನಂತಕೋಟಿನಾಥನ ಪೆರ್ಮೆಯನ್ನು ಕೇಳಿ ಆ ದೇವಸ್ಥಾನಕ್ಕೆ ಒಂದು "ದೊಡ್ಡ ಗ್ರಾಮವನ್ನು" ಉಂಬಳಿ ಹಾಕಿಕೊಡುವುದಕ್ಕೆ ತನ್ನ ದಣ್ಣಾಯಕನಾದ ವಾಸುಕಿನಾಯಕನಿಗೆ ಹೇಳಿ ಕಳುಹಿದನೆಂಬುದು ೧೩೩೧ನೆಯ ಇಸ್ವಿಯ ಶಾಸನದಿಂದ ತಿಳಿಯುತ್ತದೆ. [೧೧] ಸುಮಾರು ೧೨೪೫ ರ ಒಂದು ಶಾಸನದಲ್ಲಿ ಕೋಟೀಶ್ವರ ದೇವಸ್ಥಾನದ ಆಚಾರ್ಯನಾದ ಇದೇ ರುದ್ರಶಕ್ತಿಗೆ, **ರಾಜಗುರು** ಎಂದು ಸಂಭೋಧಿಸಲಾಗಿರುತ್ತದೆ. (೧೨)

ಇನ್ನು ಹೊಯ್ಸಳರ ಸಮಾಚಾರ ಹೊಯ್ಸಳರಾಜನಾದ ನರಸಿಂಹದೇವನು, ಅಸಂಡಿನಾಡಿನಲ್ಲಿರುವಾಗ, ಅವನ ದಳವಾಯಿಯಾದ ನೈಜರಸನು ಬಿಟ್ಟ ದತ್ತಿಗಳನ್ನು ವರ್ಣಿಸುವಾಗ, ಕ್ರಿಯಾಶಕ್ತಿ ದೇವನು **ರಾಜಗುರುವಾಗಿದ್ದನೆಂದು** ೧೧೯೧ ರಲ್ಲಿಯ ಒಂದು ಶಾಸನದಲ್ಲಿ ಹೇಳಲಾಗಿದೆ. ಈ ಶಾಸನದಿಂದ ಆ ರಾಜಗುರುವಿನ ಮನೆತನವನ್ನು ಕಂಡು ಹಿಡಿಯಲಿಕ್ಕೆ ಬರುವಂತಿಲ್ಲ (೧೩)

ಪ್ರಸಿದ್ಧವಾಮಶಕ್ತಿ ಪಂಡಿತದೇವನು ೧೧೯೩ನೆಯ ಇಸ್ವಿಯಲ್ಲಿ ಕೂಡ, ಹೊಯ್ಸಳರ ದಂಡನಾಯಕರ ಮೇಲೆ ತನ್ನ ವರ್ಚಸ್ಸನ್ನು ಬೀರುತ್ತಲೇ ಇದ್ದನು. ಈ ವರ್ಷ ಹೊಯ್ಸಳ ವೀರಬಲ್ಲಾಳನ ದಳವಾಯಿಯಾದ, ಎರೆಯಣ್ಣನು "**ರಾಜಗುರು** ವಾಮಶಕ್ತಿದೇವನ ಪಾದಗಳನ್ನು ಪ್ರಕ್ಷಾಲಿಸಿ" ಕೇದಾರೇಶ್ವರನ ಪೂಜೆ ಅರ್ಚೆಗಳಿಗಾಗಿ ಬಳ್ಳಿಗಾವೆ ನಾಡೊಳಗಿರುವ ಒಂದು ಗ್ರಾಮವನ್ನು ದಾನಕೊಟ್ಟನೆಂದು ಒಂದು

---

(10) **Ibid Sk** 96 pp. 62-3. In about A D. **118** the **raja-guru** Vamasakti Deva and his disciple Jnanasakti Deva are mentioned **E. C.** VII. **Sk 101-p 71.**

(11) **Ibid,** VIII, Sb. 275, p. 46. It may be noted here that Rudrasakti's spiritual younger brother Sarvesvarasakti Deva may have belonged to the same spiritual lineage to which Sarvesvara Deva, mentioned already in A. D. 1070 of the times of the Western Calukya ruler Somesvara Deva. belonged. For both are styled **Ekoti-samaya-cakravarti, priest of the Seventy-seven temples** There is a Rudrasakti Pandita, disciple of Kriyasakti Pandita promoter of the Kalamukha, **Samaya,** of the Saktiparidhi of the Parvatavali and A .....ka-**santati,** mentioned in A. D. 1117 in the times of the Western Calukya ruler Tribhuvanamalla Deva. **E C** VII **Sk**. 316 p 154

(12) **E C** VIII, Sb. 268, p 44. His preceptor was Sarbbesvara Deva as given in a record dated A. D 1241. **Ibid**, *Sb*. 272, p. 45. A Kriyasakti Deva is mentioned in a Yadava record. **Journal of the Bombay Branch R A. S.**, XII, p. 39.

(13) **E. C.** VI. Kd. 157, p. 31.

ಶಿಲಾಲೇಖದಲ್ಲಿ ಹೇಳಿದೆ. (೧೪) ಆದರೆ ಆ ಶಾಸನವು ವಾಮಶಕ್ತಿದೇವನು ಹೊಯ್ಸಳರ ರಾಜಗುರುವಾಗಿದ್ದನೆಂದು ಸ್ಪಷ್ಟವಾಗಿ ಹೇಳುವುದಿಲ್ಲ.

ಇನ್ನು ಮುಂದೆ ನಮಗೆ ೧೨೦೦ ನೆಯ ಇಸ್ವಿಯ ಕಾಲದಲ್ಲಿ ಮತ್ತೊಂದು ಹೆಸರಿನ ಪರಿಚಯವುಂಟಾಗುತ್ತದೆ ಅದಾವುದೆಂದರೆ, ಶ್ರೀಪರ್ವತದ ಅಗಸ್ತ್ಯೇಶ್ವರ ಮಠದ ರಾಜಗುರು ಕ್ರಿಯಾಶಕ್ತಿ ಆಚಾರ್ಯನದು (೧೫). ಆಸಂಡಿನಾಡಿನ ಒಡೆಯನಾದ ಮರಳು ಮಾರ್ಕಂಡೇಯ ದೇವನು, ರಾಜಗುರು ಕ್ರಿಯಾಶಕ್ತಿ ದೇವನೆಂಬುವವನಿಗೆ ೧೨೦೯ ರಲ್ಲಿ ದಾನವನ್ನಿತ್ತನು. [೧೬) ಮೇಲೆ ಹೇಳಿದ ಕ್ರಿಯಾಶಕ್ತಿ ಆಚಾರ್ಯನೂ ಈ ಕ್ರಿಯಾಶಕ್ತಿ ದೇವನೂ ಒಂದೇ ವ್ಯಕ್ತಿಯೆಂದು ಹೇಳಲು ಬರುವದಿಲ್ಲ. ಯಾಕೆಂದರೆ ಕರ್ನಾಟಕದ ಅರಸರಿಗೆ ಆಸಂಡಿನಾಡೂ ರಾಜಗುರುಗಳನ್ನು ಪೂರೈಸುತ್ತಿತ್ತೆಂದು ತೋರುತ್ತದೆ ಆ ಆಸಂಡಿನಾಡಿನಲ್ಲಿ ಐದು ಮಠಗಳಿದ್ದವು. ಅವುಗಳ ಆಚಾರ್ಯರಿಗೆ ಪಂಚಾಚಾರ್ಯರೆಂದು ಸಾಮಾನ್ಯವಾಗಿ ಕರೆಯುತ್ತಿದ್ದರು. (೧೭) ಹೊಯ್ಸಳರು ತಮ್ಮ ರಾಜಗುರುಗಳನ್ನು ಆಸಂಡಿನಾಡಿನಿಂದ ಒದಗಿಸಿಕೊಳ್ಳುತ್ತಿದ್ದರೆಂದು ೧೨೧೪ನೆಯ ಇಸವಿಯ ಶಾಸನದಿಂದ ಗೊತ್ತಾಗುತ್ತಿದೆ. ಅದರೊಳಗಿನ ವಿವರಣೆಯಿಂದ ಮತ್ತೂ ಹೆಚ್ಚಿಗೆ ತಿಳಿಯುವದೇನೆಂದರೆ, ಹೊಯ್ಸಳ ನರಸಿಂಹ ದೇವನ ದಳವಾಯಿಗಳಲ್ಲೊಬ್ಬನಾದ, ಮುದುಗೆರೆ ರಾಮಗೌಡನೆಂಬವನು, ರಾಜಗುರು ಕ್ರಿಯಾಶಕ್ತಿ ದೇವನಿಗೂ, ಆಸಂಡಿನಾಡಿನ ಏಕೋಟಿಯತಿಗಳಿಗೂ ದಾನವನ್ನು ಮಾಡಿದನು. (೧೮) ರುದ್ರಶಕ್ತಿ ದೇವನು, ದೋರಸಮುದ್ರದೊಳಗೆ ರಾಜಗುರುವಾಗಿದ್ದನೆಂದು ೧೨೩೩ ರ ಶಾಸನದಿಂದ ತಿಳಿಯುತ್ತದೆ (೧೯)

ಕರ್ನಾಟಕದ ಅರಸರಂತೆ ಅವರ ಮಾಂಡಲಿಕರೂ, ಪ್ರಾಂತಿಕ ಅಧಿಕಾರಿಗಳೂ, ಮೇಲೆ ಹೇಳಿದ ಸ್ಥಳಗಳಿಂದಲೆ ಧರ್ಮಗುರುಗಳನ್ನು ಆಯ್ದುಕೊಳ್ಳುತ್ತಿದ್ದರು. ಈ ವಿಷಯವಾಗಿ ಕೆಳಗಿನ ಕೆಲವು ಉದಾಹರಣೆಗಳು ಸಾಕು. ಮಹಾಮಂಡಲೇಶ್ವರ ಕುಂದಮರಸನು ೧೦೯೯ ರಲ್ಲಿ ತನ್ನ ಗುರುವಾದ ಬಳ್ಳಿಗಾವೆಯ ಮೂಲಸ್ಥಾನ ನಂದಿಕೇಶ್ವರ ದೇವಸ್ಥಾನದ ಮೂಲಿಗ ಶಿವಶಕ್ತಿ ಪಂಡಿತನ "ಪಾದಗಳನ್ನು ತೊಳೆದು" ಕೆಲವು ದಾನಗಳನ್ನು ಕೊಟ್ಟನು. (೨೦) ಕೃಷ್ಣರಾಜನ ತಮ್ಮನಾದ ಗೋವಿಂದನು, ಪರ್ವತಾವಳಿಯ ಮೂವರಕೋಣೆಯ ಸಂತತಿಗೆ ಭೂಷಣಪ್ರಾಯನಾದ ಸೋಮೇಶ್ವರ ಪಂಡಿತ ದೇವನ ಪಾದಗಳನ್ನು ಪೂಜಿಸಿ ದತ್ತಿಯನ್ನಿತ್ತನು. (೨೧) ಅದೇ ಕೇದಾರೇಶ್ವರ (ಬಳ್ಳಿಗಾವೆ) ಗ್ರಾಮದಲ್ಲಿ, ಬಮ್ಮರಸ ಹಾಗೂ ಜಗದೇವರಸರ ಗುರುವಾದ ವಾದಿ ವಿದ್ಯಾಭರಣ ಪಂಡಿತದೇವನು ಇರುತ್ತಿದ್ದನು. (೨೨) ಅವರೀರ್ವರು ತಮ್ಮ ಗುರುವಿಗೆ ಕೆಲವು ದಾನಗಳನ್ನು ಕೊಟ್ಟರು. ೧೧೬೪ ರ ಸುಮಾರಿನಲ್ಲಿ, ಮಹದೇವ ದಣ್ಣಾಯಕನು, ಕೋಡಿಯ ಮಠದ ಮೂವರ ಕೋಣೆಯ ಸಂತತಿಯ "ವಾಮಶಕ್ತಿ ಪಂಡಿತದೇವನ ಪಾದಗಳನ್ನು ತೊಳೆದು" ದತ್ತಿಯನ್ನು ಬಿಟ್ಟನು" [೨೩] ಸುಮಾರು ೧೧೭೮ ರಲ್ಲಿ ಭಾರಂಗಿ ಶಿವಪುರ ಗ್ರಾಮದ ಚಂಡನು, ಭಾರಂಗಿಯ ಮಲ್ಲಿಕಾರ್ಜುನ ದೇವರಿಗೆ ಚಿಕ್ಕಕೆರೆಯೂರು ಗ್ರಾಮೇಶ್ವರ ದೇವಸ್ಥಾನದ ಕ್ರಿಯಾಶಕ್ತಿ ಪಂಡಿತದೇವನ ಶಿಷ್ಯನಾದ "ಕಲ್ಯಾಣಶಕ್ತಿ ಪಂಡಿತ ದೇವನ ಪಾದಗಳನ್ನು ತೊಳೆದು" ದಾನವನ್ನು ಮಾಡಿದನು (೨೪)

(14) **Ibid**, VII. Sk. 105, pp. 77-8.
(15) **Ibid**, XII. Ck. 35, pp 82-3
(16) **Ibid**, VI. Kd. 154, p. 30.
(17) **Ibid**, Kd. 143, p. 27.
(18) **Ibid**, VII Ci. 64, pp 190-191
(19) **Ibid**, V. Ak 108, p. 159
(20) **E C**. VII. Sk. 125, p 97.
(21) **Ibid**, **Sk**. 98, p. 64.
(22) **Ibid**, **Sk**. 103, p. 75.
(23) **Ibid**, **Sk**. 108, pp. 80-1.
(24) **Ibid**, **VII**. Sb. 325, p. 56.

ಕರ್ನಾಟಕದ ಅರಸರು ಹಾಗು ಅವರ ಮಾಂಡಲಿಕರು ೧೧ ನೆಯ ಶತಮಾನದ ಮಧ್ಯದಿಂದ ೧೩ ನೆಯ ಶತಮಾನದ ವರೆಗೆ ಹೆಸರಾದ ಬಳ್ಳಿಗಾವೆ ಕುಪ್ಪಟೂರ ಅಸಂಡಿ ಶ್ರೀಪರ್ವತ ಇವುಗಳಲ್ಲಿ ಯಾವುದಾದರೊಂದು ಸ್ಥಳದಿಂದ ತಮ್ಮ ರಾಜಗುರುಗಳನ್ನು ಆರಿಸಿಕೊಳ್ಳುವ ಸಾಂಪ್ರದಾಯವನ್ನಿಟ್ಟಿದ್ದರು. ಈ ನಾಲ್ಕು ಸ್ಥಳಗಳಲ್ಲಿ ಬಳ್ಳಿಗಾವೆ ಕುಪ್ಪಟೂರುಗಳು ಉಳಿದ ಎರಡು ಗ್ರಾಮಗಳಿಗಿಂತ ಹೆಚ್ಚಿಗೆ ಪ್ರಸಿದ್ಧವಾದವುಗಳಾಗಿದ್ದವು ಬಳ್ಳಿಗಾವೆಯಂತೂ ಕರ್ನಾಟಕದೊಳಗೆ ಶ್ರೇಷ್ಠವಾದ ಕೇಂದ್ರವಾಗಿದ್ದಿತು. ಪೂರ್ವದ ಮರ್ಯಾದೆಯು' ಪುರಸ್ಕೃತರಾದ ವಿಜಯನಗರದ ರಾಯರ [ಈ ವಿಷಯವಾಗಿ ಬೇರೆಕಡೆಗೆ ಸಿದ್ಧ ಮಾಡಿದೆ] ಮೇಲೆಯೂ, ತಮ್ಮ ಪೂರ್ವದಲ್ಲಾದ ಅರಸರು, ತಮ್ಮ ರಾಜಗುರುಗಳನ್ನು ಮೇಲ್ಕಾಣಿಸಿದ ಸ್ಥಳಗಳಿಂದ ಒದಗಿಸಿಕೊಳ್ಳುತ್ತಿದ್ದ ಸಾಂಪ್ರದಾಯದ ಪರಿಣಾಮವು ಆಗಿರಲಿಕ್ಕೆಬೇಕು.

ರಾಜಗುರುಗಳನ್ನು ಆಯ್ದು ತೆಗೆಯುವದರಲ್ಲಿ, ಈ ಪೂರ್ವದ ಮರ್ಯಾದೆಯೊಂದೇ ಕಾರಣವಾಗಿರಲಿಲ್ಲ. ಈಸಂದರ್ಭದಲ್ಲಿ ಮತ್ತೊಂದು ವಿಷಯವೂ ವಿಚಾರಾರ್ಹವಾಗಿದೆ ಕಾಲಮುಖ ಪಂಥದ ವಿವಿಧ ಶಾಖೆಗಳವರಿಗೂ ಅದರಲ್ಲಿಯೂ ಬಳ್ಳಿಗಾವೆಯ ಶಾಖೆಯುವರಿಗೂ ಒಂದು ಸಾಧರ್ಮ್ಯವಿದ್ದಿತು. ಕಾಳಮುಖ ಪಂಥದ ಕುಲಸ್ವಾಮಿಯೂ ವಿಜಯನಗರದವರ ಕುಲದೈವತವೂ ಒಂದೇ; ಎಂದರೆ ವಿರೂಪಾಕ್ಷ ಆದರೆ, ಆ ಕುಲದೇವತೆಯ ಸ್ಥಾನವು ಪಂಪಾಕ್ಷೇತ್ರವಲ್ಲ ಕೋಡಿಯ ಮಠವು. ಕೋಡಿಯ ಮಠದ ವಾಮಶಕ್ತಿದೇವನು, ೧೨೧೫ ರಲ್ಲಿ ಪುರಾಣ ಕಾಲದ ಉಪಮಾನ್ಯುವಿನಂತೆ "ಕೋಡಿಯ ಮಠದ ವಿರೂಪಾಕ್ಷದೇವರನ್ನು ಕುರಿತು" ಮಹತ್ತಪಸ್ಸನ್ನು ಕೈಕೊಂಡನು [25] ಈ ವಿಷಯದಲ್ಲಿ ಕೆಲವು ಸಂಶಯಗಳು ತಲೆದೋರುತ್ತವೆ. ವಿಜಯನಗರದ ಸಂಸ್ಥಾಪಕರ ಗುರುವಿನ ಹೆಸರು ಕ್ರಿಯಾಶಕ್ತಿ ಆಚಾರ್ಯನೆಂದಿದ್ದಿತು. ಕರ್ನಾಟಕದೊಳಗಿನ ಅನೇಕ ಜನಮುರಾದೀಶರಿಗೂ ಈ ಹೆಸರಿದ್ದಿತು, ೧೦೩೬ ರಲ್ಲಿಯ ಶಾಸನದಲ್ಲಿ ಉಕ್ತವಾದಂತೆ, [26] ಬಳ್ಳಿಗಾವೆಯ ಕಾಳಮುಖ ಬ್ರಹ್ಮಚಾರಿಸ್ಥಾನದಲ್ಲಿ ಮಠಗಳಿದ್ದವು ಅವುಗಳೊಳಗಿನ ನಾಲ್ಕು ಮಠಗಳ ಹೆಸರುಗಳನ್ನು ೧೧೯೮ ನೆಯ ಇಸವಿಯ ಒಂದು ಶಾಸನದಲ್ಲಿ ಕೆಳಗಿನಂತೆ ವಿವರಿಸಲಾಗಿದೆ—"೧. ಭೇರುಂಡೇಶ್ವರನ ಹಿರಿಯಮಠ, ಇದಕ್ಕೆ ಗೌಳಪಂಡಿತದೇವನು ಆಚಾರ್ಯನು. ೨. ಪಂಚಲಿಂಗಮಠ, ಇದಕ್ಕೆ ಶ್ರೀಕಂಠ ಪಂಡಿತದೇವನು ಆಚಾರ್ಯನು. ೩ ತ್ರಿಪುರಾಂತಕಮಠ, ಇದಕ್ಕೆ ಚತುರಾನನಪಂಡಿತನು ಆಚಾರ್ಯನು. ೪ ಮೂಲಸ್ಥಾನಮಠ ಇದಕ್ಕೆ ಆಚಾರ್ಯನು ಮೂಲಿಗ ಹೊನ್ನಯ ಜೀಯನು [27] ಅದೇ ಬಳ್ಳಿಗಾವೆಯ ಗ್ರಾಮದೊಳಗಿನ ಎರಡು ಮಠದ ಆಚಾರ್ಯರಿಗೆ, ಕ್ರಿಯಾಶಕ್ತಿಯೆಂಬ ಹೆಸರಿದ್ದುದು ೧೧೧೩ ರ ಶಾಸನವೊಂದರಿಂದ ತಿಳಿದು ಬರುತ್ತದೆ. ಹಿರಿಯ ಭೇರುಂಡೇಶ್ವರ ಮಠದ ಆಚಾರ್ಯನಿಗೆ, ಶಾಂತಶಿವ ಪಂಡಿತನೆಂದು ಕರೆಯುತ್ತಿದ್ದರು. ಪಂಚಲಿಂಗಮಠದ ಅಧೀಶನಿಗೆ ಕ್ರಿಯಾಶಕ್ತಿ ದೇವ ಎಂದು ಕರೆಯುತ್ತಿದ್ದರು. ತ್ರಿಪುರಾಂತಕ ಪುರದ ಆಚಾರ್ಯನಿಗೂ ಕ್ರಿಯಾಶಕ್ತಿ ಪಂಡಿತನೆಂಬ ಅಭಿದಾನವಿದ್ದಿತು 28 ]

ಬಳ್ಳಿಗಾವೆಯ ಆಚಾರ್ಯರಲ್ಲಿ ಅನೇಕರಿಗೆ ಒಂದಕ್ಕೊಂದು ಹೋಲುವ ಹೆಸರುಗಳಿವೆ ಹಾಗೂ ಮೇಲೆ ವಿವರಿಸಿದ ಕ್ರಿಯಾಶಕ್ತಿಯರ ಪರಂಪರೆಗೂ, ವಿಜಯನಗರದ ಮೊದಲಿನ ಅರಸರ **ಗುರುವಾದ** ಕ್ರಿಯಾಶಕ್ತಿಗೂ ಇರುವ ಸಂಬಂಧವನ್ನು ತೋರಿಸುವ ಪ್ರಮಾಣಗಳ ಅಭಾವವಿದೆ ಆದುದರಿಂದ ವಿಜಯನಗರ ಸಂಸ್ಥಾಪಕರ ಪ್ರಾರಂಭದ ರಾಜಗುರುಗಳ ಹಾಗೂ ಬೇರೆ ಗುರುಗಳ ಪೂರ್ವಾಪರ ಸಂಬಂಧವನ್ನು ಸದ್ಯದ ಸಂಶೋಧನದ ಪರಿಸ್ಥಿತಿಯಲ್ಲಿ ಗೊತ್ತುಪಡಿಸಲಿಕ್ಕೆ ಅಸಾಧ್ಯವಾಗಿದೆ.

---

(25) **E. C. VII** Sk. 95, pp. 51-2.
[26) **Ibid**, Sk. 126, p. 98.
[27] **Ibid**, Sk 100, p 79
(28) **Ibid, Sk** 99, 67. The name of the fifth matha is supplied in a record dated A D. 1159 which styles the priest of the **Hiriya** matha of Bherundesvara, **Muliga Madhukesvara** Pandita; of the Pancalinga matha,

( ೩ )

ವಿಜಯನಗರಸ್ಥಾಪಕರ ರಾಜಗುರುಗಳು ಕ್ರಿಯಾಶಕ್ತಿಪಂಡಿತರಾಗಿದ್ದರೆಂಬುವದಕ್ಕೆ ಮೇಲೆ ಹೇಳಿದಂತೆ ಪ್ರಮಾಣಗಳಿವೆ. ಹಾಗು ಇಮ್ಮಡಿ ಹರಿಹರ, ಮೊದಲನೇ ದೇವರಾಯ, ಇವರ **ರಾಜಗುರುವೂ** ಕ್ರಿಯಾಶಕ್ತಿ ಪಂಡಿತನೆಂಬುವವನಿದ್ದನೆಂದು ಸಿದ್ಧಗೊಳಿಸಲಿಕ್ಕೆ ನಮ್ಮಲ್ಲಿ ಸಾಕಷ್ಟು ಪ್ರಮಾಣಗಳಿವೆ. (29) ಆದರೂ ಸಂಗಮನ ಮಕ್ಕಳು ಸಾವಕಾಶವಾಗಿ ಶೃಂಗೇರಿಯ ಗುರುಗಳ ವರ್ಚಸ್ಸಿಗೆ ಒಳಪಡಹತ್ತಿದ್ದರೆಂದೂ ಕಂಡುಬರುತ್ತಿದೆ ವಿಜಯನಗರದ ಸ್ಥಾಪನೆಯಾದ ವರ್ಷದಲ್ಲಿಯೇ, ಅಂದರೆ ೧೩೩೬ ರಲ್ಲಿ ಇದಕ್ಕೆ ಪ್ರತ್ಯಂತರವು ದೊರೆಯುವಂತಿದೆ. ಆ ವರ್ಷ ಹರಿಹರನು ತನ್ನ ನಾಲ್ವರು ತಮ್ಮಂದಿರೊಡನೆ 'ವಿಜಯ ಮಹೋತ್ಸವವನ್ನು' ನೆರವೇರಿಸುವದಕ್ಕಾಗಿ ಶ್ರಿಂಗೇರಿಯ ಯಾತ್ರೆಯನ್ನು ಕೈಕೊಂಡು ಅಲ್ಲಿ ಅವರೊಡನೆ ಬಹುಸ್ತುತ್ಯವಾದ ದಾನವನ್ನು ಮಾಡಿದನು. ವಿಜಯ ಮಹೋತ್ಸವವನ್ನು [ಪೂರ್ವ ಸಮುದ್ರದಿಂದ ಪಶ್ಚಿಮಸಮುದ್ರದವರೆಗಿರುವ ಪ್ರದೇಶವನ್ನು ಗೆದ್ದುದು] ನೆರವೇರಿಸಲು ಆ ರಾಜ್ಯಪ್ರವರ್ತಕರು ಶ್ರಿಂಗೇರಿಗೆ ಹೋದ ಕಾರಣವನ್ನು ಆ ಶಾಸನದಲ್ಲಿಯ ವಿದ್ಯಾತೀರ್ಥಗುರುವಿನ ವರ್ಣನೆಯಲ್ಲಿ ಕಂಡು ಹಿಡಿಯಬಹುದು. ಅದಾವುದೆಂದರೆ ಆ ಗುರುವಿನಿಂದ 'ಸಂಪಾದಿಸಿದ ಮಿತ್ರತ್ವವು ಎಂದೂ ಅಳಿಯದಂಥಾದ್ದು ಇರುವದರಿಂದ ಆತನನ್ನು ನಮಸ್ಕರಿಸುವದಕ್ಕಾಗಿ ಹರಿಹರನು ಅಲ್ಲಿಗೆ ಹೋಗಿದ್ದುದು." [30] ಆ ರಾಜ್ಯಸ್ಥಾಪಕರು ಆಧ್ಯಾತ್ಮಿಕ ಮಾರ್ಗದರ್ಶಕತ್ವವನ್ನಲ್ಲದೆ ವಿಶಿಷ್ಟ ಮಹತ್ವದ ಸಹಾಯವನ್ನೂ ಆ ಶ್ರಿಂಗೇರಿಯ ಸ್ವಾಮಿಗಳಿಂದ ದೊರಕಿಸುತ್ತಿದ್ದರು. ಅವರ ಗುರುವಾದ ಕ್ರಿಯಾಶಕ್ತಿ ಪಂಡಿತನು ಎಷ್ಟೋ ಪೂಜ್ಯನಾಗಿದ್ದರೂ ಅವನಿಂದ ಇಂಥ ಸಹಾಯವು ದೊರಕುವದು ಅಶಕ್ಯವಾಗಿದ್ದಿತ್ತು ಅದಾವುದೆಂದರೆ, ಅವರಿಗೆ ಕೊರತೆ ಬಿದ್ದಾಗ ಹಣ ಪೂರೈಸುವದು. ಇದು ವಿದ್ಯಾತೀರ್ಥರ ಅಚಲವಾದ ಸ್ನೇಹ ಹಾಗು ಮೂರೂ ಮುಕ್ಕಾಲುಗಳಿಗೆಗಳವರೆಗೆ ಸುವರ್ಣವೃಷ್ಟಿ ಮಾಡಿದ ಕತೆಗೂ, ಶ್ರಿಂಗೇರಿ ಮಠದ ಶ್ರೀ ವಿದ್ಯಾರಣ್ಯ ಶ್ರೀಪಾದಂಗಳಿಗೂ ಇರುವ ಸಂಬಂಧ, ಇವುಗಳಮೇಲೆ ಹೆಚ್ಚು ಪ್ರಕಾಶ ಕೆಡುವುತ್ತದೆ [31].

ಶ್ರಿಂಗೇರಿಯೊಳಗೆ ದೊರೆತ ಒಂದು ಶಿಲಾಲೇಖದಿಂದ ವಿದ್ಯಾತೀರ್ಥ ಸ್ವಾಮಿಗಳವರು ೧೩೫೬ ರಲ್ಲಿ ಜೀವಿಸಿದ್ದರೆಂದು ತಿಳಿಯುತ್ತದೆ. ಶೃಂಗೇರಿಯ ಮಠಾದೀಶರ ಸ್ನೇಹದ ವಿಷಯದಲ್ಲಿ ವಿಜಯನಗರದ ಸಂಸ್ಥಾಪಕರು ವಹಿಸಿದ ವಿಶ್ವಾಸವು ಎಷ್ಟಿದ್ದಿತ್ತೆಂಬುದನ್ನೂ ಈ ಶಾಸನವು ತೋರಿಸಿಕೊಡುತ್ತದೆ. ವಿದ್ಯಾತೀರ್ಥರನ್ನು ವರ್ಣಿಸುವಾಗ "ಯತಿವರ್ಯರಾದ ವಿದ್ಯಾತೀರ್ಥರು ಹಗಲಿರುಳು ಜನರ ಅಂತರಂಗ ಬಾಹ್ಯಾಂಗಗಳಲ್ಲಿರುವ ಅಂಧಕಾರವನ್ನು ಹೊಡೆದೋಡಿಸುವಲ್ಲಿ ಸೂರ್ಯನನ್ನು ಮಿಕ್ಕಿದ್ದರು." ಎಂದು ಈ ಶಿಲಾಲೇಖದಲ್ಲಿದೆ. ಮಹಾಮಂಡಲೇಶ್ವರ ಪೂರ್ವ ಪಶ್ಚಿಮ ಸಮುದ್ರಾಧಿಪತಿ ವೀರಬುಕ್ಕ ಒಡೆಯನು ಈ ಭೆಟ್ಟಿಯ ಸಮಯದಲ್ಲಿ ಭೂದಾನ ಧನದಾನಗಳನ್ನು ಮಾಡಿದನು. ಈ ಶಿಲಾಲೇಖದ ಮಹತ್ವವೆಂದರೆ ವಿದ್ಯಾತೀರ್ಥಸ್ವಾಮಿಗಳವರು ಆ ವರ್ಷ ಜೀವಿಸಿದ್ದುದು.

---

Sarvesvara Pandita; of the Tiipuiantaka matha, Jnanasakti Pandita, and of the Kodiya matha, Vamasakti Pandita, E C VII Sk. I23, p 94. The Kodiya matha, therefore, was the fifth matha in Balligeme which contained many other mathas, Brahmapuris, and even a Buddhist **Vihara !** The greatness of the Kodiya matha is desciibed in detail in a iecord of A D. 1162 **Ibid**, Sk. 102, p. 73.

[29] The only exception is in A D. 1396 ;when Khandeya Raya Khalesvara Devayya is called the **Raja-guru** E C. VII. HI 71, p 173. In A. D. 1403. Vitthanna Odeya is called a "flamingo at the lotus feet of Kriyasakti guru munisvara." **Ibid, VI.** Kp 52, p 87.

]30] **E. C.** VI Sg. 1, p. 92.

(31) Cf **Saletore, S. P. Life.**, I. p. 142.

ಇದರಿಂದ ಶೃಂಗೇರಿ ಮಠದ ಸಾಂಪ್ರದಾಯದಲ್ಲಿ ೧೩೩೩ ನೆಯ ಇಸ್ವಿಯಲ್ಲಿ ಅವರ ಕಾಲವಾಯಿತೆಂದು ಹೇಳಿದ ಮಾತು ಸುಳ್ಳು ಇರುವದೆಂದು ಸ್ಪಷ್ಟವಾಗುತ್ತದೆ. ( 32 )

ಶೃಂಗೇರಿಯ ಹೊರಗಣ ಶಾಸನಗಳೂ ಕೂಡ ವಿದ್ಯಾತೀರ್ಥ ಸ್ವಾಮಿಗಳು ಬುಕ್ಕರಾಯನ ಸಮಕಾಲೀನರಾಗಿದ್ದರೆಂಬುದಕ್ಕೆ ಪುಷ್ಟಿಯನ್ನೀಯುತ್ತವೆ. ದಕ್ಷಿಣಕಾನಡಾ ಜಿಲ್ಲೆಯೊಳಗಿನ ಮಂಗಳೂರ ತಾಲೂಕಿನಲ್ಲಿಯ ಉಳಿಯಬೆಟ್ಟು ಎಂಬ ಗ್ರಾಮದೊಳಗಿರುವ ಶಿವನ ಗುಡಿಯಲ್ಲಿ ಒಂದು ಶಾಸನವಿರುತ್ತದೆ. ಇದರಲ್ಲಿ ಮಹಾಮಂಡಲೇಶ್ವರ ಬುಕ್ಕಣ್ಣೊಡೆಯನ ಆಳಿಕೆಯಲ್ಲಿ ತುಳುವ ನಾಡಿನಲ್ಲಿಯ ಓಮಂಜೂರು ದೇವಸ್ಥಾನದ ಪೂಜೆಗಾಗಿ ವಿದ್ಯಾತೀರ್ಥ ಶ್ರೀಪಾದಂಗಳವರಿಗೆ ಮಂಗಳೂರ ರಾಜ್ಯದ ರಾಜ್ಯಾಧಿಕಾರಿಯಾದ ಪಂಢರಿದೇವ ಒಡೆಯನು ಭೂದಾನವನ್ನು ಮಾಡಿದನೆಂದು ಹೇಳಿದೆ. ಇದು ಶಕೆ ೧೨೭೮ ರಾಕ್ಷಸನಾಮ ಸಂವತ್ಸರ ಪೌರ್ಣಿಮೆ ಗುರುವಾರ ದಿವಸ ಬರೆಯಲ್ಪಟ್ಟಿದೆ. ಈ ದಿವಸವು ೧೩೫೬ ನೆಯ ಇಸ್ವಿಯ ಜೂನ ೧೮ ನೆಯ ತಾರೀಖು ಆಗುತ್ತದೆ [33]

ವಿದ್ಯಾತೀರ್ಥಸ್ವಾಮಿಗಳು ೧೩೫೬ ನೆಯ ಇಸ್ವಿಯ ಜೂನ ೧೮ ನೆಯ ದಿವಸ ಶೃಂಗೇರಿಮಠದ ಗುರುಗಳಾಗಿದ್ದರೆಂದಂತಾಯಿತು. ಇದೇ ವರ್ಷದ ಮತ್ತೊಂದು ಶಾಸನದಲ್ಲಿ ಬುಕ್ಕ ಒಡೆಯನು ವಿದ್ಯಾತೀರ್ಥ ಮುನಿಯ ಸಹಾಯದಿಂದ ಪ್ರಸಿದ್ಧನಾದನೆಂದು ಬರೆದಿದೆ. [ 34 ] ಇದರಿಂದಲೂ ಮೇಲಿನ ಮಾತಿಗೆ ಪುಷ್ಟಿಯು ದೊರೆಯುತ್ತದೆ

ವಿದ್ಯಾರಣ್ಯ ಶ್ರೀಪಾದರೇ ವಿಜಯನಗರ ಸಾಮ್ರಾಜ್ಯಸ್ಥಾಪನೆಗೆ ಕಾರಣೀಭೂತರಾದರೆಂದು ತಪ್ಪು ತಿಳುವಳಿಕೆಯಿಂದ ವಾದಿಸುವವರೆಲ್ಲರ ಮತವನ್ನು ಈ ಶಿಲಾಶಾಸನವು ಸಂಪೂರ್ಣವಾಗಿ ಖಂಡಿಸುತ್ತದೆ. ವಿದ್ಯಾರಣ್ಯ ಶ್ರೀಪಾದರು ಶೃಂಗೇರಿಯ ಪೀಠವನ್ನು ಯಾವಾಗ ಅಲಂಕರಿಸಿದರೆಂಬುವ ವಿಷಯದಲ್ಲಿ ತುಳುವಿನಲ್ಲಿಯೇ ಒಂದು ಆಧಾರವು ದೊರೆಯುತ್ತದೆ. ಮಂಗಳೂರು ತಾಲೂಕಿನೊಳಗಿನ ಕುಡುಪು ಎಂಬ ಗ್ರಾಮದಲ್ಲಿಯ ಅನಂತ ಪದ್ಮನಾಭ ದೇವಸ್ಥಾನದೊಳಗೆ ದೊರೆತ ಒಂದು ಶಿಲಾಶಾಸನದಲ್ಲಿ ಇರುವದೇನಂದರೆ:—ಬುಕ್ಕರಾಯನ ಆಜ್ಞೆಯನ್ನನುಸರಿಸಿ ಮಂಗಳೂರು ರಾಜ್ಯದ ಅಧಿಕಾರಿಯಾದ ಪಂಢರಿದೇವನು ಬ್ರಾಹ್ಮಣರ ಭೋಜನದ ದೆಸೆಯಿಂದಲೂ, ಶಂಕರದೇವನ ಗುಡಿಗೆ ನೈವೇದ್ಯವನ್ನರ್ಪಿಸುವ ದೆಸೆಯಿಂದಲೂ ನಂದಳಿಕೆ ನಾಡಿನೊಳಗಿರುವ ಕುಡುಪು ಮತ್ತು ಮೂಳೂರು ಎಂಬ ಗ್ರಾಮಗಳಿಂದ ಬರುವ ಬತ್ತದ ಆದಾಯವನ್ನು ದಾನಮಾಡಿದನು. ಅದರಲ್ಲಿ ಶಕ ವರ್ಷ ೧೨೭೮ ರಾಕ್ಷಸ ನಾಮ ಸಂವತ್ಸರದ ಕಾರ್ತಿಕ ಶು. ೧ ಗುರುವಾರ ಎಂದು ಇರುತ್ತದೆ. ಇದು ೧೩೫೬ ನೆಯ ಇಸ್ವಿಯ ಅಕ್ಟೋಬರ ೨೬ ನೆಯ ತಾರೀಖು ಆಗುತ್ತದೆ. (35)

ಈ ಶಿಲಾಲೇಖದೊಳಗಿನ ವಿಷಯದ ಸಂಬಂಧದಲ್ಲಿ ಸಂಶಯ ತೆಗೆದುಕೊಳ್ಳುವ ಕಾರಣವಿಲ್ಲ. ೧೩೫೬ ನೆಯ ಇಸ್ವಿಯ ಜೂನ ೧೮ನೇ ತಾರೀಖಿನ ದಿವಸ ಶೃಂಗೇರಿಯ ವಿದ್ಯಾತೀರ್ಥ ಸ್ವಾಮಿಗಳವರಿಗೆ ದತ್ತಿಯನ್ನಿತ್ತ ರಾಜ್ಯಾಧಿಕಾರಿಯೇ ಇದನ್ನು ಕೊಟ್ಟಿರುವನು. ಮದರಾಸು ಸರಕಾರದ ಶಿಲಾಶಾಸನ ತಜ್ಞನು ವಿದ್ಯಾತೀರ್ಥ ಸ್ವಾಮಿ ಎಂದಿದ್ದಲ್ಲಿ ವಿದ್ಯಾತೀರ್ಥ ಶ್ರೀಪಾದ ಎಂದು ತಪ್ಪಾಗಿ ಬರೆದಿರುವನು ( 36) ಮೇಲ್ಕಾಣಿಸಿದ ರಾಜ್ಯಾಧಿಕಾರಿಯೇ ವಿದ್ಯಾರಣ್ಯ ಶ್ರೀಪಾದರು ಮರಾ

(32) Mys. Archi. Rept. for 1915, p. 56.
(33) **475 of 1928-9; Ep Rept.** for 1928-9. p 54
(34) **E. C** IV **Yd** 46, p. 58. Relying on Rice's interpretation, I took the year to be A. D. 1346 ( **S. P. Life,** I p 109 ) But this needs correction for the original runs thus :—**Astottara-navati-adhika-dvi-satadhikaika-sahasra-sankhyakesu Saka-varsesu gatesu tad anantarasya Nala-samvatsarasya** Phalguna-mase Krisna-pakse pratipade-tithau Bhauma-vare Uttara-Phalgunenaksatre **Siva-sayujam E. C. IV,** text, p. 152.
(35) **460 of 1928-9, Ep. Rept for 1928-9, p. 54**
(36) **475 of 1928-9, Ep** Rept. **Ibid.**

ದೀಶರಾದ ಮೇಲೆ ಅಕ್ಟೋಬರ ೨೫ ನೆಯ ತಾರೀಖಿನ ದಿನ ಮತ್ತೊಂದು ದಾನಮಾಡಿದನು.

ವಿದ್ಯಾರಣ್ಯ ಶ್ರೀಪಾದರ ಹಿಂದೆ ಶೃಂಗೇರಿಯ ಮಠಾಧೀಶರಾಗಿದ್ದ ವಿದ್ಯಾತೀರ್ಥ ಸ್ವಾಮಿಗಳಿಂದ ಸಂಗಮನ ಮಕ್ಕಳು ಭೌತಿಕ ಸಹಾಯ ಪಡೆದರೆಂಬ ಬಗ್ಗೆ ಜನರಲ್ಲಿ ಸಂಶಯವೇ ಇರಲಿಲ್ಲ. ವಿದ್ಯಾರಣ್ಯರು ಜಗದ್ಗುರುಗಳಾದ ಮೇಲೆಯೂ ಜನರು ವಿದ್ಯಾರಣ್ಯಸ್ವಾಮಿಯವರಿಗೂ ಸಂಗಮನ ಮಕ್ಕಳಿಗೂ ನಿಕಟ ಸಂಬಂಧವನ್ನು ಜೋಡಿಸುತ್ತಿದ್ದರೆಂಬುದನ್ನು ಮೈಸೂರು ಸಂಸ್ಥಾನದ ಕೃಷ್ಣರಾಜಪೇಟೆ ತಾಲೂಕಿನ ಬೊಕ್ಕಸದಲ್ಲಿ ದೊರೆತ ಒಂದು ತಾಮ್ರ ಶಾಸನದ ಸಹಾಯದಿಂದ ಸಿದ್ಧಗೊಳಿಸಬಹುದು. ಅದು ೧೩೭೫ ನೆಯ ಇಸ್ವಿಯದು. ಬುಕ್ಕನು ಜನ್ಮವನ್ನೆತ್ತಿದ ಕಾರಣವನ್ನು "ಮ್ಲೇಚ್ಛರಿಂದ ಭೂಮಿಯನ್ನು ಕಾಪಾಡುವದಕ್ಕಾಗಿ" ಎಂದು ವರ್ಣಿಸಿ ಮುಂದೆ ಆ ಶಾಸನದಲ್ಲಿ "ಅವನು ವಿದ್ಯಾತೀರ್ಥ ಮುನಿಯ ಅನುಗ್ರಹದಿಂದ ಪೃಥ್ವೀತಲಕ್ಕೆ ಒಬ್ಬನೆ ಒಡೆಯನಾದನು" ಎಂದು ಹೇಳಲಾಗಿದೆ (37)

೧೩೮೦ ನೆಯ ಇಸ್ವಿಯ ತಾಮ್ರಶಾಸನವೊಂದರಲ್ಲಿ ಆ ಮೊದಲು ಕೊಟ್ಟ ದತ್ತಿಗಳನ್ನು ವಿವರಿಸಿ ಹಿರಿಯ ಶ್ರೀಪಾದರ (ವಿದ್ಯಾತೀರ್ಥರ) ಸನ್ನಿಧಿಗೆ ೧೩೩೬ ರೊಳಗೆ ೫ ಜನ ಅಣ್ಣತಮ್ಮಂದಿರು ಹೋದುದೂ, ೧೩೫೬ ರೊಳಗೆ ಬುಕ್ಕ ಒಡೆಯನು ಒಬ್ಬನೆ ಹೋದುದೂ ಹೇಳಲಾಗಿದೆ. ಇದಲ್ಲದೆ ಈ ಸಂಗತಿಗಳ ಜೊತೆಯಲ್ಲಿಯೇ ಕೊಟ್ಟ ವಿವರಗಳು ಪೋಟಣ ಕುದುರು ಗ್ರಾಮದ ಶಿಲಾಶಾಸನವನ್ನು ಪುಷ್ಟೀಕರಿಸುತ್ತವೆ. ವಾರಣಾಸಿಯೊಳಗಿರುವ ವಿದ್ಯಾರಣ್ಯ ಶ್ರೀಪಾದರಿಗೆ ವಿರೂಪಾಕ್ಷಕ್ಕೆ ಬರಬೇಕೆಂದಿದ್ದ ಹಿರಿಯ ಶ್ರೀಪಾದರ (ವಿದ್ಯಾತೀರ್ಥರ) ರಾಯಸದೊಂದಿಗೆ ಬುಕ್ಕರಾಯನು ಒಂದು ಪತ್ರವನ್ನು ಬರೆದನೆಂದು ಈ ತಾಮ್ರಶಾಸನದಲ್ಲಿರುವುದು. ವಿದ್ಯಾರಣ್ಯರು ವಿರೂಪಾಕ್ಷಕ್ಕೆ ಬಂದೊಡನೆ, ಅವರನ್ನು ಶೃಂಗೇರಿಗೆ ಕರೆದೊಯ್ಯಲಾಯಿತು. ಆಮೇಲೆ ಅರಸನು ಮಾದರಸನಿಗೆ ವಿದ್ಯಾರಣ್ಯರ ಚರಿತಾರ್ಥಕ್ಕಾಗಿ ಕಿಕುಂದ ನಾಡಿನೊಳಗೆ ಇಂಥಿಂಥ ಭೂಮಿಗಳನ್ನು ಕೊಡಬೇಕೆಂದು ಆಜ್ಞಾಪಿಸಿದನು ಆರಗನಾಡಿನ ರಾಜಪ್ರತಿನಿಧಿಯಾದ ಹರಿಹರರಾಯನ ಮಗ ಬುಕ್ಕರಾಯನು ಕೂಡ ವಿದ್ಯಾರಣ್ಯ ಶ್ರೀಪಾದರಿಗೆ ಆ ನಾಡಿನೊಳಗಿನ ಹಾಗು ಹಿರಿಯ ಕೋಡ ನಾಡಿನೊಳಗಿನ ಭೂಮಿಯನ್ನು ದಾನಮಾಡಿದನು. ಮುಂದೆ ೧೩೮೦ ರಲ್ಲಿ ಇಮ್ಮಡಿ ಹರಿಹರರಾಯನು ವಿದ್ಯಾರಣ್ಯರಿಗೆ ಕೊಟ್ಟ ಹಿಂದಿನ ಎಲ್ಲ ದತ್ತಿಗಳಿಗೆ ಮನ್ನಣೆಯಿತ್ತನು [ 38 ]

೧೩೮೬ ರಲ್ಲಿ, ಇಮ್ಮಡಿ ಹರಿಹರರಾಯನು, "ವಿದ್ಯಾರಣ್ಯ ಮುನಿಯ ಅನುಗ್ರಹದಿಂದ" "ಅನ್ಯ ಅರಸನಿಗೆ ಅಸಾಧ್ಯವಾದ ಜ್ಞಾನ ಸಾಮ್ರಾಜ್ಯವನ್ನು ಸಂಪಾದಿಸಿದನು," ಎಂದು ಒಂದು ಶಾಸನದಲ್ಲಿ ಹೇಳಿದೆ [39] ಇದರಿಂದ ವಿಜಯನಗರದ ಐತಿಹ್ಯದೊಳಗೆ ವಿದ್ಯಾರಣ್ಯ ಸ್ವಾಮಿಗಳವರು ಇಮ್ಮಡಿ ಹರಿಹರರಾಯನ ಆಳಿಕೆಯಲ್ಲಿ ಪ್ರಸಿದ್ಧರಿದ್ದರೆಂಬುದು ಸ್ಪಷ್ಟವಾಗುತ್ತದೆ.

ವಿದ್ಯಾರಣ್ಯ ಶ್ರೀಪಾದರು ತಮ್ಮ ಕಾಲವಾಗುವವರೆಗೆ, ಅಂದರೆ ೧೩೮೬ ನೆಯ ಇಸ್ವಿಯ ವರೆಗೆ ಶೃಂಗೇರಿಯ ಮಠಾಧೀಶರಾಗಿದ್ದರು ಅದೇ ವರ್ಷ ಇಮ್ಮಡಿ ಹರಿಹರರಾಯನು ವಿದ್ಯಾರಣ್ಯ ಶ್ರೀಪಾದರ ಸಮಕ್ಷಮ, ಚತುರ್ವೇದ ಭಾಷ್ಯ ಪ್ರವರ್ತಕರಾದ ನಾರಾಯಣ ವಾಜಪೇಯ ಯಾಜಿ, ನರಹರಿ ಸೋಮಯಾಜಿ, ಮತ್ತು ಪಂಢರಿ ದೀಕ್ಷಿತ ಇವರಿಗೆ ತಾಮ್ರಶಾಸನದ ಮೂಲಕ ದಾನವನ್ನು ಮಾಡಿದನು. [40] ಅದೇ ವರ್ಷ ವಿದ್ಯಾರಣ್ಯ ಶ್ರೀಪಾದರ ಕಾಲವಾಯಿತು ಆ ಜಗದ್ವಿಖ್ಯಾತ ಗುರುಗಳ ಸ್ಮರಣೆಗಾಗಿ

---

(37) **Mysore Archl Rept.** for 1914-p. 57

(38) **Mys. Arcl. Rept** for 1916, pp 56-7. Here too the unreliability of the Sringeri matha tradition which makes Bhoganatha younger brother of Vidyaranaya, **guru** of Sringeri under the name Bharati Krsna-tirtha, between A. D. 1328-1380 is to be noted. Epigraphical evidence runs counter to the Sringeri tradition. **Mys. Rept Ibid,** pp 57 8.

(39) **Ibid,** p. 58.

(40) **Ibid,** for 1908, p 54, **ibid,** for 1914-5, p 57.

ಕ್ಷಯನಾಮ ಸಂವತ್ಸರ, ಜ್ಯೇಷ್ಠ ಕೃಷ್ಣಪಕ್ಷ ್ರಯೋದಶಿ ಶನಿವಾರ) ಇಮ್ಮಡಿ ಹರಿಹರನು ೆಕುಂದ ನಾಡೊಳಗಿನ ಕೆಲವು ವಿವಕ್ಷಿತ ಭೂಮಿಗಳನ್ನು, ವಿದ್ಯಾರಣ್ಯಪುರವೆಂಬ ಹೆಸರನ್ನಿಟ್ಟು. ಶೃಂಗೇರಿಯ ಮಹಾಜನರಿಗೆ ದಾನಮಾಡಿದನು. ಈ ದಿವಸವು ಶೃಂಗೇರಿಯ ಪರಂಪರೆಯಲ್ಲಿ ರೂಢವಾಗಿರುವ ಅವರ ಮೃತತಿಥಿಯೊಂದಿಗೆ ಕೂಡುತ್ತದೆ ವಿದ್ಯಾರಣ್ಯ ಗುರುಗಳು ಹಂಪಿಯಲ್ಲಿ ದೇಹವನ್ನಿಟ್ಟರು ಅವರ ಸಮಾಧಿಯನ್ನು ವಿರೂಪಾಕ್ಷನ ಗುಡಿಯ ಹಿಂಬದಿಯಲ್ಲಿ ಕಟ್ಟಲಾಯಿತು.

ಸಾರಾಂಶವೇನಂದರೆ,

(೧) ಹನ್ನೊಂದನೆಯ ಶತಮಾನದ ಮಧ್ಯದಿಂದ ಕರ್ನಾಟಕದ ಅರಸರು, ಕರ್ನಾಟಕದ ಕೇಂದ್ರದಲ್ಲಿರುವ ಬಳ್ಳಿಗಾವೆ, ಕುಪ್ಪಟೂರು, ಅಸಂಡಿ, ಮತ್ತು ಶ್ರೀಪರ್ವತ ಇವುಗಳಲ್ಲಿ ಯಾವದಾದರೊಂದು ಸ್ಥಳದಿಂದ ರಾಜಗುರುಗಳನ್ನು ಆಯ್ದು ತೆಗೆಯುವ ಪ್ರಘಾತವನ್ನು ಹಾಕಿದ್ದರು.

(೨) ವಿಜಯನಗರದ ನರಪತಿಗಳು, ಸಂಪನ್ನವಾದ ಕರ್ನಾಟಕದ ಸಂಸ್ಕೃತಿ, ಪರಂಪರೆಗಳನ್ನು, ಪೊರೆವವರಾಗಿದ್ದರು. ಆದ್ದರಿಂದಲೆ ಅವರು, ಕಾಳಮುಖ ಪಂಥದ ರಾಜಗುರುಗಳನ್ನು ಆರಿಸಿ ತೆಗೆಯುವ ರೂಢಿಯನ್ನು ಮುಂದುವರಿಸಿದರು. ಆದರೆ, ಅವರ ಗುರುವಾದ ಕ್ರಿಯಾಶಕ್ತಿಯು ಆಚಾರ್ಯನು ಇಂತಹದೇ ಒಂದು ವಿಶಿಷ್ಟ ಕಾಳಮುಖ ಪಂಥಕ್ಕೆ ಸೇರಿದವನು ಇದ್ದನೆಂದು ಹೇಳುವದು ಅಸಾಧ್ಯವಾಗಿದೆ.

(೩) ವಿಜಯನಗರದ ರಾಯರು ಕ್ರಿಯಾಶಕ್ತಿ ಪಂಡಿತನ ಧಾರ್ಮಿಕ ಶಾಸನಕ್ಕೆ ಒಳಪಟ್ಟಿದ್ದರೂ, ರಾಜಕೀಯ ಪರಿಸ್ಥಿತಿಯು, ಅವರ ರಾಜ್ಯದಾಡಳಿತದ ಪ್ರಾರಂಭದಲ್ಲಿಯೆ, ಅವರಿಗೆ ಶೃಂಗೇರಿಯ ಗುರುಗಳ ಸಹಾಯವನ್ನು ಪಡೆಯಲು ಒತ್ತಾಯ ಪಡಿಸಿತೆಂದು ಹೇಳಬಹುದು.

(೪) ೧೩೭೫ ನೆಯ ಇಸ್ವಿಯ ವರೆಗೆ ವಿಜಯನಗರದ ರಾಜ್ಯಸಂಸ್ಥಾಪಕರಿಗೆ ಸಲಹೆಯನ್ನು ಕೊಡುವವರೆಂದರೆ, ವಿದ್ಯಾತೀರ್ಥ ಶ್ರೀಪಾದರೇ ಸರಿ.

(೫) ವಿದ್ಯಾತೀರ್ಥ ಶ್ರೀಪಾದರ ತರುವಾಯದಲ್ಲಿ ಪಟ್ಟಕ್ಕೆ ಬಂದ ವಿದ್ಯಾರಣ್ಯ ಶ್ರೀಪಾದರು ೧೩೭೫ ರಲ್ಲಿಯೇ ಶೃಂಗೇರಿಗೆ ಬಂದರು ಆಮೇಲೆ ತಮ್ಮ ದೇಹಾವಸಾನದ ವರೆಗೆ, ಅಂದರೆ, ೧೩೮೬ ರ ವರೆಗೆ ಆ ಮಠದ ಜಗದ್ಗುರುಗಳಾಗಿದ್ದರು.

———



# ವಿಜಯನಗರದ ಸಾಮ್ರಾಜ್ಯವು ಹಾಗು
# ಶ್ರೀವ್ಯಾಸರಾಯ ಸ್ವಾಮಿಗಳು.

( ಲೇಖಕರು—**ಪಂಡಿತ ಬುರ್ಲಿ ಶ್ರೀನಿವಾಸಾಚಾರ್ಯರು** ಬಾಗಿಲುಕೋಟೆ. )

ನಮ್ಮ ಕರ್ನಾಟಕದಲ್ಲಿ ಆಗಿಹೋದ ಅಸಾಧಾರಣ ಪುರುಷರಲ್ಲಿ ಶ್ರೀ ವ್ಯಾಸರಾಯರು ಮೇಲಿನ ವರ್ಗದವರು. ಇವರು ಬಾಲ್ಯದಲ್ಲಿಯೇ ಸನ್ಯಾಸಿಗಳಾಗಿ ತಪೋ ವಿದ್ಯಾ ವಿರಕ್ತಿ ಭಕ್ತಿ ಮುಂತಾದ ಗುಣಗಳಿಂದ ಜಗತ್ತಿನಲ್ಲಿ ವಿಖ್ಯಾತರಾಗಿ ಸರ್ವ ದೇಶಗಳಲ್ಲಿಯೂ ಸಂಚರಿಸಿ ಶ್ರೀಮಧ್ವ ಸಿದ್ಧಾಂತವನ್ನು ಪ್ರಸಾರ ಮಾಡಿದರು ಪರತತ್ವ ಸಮರ್ಥನಪರವಾದ ಪ್ರಬಲವಾದ ಗ್ರಂಥಗಳನ್ನು ಬರೆದು ಪ್ರತಿವಾದಿ ಪಂಡಿತರ ವಾಗ್ಬಂಧನವನ್ನು ಸಹಜವಾಗಿ ಲೀಲೆಯಿಂದ ಮಾಡಿ ಅತ್ಯುತ್ತಮ ಭಗವದ್ಭಕ್ತರೆಂದು ಲೋಕದಲ್ಲಿ ಪ್ರಖ್ಯಾತರಾದರು ಈ ರೀತಿಯಿಂದ ಪರಮಾರ್ಥಮಾರ್ಗದಲ್ಲಿ ಅದ್ವಿತೀಯರೆಂದು ಹೆಸರು ಪಡೆದಂತೆ ವಿಜಯನಗರದ ಸಾಮ್ರಾಜ್ಯವನ್ನು ಘನತೆಗೇರಿಸಿ ರಾಜಕಾರಣದಲ್ಲಿಯೂ ಅತಿ ಕುಶಲರೆಂದು ಹೆಸರು ಪಡೆದರು. ಧರ್ಮವಿಧ್ವಂಸಕರನ್ನು ಸದೆಬಡೆದು ಧರ್ಮಸ್ಥಾಪನೆಗಾಗಿ ರಾಜದಂಡವನ್ನು ಹಿಡಿದ ಮಹಾರಾಜರಿಗೆ ಸರ್ವವಿಷಯಗಳಲ್ಲಿ ಸಹಾಯ ಮಾಡುವದೂ, ತದರ್ಥವಾಗಿ ಯತಿಗಳಾಗಿದ್ದರೂ ರಾಜಕಾರಣದಲ್ಲಿ ಮನಸ್ಸು ಹಾಕುವದೂ ಒಂದು ತರದ ಭಗವದಾರಾಧನೆಯೇ ಎಂಬದನ್ನು ತಮ್ಮ ಆಚರಣದಿಂದ ತೋರಿಸಿಕೊಟ್ಟರು. ನಂದರು ಮದಾಂಧರಾದಾಗ ತಪಸ್ವಿಯಾದ ಚಾಣಕ್ಯನು ಅವರ ನಿರ್ಮೂಲನ ಮಾಡಿ ತನ್ನ ಪ್ರೀತಿಯ ಶಿಷ್ಯನಾದ ಚಂದ್ರಗುಪ್ತನನ್ನು ಪಟ್ಟಕ್ಕೆ ಕೂಡ್ರಿಸಿ ಇತಿಹಾಸದಲ್ಲಿ ಚಾಣಕ್ಯನೀತಿ ಎಂಬದನ್ನು ಅಜರಾಮರವಾಗಿ ಮಾಡಲಿಲ್ಲವೇ? ಇಂತಹ ಅರ್ಥಶಾಸ್ತ್ರ ನಿರ್ಮಾತೃವೂ ರಾಜನೀತಿ ಪ್ರವೀಣನೂ ಸಾಮ್ರಾಜ್ಯ ಸೂತ್ರಧಾರನೂ ಆಗಿರುವ ಆರ್ಯ ಚಾಣಕ್ಯನ ವೈಭವವೆಂದರೆ "ಉಪಲಶಕಲಮೇತತ್ ಭೇದಕಂ ಗೋಮಯಾನಾಂ॥ ಬಟುಭಿರುಪಹೃತಾನಾಂ ಬರ್ಹಿಷಾಂ ಸ್ತೋಮಮೇತತ್" ಎಂಬಂತೆ ವಿಶಾಖದತ್ತ ಕವಿಯು ವರ್ಣಿಸಿರುವನು. ಇದರ ತಾತ್ಪರ್ಯವೇನೆಂದರೆ ಧರ್ಮರಕ್ಷಣಕ್ಕಾಗಿಯೇ ರಾಜಕಾರಣದಲ್ಲಿ ಬಿದ್ದವರು ಸ್ವಯಂನಿಸ್ಪೃಹರಾಗಿಯೇ ವರ್ತಿಸುತ್ತಿದುವದರಿಂದ ಅವರ ವೈರಾಗ್ಯವು ವರ್ಣನೀಯವಾಗಿರುತ್ತಿತ್ತು ಇದರಂತೆಯೇ ರಾಜಕಾರಣದಲ್ಲಿ ನಿರತರಾದಂತಿದ್ದರೂ ಅನವರತ ವೇದಾಂತ ವಿಚಾರದಲ್ಲಿ ತತ್ಪರರಾಗಿರುವ ಶ್ರೀ ವ್ಯಾಸಯೋಗಿವರ್ಯರ ವಿರಕ್ತಿಯೂ ಭಗವಂತನಲ್ಲಿಯ ಭಕ್ತಿಯೂ ಅವರ್ಣನೀಯವಾಗಿದ್ದವು. ಯವನರ ಪ್ರಾಬಲ್ಯದಿಂದ ವೈದಿಕ ಧರ್ಮವು ನಾಮಶೇಷವೇ ಆಗುವ ಸಮಯವು ಬಂದಾಗ ಮಹಾಮಹಿಮರಾದ ವಿದ್ಯಾರಣ್ಯರು ತಪಶ್ಶಕ್ತಿಯಿಂದಲೂ, ವಿದ್ಯಾಸಾಮರ್ಥ್ಯದಿಂದಲೂ ವಿಜಯನಗರದಲ್ಲಿ ಸಾಮ್ರಾಜ್ಯದ ಪ್ರಾಣಪ್ರತಿಷ್ಠೆಯನ್ನು ಮಾಡಿದರಷ್ಟೆ. ಅವರಾದರೂ ಮಹಾರಾಜರು ಸ್ವಕಾರ್ಯದಲ್ಲಿ ಸಮರ್ಥರಾದಕೂಡಲೇ ವೇದಭಾಷ್ಯಾದಿ ಪ್ರಚಂಡ ಗ್ರಂಥಗಳ ರಾಶಿರಾಶಿಯನ್ನೇ ಬರೆದು, ಒರೆಯಿಸಿ ಸಂಸ್ಕೃತವಾಙ್ಮಯದಲ್ಲಿ ಅಪೂರ್ವವಾದ ಸಂಗ್ರಹಕಾರ್ಯವನ್ನು ನೆರವೇರಿಸಿದರು. ವಿದ್ಯಾರಣ್ಯರು ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರೆನಿಸಿ ಆಚಂದ್ರಾರ್ಕವಾಗಿ ತಮ್ಮ ಕೀರ್ತಿಯನ್ನು ಸ್ಥಿರಪಡಿಸಿದಂತೆ, ಶ್ರೀವ್ಯಾಸರಾಯ ಸ್ವಾಮಿಗಳಾದರೂ ಸಾಧಾರಣವಾಗಿ ಅರ್ಧನೂರು ವರ್ಷಗಳ ವರೆಗೂ ಕರ್ನಾಟಕ ಸಾಮ್ರಾಜ್ಯ ಶಾಸನ ಧುರಂಧರರಿಗೆ ದಿವ್ಯಮಾರ್ಗದರ್ಶಕರಾಗಿಯೂ ಗುರುಗಳಾಗಿಯೂ ಮೆರೆದು ವಿಜಯನಗರದ ಸಾಮ್ರಾಜ್ಯದ ಪರಮಾಭಿವೃದ್ಧಿಗೆ ಕಾರಣರಾಗಿ ಲೋಕದಲ್ಲಿ ವಿಖ್ಯಾತರಾದರು.

ಇಂತಹ ಪುಣ್ಯ ಪುರುಷರು ಶ್ರೀವ್ಯಾಸರಾಯ ಸ್ವಾಮಿಗಳು. ವಿಜಯನಗರದ ಸಮ್ರಾಟರಲ್ಲಿ ಯಾರ ಯಾರ ಕಾಲಕ್ಕೆ ಏನೇನು ಮಾಡಿದರೆಂಬದನ್ನು ಸಂಕ್ಷಿಪ್ತವಾಗಿ ವಿವರಿಸುವೆವು. ಶ್ರೀವ್ಯಾಸರಾಯರ ಸಮಕಾಲನಾಗಿದ್ದು ಅವರ ಮಹಿಮೆಯನ್ನೆಲ್ಲ ಪ್ರತ್ಯಕ್ಷ ಕಂಡವನಾದ ಸೋಮನಾಥನೆಂಬ ಕವಿವರ್ಯನು

ಬರೆದಿರುವ "ಶ್ರೀವ್ಯಾಸಯೋಗಿಚರಿತ್ರಮ್" ಎಂಬ ಗ್ರಂಥದ ಆಧಾರದ ಮೇಲಿಂದಲೇ ನಾವು ಇಲ್ಲಿ ಬರೆದಿರುವೆವು. ವಿಜಯನಗರದ ಸಾಮ್ರಾಜ್ಯದ ಪ್ರಾಣಪ್ರತಿಷ್ಠೆಯನ್ನು ಮಾಡಿದ ಮಹಾನುಭಾವ ರಾದ ಶ್ರೀವಿದ್ಯಾರಣ್ಯರು ನೂರಾಐವತ್ತು ವರ್ಷಗಳ ವರೆಗೂ ಈ ರಾಜವಂಶವು ನಡೆದು ಆ ಮೇಲೆ ಮುಗಿ ಯುವದು ಎಂದು ಭವಿಷ್ಯ ಮಾಡಿದರಂತೆ. ತದನು ಸಾರವಾಗಿ ಸರಿಯಾಗಿ ಅಷ್ಟೇ ವರ್ಷಗಳಲ್ಲಿ ವಿರೂಪಾಕ್ಷ ರಾಯನೆಂಬ ರಾಜನು ಆ ವಂಶದಲ್ಲಿ ಕಡೆಯವ ನಾಗಿ ಮುಂದೆ ಚಂದ್ರಗಿರಿಯಲ್ಲಿರುವ ಸಾಮಂತನರಪತಿ ಯಾದ ಸಾಲ್ವನರಸಿಂಹನು ವಿಜಯನಗರದ ಸಮ್ರಾಟ ನಾದನು. ಶ್ರೀವಿದ್ಯಾರಣ್ಯರಿಂದ ಪ್ರಾರಂಭವಾದ ರಾಜಮನೆತನವು ಶೈವಾದ್ವೈತ್ಯಮತಾವಲಂಬಿಯಾ ದದ್ದು, ಕಡೆಯವನಾದ ವಿರೂಪಾಕ್ಷನ ಕಾಲಕ್ಕೆ ರಾಮಾನುಜರ ಶ್ರೀವೈಷ್ಣವ ಮತಾವಲಂಬಿಯಾ ಯಿತು. ಇವನು "ಶ್ರೀವೈಷ್ಣವೆ ವಿರೂಪಾಕ್ಷೆ ಪ್ರಶಾಸತಿ ಮಹೀಮಿಮಾಂ ॥ ಆಸನ್ ಶ್ರೀವೈಷ್ಣವಾಃ ಸರ್ವೇ ಯಥಾರಾಜಾ ತಥಾಪ್ರಜಾ. ॥ ವಿರೂಪಾಕ್ಷಾಭಿದಾಂ ಮುದ್ರಾಂವಿರೂಪಾಕ್ಷೋ ವಿಹಾಯಚ ॥ ರಾಜಾಂ ಗುಲೀಯೇ ಶ್ರೀರಾಮ ಮುದ್ರಾಂ ದೃಢತರಾಂ ವ್ಯಧಾತ್ ॥" ಈವಚನಗಳಿಂದ ಇವನು ರಾಮಾನುಜ ಮತವನ್ನು ಅವಲಂಬಿಸಿ ಪೂರ್ವದಿಂದ ಬಂದ ಶೈವ ಸಂಪ್ರದಾಯವನ್ನು ಬಿಟ್ಟನೆಂಬು ಸ್ಪಷ್ಟವಾಗಿ ತಿಳಿಯು ತ್ತದೆ. ಈ ವಿರೂಪಾಕ್ಷನ ತರುವಾಯದಲ್ಲಿ ಸಾಲ್ವ ನರಸಿಂಹನು ವಿಜಯನಗರದ ಸಮ್ರಾಟನಾದನಂತರ ಸಾಮಾನ್ಯವಾಗಿ ಕಡೆಯುವರೆಗೂ ವಿಜಯನಗರದ ರಾಜರೆಲ್ಲರೂ ಶ್ರೀಮಧ್ವಮತದ ವೈಷ್ಣವರೇ ಆಗಿದ್ದ ರೆಂದು ಹೇಳಲು ಅಭ್ಯಂತರವಿಲ್ಲ. ತಮ್ಮರಾಯ, ನರಸನಾಯಕ, ಕೃಷ್ಣದೇವರಾಯ, ಅಚ್ಯುತರಾಯ ಇವರೆಲ್ಲರೂ ಶ್ರೀವ್ಯಾಸರಾಯ ಸ್ವಾಮಿಗಳವರ ಪ್ರಿಯ ಶಿಷ್ಯರೇ ಆಗಿದ್ದರೆಂಬುವದು ಸುಸ್ಪಷ್ಟವೇ ಸರಿ. ಅಳಿಯ ರಾಮರಾಯನ ಕಾಲಕ್ಕೇನೆ ತಾಳೀಕೋಟೆಯ ಯುದ್ಧವಾಗಿ ವಿಜಯನಗರದ ಸಾಮ್ರಾಜ್ಯವು ನಾಮ ಶೇಷವಾದಂತಾಯಿತಲ್ಲವೇ. ವಿರೂಪಾಕ್ಷರಾಯನ ನಂತರ ಸಾಲ್ವನರಸಿಂಹನು ಸಮ್ರಾಟನಾದಾಗ ಆತನಿಗೆ ಬ್ರಹ್ಮಹತ್ಯೆ ಬರಲು ಶ್ರೀಪಾದರಾಯ ಸ್ವಾಮಿ ಗಳು ಅವನಮೇಲೆ ಪರಮಾನುಗ್ರಹ ಮಾಡಿ ಬ್ರಹ್ಮಹತ್ಯೆಯ ಪಾಪವನ್ನು ಪರಿಹರಿಸಿದರು. ಈ ವಿಷಯದಲ್ಲಿ "ಶ್ರೀಪಾದರಾಯಾಷ್ಟಕ" ಎಂಬ ದೊಂದು ಸ್ತೋತ್ರವಿದ್ದು ಅದರಲ್ಲಿ ಈ ಸಾಲ್ವರಸಿಂಹನ ಬ್ರಹ್ಮಹತ್ಯೆಯನ್ನು ಇವರು ಪರಿಹರಿಸಿದಂತೆ ವರ್ಣನೆ ಯಿದೆ. "ಶ್ರೀಮದ್ವೀರ ನೃಸಿಂಹರಾಜ ನೃಪತೇ ರ್ಭೂದೇವಹತ್ಯಾವ್ಯಥಾಂ। ದೂರೀಕೃತ್ಯತದರ್ಪಿ ತೋಜ್ವಲಮಹಾರತ್ನಾಸನೇಸ್ಥಾಪಿತಃ" ಈ ರೀತಿ ಯಾಗಿ ವರ್ಣಿಸಿರುವದರಿಂದ ಬ್ರಹ್ಮಹತ್ಯಾ ಪರಿಹಾರ ದಿಂದ ಪರಮ ಹೃಷ್ಟನಾದ ಈ ಸಾಲ್ವನರಸಿಂಹನು ಶ್ರೀಪಾದರಾಯರನ್ನು ಅನರ್ಘ್ಯರತ್ನಾಸನದಲ್ಲಿ ಕೂಡಿಸಿ ಪೂಜಿಸಿದನೆಂದು ಸ್ಪಷ್ಟವಾಗುತ್ತದೆ. ತಿರುಪತಿ ದೇವ ಸ್ಥಾನದಲ್ಲಿಯ ಅರ್ಚಕರು ಮದಾಂಧರಾಗಿ ದೇವರ ಮುತ್ತು ರತ್ನದ ಆಭರಣಗಳನ್ನು ತಾವು ಉಪಯೋಗಿಸಿ ವಿಷಯೋಪಭೋಗವಿಲಾಸದಲ್ಲಿ ಮಗ್ನರಾಗಿ ಕಾಮ ಚಾರಿಗಳಾಗಿರುವದರಿಂದ ಸಾಲ್ವನರಸಿಂಹ ನರ ಪತಿಯು ಇಂತಹ ಅಯೋಗ್ಯರಿಗೆ ಶಾಸನ ಮಾಡ ಬೇಕೆಂದು ಅವರನ್ನು ಸಂಹರಿಸಿಯೇ ಬಿಟ್ಟನು. ಇವ ರಿಂದಲೇ ಅವನಿಗೆ ಬ್ರಹ್ಮಹತ್ಯೆಯೇ ಬಂತು. ಅದಕ್ಕಾಗಿ ಶ್ರೀಪಾದರಾಯರಿಗೆ ಮೊರೆಹೊಕ್ಕನು. ಅವರು ಅದನ್ನು ಪರಿಹರಿಸಿದರು. ಆ ಮೇಲೆ ಕೆಲವು ದಿವಸಗಳವರೆಗೂ ಅವನಿಗೆ ಗುರುಗಳಾಗಿ ಅವನಿಂದ ಪ್ರಾರ್ಥಿತರಾಗಿ ಶ್ರೀಪಾದರಾಯರು ಅಲ್ಲಿಯೇ ಇರುತ್ತಿದ್ದರು. ಮುಂದೆ ಶ್ರೀಪಾದರಾಯರು ತಾವು ತಮ್ಮ ವಾಸಸ್ಥಳವಾದ ಮುಳಬಾಗಲಕ್ಕೆ ಹೋಗಲು ಸಿದ್ಧರಾದ ಕೂಡಲೇ ತಾವು ನನ್ನನ್ನು ಬಿಟ್ಟು ಹೋಗಬಾರದೆಂದು ಅತಿ ಶಯ ಆಗ್ರಹ ಪೂರ್ವಕ ಬಿನ್ನವಿಸಿದನು ಆಗ ಅವರು ತಮ್ಮ ಪ್ರತಿನಿಧಿಯನ್ನು ನಿನ್ನಲ್ಲಿ ಕಳಿಸುವೆನೆಂದು ಹೇಳಿ ಶ್ರೀವ್ಯಾಸಯೋಗಿಯವರಿಗೆ ಕಳಿಸಿಕೊಟ್ಟರು. ಆಗ ಅವರ ಆಗಮನವನ್ನು ಪ್ರತೀ ಕ್ಷಿಸುತ್ತ ಅವರು ಬಂದಕೂಡಲೇ ಅತಿ ವಿಜೃಂಭಣೆ ಯಿಂದ ಸ್ವಾಗತ ಮಹೋತ್ಸವವನ್ನು ಮಾಡಿ ಅತ್ಯಾನಂದಭರಿತನಾದನೆಂದು ಆ ಪ್ರಸಂಗದಲ್ಲಿಯ ವರ್ಣನೆಯಿಂದ ತಿಳಿದು ಬರುತ್ತದೆ ಮುಂದೆ ತಿರುಪತಿ ದೇವಸ್ಥಾನದಲ್ಲಿಯ ಪೂಜೆಯಬಗ್ಗೆ ಹೇಗೆ ಮಾಡ ಬೇಕೆಂದು ಆಲೋಚಿಸಿದಾಗ ಶ್ರೀವ್ಯಾಸರಾಯರು ರಮಾಬ್ರಹ್ಮಾದಿಗಳಿಂದ ಪೂಜೆಗೊಳ್ಳುವ ಈ ಶ್ರೀ ಶ್ರೀನಿವಾಸದೇವರನ್ನು ಈಗ ನಾವು ಪೂಜಿಸುವೆ ವೆಂತಲೂ ಆ ಅರ್ಚಕರ ಹೆಂಡತಿಯಲ್ಲಿ ಗರ್ಭದಿಂದ ಗಂಡು ಹುಟ್ಟಿ ಅವನು ಪೂಜೆಯ ಅಧಿಕಾರವನ್ನು

ಹೊಂದುವವರಿಗೆ ನಾವು ನಿರ್ವಹಿಸುವೆವೆಂತಲೂ ಹೇಳಿ ೧೨ ವರ್ಷಗಳವರೆಗೆ ಶ್ರೀ ಶ್ರೀನಿವಾಸದೇವರನ್ನು ಆರಾಧಿಸಿದರು. "ಶ್ರೀನಿವಾಸೇಚ್ಛಯಾ ಪ್ರಾಪ್ತಂ ವೈಭವಂ ವೀಕ್ಷ್ಯತನ್ನೃಹತ್॥ ಓಮಿತ್ಯುಕ್ತ್ವಾ ಭಕ್ತಿಭರಸ್ತಂತ್ರಸಾರೋಕ್ತಮಾರ್ಗತಃ॥ಅಪೂಜಯತ' ಶ್ರೀನಿವಾಸಂ ವ್ಯಾಸರಾಜೋ ದ್ವಿಷಟ್ ಸಮಾಃ॥ ಎಂಬ ಪದ್ಯಗಳಿಂದ ತಂತ್ರ ಸಾರೋಕ್ತ ಮಾರ್ಗದಿಂದ ೧೨ ವರ್ಷಗಳವರೆಗೂ ಪೂಜಿಸಿದರೆಂದು ಸ್ಪಷ್ಟ ವಾಗುವದು. ಅದು ೧೪೭೬ರಿಂದ ೧೪೮೮ವರೆಗೆ ಎಂದು ಸಿದ್ಧವಾಗಿದೆ. ಈ ಸಾಳ್ವನರಸಿಂಹನು ಮುಂದೆ ಚಂದ್ರಗಿರಿಯನ್ನು ಬಿಟ್ಟು ವಿಜಯನಗರವನ್ನೆ ರಾಜ ಧಾನಿಯನ್ನಾಗಿ ಮಾಡಿದನು. ಮತ್ತು ತನ್ನನಂತರ ಮಗನಾದ ತಮ್ಮರಾಯನನ್ನು ೧೪೯೩ ರಲ್ಲಿ ಪಟ್ಟಕ್ಕೆ ಕೂಡಿಸಿ ಅವನ ರಕ್ಷಣೆಗಾಗಿ ಶ್ರೀ ವ್ಯಾಸರಾಯರಿ ಗೇನೇ ಪ್ರಾರ್ಥಿಸಿ ದಿವಂಗತನಾದನು ಈ ಸಾಳ್ವ ನರಸಿಂಹನಿಗೆ ಪರಮ ಆಪ್ತನಾದ ನರಸನಾಯಕನೆಂಬ ವೀರನು ತಮ್ಮ ರಾಯನ ಹೆಸರಿನಿಂದ ತಾನೇ ರಾಜ್ಯ ವಾಳುತ್ತಿದ್ದನು. ೧೪೯೮ ರಲ್ಲಿ ಅರ್ಚಕರಿಗೆ ದೇವಸ್ಥಾನ ವನ್ನು ಒಪ್ಪಿಸಿ ಆ ಮೇಲೆ ಶ್ರೀವ್ಯಾಸರಾಯ ಸ್ವಾಮಿ ಗಳವರು ವಿಜಯನಗರಕ್ಕೇನೇ ಬಂದರು ಆಗ್ಯೆ ನರಸನಾಯಕನು ಭಕ್ತಿಯಿಂದ ಅಸಾಧಾರಣವಾದ ರೀತಿಯಿಂದ ಸ್ವಾಗತ ಮಹೋತ್ಸವವನ್ನು ಮಾಡಿದ್ದನು. ಚಂದ್ರಗಿರಿಯಲ್ಲಿ ಸಾಳ್ವನರಸಿಂಹನು ಮಾಡಿದ ಮಹೋತ್ಸವದಕಿಂತಲೂ ಈ ಮಹೋ ತ್ಸವವು ಅತಿಶಯ ಅಧಿಕವಾಗಿತ್ತೆಂದು ಹೇಳಿದ್ದಾರೆ. ವಿಜಯನಗರಕ್ಕೆ ಶ್ರೀವ್ಯಾಸರಾಯರು ಬರುವಾಗ ನರಸನಾಯಿಕನ ಸ್ವಾಗತ ಮಹೋತ್ಸವ ಸಮಯ ದಲ್ಲಿಯ ಮಂಗಲವಾದ್ಯ ವೈಭವವನ್ನು ಸೋಮನಾಥ ಕವಿಯು ಹೀಗೆ ವರ್ಣಿಸಿದ್ದಾನೆ. "ಬೃಂಹಿತೇನದ್ವಿ ರದಾನಾಂಹ್ರೇಷಿತೇನ ಹಯಾನಾಂ; ಕ್ಷ್ವೇಲಿತೇನ ಯೋಧಾನಾಂ,ಆಲೋಕ ಕೋಲಾಹಲೇನಮಂಡಿನಾಂ, ಭಾಂಕಾರೇಣ ಭೇರೀಣಾಂ, ಧಣಂಧಣೇನ ನಿಸ್ಸಾಣಾನಾಂ, ಧುಮ ಧುಮಿತೇನ ಮದ್ದಲಾನಾಂ, ಜುಮಿಜುಮಿತೇನ ಡಿಂಡಿಮಾನಾಂ, ಘುಂಕಾರೇಣ ಘುರ್ಘುರೀಣಾಂ ಘುಂಘುಮಿತೇನ ಶಂಖಾನಾಂ, ಕೂಜಿತೇನ ವೇಣೂನಾಂ ಶಬ್ದಾದ್ವೈತಮಿವ ಜಗತೀಂ ಕುರ್ವಾಣಃ" ಇದು ಕವಿರಚನೆಯು ಚಾತುರ್ಯ ವಿದ್ದರೂ ಸಾಮ್ರಾಜ್ಯದಲ್ಲಿ ಅಸಂಭಾವಿತವಾದದ್ದಾದರೂ ಯಾವದೂ ಇಲ್ಲ. ಈ ನರಸನಾಯಕನು ಮಹೋ ತ್ಸವದಿಂದ ಕರೆದುಕೊಂಡು ಹೋಗಿ ಅತಿಶಯವಾಗಿ ಪೂಜಿಸಿದನು. "ಪಾರ್ಥಿವಃ ಸಪದಿ ಪರ್ಯಪೂಜ ಯತ್। ಪಾಂಡುಸೂನುರಿವ ಬಾದರಾಯಣಮ್" ಎಂದು ಹೇಳಿದ್ದನೆ. ಈ ನರಸನಾಯಕನು ಪ್ರತಿ ಒಂದು ಕಾರ್ಯಭಾಗದಲ್ಲಿಯೂ ಶ್ರೀವ್ಯಾಸರಾಯರಿಗೆ ತಿಳಿಸಿದ ಹೊರತು ಯಾವ ಕಾರ್ಯವನ್ನಾದರೂ ಮಾಡುತ್ತಿರಲಿಲ್ಲವೆಂದು ಹೇಳಿದ್ದಾರೆ. ತಮ್ಮರಾಯ ನಾದರೂ ದೊಡ್ಡವನಾದ ಮೇಲೆ ನರಸನಾಯಕನಿಗೂ ಅವನಿಗೂ ಮತಭೇದ ಬರದಂತೆ ಶ್ರೀವ್ಯಾಸರಾಯರು ಸನಾತನಧರ್ಮಸಂರಕ್ಷಣಕ್ಕಾಗಿಯೂ ಧರ್ಮಭ್ರಷ್ಟರ ಶಾಸನಕ್ಕಾಗಿಯೂ ಸುರಾಜ್ಯದ ವ್ಯವಸ್ಥೆಗಾಗಿ ಸರ್ವ ವಿಷಯಗಳಲ್ಲಿಯೂ ಲಕ್ಷವಿಟ್ಟು ಕಾರ್ಯ ನಿರ್ವಾಹ ಮಾಡುತ್ತಿದ್ದರು. ೧೫೦೦ ರಲ್ಲಿ ಹಂಪಿಕ್ಷೇತ್ರದಲ್ಲಿ ಚಕ್ರ ತೀರ್ಥದ ಮೇಲೆ ಶ್ರೀಯಂತ್ರೋದ್ಧಾರ ಪ್ರಾಣದೇವರ ಪ್ರತಿಷ್ಠೆ ಮಾಡಿದರು. ಆದರಂತೆ ದೇಶದಲ್ಲಿ ಸಂಚಾರ ಮಾಡಿ ೭೩೨ ಪ್ರಾಣದೇವರ ಪ್ರತೀಕಗಳನ್ನು ಪ್ರತಿಷ್ಠೆ ಮಾಡಿದ್ದಾರೆ ಸಕಲ ವಿದ್ಯಾಸಂಪನ್ನರಾದ ಶ್ರೀವ್ಯಾಸ ರಾಯಸ್ವಾಮಿಗಳು ಸಕಲ ಶಾಸ್ತ್ರಗಳಲ್ಲಿಯೂ ಸಾವಿ ರಾರು ಶಿಷ್ಯಜನರಿಗೆ ಪಾಠಪ್ರವಚನಗಳನ್ನು ಮಾಡಿ ಸುತ್ತ ಇರುವದರಿಂದಲೂ, ನಾನಾ ದೇಶಗಳಿಂದ ಬಂದ ವಿದ್ವಜ್ಜನರಿಗೆ ಅವರವರಿಗೆ ತಕ್ಕಂತೆಗುಣಪರೀಕ್ಷೆಯಾಗಿ ಯೋಗ್ಯ ಮರ್ಯಾದೆಯು ದೊರೆತು ಪರಮ ಸಂತೋಷವು ಆಗುವದರಿಂದಲೂ, ವಿಜಿಗೀಷೆಯಿಂದ ಬಂದ ವಿದ್ವಜ್ಜನರು ವಾದದಲ್ಲಿ ಸೋತು ಹೋಗು ವದರಿಂದಲೂ, ಕಾವ್ಯಕಲಾಸಾಹಿತ್ಯ ಸಂಗೀತ ಮುಂತಾದ ಸರ್ವವಿಧದ ವಿದ್ಯೆಗಳಿಗೆಲ್ಲ ಉದಾರ ತನದ ರಾಜಾಶ್ರಯವು ದೊರೆಯುತ್ತಿರುವದರಿಂದಲೂ, ವಿಜಯನಗರ ಕೀರ್ತಿಯು ಜಗತ್ತಿನಲ್ಲಿ ಪ್ರಸೃತ ವಾಗಿ ವಿಜಯನಗರವು ವಿದ್ಯಾನಗರವೆಂದು ಪ್ರಖ್ಯಾತ ವಾಯಿತು. ಈ ಎಲ್ಲ ಕೀರ್ತಿಗೂ ಶ್ರೀವ್ಯಾಸರಾಯರೇ ಮುಖ್ಯ ಕಾರಣರಾಗಿದ್ದರು. ಈ ವಿದ್ಯಾನಗರಕ್ಕೆ ಶ್ರೀ ವ್ಯಾಸರಾಯಸ್ವಾಮಿಗಳೇ ಅಧೀಶ್ವರರಾಗಿ ಸಾಮ್ರಾಜ್ಯದ ಘನತೆಗೆ ಕಾರಣರಾಗಿರುವದರಿಂದ ಇವರ ವಿಷಯದಲ್ಲಿ ಸರ್ವರಿಗೂ ಅತಿಶಯವಾದ ಭಕ್ತಿವಿಶ್ವಾಸಗಳು ನೆಲೆಗೊಂಡಿದ್ದವು. ಶ್ರೀವ್ಯಾಸ ರಾಯರು ಈ ವಿದ್ಯಾನಗರದಲ್ಲಿರುವಾಗ ಅನೇಕ ದೇಶದ ಪ್ರಸಿದ್ಧ ವಿದ್ವಾಂಸರು ಬಂದು ವಾದಮಾಡಿ

ಪರಾಜಿತರಾದರು. ಅವರಲ್ಲಿ ಕಲಿಂಗದೇಶದ ಬಸವ ಭಟ್ಟನು ಸುಪ್ರಸಿದ್ಧನು. ಇವನು ವಾದದಲ್ಲಿ ಪರಾಜಿತನಾಗಿದ್ದರೂ ಇವರ ಗುಣಗಳಿಗೆ ಮನಸೋತವನಾಗಿ ತಾನು ನಿತ್ಯದಲ್ಲಿ ಪೂಜಿಸುತ್ತಿರುವ ಪಚ್ಚದ ಶಿವಲಿಂಗವನ್ನು ಕಾಣಿಕೆಯಾಗಿ ಕೊಟ್ಟಿದ್ದು ಇವತ್ತಿಗೂ ಅದು ಮಠದಲ್ಲಿ ಶಿವರಾತ್ರಿಯಲ್ಲಿ ಪೂಜಿತವಾಗುತ್ತಿದೆ ಇವರಂತೆ ದೇಶದಲ್ಲಿ ಬಿರುದಾವಳಿಗಳನ್ನು ಹೊಗಳಿಸುತ್ತ ಅಲ್ಲಲ್ಲಿ ಜಯಪತ್ರಗಳನ್ನು ಸ್ವೀಕರಿಸುತ್ತ ಪಂಡಿತರ ಮಾನಗಳನ್ನು ಖಂಡಿಸುತ್ತ ಬಂದ ಪ್ರತಿ ವಿದ್ವಜ್ಜನರು ಇಲ್ಲಿ ಪರಾಜಿತರಾಗುತ್ತಿದ್ದರೆಂದು ವರ್ಣಿಸಿದ್ದಾನೆ ಸಾಮಾನ್ಯವಾಗಿ ಶ್ರೀವ್ಯಾಸರಾಯರು ವಿಜಯನಗರದಲ್ಲಿರುವಾಗ ಬಂದ ಸುಪ್ರಸಿದ್ಧ ವಿದ್ವಜ್ಜನರಲ್ಲಿ ಬಂಗಾಲದೇಶದ ಶ್ರೀಕೃಷ್ಣ ಚೈತನ್ಯರು ಬಂದು ಕೆಲವು ದಿವಸಗಳಿದ್ದು ಇವರ ಶಿಷ್ಯತ್ವವನ್ನು ವಹಿಸಿದವರಾಗಿ ತಮ್ಮ ದೇಶದಲ್ಲಿ ವೈಷ್ಣವಮತ ಪ್ರಚಾರಮಾಡಿ ವೈಷ್ಣವಮತದ ಸಂಸ್ಥಾಪಕರೆಂದು ಸುಪ್ರಸಿದ್ಧಿಯನ್ನು ಪಡೆದರು ಗುರ್ಜರದೇಶದ ವಲ್ಲಭಾಚಾರ್ಯರು ವಿಜಯನಗರದಲ್ಲಿ ಬಂದು ತಮ್ಮ ಗುಣಗಳನ್ನು ತೋರಿಸಿ ಗೌರವವನ್ನು ಸಂಪಾದಿಸಿದರು ವಿದ್ಯಾಧರನೆಂಬ ಪಂಡಿತನೊಬ್ಬನು ಇಲ್ಲಿ ಬಂದು ಪ್ರಥಮದಲ್ಲಿ ತನ್ನ ಅದ್ಭುತ ಪಾಂಡಿತ್ಯದ ಆಡಂಬರವನ್ನು ತೋರಿಸಿ ಹಿಂದುಗಡೆಗೆ ಶ್ರೀ ವ್ಯಾಸರಾಯರಿಂದ ಪರಾಜಿತನಾದನು. ಶ್ರೀಕೃಷ್ಣದೇವರಾಯನಂತಹ ಸಮ್ರಾಟರಾದರೂ ಶ್ರೀಗಳವರ ಮಹಾಮಹಿಮೆಯಿಂದ ಬೆರಗಾಗಿ ಅವರ ಹತ್ತರ ಹೋಗುವದಕ್ಕೆ ಅವಸರವನ್ನು ಪ್ರತೀಕ್ಷಿಸಿ ಅಪ್ಪಣೆ ಪಡೆದು ಪ್ರವೇಸಿಸುತ್ತಿದ್ದರು. "ದ್ವಾರಿಕೃಷ್ಣನೃಪತಿಃ ಸಮೇತ್ಯ ಸಃ । ಸ್ವಾಮಿನಃ ಸಹಪೂರೋಹಿತಾದಿಭಿಃ ॥ ದರ್ಶನಾವಸರಮೀಕ್ಷತೇಧುನಾ । ಪಾ ಕ ಶಾ ಸ ನ ಇವಾಬ್ಜಜನ್ಮನಃ ॥ " ಎಂದು ಹೇಳಿರುದರಿಂದ ಸಾಮ್ರಾಜ್ಯದಲ್ಲಿ ಅವರ ವರ್ಚಸ್ಸು ಎಷ್ಟಿರಬಹುದೆಂಬದನ್ನು ವಾಚಕರೇ ಊಹಿಸಬೇಕು ಶ್ರೀಕೃಷ್ಣದೇವರಾಯರಿಗೆ ಶ್ರೀವ್ಯಾಸಯೋಗಿಯವರನ್ನು ಎಷ್ಟು ರೀತಿಯಿಂದ ಪೂಜಿಸಿದರೂ ಸಾಲದಾಗಿತ್ತು. ಒಮ್ಮೆ ಶ್ರೀಕೃಷ್ಣದೇವರಾಯನು ಶ್ರೀಗಳವರನ್ನು ರತ್ನಮಯವಾದ ಸಿಂಹಾಸನದಲ್ಲಿ ಕೂಡಿಸಿ ಅನರ್ಘ್ಯ ರತ್ನರಾಸಿಗಳಿಂದ ಅಭಿಷೇಕ ಮಾಡಿದನು. ಅಭಿಷಿಕ್ತವಾದ ರತ್ನರಾಸಿಗಳನ್ನು ಶ್ರೀವ್ಯಾಸರಾಯರು ಆಸ್ಥಾನ ವಿದ್ವಜ್ಜನರಿಗೆಲ್ಲ ಅರ್ಪಿಸಿದರೆಂದು ಹೇಳಿದ್ದಾರೆ.

ಸೋಮನಾಥ ಕವಿಯು ಶ್ರೀವ್ಯಾಸರಾಯರ ಉದಾರತನವನ್ನು ಒಂದು ಪದ್ಯದಲ್ಲಿ "ತಸ್ಮಿನ್ಯತೌ ವಿತರಣೇನ ಧನಾಧಿಸಾಧಾಸ್ತನ್ವತ್ಯಥಿಕ್ಷಿತಿತಲಂ ಸಕಲಾನ್‌ಬುಧೇಂದ್ರಾನ್ ॥ ಸರ್ವಜ್ಞತಾಮುಪಿವಶನ್ನ ವಿವೇದ ದೇವಃ ಕೋವಾ ಸಖೇತಿಕುಲಶೈಲಸುತಾಸಹಾಯಃ' ಹೀಗೆ ವರ್ಣಿಸಿ ಮತ್ತೆ "ಶ್ರೀಸ್ವಾಮಿಗಳು ಸರ್ವ ಪಂಡಿತರಿಗೆ ಉದಾರತನದಿಂದ ಹೇರಳ ದ್ರವ್ಯವನ್ನು ಕೊಡುವದರಿಂದ ಸರ್ವರೂ ಧನಸಂಪನ್ನರಾದರು ಬಹುಧನಕ್ಕೆ ಅಧಿಪತಿಗಳಾದರು. ಪಾರ್ವತೀಪತಿಯಾದ ಪರಮೇಶ್ವರನ ಪ್ರಿಯಮಿತ್ರನು ಧನಪತಿಯಾದ ಕುಬೇರನು ಬಹು ಜನರು ಧನಪತಿಗಳಾಗಿರುವದರಿಂದ ಸರ್ವಜ್ಞನಾದ ಶಿವನಿಗಾದರೂ ಕುಬೇರನು ಯಾರೆಂಬದು ತಿಳಿಯದಂತಾಯಿತು." ಎಂದುಒಂದು ರೀತಿಯಾಗಿ ಕವಿಯು ವರ್ಣಿಸಿದ್ದಾನೆ ಶ್ರೀಕೃಷ್ಣದೇವರಾಯನ ಕಾಲದಲ್ಲಿ ಕುಹುಯೋಗ ವೆಂಬಪೊಂದು ಕುಯೋಗ ಬಂದಿರಲು ಇವರು ಅದನ್ನು ಪರಿಹರಿಸಿದರು ಜ್ಯೋತಿಃಸಾರಸಂಗ್ರಹದಲ್ಲಿ "ರಾಹುಣಾರ್ಕಾರ್ಕಭೂಪುತ್ರಾಃ। ಯದಾಚಂಡಾಲತಾಂಗತಾಃ॥ ಯಸ್ಯದ್ವಾದಶಗಾಃ ಸನ್ತಿ। ಸರಾಜಾನಶ್ಯತಿಧ್ರುವಂ.॥" ಎಂದು ಕುಹುಯೋಗ ವಿಷಯದಲ್ಲಿ ವರ್ಣಿಸಿರುವರು. ರಾಹು, ಸೂರ್ಯ, ಶನಿ, ಮಂಗಳಗಳು ಕೆಲವು ವೇಳೆಯಲ್ಲಿ ವಿಷ ಗಳಿಗೆಗಳಿಂದ ಚಂಡಾಲರಾಗುವರು ಯಾವ ರಾಶಿ ನಕ್ಷತ್ರಗಳಿಗೆ ಇದು ಸಂಭವಿಸುವದೋ ಆ ರಾಶಿ ಮತ್ತು ನಕ್ಷತ್ರಗಳಲ್ಲಿ ಜನಿಸಿದವರಿಗೆ ಇದು ಭಯಂಕರ ಪರಿಣಾಮವನ್ನುಂಟುಮಾಡುವದು ಇದರ ಫಲವೆಂದರೆ ರಾಜರ ನಾಶವು, ರಾಜ್ಯನಾಶವೂ ಎಂದು ಹೇಳುತ್ತಾರೆ ಈ ಯೋಗವು ಪುಷ್ಯ ಬಹುಲ ಅಮಾವಾಸ್ಯಾದಿವಸ ೧೫೨೧ ನೆಯ ಇಸ್ವಿಯ ಜನೆವರಿ೮ನೇ ತಾರೀಖಿನ ದಿವಸ ಶ್ರೀಕೃಷ್ಣದೇವರಾಯನಿಗೆ ಬಂದೊದಗಿತ್ತು. ಅದರ ಶಾಂತ್ಯರ್ಥವಾಗಿ ಶ್ರೀವ್ಯಾಸರಾಯರು ಬಹುರೀತಿಯಾಗಿ ಜಪ ತಪ ಹೋಮ ಹವನ ಮುಂತಾದವುಗಳನ್ನು ನಡಿಸಿಯೇ ಇದ್ದರು. ಆದರೂ ಶ್ರೀಕೃಷ್ಣದೇವರಾಯನು ಶ್ರೀಯೋಗಿವರರನ್ನೇ ಸಿಂಹಾಸನದಲ್ಲಿ ಕೂಡಿಸಿ ಸರ್ವಸ್ವವನ್ನು ಧಾರೆಯರೆದನು. ಆಗಶ್ರೀಗಳು ಭೂದಾನಾದಿ ಸರ್ವ ಪದಾರ್ಥಗಳನ್ನು ಅತಿಶಯಿತವಾಗಿ ಕೊಟ್ಟರುವರು. ಆಗ ಅನೇಕ ಸಾಮಂತ ನರಪತಿಗಳು ಶ್ರೀಕೃಷ್ಣದೇವರಾಯನ ದರ್ಶನಕ್ಕಾಗಿ ಬಂದಿದ್ದರು. ಆ ವಿಷಗಳಿಗೆಯಲ್ಲಿ ಏನೇನಾಗುವದೆಂದು ನೋಡುವದಕ್ಕಾಗಿ

ಸಾವಿರಾರು ಜನರು ಗಾಬರಿಯಾಗಿ ನಿಂತುಬಿಟ್ಟಿದ್ದರು. ಶ್ರೀ. ವ್ಯಾಸರಾಯರು ಸಿಂಹಾಸನವನ್ನಲಂಕರಿಸಿದ್ದರು ಮಹಾರಾಜನು ಕೈಮುಗಿದುಕೊಂಡು ಸ್ವಾಮಿಗಳ ಮಗ್ಗಲಿಗೆ ನಿಂತಿದ್ದನು. ಭಯಂಕರವಾದ ಜ್ವಾಲಾಮಯವಾಗಿ ಆ ಕುಯೋಗವು ರಾಜಾಸ್ಥಾನದಲ್ಲಿ ಪ್ರವೇಶಿಸಿತು. ರಾಜನು ಭಯಭೀತನಾಗಿ ನಡುಗ ಹತ್ತಿದನು. ಶ್ರೀಗಳು ತಮ್ಮ ಕರವಸ್ತ್ರವನ್ನು ಮುದ್ದಿ ಮಾಡಿ ಅದಕ್ಕೆ ಒಗೆದ ಕೂಡಲೇ ಅದು ಸುಟ್ಟು ಬೂದಿಯಾಗಿ ಶಾಂತವಾಯಿತು. ಈ ಅದ್ಭುತವನ್ನು ಸರ್ವರೂ ಪ್ರತ್ಯಕ್ಷವಾಗಿ ನೋಡಿ ಅತ್ಯಾಶ್ಚರ್ಯ ಚಕಿತರಾದರು. ಆದರ ಪರಿಹಾರವಾದ ನಂತರ ಶ್ರೀವ್ಯಾಸರಾಯರು ಸಿಂಹಾಸನವನ್ನಿಳಿದು ಕೃಷ್ಣದೇವ ರಾಯನಿಗೆ ಸಾಮ್ರಾಜ್ಯವನ್ನರ್ಪಿಸಿದರು. ಮುಂದೆ ಶ್ರೀಕೃಷ್ಣದೇವರಾಯನು ತನ್ನ ಕುಟುಂಬ ಪರಿವಾರ ಸಹಿತವಾಗಿ ಶ್ರೀ ತಿರುಪತಿಗೆ ಹೋಗಿ ಅಲ್ಲಿ ಶ್ರೀನಿವಾಸ ದೇವರಿಗೆ ಯಾವತ್ತೂ ಮಹೋತ್ಸವಗಳನ್ನು ಮಾಡಿಸಿದ್ದಾನೆ ಆಗಲಾದರೂ ಶ್ರೀವ್ಯಾಸರಾಯರು ತಿರುಪತಿಗೆ ಪ್ರಿಯ ಶಿಷ್ಯನ ಸಹ ಹೋಗಿದ್ದು ಯಾವತ್ತು ಉತ್ಸವಗಳನ್ನು ವಿಧಿಪೂರ್ವಕವಾಗಿ ಮಾಡಿಸಿದ್ದಾರೆ. ಆದೇ ಸಮಯದಲ್ಲಿ ತನ್ನ ಪತ್ನೀಸಹಿತ ವಿಗ್ರಹಗಳನ್ನು ಮಾಡಿಸಿ ಶ್ರೀ ಶ್ರೀನಿವಾಸದೇವರ ಸಮ್ಮುಖದಲ್ಲಿ ಸ್ಥಾಪಿಸಿದ್ದಾನೆ ಶ್ರೀವ್ಯಾಸರಾಯರು ಕೃಷ್ಣದೇವರಾಯನಿಂದ ಕೂಡಿ ತಿರುಪತಿಗೆ ಬಂದಾಗ ಪುರಂದರ ದಾಸರೂ ಕನಕದಾಸರೂ ಬಂದಿದ್ದರೆಂದು ತಿಳಿದು ಬರುತ್ತದೆ. ಶ್ರೀವ್ಯಾಸರಾಯರು ಮದನಪಲ್ಲಿ ಪ್ರಾಂತದಲ್ಲಿ ಸಂಚರಿಸುತ್ತ ತಮ್ಮನ್ನಾಶ್ರಯಿಸಿದ ವಿದ್ವಜ್ಜನರಿಗೋಸ್ಕರ "ವ್ಯಾಸಸಮುದ್ರ" ವೆಂಬ ಕೆರೆಯನ್ನು ಕಟ್ಟಿಸಿ ಆದರ ಸುತ್ತಮುತ್ತಲಿನ ಎಲ್ಲ ಭೂಮಿಗಳಿಗ ಉಪಯೋಗವಾಗುವಂತೆ ಮಾಡಿ, ದಾನ ಕೊಟ್ಟಿದ್ದಾರೆ. ಮುಂದೆ ಮತ್ತೆ ಇವರು ವಿಜಯನಗರಕ್ಕೆ ಬಂದಿದ್ದಾರೆ. ಪುರಂದರದಾಸರು ಕನಕದಾಸರು ಇವರಿಬ್ಬರು ಶ್ರೀ ವ್ಯಾಸರಾಯರಿಂದೊಡಗೂಡಿಯೇ ವಿಜಯನಗರದಲ್ಲಿಯೇ ಇರಹತ್ತಿದರು. ಕ್ರಿ. ಶ ೧೫೨೬ ರಲ್ಲಿ ವಿಜಯನಗರಕ್ಕೆ ಬಂದನಂತರ ಅವರು ರಾಜಕಾರಣದಲ್ಲಿ ವಿಶೇಷವಾಗಿ ಮನಸ್ಸು ಹಾಕಲೇ ಇಲ್ಲ. ವಿಜಯೀಂದ್ರರೆಂಬ ಸುಪ್ರಸಿದ್ಧ ಸ್ವಾಮಿಗಳೊಬ್ಬರು ಶ್ರೀವ್ಯಾಸರಾಯರ ಶಿಷ್ಯರಲ್ಲಿ ಅತಿ ಪ್ರಸಿದ್ಧರು. ಇದರಂತೆ ಸ್ವಾದಿಯ ಮಠದ ಮೂಲ ಪುರುಷರಾದ ಉಡುಪಿಯ ಶ್ರೀವಾದಿರಾಜ ಸ್ವಾಮಿಗಳಾದರೂ ಶ್ರೀವ್ಯಾಸರಾಯರಲ್ಲಿ ಶಿಷ್ಯರಂತೆ ನಡೆಯುತ್ತಿದ್ದರೆಂದು ಹೇಳುತ್ತಾರೆ. ಅವರು ಯಾವಾಗಾದರೂ ವಿಜಯನಗರಕ್ಕೆ ಬರುತ್ತಿದ್ದು ಶ್ರೀವ್ಯಾಸರಾಯರ ಸನ್ನಿಧಾನದಲ್ಲಿ ಇರುತ್ತಿದ್ದರೆಂದು ತಿಳಿದು ಬರುತ್ತದೆ. ಶ್ರೀಕೃಷ್ಣದೇವ ರಾಯನ ಕಾಲದಲ್ಲಿ ದಿಲ್ಲೀ ವಿಜಾಪೂರಗಳಲ್ಲಿಯ ಮುಸಲ್ಮಾನ ಬಾದಶಹರ ಕಡೆಯಿಂದಲೂ ಪೋರ್ತುಗೀಜ ಸರಕಾರದಿಂದಲೂ ಸಮ್ರಾಟರಿಗೆ ಮರ್ಯಾದೆಯ ಕಾಣಿಕೆಯನ್ನು ಕಳಿಸುವಾಗ ರಾಜಗುರುಗಳಿಗೆಂದು ಶ್ರೀವ್ಯಾಸರಾಯಸ್ವಾಮಿಗಳಿಗೂ ಮಹಾ ಮರ್ಯಾದೆಗಳನ್ನು ಕಳಿಸಿಕೊಡುತ್ತಿದ್ದರೆಂದು ತಿಳಿದು ಬರುತ್ತದೆ. ಶ್ರೀವ್ಯಾಸರಾಯರು ಕನಕ ಪುರಂದರ ದಾಸರೊಡನೆ ಪರಮಾರ್ಥ ಸಲ್ಲಾಪಗಳಲ್ಲಿ ಕಾಲಕ್ರಮಣ ಮಾಡುತ್ತ ಮಾಡುತ್ತ ರಾಜಕಾರಣದಲ್ಲಿ ಉದಾಸೀನರಾಗಿದ್ದಾಗಲೂ ಸಹ ಪ್ರಬಲರಾದ ಶ್ರೀಕೃಷ್ಣದೇವರಾಯನು ಸ್ವಯಂನಿರ್ವಾಹ ಮಾಡಿಕೊಳ್ಳುತ್ತಾ ಇದ್ದರೂ ಪ್ರತಿನಿತ್ಯದಲ್ಲಿ ಬಂದು ಸಂದರ್ಶನವನ್ನು ಸ್ವೀಕರಿಸಿ ವಿಷಯಗಳನ್ನರುಹಿ ತನ್ನ ಕಾರ್ಯದಲ್ಲಿ ಪ್ರವರ್ತಿಸುತ್ತಿದ್ದನು ಶ್ರೀಕೃಷ್ಣ ದೇವರಾಯನಿಗೆ ತಿರುಮಲದೇವರಾಯನೆಂಬ ಮಗನಿದ್ದನು. ಅವನಿಗೆ ಯುವರಾಜ್ಯದಲ್ಲಿ ಅಭಿಷೇಕವನ್ನು ಸಹ ಮಾಡಿದ್ದನು. ಆದರೆ ಆವನು ಅಲ್ಪಾಯುಷಿಯಾಗಿ ಶೀಘ್ರದಲ್ಲಿಯೇ ಮರಣಹೊಂದಿದನು ಅದರಿಂದ ಕೃಷ್ಣದೇವರಾಯನು ಬಹಳೇ ಉದಾಸೀನನಾದನು. ಆದರೆ ಮುಂದೆ ತನ್ನ ತಮ್ಮನಾದ ಅಚ್ಯುತರಾಯನನ್ನು ತಾನೇ ಪಟ್ಟಕ್ಕೆ ಕೂಡಿಸಿದನು ಕ್ರಿ ೧೫೨೯ ರಲ್ಲಿ ಅಚ್ಯುತ ರಾಯನಿಗೆ ಪಟ್ಟಾಭಿಷೇಕವಾಗಿದ್ದರೂ ೧೫೩೦ ರಿಂದಲೇ ಅಚ್ಯುತರಾಯನ ಸ್ವತಂತ್ರ ಅಧಿಕಾರವು ಪ್ರಾರಂಭವಾಯಿತು. ಇವರಿಂದ ೧೫೨೯ ರಲ್ಲಿಯೇ ಕೃಷ್ಣದೇವರಾಯನು ದಿವಂಗತನಾಗಿರಬೇಕು. ಇದರಿಂದ ಶ್ರೀವ್ಯಾಸರಾಯರಿಗೆ ಅಸಮಾಧಾನವಾಯಿತು. ಮುಂದೆ ಅವರು ಆನೆಗುಂದಿಯ ಮುಂದಿರುವ ತುಂಗಭದ್ರಾ ನದಿಯ ನಡುಗಡ್ಡೆಯಲ್ಲಿಯೇ ಇರಹತ್ತಿದರು. ಆದರೂ ಅಚ್ಯುತರಾಯನಾದರೂ ಪೂರ್ವದ ರಾಜರಂತೆ ಇವರನ್ನು ಪ್ರತಿ ಕೆಲಸಗಳಲ್ಲಿಯೂ ಸನ್ಮಾನಿಸುತ್ತಲೇ ಇರುತ್ತಿದ್ದನು. ೧೫೩೯ ನೇ ಇಸ್ವೀಯ ಮಾರ್ಚ ತಿಂಗಳ ೮ ನೇ ತಾರೀಖಿನಲ್ಲಿ ಅಂದರೆ ಶಾಲಿವಾಹನ ಶಕದ ೧೪೬೧ ರಲ್ಲಿ ಫಾಲ್ಗುಣ ಬಹುಳ

ಚತುರ್ಥಿ ದಿವಸ ಅವರು ವೃಂದಾವನಸ್ಥರಾದರು. ಒಟ್ಟಿಗೆ ಇವರು ೯೨ ವರ್ಷ ಈ ಲೋಕದಲ್ಲಿದ್ದದ್ದರಲ್ಲಿ ೫೦—೬೦ ವರ್ಷಗಳಷ್ಟು ಕಾಲವನ್ನು ಸಾಮ್ರಾಜ್ಯದ ಸಂರಕ್ಷಣೆಯಲ್ಲಿ ಸಂವರ್ಧನೆಯಲ್ಲಿ ಕಳೆದರು. ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಎಂಬ ಅಸಾಮಾನ್ಯವಾದ ಗ್ರಂಥಗಳನ್ನು ಬರೆದರು ಇಂತಹ ದೀರ್ಘಕಾಲದ ವರೆಗೂ ತಮ್ಮ ಸಾಮ್ರಾಜ್ಯದಲ್ಲಿ ಗುರುಗಳಾಗಿದ್ದ ಶ್ರೀವ್ಯಾಸರಾಯರ ಮಹಾಸಮಾರಾಧನೆಯನ್ನು ಅಚ್ಯುತರಾಯನು ಅತಿ ಭಕ್ತಿಯಿಂದಲೂ ವಿಶ್ವಾಸದಿಂದಲೂ, ವಿಜೃಂಭಣೆಯಿಂದ ಮಾಡಿದನು. ಮುಂದೆ ಅಳಿಯ ರಾಮರಾಯನ ಆಳಿಕೆಯಲ್ಲಿ ವಿಜಯನಗರದ ಸಾಮ್ರಾಜ್ಯದ ಘನತೆಗೆ ಸಮಾಪ್ತಿಕಾಲ ಬಂದು ಬಿಟ್ಟಿತು. ಇಲ್ಲಿ ಮುಂದಿನ ವಿಷಯವು ನಮಗೆ ಪ್ರಸ್ತುತವಿಲ್ಲ. ಶ್ರೀವ್ಯಾಸರಾಯಸ್ವಾಮಿಗಳು ಶ್ರೀಸಾಲ್ವನರಸಿಂಹನಿಂದಾರಂಭಿಸಿ ಅಚ್ಯುತರಾಯನ ವರೆಗೂ ಹೀಗೆ ಸಾಮ್ರಾಜ್ಯ ರಕ್ಷಣದೀಕ್ಷಿತರಾಗಿಯೂ ಶ್ರೀಮಧ್ವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾಗಿಯೂ ಮಾಡಿದ ಮಹತ್ಕಾರ್ಯವನ್ನು ಇಲ್ಲಿ ವಿವರಿಸಿರುವೆವು. ಇದರಿಂದ, ಈಗುರುರಾಜ ಚರಿತ್ರ ಸ್ಮರಣೆಯಿಂದ ಶ್ರೀವೇಣುಗೋಪಾಲಕೃಷ್ಣನು ಪ್ರೀತನಾಗಲೆಂದು ಪ್ರಾರ್ಥಿಸಿ ಈ ಮಹತ್ವದ ಚರಿತ್ರೆಯನ್ನು ಓದುವವರಿಗೂ ಕೇಳಿದವರಿಗೂ ಸಕಲ ವಿಧ ಐಹಿಕ ಪಾರಲೌಕಿಕ ಸುಖಾನಂದಗಳನ್ನು ದಯಪಾಲಿಸೆಂದು ಆ ದಯಾಘನನನ್ನು ಬೇಡಿಕೊಂಡು ಈ ಲೇಖವನ್ನು ಮುಗಿಸುವೆವು.

---

# ಶ್ರೀವಿದ್ಯಾರಣ್ಯರ ವಾಣಿ.

ಕನ್ನಡದ ಭಾಗ್ಯ-ಭಾಸ್ಕರನುದಯವಹಹ ! ಇ-
ನ್ನಾಗಲಿದೆ; ಸಿರಿ-ಸರಸ್ವತಿಯರೊಂದೆಡೆ ಕುಳಿತ
ಮಣಿ-ಮಂಚಮಯ್ಯಾಲೆ ತೂಗಲಿದೆ, ರಸದೇವಿ-
ಯುನ್ಮತ್ತ ನೃತ್ಯ-ಕೇಲಿಗೆ ಮತ್ತೆ ಕವಿಹೃದಯ-
ರಂಗ ಸಜ್ಜಾಗಲಿದೆ, ವೀರ್ಯ-ಕೀರ್ತಿಯ ಭೇರಿ
ಗುಡುಗಲಿದೆ; ಆರ್ಯ-ಧರ್ಮಸುಗಂಧವಿಡಗಲಿದೆ.
ಆಹ ! ಸಗ್ಗವೆ ಮೆಚ್ಚಿ ಬಾಗಿ ತಲೆದೂಗುವೊಲು
ಸಾಗಲಿದೆ ರಮ್ಯ ನವಜೀವನ-ಮಹಾರಥವು !

ಹರಿಹರಾ, ಏಳು; ನಾ ಬಲ್ಲೆ, ನಿನ್ನೆದೆಗಡಲು
ಮೇಲ್ವಾಯ್ದು ಹೊಯ್ದಾಡುತಿದೆಯೀಗ, ಅದೊ ಅದೋ,
ಏನು ತನುವುಬ್ಬುತಿದೆ; ನವಿರು ಸಿಡಿದೇಳುತಿದೆ
ಏಳು, ಅಹುದೇಳು; ಕನ್ನಡವೀರಕೇಸರೀ !
ಏಳು, ರಾಜ್ಯಾಂಗನೆಯನಾಳು, ನಿನ್ನಂಗಾಂಗ-
ದಲ್ಲಿ ಮಹೋಜ್ವಲ ರಾಜ-ತೇಜ ಪ್ರಜ್ವಲಿಸುತಿದೆ !

— ಎಸ್. ಆರ್. ಮಳಗಿ.
ಬಿ. ಎ. [ಆನರ್ಸ್].

# ಕಲ್ಯಾಣಮಹೋತ್ಸವ.

( ಬರೆದವರು.—ಶ್ರೀ. ಬಿ ಕಲ್ಯಾಣಶರ್ಮರು. ಬೆಳಗಾವಿ )

ಪರಮ ಪಾವನೆಯಾದ ತುಂಗಭದ್ರೆಯ ತೀರದಲ್ಲಿ ಒಂದು ಕಿರಿಬೆಟ್ಟ. ಆ ಬೆಟ್ಟದ ತುದಿಯಲ್ಲಿ ಒಂದು ಕೋಟೆ. ಅದರ ಸುತ್ತಲು ಗಿಡಗಂಟೆಗಳೂ ಎಲೆಬಳ್ಳಿಗಳೂ ಕಿಕ್ಕಿರಿದು ಬೆಳೆದಿವೆ. ಕೋಟೆಯ ನಟ್ಟನಡುವಿನ ಕೋಣೆಯಲ್ಲಿ ಒಂದು ಗಾಜಿನ ದೀವಿಗೆಯು ಮಿಣಕು ಮಿಣಕಾಗಿ ಉರಿಯುತ್ತಿದೆ. ಒಬ್ಬ ತರುಣನು ಕಣ್ಣು ಮುಚ್ಚಿ ಮಂಚದಲ್ಲಿ ಮಲಗಿದ್ದಾನೆ. ಹತ್ತಿರ ಮುದುಕನೊಬ್ಬನು ನಿಂತಿದ್ದಾನೆ. ಒಂದೆಡೆಯಲ್ಲಿ ಕೆಲ ವಸ್ತ್ರಗಳೂ ಪಾತ್ರೆಗಳೂ ಗುಡುಗುಡಿಯೂ ಬಿದ್ದಿವೆ ಮಳೆಗಾಲ; ಮಧ್ಯರಾತ್ರಿಯ ಸಮಯ. ಯವನ ಕಾವಲುಗಾರರು ನಿದ್ದೆಯ ಮಬ್ಬಿನಲ್ಲಿದ್ದಾರೆ.

ತರುಣನ ವಯಸ್ಸು ಇಪ್ಪತ್ತಕ್ಕೆ ಮಿಕ್ಕಿರಲಿಲ್ಲ. ಮೈಬಣ್ಣ ಸಾದಗಪ್ಪು, ಹರವಾದ ಎದೆ, ಹುರಿಯಾದ ಮೈಕಟ್ಟು, ಮೊಗಮೀಸೆ, ಒಗರಿನ ಮುಖಚರ್ಯೆ, ಇವೆಲ್ಲ ಆತನ ಹಿರಿಯವನ್ನು ಹೊರಸೂಸುತ್ತಿದ್ದವು.

ಮುದುಕನು ಮುಂದಾಗಿ— 'ಬುಕ್ಕಪ್ರಭುಗಳೇ! ಇನ್ನೂ ವಿಚಾರವೇ? ಯವನರು ತಮ್ಮ ಸಲುವಾಗಿ ನನ್ನ ಮನೆಮಾರು ಮಣ್ಣುಪಾಲು ಮಾಡಿದರು. ಒರಂಗಲ್ಲದಂಥ ಹೆಸರಾದ ಹಿರಿನಾಡನ್ನೂ ಸೂರೆಗೊಂಡರು. ಅದೇ ರಾಜ್ಯದ ಕ್ಷುದ್ರಸೆರೆಯಾಳಾದ ಒಬ್ಬ ಸರದಾರನ ಮನೆಮಾರು ಹಾಳಾದರೆ ಹಳಹಳಿ ಯಾಕೆ? ತಾವು ಆ ರಾಜವಂಶದೊಳಗಿನವರೊಬ್ಬರು. ಇಂದಿಗೆ ಪರಾಜಯಪಟ್ಟ ಹಿಂದುಗಳ ಪ್ರಾಣಪದಕವು ತಾವೇ. ತಾವು ಯವನರ ಸೆರೆಯಿಂದ ಪಾರಾದರೆ, ತಮ್ಮೊಡನೆ ಹಿಂದುಗಳಾದ ನಮ್ಮರುದ್ಧವಾದ ಮಹತ್ವಾಕಾಂಕ್ಷೆಗಳೂ ಬಿಡುಗಡೆಯಾಗುವವು; ಮತ್ತು ಆ ಆಕಾಂಕ್ಷೆಗಳೇ ಯವನರ ಸೈನ್ಯಸಮೂಹವನ್ನು ದೂಳುಗಾಣಿಸಿ, ಅಡಗುತ್ತಡಗುತ್ತ ಅಡವಿಯಡವಿಗಳಲ್ಲಿ ಅಲೆದಾಡುವ ಕರ್ನಾಟಕ ಧ್ವಜವನ್ನು ಯಾವದೊಂದು ಜಯಶಾಲಿಯಾದ ಅರಸೊತ್ತಿಗೆಯ ಅರಮನೆಯ ಮೇಲೆ ಅಲೆದಾಡಿಸಲಿಕ್ಕಿಲ್ಲೆಂದು ಹೇಳುವವರಾರು! ಅದುದರಿಂದ ಪ್ರಭುಗಳು ನನ್ನ ವಿಷಯದಲ್ಲಿ ಚಿಂತಿಸಬಾರದು."

ಕರಳು ಮುರಿಗೆಗೊಂಡು ಮಾತಾಡುವ ಮುದುಕನ ಮಾತುಗಳನ್ನು ಕೇಳಿ, ತರುಣನು ಮೆಲ್ಲ ಮೆಲ್ಲನೆ ಕಣ್ದೆರೆದನು. ಅವನ ಕಣ್ಣುಗಳಲ್ಲಿ ಕೃತಜ್ಞತೆಯ ಭಾವವು ತುಂಬಿತುಳುಕುತ್ತಿತ್ತು. ಅವನು ಮುದುಕನನ್ನು ದಿಟ್ಟಿಸಿ ನೋಡುತ್ತ—'ತಿಮ್ಮಿಂಗಿಲರಾಯರೇ, ನೀವು ಒರಂಗಲ್ಲಿನ ಹಿಂದೂಸಾಮ್ರಾಜ್ಯದ ಹಿತಕ್ಕಾಗಿ ಸಾಗಿಸಿದ ಸಂಗ್ರಾಮದ ಸೌರಣೆ, ನಿಮ್ಮ ಹಿಂದುತ್ವದ ಅಭಿಮಾನ, ಯಾರಿಗೆ ತಾನೆ ಗೊತ್ತಿಲ್ಲ? ನಿಮ್ಮಂತೆ ಕಾಳಗದ ಕಣದಲ್ಲಿ ಮಿಕ್ಕ ಸರದಾರ ಸೇನಾಪತಿಗಳು ಕಾದಿದ್ದರೆ, ಒರಂಗಲ್ಲಿನ ರಾಷ್ಟ್ರಧ್ವಜವು ಪರಾಜಿತವಾಗುತ್ತಿರಲಿಲ್ಲ ಈಗ ಮಾತಾಡಿ ಮಾಡುವದೇನು? ಸ್ವಂತ ಸಂರಕ್ಷಣೆಯ ಆಶೆಯು ನನಗಿಲ್ಲ. ಹಿಂದುಗಳ ಸ್ವಾತಂತ್ರ್ಯದ ಪುನರುಜ್ಜೀವನಕ್ಕಾಗಿ, ನಿಮ್ಮ ಕಾರಸ್ಥಾನಕ್ಕೆ ಒಪ್ಪಿಗೆಯನ್ನಿತ್ತು ನಿಮ್ಮ ಅಪೇಕ್ಷೆಯಂತೆ ಇಲ್ಲಿಂದ ಪಾರಾಗಿ ಹೋಗುತ್ತೇನೆ.'' ಎಂದು ಮಾತಾಡಿ, ತಟ್ಟನೆ ಮಂಚದಿಂದಿಳಿದು ನಿಂತುಕೊಂಡನು. ಮೋರೆಯಲ್ಲಿ ವೀರತೆಯು ಉಕ್ಕಿ ಬರಹತ್ತಿತು. ತಿಮ್ಮಿಂಗಿಲರಾಯನ ಹುರುಪು ಹೊಟ್ಟೆಯಲ್ಲಿ ಹಿಡಿಸದಾಯಿತು. ಅವನು ಕೂಡಲೆ ಅದೇ ಕೋಣೆಯ ಒಂದು ಮೂಲೆಯನ್ನಗಿದು, ನೆಲದೊಳಗಿಂದ ಲಕಗುಟ್ಟುವ ಶಸ್ತ್ರಗಳನ್ನು ಹೊರದೆಗೆದು, ಬುಕ್ಕರಾಯನಿಗೆ ಕೊಟ್ಟನು. ಬಳಿಕ ಬುಕ್ಕರಾಯನನ್ನುದ್ದೇಶಿಸಿ— 'ಎಂದು ಯವನರು ಈ ಕೋಟೆಯನ್ನು ವಶಪಡಿಸಿಕೊಂಡು, ನನ್ನನ್ನು ಈ ಕಲ್ಲುಮನೆಯಲ್ಲಿ ಸೆರೆಯಾಳೆಂದು ತಂದಿಟ್ಟರೋ, ಅಂದೇ ನಾನು ಈ ಶಸ್ತ್ರಗಳನ್ನು ರಹಸ್ಯವಾಗಿ ಇಲ್ಲಿ ತಂದಿಟ್ಟಿದ್ದೆನು. ಮುಂದೆ ತಮ್ಮನ್ನೂ ಹಿಡಿದು ಇಲ್ಲಿಯೇ ತಂದಿಟ್ಟರು. ಅಂದಿನಿಂದ ಕಷ್ಟದಲ್ಲಿಯೂ ನನಗೆ ತಮ್ಮ ಸೇವೆಯ ಸುಖವು ದೊರೆಯಿತು. ಈ ಮುಪ್ಪಾದ ದೇಹವು ಮರಣಕ್ಕೀಡಾಗುವ ಮೊದಲು, ಈ ಕೊನೆಯ ಕಾರ್ಯದಲ್ಲಿ ಹಿಂದೂಸಾಮ್ರಾಜ್ಯದ ಕಲ್ಯಾಣಕ್ಕಾಗಿ ಸವಿಯಲಿ. ಪ್ರಭುಗಳೇ, ನಾನು ತಮ್ಮನ್ನು ಈ ಕೋಟೆಯಲ್ಲಿಯ ಗುಪ್ತಮಾರ್ಗದಿಂದ ಪ್ರಾಕಾರವನ್ನು ದಾಟಿಸಿ,

ಆ ದಾರಿಯ ಕಾವಲು ನೋಡುತ್ತ ಬಾಗಿಲಿಗೆ ನಿಲ್ಲುತ್ತೇನೆ ಪೂರ್ವ ದಿಕ್ಕಿನಲ್ಲಿರುವ ಹಳ್ಳದ ಬಳಿ ಒಂದು ಅರಳೀಕಟ್ಟೆಯಿರುವದು. ಅಲ್ಲಿಗೆ ಹೋಗಿರಿ. ಅಲ್ಲಿ ನನ್ನ ನಂಬಿಗೆಯ ಸೇವಕನಾದ ಧನಮಲ್ಲನು ದೊರಕುವನು. ಅವನು ಮುಂದಣ ಎಲ್ಲ ವ್ಯವಸ್ಥೆಯನ್ನು ಮಾಡುವನು. ನಾನು ಬದುಕಿ ಉಳಿದರೆ ತಮ್ಮ ಸೇವೆಗೆ ಬಂದೇ ಬರುವೆ. ಸಾಯುವ ಹೊತ್ತು ಬಂದರೆ, ಅತ್ಯಂತ ಅಭಿಮಾನದಿಂದ ಹಿಂದುತ್ವದ ಹೆಸರಿನಿಂದ ಇಲ್ಲಿಯೇ ಈ ಜೀರ್ಣ ದೇಹವನ್ನು ನೀಗಿ ಬಿಡುವೆ.''

ಇಷ್ಟು ಮಾತಾಡಿ ತಿಮ್ಮಿಂಗಿಲರಾಯನು ಒಂದು ಪ್ರಚಂಡವಾದ ಖಡ್ಗವನ್ನು ಒರೆಯಿಂದ ಹೊರದೆಗೆದು ಬಾಗಿಲಕಡೆಗೆ ಸಾಗಹತ್ತಿದನು. ಬುಕ್ಕರಾಯನೂ ತನ್ನ ಖಡ್ಗವನ್ನು ಒರೆಗಳೆದು, ಉಸುರು ಹಾಕದೆ, ಮುದುಕನನ್ನು ಹಿಂಬಾಲಿಸಿದನು. ಬಾಗಿಲು ತೆರೆಯಲಾಯಿತು ಆ ಸಪ್ಪಳಕ್ಕೆ ಮಬ್ಬಿನಲ್ಲಿರುವ ಯವನ ಕಾವಲುಗಾರರು ಎಚ್ಚರಾಗಿ ಸಜ್ಜಾಗುತ್ತಿರಲು, ಅವರೀರ್ವರ ಖಡ್ಗಗಳು ಯವನರ ರಕ್ತದಿಂದ ಕೆಂಪಾದವು. ವಿಶಾಲವಾದ ಗಡ್ಡ ಮೀಸೆಗಳುಳ್ಳ ಯವನ ಕಾವಲುಗಾರರ ಶರೀರಗಳು ನೆಲಕ್ಕುರುಳಿದವು ಈ ಗಲಭೆಯಲ್ಲಿ ಒಬ್ಬ ಕಾವಲುಗಾರನು ಕಣ್ಣುತಪ್ಪಿಸಿ ಪಾರಾಗಿ, ತನ್ನ ಒಡೆಯನ ಮಂದಿರದ ಮುಂದೆ ಹೋಗಿ ಬೊಬ್ಬೆಯಿಟ್ಟನು. ಇತ್ತ ತಿಮ್ಮಿಂಗಿಲರಾಯನು ಉತ್ತರದಿಂದವಂದಕ್ಕೆ ಸಾಗಿ ಒಂದು ಕಲ್ಲಿನ ಕಮಾನಿಯ ಹತ್ತಿರ ಬಂದನು. ಕೂಡಲೆ ಬಾಗಿ ಏನೋ ಗುರುತಿಸಿ ಒಂದು ದೊಡ್ಡ ಕಲ್ಲಿಗೆ ಕೈಯಿಕ್ಕಿ, ಅದನ್ನು ಓರೆ ಮಾಡಿದನು ಅಲ್ಲಿ ಒಂದು ಬಾಗಿಲು. ಅವರಿಬ್ಬರು ತಮ್ಮ ಬಳಿಯಲ್ಲಿರುವ ಪಂಜುಗಳನ್ನು ಹೊತ್ತಿಸಿ, ನೆಲಮನೆ ದಾರಿಯಿಂದ ಸಾಗಹತ್ತಿದರು. ಇತ್ತ ಕಾವಲುಗಾರನ ಬೊಬ್ಬೆಯಿಂದ ಎಚ್ಚರಾದ ಯವನರೆಲ್ಲರು ಒಟ್ಟಾಗಿ ನೆರೆ, ತಮ್ಮ ಒಡೆಯನನ್ನು ಕೂಡಿಕೊಂಡು ತಿಮ್ಮಿಂಗಿಲರಾಯ ಬುಕ್ಕರಾಯರನ್ನು ಶೋಧಿಸತೊಡಗಿದರು.

೨

ಮುಂಜಾವಿನ ವೇಳೆ. ಕೋಟೆಯ ಕೆಳಭಾಗದ ಪೂರ್ವದಿಕ್ಕಿನಲ್ಲಿ ದಣುಕೊಂಡ ಒಂದು ವ್ಯಕ್ತಿಯು ಯಾವುದೋ ಸ್ಥಳವನ್ನು ಹುಡುಕುತ್ತಿದ್ದಿತು. ಅಲ್ಲಿಯೇ ಸಮೀಪದಲ್ಲಿ ಒಂದು ಅರಳೀಕಟ್ಟೆಯ ಮೇಲೆ ಒಬ್ಬ ನಡುಹರೆಯದ, ದುಂಡ ಮೈಕಟ್ಟಿನ ಮನುಷ್ಯನು ಕೈಯಲ್ಲಿ ಬಿಲ್ಲನ್ನು ಹಿಡುಕೊಂಡು ಯಾರದೋ ದಾರಿಯನ್ನು ಕಾಯುತ್ತ, ನಾಲ್ಕೂ ದಿಕ್ಕುಗಳನ್ನು ದಿಟ್ಟಿಸಿ ನೋಡುತ್ತ ನಿಂತಿದ್ದನು. ಅವನನ್ನೇ ಹುಡುಕುತ್ತಿರುವ ಬುಕ್ಕರಾಯನು ಮುಂದಾಗಿ ಓಡಿದನು. ಅವನು ಬಂದಕೂಡಲೆ ವಿನಯದಿಂದ ಧನಮಲ್ಲನು ಮಣಿದು:-‘ ಬುಕ್ಕಪ್ರಭುಗಳಿಗೆ ಜಯವಾಗಲಿ’ ಎಂದು ಗರ್ಜಿಸಿದನು. ಬುಕ್ಕರಾಯನು ಆನಂದದಿಂದ ‘ ಧನಮಲ್ಲಾ ! ಭಾಪು ! ಭಾಪು! ಎಂದು ಆತನ ಬೆನ್ನು ತಟ್ಟಿದನು. ಇಷ್ಟರಲ್ಲಿ ಮೈತುಂಬ ಗಾಯಗಳಾಗಿ, ನೆತ್ತರ ಹೊರಚಿಮ್ಮುತ್ತಿರುವ ಒಬ್ಬ ವೃದ್ಧನು ಅಲ್ಲಿಗೆ ಬಂದನು; ಮತ್ತು ನೆತ್ತರದಲ್ಲಿ ನೆನೆದ ಬಲವಾದ ಖಡ್ಗದಿಂದ ಒಂದು ದಿಕ್ಕನ್ನು ಸೂಚಿಸಿ —‘ ಪ್ರಭುಗಳೇ! ಧನಮಲ್ಲಾ ! ಇದೇ ದಿಕ್ಕಿನಿಂದ ಯವನ ತಂಡವೊಂದು ನಿಮ್ಮ ಮೇಲೆ ಸಾಗಿಬರುತ್ತಿರುವದು'' ‘ಎಂದು ನುಡಿಯುತ್ತಿರಲು, ಯವನರ ದಿನ್, ದಿನ್' ಎಂಬ ರಣಗರ್ಜನೆಯು ಕೇಳಬರಹತ್ತಿತು. ಧನಮಲ್ಲನು ಶಿಳ್ಳು ಹಾಕಿದನು. ಕೂಡಲೆ ಸುತ್ತಲಿನ ಗಿಡಗಂಟೆಯೊಳಗಿಂದ ಬಿಲ್ಲುಬಾಣಗಳಿಂದ ಸಜ್ಜಾದ ನೂರು ಜನರ ಗುಂಪೊಂದು ವೇಗವಾಗಿ ಅಲ್ಲಿಗೆ ಬಂದು ಧನಮಲ್ಲನನ್ನು ಬಳಸಿ, ಅವನ ಅಪ್ಪಣೆಯನ್ನು ಕಾಯುತ್ತ ನಿಂತುಕೊಂಡಿತು. ಯವನರ ತಂಡವೂ ಬಂತು. ಧನಮಲ್ಲನು ಮತ್ತೆ ಶಿಳ್ಳುಹಾಕಿದನು. ಅವನ ಜನರು ಯವನರ ಮೇಲೆ ಬಾಣಗಳ ಸುರಿಮಳೆಯನ್ನು ಸುರಿಸಹತ್ತಿದರು. ಧನಮಲ್ಲನೂ ತನ್ನ ಬಲವಾದ ಧನುಸ್ಸನ್ನು ತೀಡಿ ಬಾಣಗಳನ್ನು ಬಿಡಹತ್ತಿದನು. ಈ ಬಾಣಗಳ ಹೊಡೆತದಿಂದ ಯವನರ ಅರ್ಧ ಜನರು ಮಡಿದರು. ಆಗ ಉಳಿದವರು ರೇಗಿ, ಹಗೆಗಳ ಮೇಲೆ ಸಾಗಿಬಂದರು ಖಡ್ಗಗಳ ಕಾದಾಟಕ್ಕೆ ಆರಂಭವಾಯಿತು ಬುಕ್ಕರಾಯನು ಹುಲಿಯಂತೆ ಹಗೆಗಳ ಮೇಲೆ ಏರಿಹೋದನು ಅವನ ಕಲಿತನವನ್ನು ಕಂಡು, ನೆರಳುತ್ತ ಬಿದ್ದುಕೊಂಡ ತಿಮ್ಮಿಂಗಿಲರಾಯನಿಗೆ ಸಮಾಧಾನವಾಯಿತು ಅವನು ನಗೆಮೊಗದಿಂದ:-‘ ಪ್ರಭುಗಳೇ ! ಭಾಪು !ಭಾಪು ! ! ನಿಮ್ಮಿಂದಲೇ ಹಿಂದೂ ಸಾಮ್ರಾಜ್ಯದ ಪುನರುದ್ಧಾರವಾಗುವದು. ನಾನು ಸಂತೋಷದಿಂದ ಸಾಯುವೆನು. ಹಿಂದುಗಳಿಗೆ ಜಯವಾಗಲಿ! ಎಂದು ನುಡಿಯುತ್ತಿರಲು, ಪಂಚಪ್ರಾಣಗಳು ಅವನ ಶರೀರದಿಂದ ಬೇರೆಯಾಗಿ ಪಂಚ ತತ್ವಗಳಲ್ಲಿ ಕೂಡಿ ಹೋದವು.

ಇತ್ತ ಕಾಳಗಕ್ಕೆ ಕಳೆಯೇರಿತ್ತು. ಕನ್ನಡಿಗರ ಕೈಚಳಕವನ್ನು ಯವನರು ತಡೆಯಲಾರದೆ ಗಡ ಗಡನೆ ಯಮಸದನವನ್ನು ಸೇರಹತ್ತಿದರು. ಅಳಿದುಳಿ ದವರು ಕಾಲ್ದೆಗೆಯಲು, ಕನ್ನಡಿಗರು ಅವರ ಬೆನ್ನಟ್ಟಿ, ಎಲ್ಲರನ್ನೂ ಯಮಸದನಕಟ್ಟಿದರು. ಇಷ್ಟಾದ ಮೇಲೆ ಧನಮಲ್ಲನಾಜ್ಞೆಯಿಂದ ಸೈನಿಕರು ಹಿಂದಿರುಗಿದರು ಆದರೆ ಬುಕ್ಕರಾಯನು ಎಲ್ಲಿಯೂ ಕಾಣಲಿಲ್ಲ. ಆಗ ಎಲ್ಲರ ಎದೆಗಳು ಧಸ್ಸೆಂದವು. ಎಲ್ಲರು ಬೇಪ್ಪಾಗಿ ಬುಕ್ಕರಾಯನನ್ನು ಹುಡುಕ ಹತ್ತಿದರು. ಯವನರ ಹೆಣಗಳ ರಾಶಿಯಲ್ಲಿಯೇ ಅವನು ಗಾಯಗೊಂಡು ಎಚ್ಚರದಪ್ಪಿ ಬಿದ್ದಿದ್ದನು ಅವನನ್ನು ಕಾಣುತ್ತಲೆ, ಧನ ಮಲ್ಲನು ಮುಂದಾಗಿ, ಹೊರದೆಗೆದು, ಒಂದು ತರಗೆಲೆ ಗಳ ಹಾಸಿಗೆ ಮಾಡಿ ಅದರಲ್ಲಿ ಮಲಗಿಸಿದನು. ಬಗೆ ಬಗೆಯ ಅಮೂಲ್ಯ ಔಷಧ ವನಸ್ಪತಿಗಳ ತವರೂ ರಾದ ತುಂಗಭದ್ರೆಯ ತೀರದಲ್ಲಿಯೇ ಧನಮಲ್ಲನು ತನ್ನ ಇಡಿ ಆಯುಷ್ಯವನ್ನು ಕಳೆದಿದ್ದನು ಅವನು ಆ ಸ್ಥಿತಿಗೆ ಅವಶ್ಯವಾಗಿರುವ ವನಸ್ಪತಿಗಳನ್ನು ಅವಸರ ದಿಂದ ಕೂಡಹಾಕಿ ಯೋಗ್ಯವಾದ ಉಪಚಾರ ಮಾಡಿ ಗಾಯಗಳನ್ನೆಲ್ಲ ಕಟ್ಟಿದನು. ಅಷ್ಟರಲ್ಲಿ ಡೋಲಿಯು ಸಿದ್ಧವಾಗಿತ್ತು. ಅದರಲ್ಲಿ ಬುಕ್ಕರಾಯನನ್ನು ಹಗು ರಾಗಿ ಮಲಗಿಸಿ, ಎಲ್ಲರು ತಮ್ಮ ಸುರಕ್ಷಿತ ಸ್ಥಳದ ಕಡೆಗೆ ಸಾಗಹತ್ತಿದರು. ಕುಸು ವೇಳೆಯಲ್ಲಿ ಎಲ್ಲರು ಒಂದು ಕಿರಿಬೆಟ್ಟವನ್ನೇರಿ, ಪ್ರಶಸ್ತವಾದ ಗುಡಿಸಲಿಗೆ ಬಂದರು ಅಲ್ಲಿಂದ ಸುತ್ತಲಿನ ಪ್ರದೇಶವೆಲ್ಲ ಬಹು ರಮಣೀಯವಾಗಿ ತೋರುತ್ತಿತ್ತು ಆ ಗುಡಿಸಲಿನ ಮೇಲ್ಭಾಗದಲ್ಲಿ ಓರಗಲ್ಲಿನಹಿಂದೂಸಾಮ್ರಾಜ್ಯದ ನಾಡ ಗಡಿಯು ಅಲ್ಲಾಡುತ್ತಿತ್ತು; ಒಳಭಾಗದ ಗೋಡೆ ಗೆಗೆ ಬಗೆಬಗೆಯ ಶಸ್ತ್ರಾಸ್ತ್ರಗಳು ನೇತಾಡುತ್ತಿದ್ದವು. ವ್ಯಾಘ್ರ ಜಿನ, ಕೃಷ್ಣಾಜಿನಗಳು ಅಚ್ಚುಕಟ್ಟಾಗಿ ಹಾಸಲ್ಪಟ್ಟಿದ್ದುವು. ಊದಿನಕಡ್ಡಿಯ ಸುವಾಸನೆಯು ಇಡಿ ಗುಡಿಸಲನ್ನೆಲ್ಲ ಡಿಗಿಕೊಂಡಿತ್ತು. ಹೂಗೊಂಚಲ ಗಳು ಅಲ್ಲಲ್ಲಿ ಇಡಲ್ಪಟ್ಟಿದ್ದವು. ಹಿಂಭಾಗದಲ್ಲಿ ಗೋಶಾಲೆಯಿದ್ದಿತು.

ಧನಮಲ್ಲನು ಬುಕ್ಕರಾಯನ ಡೋಲಿಯನ್ನು ಈ ಗುಡಿಸಲಿನ ಬಾಗಿಲಲ್ಲಿ ತಂದಿಳಿಸಿದನು. ರಾಯನು ಇನ್ನೂ ಮೂರ್ಛಾವಸ್ಥೆಯಲ್ಲಿಯೇ ಇದ್ದನು. ಧನ ಮಲ್ಲನು ಅತನ ಕಣ್ಣುಗಳಿಗೆ ಸ್ವಲ್ಪ ನೀರು ಹಚ್ಚಿ ಬಾಯಲ್ಲಿ ಯಾವದೋ ರಸವನ್ನು ಹಿಂಡಿದನು. ಬಳಿಕ ಗುಡಿಸಲಿನ ಒಂದು ಮೂಲೆಯಲ್ಲಿನಿಂತು — 'ಗೌರಿ ಗೌರಿ' ಎಂದು ಕೂಗಿದನು ಕೂಡಲೆ— 'ಓ! ಬಂದೆ' ಎಂದು ನುಡಿಯುತ್ತ ಓರ್ವ ನಡುಹರೆಯದ ಹುಡು ಗೆಯು, ತಲೆಯಲ್ಲಿ ಹಾಲಿನ ಭಾಂಡವನ್ನು ಹೊತ್ತು ಕೊಂಡು, ಕಾಲುಂಗುರಗಳ ಸಪ್ಪಳಮಾಡುತ್ತ ಅಲ್ಲಿಗೆ ಬಂದಳು. ಅವಳು ಎಡಗೈಯಿಂದ ಪಾತ್ರೆಯನ್ನು ಒಡಿದಿದ್ದಳು. ಗಾಳಿಯಿಂದ ಆಗಾಗ ಚಲಿಸುವ ಸೆರಗನ್ನು ಬಲಗೈಯಿಂದ ಸಾವರಿಸುತ್ತಿದ್ದಳು. ಗೋಣಿನ ತೂಗಿನಿಂದ ಅವಳ ಹೆಳಲು ಚಲಿಸುತ್ತಿತ್ತು. ಅದರಿಂದ ಅದರಲ್ಲಿ ಶೊಡಕಿಸಿದ ಹೂಗಳ ಪಕಳೆಗಳು ಒಂದೊಂದಾಗಿ ಉದುರುತ್ತಿದ್ದವು. ನೈಕಟ್ಟುದುಂಡಗೆ; ನೈಬಣ್ಣ ಸಾದಗಪ್ಪು. ಅವಳು ಅರಳಿದ ಕಣ್ಣು ಗಳಿಂದ ಧನಮಲ್ಲನನ್ನು ಕುರಿತು— 'ಅಪ್ಪಾ, ಶುಭ ವಾರ್ತೆಯಿದೆಯೋ? ಬುಕ್ಕರಾಯರ ಬಿಡುಗಡೆಯಾಗಿ ಅವರು ಸುಖವಾಗಿ ಬಂದಿರುವರೋ?' ಎಂದು ಕೇಳಿದಳು. ಧನಮಲ್ಲನು ವಾತ್ಸಲ್ಯದಿಂದ ಅವಳ ಬೆನ್ನತಟ್ಟಿ ಕಿವಿಯಲ್ಲಿ ಏನೋ ಹೇಳಿದನು. ಕೂಡಲೆ ಗೌರಿಯ ಮುಖವು ಕಳೆಗುಂದಿತು. ಆದರೂ ಅವಳು ಸರ್ರನೆ ಒಳಸೇರಿ, ಅಡ್ಡಸೆರಗುಗಟ್ಟಿ ಸ್ವಚ್ಛವಾದ ತುಂಬಿದ ತಂಬಿಗೆಯನ್ನೂ ಅಕ್ಕಿಯಕಾಳುಗಳನ್ನೂ ತಕ್ಕೊಂಡು ಡೋಲಿಯ ಬಳಿಗೆ ಬಂದಳು. ಧನಮಲ್ಲನು ಡೋಲಿಯ ಬಾಗಿಲನ್ನು ತೆರೆದನು 'ಅಶುಭವು ಅಳಿದು ಹೋಗಲಿ!' ಎಂದುಸುರಿ, ಅಕ್ಕಿಯನ್ನು ನಿವಾಳಿಸಿ ಚಲ್ಲಿ, ಕಣ್ಣಿಗೆ ನೀರು ಹಚ್ಚುವ ನಾರಿಯನ್ನು ಬುಕ್ಕರಾಯನು ಕಣ್ದೆರೆದು ಆದೇ ಮೊದಲು ನೋಡಿದನು

೩

ಬುಕ್ಕರಾಯನ ಗಾಯಗಳು ಮಾಯುತ್ತ ಬಂದಿ ದ್ದವು. ಬಾಡಿದ ಮೈಬಣ್ಣವು ಕಳೆಯಿ ರಕ್ತೊಡಗಿತ್ತು ಸಂಜೆಯ ಸಮಯ. ಮಂಚದಮೇಲೆ ಬುಕ್ಕರಾಯನು ಆತುಕೊಂಡು ಕುಳಿತಿದ್ದನು ಅವನ ಎದುರಿನಲ್ಲಿಯೇ ಒಂದು ಗದ್ದುಗೆಯಮೇಲೆ ಗೌರಿಯು ಕುಳಿತು ಎದುರಿ ನಲ್ಲಿರುವ ಜಲ್ಲಿಯೊಳಗಿಂದ ಬಗೆಬಗೆಯ ಹೂವುಗಳ ನ್ನಾಯ್ದು ಮಾಲೆಯನ್ನು ಕಟ್ಟುತ್ತಿದ್ದಳು. ನಡನಡುವೆ ಯಾವವೋ ಭಾವನೆಗಳಿಂದ ತುಂಬಿದ ನೋಟದಿಂದ ಬುಕ್ಕರಾಯನನ್ನು ನೋಡುತ್ತಿದ್ದಳು. ರಾಯನು ಮಾಲೆಯೊಡನೆ ಚಿನ್ನಾಟವಾಡುತ್ತಿದ್ದನು. ಹೀಗಿರು ವಾಗ ಒಮ್ಮೆ ಮಾತೆಗೆ ರಾಯನ ಕೈಜೋಲಿಯು

ಬಲವಾಗಿ ತಾಗಿ, ಗೌರಿಯ ಕೈಯೊಳಗಿನ ಸೂಜಿಯು ಬೇರೊಂದು ಬೆರಳಿಗೆ ಚುಚ್ಚಿ, ಒಂದು ಹನಿ ರಕ್ತವು ಹೊರಬಿತ್ತು. ಅವಳು ಬೆಚ್ಚಿ ಬಿದ್ದಳು. ರಾಯನು ಚಟ್ಟನೆದ್ದು ಆ ಬೆರಳನ್ನು ತನ್ನ ಕೈಯಿಂದ ಹಿಡಿದು ನಾಲಿಗೆಯಿಂದ ಆ ರಕ್ತಬಿಂದುವನ್ನು ನೆಕ್ಕಿದನು ಗೌರಾಂಬೆಯ ಮೈ ನಡುಗಿತು. ಸೂಜಿಯ ಚುಚ್ಚು ಕಡಿಮೆಯಾಗಿ, ಬೆಣೆಯನ್ನು ತೆಗೆದ ಕಾರಂಜಿಯ ನೀರಿನಂತೆ, ಅವಳ ಹೃದಯವೆಂಬ ಕಾರಂಜಿಯಿಂದ ಸುಖದನೀರು ಹೊರಚಿಮ್ಮಹತ್ತಿದವು ಮೈಜುಮ್ಮೆಂದಿತು.

ಇತ್ತ ಬುಕ್ಕರಾಯನೂ ಯಾವದೋ ಒಂದು ಅನನುಭೂತವಾದ ಆನಂದದಿಂದ ಪುಲಕಿತನಾದನ. ಅವನ ಬಾಯಿಂದ ಸ್ವಭಾವವಾಗಿ—'ಬರಿ ಬೆರಳು ಇಷ್ಟು ಮಧುರವಾಗಿದ್ದ ಮೇಲೆ, ಅಧರವು ಎಷ್ಟು ಮಧುರವಾಗಿರಬೇಕು?' ಎಂಬ ಶಬ್ದಗಳು ಹೊರಗೆ ಹೊರಟವು ಈ ವಾಕ್ಯಾರ್ಥದ ಗುಟ್ಟು ಗೊತ್ತಿಲ್ಲದ ಆ ತರುಣನ ಮುಖದಿಂದ ನಿಸರ್ಗವು ಮೇಲಣ ಉದ್ಗಾರಗಳನ್ನು ಹೊರಡಿಸಿತು ಅದೇ ನಿಸರ್ಗವು ಮೀಸಲದುಟಿಯುಳ್ಳ ಗೌರಿಯ ಬಾಯಿಂದ ತಿಳಿಯದೆ— 'ಐ ಇದೇನು?' ಎಂಬ ನುಡಿ ಹೊರಡಿಸಿತು ಇಬ್ಬರೂ ಒಬ್ಬರನ್ನೊಬ್ಬರು ದಿಟ್ಟಿಸಿ, ಕ್ಷಣಕಾಲ ನೋಡಿದರು ಇಷ್ಟರಲ್ಲಿ ಮತ್ತೊಬ್ಬ ಏರಿಕೆ ರಕ್ತದ ತರುಣನು ಕೈಯಲ್ಲಿ ಸರಪಳಿಯನ್ನು ಹಿಡಿದುಕೊಂಡು ಬೇಟೆಯ ನಾಯಿಯೊಡನೆ ಅಲ್ಲಿಗೆ ಬಂದನು ಅವನು ಚುಚ್ಚು ನೋಟದಿಂದ ಗೌರಿಯನ್ನು ನೋಡುತ್ತ, ಒರಟದನಿಯಿಂದ—ಗೌರಿ, ಬುಕ್ಕರಾಯರ ಗಾಯಗಳು ಈಗ ಪೂರಾ ಮಾದಿರುವವಷ್ಟೆ? ಅವರು ತುಸು ಅಡ್ಡಾಡಿ ಬರಲು ಅಡ್ಡಿಯೇನಿರುವದು? ರಾಯರೇ, ಎದುರಿನ ತೋಟದಲ್ಲಿ ಸಂಚರಿಸಲು ಬರುವಿರಾ? ಎಂದನು ಅವನ ಈ ಮಾತುಗಳಿಂದ ಗೌರಿಗೆ ಸಿಟ್ಟು ಬಂತು. ಅವಳು ಎಟ್ಟದನಿಯಿಂದ — 'ಪುಂಡಲೀಕಾ, ಈ ವಿಚಾರಣೆಯು ನಿನಗೇತಕ್ಕೆ' ಹಾಲು ಹಿಂಡಿಕೊಳ್ಳುವ ಹೊತ್ತಾಗಿದೆ. ಹಕ್ಕೆಗೆ ಹೋಗಿ ಹಾಲು ಹಿಂಡುವ ಕೆಲಸವನ್ನಾರಂಭಿಸು. ಅಪ್ಪಾಜಿಯವರುಬಂದರೆಂದರೆ, ನನಗೆ ತಿಳಿಸು. ಹೂಂ. ನಡೆ

೪

ಅದೇ ದಿನದ ಮಧ್ಯರಾತ್ರಿ ಗುಡುಸಲಿನ ಅಂಗಳದಲ್ಲಿ ಒಬ್ಬ ತರುಣನು ಒಬ್ಬ ತರುಣಿಯೊಡನೆ ಮಾತಾಡುತ್ತ ಕುಳಿತಿದ್ದನು.

'ಪುಂಡಲೀಕಾ, ಆ ನರರತ್ನನ ವಿಷಯವಾಗಿ ನನ್ನ ಮನಸಿನಲ್ಲಿ ವಿಷವನ್ನು ಬೆರಿಸಬೇಡ. ಅಪ್ಪನು ದಂಡೆತ್ತಿ ಹೋದಾಗ ನೀನು ನನಗೆ ಸಹಾಯ ಮಾಡಿದ ಸಂಗತಿ ಸತ್ಯವಿದೆ. ನಾನು ಹೇಳಿದ ಕೆಲಸಗಳನ್ನು ನೀನು ಕಳಕಳಿಯಿಂದ ಮಾಡಿರುವೆ. ಹೀಗಿದ್ದರೂ ನೀನು ನನ್ನ ಪ್ರೇಮದ ಅಧಿಕಾರಿಯಾಗಲಾರೆ ನನ್ನ ಕೃಪೆಯ ಹಾಗೂ ಕೌತುಕದ ಅಧಿಕಾರಿಯಾಗಲು ಮಾತ್ರ ಯೋಗ್ಯನಾಗಿರುವೆ. ನಿನ್ನ ಯೋಗ್ಯತೆಯು ಇಷ್ಟೇ. ಇದನ್ನು ಬದಿಗಿರಿಸಿ, ನನ್ನ ಹೃದಯ ಸಿಂಹಾಸನಸ್ಥರಾದ ಬುಕ್ಕರಾಯರನ್ನು ಹಳಿಯ ಹತ್ತಿದರೆ, ಜೋಕೆ ನಿನ್ನ ಕಾಲುಗಳ ಮೇಲೆ ನೀನೆ ಕಲ್ಲು ಚಲ್ಲಿಕೊಳ್ಳುವಿ. ದೇಶ ಧರ್ಮಗಳಿಗಾಗಿ ಜೀವವನ್ನು ಧಾರೆಯೆರೆದ ಕಡುಗಲಿಗಳಾದ ಬುಕ್ಕರಾಯರೆತ್ತ! ಸ್ವಾರ್ಥದಿಂದ ತುಂಬಿತುಳುಕುವ ಸಂಸಾರ ಪಂಜರದ ನಡುಸಲಾಕೆಯು ಸುತ್ತಲು ಗಿರಿಕಿಹೊಡೆಯುವಸ್ವಾರ್ಥ ಸಾಧು ನೀನೆತ್ತ! ಭೂಮ್ಯಾಕಾಶದಷ್ಟು ಅಂತರ!'

ಕಣ್ಣೀರು ಹಾಕುತ್ತ ಪುಂಡಲೀಕನು— ಗೌರಿ, ಬುಕ್ಕರಾಯನ ಹುಚ್ಚು ಬಿಟ್ಟುಬಿಡು ಅವನಿಂದ ನಿನ್ನ ಸಂಸಾರವು ಹಾಳಾಗುವದು ಅವನಿಗೆ ವ್ಯವಹಾರ ಜ್ಞಾನವಿಲ್ಲ ಯವನರ ಪಾರುಪತ್ಯದ ಸಲುವಾಗಿ ಅಡವಿಯಡವಿಯಲ್ಲಿ ಅಲೆದಾಡುವ ಅವನಿಂದ ನಿನಗೆ ಸುಖವಾಗದು. ತಿಂಗಳಿಗೊಂದು ಸಲವಾದರೂ ಭೆಟ್ಟಿಯಾಗಲಿಕ್ಕಿಲ್ಲ ದುರ್ದೈವದಿಂದ ಯವನರ ಕೈಯಲ್ಲಿ ಸಿಕ್ಕರಂತೂ ಮಾತೇ ಮುಗಿಯಿತು. ಒಂದು ವೇಳೆ ಜಯಶಾಲಿಯಾಗಿ, ಅರಸನಾದರೆ, ನೂರೆಂಟು ಅರಸಿಯರಲ್ಲಿ ನಿನ್ನನ್ನು ನಂಬುವನೆಂದು ಯಾರು ಹೇಳಬೇಕು? ಇಂಥವನ ಉಡಿಯಲ್ಲಿ ಬಿದ್ದರೆ ನಿನಗೆ ಸುಖವಾದೀತೇ? ಚೆನ್ನಾಗಿ ವಿಚಾರಿಸು ನಾನು ನಿನಗೆ ಬೇಕಾದಷ್ಟು ಸಂಪತ್ತು ಕೊಡುವೆನು; ಹಗಲಿರುಳು ನಿನ್ನ ಸುತ್ತಲು ಸುಳಿದಾಡುವೆನು, ನಿನ್ನ ಬಯಕೆಗಳನ್ನೆಲ್ಲ ಪೂರೈಸುವೆನು ನಾನು ವ್ಯವಹಾರಜ್ಞನಿರುವದರಿಂದ ನಮ್ಮ ಸಂಸಾರವು ಸುಖಮಯವಾಗುವದು ಆ ದೇಶ-ಧರ್ಮಗಳ ಕೆಂಡದ ಹೊಂಡದಲ್ಲಿ ನಾವು ಧುಮುಕಿ ಮಾಡುವದೇನು!'

'ಪುಂಡಲೀಕಾ. ಮನುಷ್ಯನ, ಪರೀಕ್ಷೆಯು ನನಗಿಲ್ಲವೇ? ವೀರ ಬುಕ್ಕರಾಯರ ಯೋಗ್ಯತೆಯನ್ನು ನೀನೇನು ಬಲ್ಲೆ? ಸರಳರೀತಿಯಿಂದ ಸಾಗುವ ನಿರ್ಜೀವ ಸಂಸಾರಕ್ಕಿಂತ ಸಾವಿನೊಡನೆಯೇ ಹೋರಾಡುವ

ಸಜೀವ ಸಂಸಾರವೇ ನನಗೆ ತೋರುತ್ತದೆ. ಅಂಥ ಆಯುಷ್ಯದ ಮಹಿಮೆಯೇ ಮೇಲು ಅಂತಹ ತೇಜವೇ ನನ್ನ ಕಣ್ಣು ಕುಕ್ಕಿಸುವದು. ನೀನು ನನ್ನ ಬುದ್ಧಿಯಲ್ಲಿ ಭೇದವನ್ನುಂಟು ಮಾಡಲು ಹವಣಿಸ ಬೇಡ. ನಿನ್ನ ಉಪಕಾರವನ್ನು ನಾನು ಮರೆಯಲಾರೆ. ನನ್ನ ಮನಸಿನಲ್ಲಿ ನಿನ್ನ ವಿಷಯವಾಗಿ ಮಮತೆ ದಯೆ ಈ ವೃತ್ತಿಗಳು ಸ್ಥಿರವಾಗಿ ಉಳಿಯುವವು ನೀನು ಅಡ್ಡಹಾದಿಯನ್ನು ಹಿಡಿಯಬೇಡ. ನನ್ನ ಪ್ರೇಮದ ಒಡೆಯರು ಬುಕ್ಕರಾಯರು ! ಅವರು ನನ್ನ ಸ್ವೀಕಾರ ಮಾಡಲಿ; ಮಾಡದಿರಲಿ; ಅವರೇ ನನ್ನ ಜೀವನಾಧಾರವು ! ! ”

ಪುಂಡಲೀಕನು ನಿರಾಶ ಗೊಂಡನು. ಏನೋ ಮಾತಾಡತಕ್ಕವನಿದ್ದನು. ಅಷ್ಟರಲ್ಲಿ ಗಲಾಟೆಯ ಸುಳವು ಕಿವಿಮುಟ್ಟಿ, ಕಂದು ಬೆಳದಿಂಗಳಲ್ಲಿ ೪-೬ ವ್ಯಕ್ತಿಗಳ ಮುಸುಕುಮುಸುಕಾದ ಆಕೃತಿಗಳು ಕಂಡವು. ಪುಂಡಲೀಕನು ಬೆದರಿ ಬೆಪ್ಪಾದನು ಅವನಿಗೆ ನಡುಗು ಹುಟ್ಟಿತು. ದೆವ್ವಿನ ಕಲ್ಪನೆಯೂ ಹೊಳೆಯದೆ ಇರಲಿಲ್ಲ ಇಷ್ಟರಲ್ಲಿ ೪-೬ ಡೊಣಗ ಯವನರ ದೇಹಗಳು ಸ್ಪಷ್ಟವಾಗಿಕಂಡವು; ಮಾತುಗಳೂ ಕೇಳಬರಹತ್ತಿದವು

‘ಗೆಳೆಯಾ, ಇವನೇ ಅಂಜುಬುರುಕ ಬುಕ್ಕರಾಯನು. ನಮ್ಮ ಗಡವೊಡೆಯನಿಗೆ ಮೋಸಮಾಡಿ ಓಡಿಬಂದವನ ಇವನು ಓಡಿ ಹೋದ ದಿನವೇ ನಮ್ಮ ಒಡೆಯರು, ಈತನನ್ನು ಹಿಡಿದು, ಬಾದಶಹರಿಗೆ ಒಪ್ಪಿಸಿ, ತಿರುಗಿ ಒಡೆತನವನ್ನು ಸಂಪಾದಿಸಬೇಕೆಂದು ಆಣೆಯನ್ನಿಟ್ಟಿರುವರು. ಇನ್ನು ಒಮ್ಮೆಲೆಸಾಗಿ ಹೋಗಿ, ಆತನನ್ನು ಹೆಡಮುರಿಗೆ ಕಟ್ಟೋಣ, ಮತ್ತು ಆ ಒಯ್ಯಾರದ ಅರಗಿಳಿಯನ್ನು ನಮ್ಮ ಉಪಯೋಗಕ್ಕಾಗಿ ಒಯ್ಯೋಣ ” ಈ ಪ್ರಕಾರ ಮಾತಾಡಿ ಆ ಯವನರು ಪುಂಡಲೀಕನ ಬಳಿಗೆ ಬಂದರು ಆಗಪುಂಡಲೀಕನ ಕೈಕಾಲೇ ಹೋದವು ಅವನು ನಡುಗ ದನಿಯಿಂದ ಸಾಹೇಬರೇ ನಾನು ಬುಕ್ಕರಾಯನಲ್ಲ. ಅವನು ಗುಡಿಸಲಿನಲ್ಲಿ ಸುಖವಾಗಿ ಮಲಗಿರುವನು ಅವನನ್ನು ಹಿಡಿಯಬೇಕಾದರೆ ಅಲ್ಲಿಗೆ ಹೋಗಿರಿ, ನಾನು ಬಡ ಪ್ರಾಣಿಯು ನನ್ನನ್ನು ಬಡಿಯಬೇಡಿರಿ ’

ಗುಡುಗ ದನಿಯಿಂದ “ಪುಕ್ಕಾ! ನೀನು ಗಂಡಸನೇ? ಕೈಗಳಲ್ಲಿ ಬಳೆಗಳನ್ನಿಟ್ಟುಕೊಳ್ಳು ಎಂದು ನುಡಿಯುತ್ತಿರಲು ಒಬ್ಬ ಡೊಣಗನು ಗೌರಿಯ ಬಳಿಬಂದು ಅವಳ ಮೈಮುಟ್ಟಹತ್ತಿದನು ಆಗ ಅವಳು ಒಂದು ಕಿರಿಗತ್ತಿಯನ್ನು ಹೊರದೆಗೆದು ಡೊಣಗನನ್ನು ಇರಿಯ ತಕ್ಕವಳ, ಅಷ್ಟರಲ್ಲಿ ಮತ್ತೊಬ್ಬನು ಬಂದು ಅವಳ ಕೈ ಹಿಡಿದನು. ಅವಳು ಕತ್ತಿಯನ್ನು ಪುಂಡಲೀಕನ ಬಳಿಗೆ ಎಸೆದು- ‘ಏನು ನೋಡುತ್ತೀ? ಏಳು; ಶತ್ರುಗಳನ್ನು ತುಂಡರಿಸು ! ’ ಎಂದು ಹೇಳುತ್ತಿರಲು, ಇನ್ನಿಬ್ಬರು ಪುಂಡಲೀಕನ ಹೆಡಮುರಿಕೆಯನ್ನು ಕಟ್ಟಿದರು ಗೌರಾಂಬೆಯನ್ನು ಬಂಧಿಸತಕ್ಕವರು ಅಷ್ಟರಲ್ಲಿ ಗುಡಿಸಲಿನ ಬಾಗಿಲು ತೆರೆಯಲ್ಪಟ್ಟು, ಬುಕ್ಕರಾಯನು ಹುಲಿಯಂತೆ ಹಾರಿ ಅಲ್ಲಿಗೆ ಬಂದು, ತನ್ನ ಕೈಯೊಳಗಿನ ಬಲವಾದ ಖಡ್ಗದಿಂದ ಶತ್ರುಗಳನ್ನು ತುಂಡರಿಸಿ ಗೌರಿಯನ್ನು ಬಿಡಿಸಿದನು ಧನಮಲ್ಲನೂ ಬಂದನು. ಗೌರಿಯ ಮಧ್ಯಸ್ಥಿಕೆಯಿಂದ ಬಿಡುಗಡೆಯಾಗಿ ಪುಂಡಲೀಕನು ಅವನು ಮೊದಲಿನಂತೆ ಕೆಲಸಬೊಗಸೆಗಳನ್ನು ಮಾಡುತ್ತ ಅಲ್ಲಿಯೇ ಇದ್ದುಕೊಂಡನು.

೫

‘ಬುಕ್ಕರಾಯರೇ ! ಈ ಬಡವಿಯ ಸಲುವಾಗಿ ನೀವು ಸುಮ್ಮನೆ ಕಷ್ಟಕ್ಕೆ ಗುರಿಯಾದಿರಿ. ನಿಮ್ಮ ಗಾಯದೊಳಗಿಂದ ಮತ್ತೆ ನೆತ್ತರವು ಸೋರಹತ್ತಿತು !

ಹುಚ್ಚೀ, ಅದಕ್ಕಿಷ್ಟು ಚಿಂತೆಯೇಕೆ? ನೀನು ಉಪಚಾರಮಾಡಲು ಸಿದ್ಧಳೇ ಇರುವೆ! ನಿನ್ನ ಸಾನ್ನಿಧ್ಯ ದೊರೆಯಲು, ಇಂಥ ಸಾವಿರ ಗಾಯಗಳನ್ನು ಸಹಿಸಲು ಸಿದ್ಧನೇ ಇರುವೆ !’ ಎಂದು ನುಡಿದು ಗೌರಿಯ ಕೈಯನ್ನು ಹಿಡಿಯಲು ತನ್ನ ಕೈಗಳನ್ನು ಮುಂದೆ ಮಾಡಿದನು. ಗೌರಿಯು ಅನುಕೂಲವಾದ ಭಾವವನ್ನು ತೋರುತ್ತಿರಲು, ಒಬ್ಬ ಭವ್ಯಾಕಾರದ ಪುರುಷನು ಅವರ ಹಿಂದುಗಡೆಯಲ್ಲಿ ಬಂದು ನಿಂತುಕೊಂಡನು ಅವನು ಕ್ಯಾವೀಬಟ್ಟೆಗಳನ್ನು ಧರಿಸಿ ರುದ್ರಾಕ್ಷಿಗಳ ಮಾಲೆಯನ್ನು ಹಾಕಿಕೊಂಡಿದ್ದನು ಹಣೆಗೆ ಭಸ್ಮವನ್ನು ಹಚ್ಚಿದ್ದನು ಅವನು ಅಧಿಕಾರಯುಕ್ತವಾದ ವಾಣಿಯಿಂದ—‘ಬುಕ್ಕರಾಯನೇ ಈ ತರುಣಿಯ ಸಹವಾಸಕ್ಕಾಗಿ ನೀನು ಗಾಯಗೊಳ್ಳುವಿಯಾದರೆ, ನಿನ್ನ ಮಾತೃಭೂಮಿಯ ಮೇಲೆ, ಹಿಂದೂ ಧರ್ಮದ ಮೇಲೆ ಯವನರು ಮಾಡುತ್ತಿರುವ ಗಾಯಗಳನ್ನು ತಪ್ಪಿಸುವವರಾರು?’

ಕರ್ತವ್ಯದ ಸ್ಫೂರ್ತಿಯನ್ನುಂಟು ಮಾಡಿಕೊಡುವ ಅಭಿಪ್ರಾಯವುಳ್ಳ ಅಧಿಕಾರಯುಕ್ತವಾದ ವಾಣಿಯನ್ನು ಕೇಳಿ, ಬುಕ್ಕರಾಯನು ಗೌರಿಯ ಹಸ್ತಗಳನ್ನು

ಸ್ಪರ್ಶಮಾಡದೆ ಚಟ್ಟನೆ ಎದ್ದು, ಆ ದಿವ್ಯಮೂರ್ತಿಗೆ ನಮಸ್ಕರಿಸಿ— 'ಪೂಜ್ಯರೇ ಕ್ಷಮಿಸಿರಿ! ಯೌವ್ವನ ಸ್ವಭಾವಸಹಜವಾದ ಭಾವನೆಗಳಿಗೆ ವಶವಾಗಿ ನಾನು ಕರ್ತವ್ಯಪರಾಙ್ಮುಖನಾಗಿ ಅಡ್ಡ ದಾರೀ ಹಿಡಿಯುತ್ತಿದ್ದೆ. ತಾವು ಸಕಾಲದಲ್ಲಿ ನನ್ನನ್ನು ಎಚ್ಚರಗೊಳಿಸಿದಿರಿ ತಾವು ಯಾರು?'

'ನಾನು ಮಾಧವಾಚಾರ್ಯನು ಯವನರ ಉಪಟಳದಿಂದ ದೇಶಕ್ಕೂ ಧರ್ಮಕ್ಕೂ ಒದಗಿದ ದುರವಸ್ಥೆಯನ್ನು ಕಂಡು ನನ್ನಿಂದ ಸುಮ್ಮನಿರುವದಾಗಲಿಲ್ಲ. ಇಂತಹ ವೇಳೆಯಲ್ಲಿ ಹೊತ್ತಿಗೆಗಳನ್ನು ಪಠಿಸುತ್ತ ಕೂಡೆಂದು ನನಗೆ ನನ್ನ ಧರ್ಮವು ಹೇಳದಾಯಿತು ಈಗ ಹಿಂದುಗಳಿಗೆ ಹೀನಾವಸ್ಥೆಯು ಬಂದೊದಗಿರುವದು. ಪ್ರತಿಯೊಬ್ಬ ಹಿಂದುಕ್ಷತ್ರಿಯನಾಗಲಿಕ್ಕೆ ಬೇಕು. ನಿನ್ನ ಐತಿಹ್ಯವನ್ನೆಲ್ಲ ಹಿಂದೂ ಭಕ್ತನಾದ ಧನಮಲ್ಲನು ನನಗೆ ತಿಳಿಸಿರುವನು."

'' ಆಗಲಿ! ಇಂದು ನನ್ನಾಜ್ಞೆಯಿಂದಲೇ ಇಲ್ಲಿ ಹಿಂದೂ ಮುಂದಾಳುಗಳ ಸಮ್ಮೇಲನವು ಸೇರಿ, ಕಾಳಗದ ಮುಂದಣ ಮಾರ್ಗವೂ ನಿಶ್ಚಿತವಾಗತಕ್ಕದ್ದಿರುವದು ಪೂಜ್ಯರೇ, ತಾವು ಸಕಾಲದಲ್ಲಿ ಬಂದಿರುವಿರಿ ಆ ಸಮ್ಮೇಲನಕ್ಕೇ ಹೋಗೋಣ ನಡೆಯಿರಿ.'

ಬುಕ್ಕರಾಯನು ಗೌರಿಯನ್ನು ನೋಡಿ, 'ಗೌರಿ' ನಾನು ನಿನಗೆ ಚಿರ ಋಣಿಯಾಗಿರುವೆ ನಿನ್ನ ಅಚ್ಚ ಆಸ್ಥೆಕೆಯಿಂದಲೇ ನಾನು ಈ ದಿನಗಳನ್ನು ಕಂಡೆ'' ಎಂದು ನುಡಿಯುತ್ತಿರಲು, ಅವನ ಕುತ್ತಿಗೆಯ ನರಗಳು ಉಬ್ಬಿಬಂದವು. ಆಗ ಮಾಧವಾಚಾರ್ಯರು— '' ಬುಕ್ಕರಾಯನೇ ನಾನು ಮುಂದಾಗುವೆ, ನೀನು ಧನಮಲ್ಲನೊಡನೆ ತೀವ್ರವಾಗಿ ಬಾ. ಮಗೂ, ಗೌರಾಂಬೆ, ಹಿಂದೂದೇಶವೂ ಹಿಂದೂಧರ್ಮವೂ ನಿನ್ನವಾಗಿವೆ. ಈ ಸಂಗತಿ ನಿನ್ನ ಜ್ಞಾಪಕದಲ್ಲಿರಲಿ ಈ ವಿಷಯದಲ್ಲಿ ನಿನ್ನದೂ ಒಂದು ಬಗೆಯ ಕರ್ತವ್ಯವಿದೆ"

ಆಚಾರ್ಯರನ್ನು ಅಭಿವಂದಿಸುತ್ತ ಗೌರಿಯು, 'ನಾನು ಧನಮಲ್ಲರ ಮಗಳೇ ಇರುವೆನು. ಹಿಂದೂ ಧರ್ಮಕ್ಕಾಗಿ ಸಹಿಸ ಬೇಕಾದ ಅನುವು-ಆಪತ್ತುಗಳನ್ನು ನಾನು ಆನಂದದಿಂದ ಸಹಿಸುವೆನು. ತಮ್ಮ ಆಶೀರ್ವಾದವೊಂದಿದ್ದರೆ ಸಾಕು'

'ಮಗಳೇ, ನಿನ್ನ ಧೈರ್ಯನೋಡಿ ನಾನು ಸಂತೋಷಗೊಂಡೆ. ನಿನ್ನ ಮನೋರಥವು ಪೂರ್ಣವಾಗಲಿ, ಎಂದು ನುಡಿದು ಮಾಧವಾಚಾರ್ಯರು ಅಲ್ಲಿಂದ ಸಾಗಿದರು. ಗೌರಾಂಬೆಯು ಅಳತೊಡಗಿದಳು. ಆಗ ಬುಕ್ಕನು ಅವಳನ್ನು ಸಂತೈಸುತ್ತ 'ನಿನ್ನನ್ನು ಬಿಟ್ಟು ಹೋಗುವದು ಜೀವದ ಕುತ್ತು ಬಂದಿದೆ. ಆದರೆ ಕರ್ತವ್ಯದ ನೆನಪು ಆಯಿತೆಂದರೆ ಜೀವವು ಕಳವಳಿಸುವದು. ತಿಳಿದವಳೇ ಇರುವೆ. ನನಗೆ ಆನಂದದಿಂದ ಅಪ್ಪಣೆಯನ್ನು ಕೊಡು, ಎಂದು ನುಡಿದು ಅವಳ ಕಣ್ಣೀರುಗಳನ್ನೊರಸಿದನು. ಸ್ಪರ್ಶಸುಖದಿಂದ ಪರಸ್ಪರರು ಪರವಶರಾಗಿರಲು ಮೋಡಗವಿದು ಕತ್ತಲೆಯಾದ್ದರಿಂದ ಮುಂದಾದ ವಿಷಯವು ಗೊತ್ತಾಗಲಿಲ್ಲ. ಮತ್ತೆ ಬೆಳಕು ಕಂಡಾಗ ಬುಕ್ಕನು ಸಂಕೇತ ಸ್ಥಳದ ಕಡೆಗೆ ಸಾಗಿದ್ದನು. ಅವನ ಬೆರಳಲ್ಲಿ ಗೌರಿಯ ಉಂಗುರವಿತ್ತು ಗೌರಿಯು ಮೊದಲಿನ ಸ್ಥಳದಲ್ಲಿ ಮೂರ್ಛಿತಳಾಗಿ ಬಿದ್ದಿದ್ದಳು. ಅವಳ ಕೊರಳಲ್ಲಿ ರಾಯನ ರತ್ನಹಾರವೊಂದಿತ್ತು ಪುಂಡಲೀಕನು ಅವಳನ್ನು ಉಪಚರಿಸುತ್ತಿದ್ದನು. ಈ ಸಂಗತಿಗೆ ಕೆಲವು ದಿನಗಳು ಕಳೆದುಹೋಗಿದ್ದವು ಪುಂಡಲೀಕನು ಬುಕ್ಕರಾಯನ ವಿಷಯವಾಗಿ ಗೌರಿಯ ಮನಸ್ಸಿನಲ್ಲಿ ವಿಷಬೀಜವನ್ನು ಬಿತ್ತಲು ಯತ್ನಿಸುತ್ತಲೇ ಇದ್ದನು. ನಡುನಡುವೆ ತನ್ನ ಗೌರವದ ಜಾಲವನ್ನು ಉಪಕಾರದ ಪ್ರಕಾಶವನ್ನೂ ಪಸರಿಸಲು ಕಡಿಮೆಮಾಡುತ್ತಿರಲಿಲ್ಲ. ಇಂದು ಹುಣ್ಣಿಮೆಯು ಬೆಳದಿಂಗಳು ಹಿಟ್ಟುಚೆಲ್ಲಿದಂತೆ ಹರಡಿಕೊಂಡಿತ್ತು. ಗುಡಿಸಲಿನ ಮುಂಭಾಗದಲ್ಲಿದ್ದ ಒಂದು ಮಲ್ಲಿಗೆಯ ಕಂಟಿಯ ಅಡಿಯಲ್ಲಿ ಪುಂಡಲೀಕನೂ ಗೌರಿಯೂ ಮಾತಾಡುತ್ತ ಕುಳಿತಿದ್ದರು. ಗೌರಿಯು ಮಲ್ಲಿಗೆಯ ಮೊಗ್ಗುಗಳ ಮಾಲೆಯನ್ನು ಹೆಣೆಯುತ್ತಿದ್ದಳು.

'' ಗೌರೀ, ಮಬ್ಬಿನಿಂದ ಎಚ್ಚರಾಗು ಬುಕ್ಕರಾಯನ ಹುಚ್ಚು ಬಿಟ್ಟುಬಿಡು ಅವನು ಯವನರನ್ನು ಸೋಲಿಸಿ ಜಯಶೀಲನಾದುದುರಿಂದ ನಿನ್ನನ್ನು ಮರತಿರುವನು ಅವನ ಪಟ್ಟದರಸಿಯರಲ್ಲಿ ನಿನ್ನನ್ನು ಕೇಳುವವರಾರು? ರಾಜ್ಯಮದವು ಬಲು ಬಿಗಿಯಾಗಿರುವದು ಸುಮ್ಮನೆ ಬಿಸಿಲುಗುದುರೆಯ ಬೆನ್ನುಹತ್ತಿ ಮೋಸ ಹೋಗಬೇಡ. ಅವನ ಹಂಬಲವನ್ನು ಹರಿದು ಬಿಡು

'' ಪುಂಡಲೀಕಾ, ನಾಲಿಗೆಯನ್ನು ಹರೀ ಬಿಡಬೇಡ. ಬುಕ್ಕರಾಯರ ರಾಣೀವಾಸದಲ್ಲಿ ಮೂಲಿಗಸದಂತೆ ನಾನು ಮೂಲೆಗುಂಪಾದರೂ ನನಗೆ ಸಂತೋಷವೇ! ನೀನು ಸುಮ್ಮನೆ ಆ ಪುಣ್ಯಾತ್ಮನನ್ನು ಜರಿಯಬೇಡ.

ಈ ಬಗೆಯ ಮಾತುಗಳು ನಡೆದಿರಲು ನರೆಗೂದಲು ಗಳಿಂದ ಒಪ್ಪುವ ಗಡ್ಡ, ಮೀಶೆ, ಜಡೆಗಳುಳ್ಳ ಒಬ್ಬ ವೃದ್ಧನು ಕಟ್ಟೆಗೆಯನ್ನೂರುತ್ತ ಅಲ್ಲಿಗೆ ಬಂದನು. ಅವನ ಎಡಗೈಯಲ್ಲಿ ಒಂದು ಲಕ್ಕೋಟೆ ಇತ್ತು. ಗೌರಿಯು—'ತಾವು ಯಾರು! ಎಲ್ಲಿಂದ ಬಂದಿರಿ? ಎಂದು ಪ್ರಶ್ನೆಮಾಡಿದಳು. ಅದಕ್ಕೆ ವೃದ್ಧನು ನಾನು ಬುಕ್ಕರಾಯರ ಸೇವಕನು. ಗೌರಮ್ಮ ನವರು ತಾವೇಯೋ? ರಾಯರು ಈ ಲಕ್ಕೋಟೆ ಯನ್ನು ತಮಗೆ ಮುಟ್ಟಿಸಲು ಆಜ್ಞಾಪಿಸಿರುವರು' ಎಂದು ನುಡಿದು ಲಕ್ಕೋಟೆಯನ್ನು ಗೌರಿಯ ಕೈಗೆ ಕೊಟ್ಟನು ಗೌರಿಯು ಕಾಗದವನ್ನು ಓದಹತ್ತಿದಳು. ಅವಳ ಮೋರೆಯು ಕಳೆಗುಂದಹತ್ತಿತು ಅವಳು ಆ ಕಾಗದವನ್ನೋದಿ ಪುಂಡಲೀಕನ ಕೈಯಲ್ಲಿ ಕೊಟ್ಟಳು ಅದನ್ನೋದಿ ಅವನ ಮುಖವು ಅರಳಿತು ಅವನು— 'ಗೌರಿ, ಬುಕ್ಕರಾಯರು ಈ ಗಡವನ್ನೂ ಸುತ್ತಲಿನ ಐದು ಗಾವುದ ಭೂಮಿಯನ್ನೂ ತಿರವು ಎಂದು ದಯ ಪಾಲಿಸಿ, ನನ್ನನ್ನು ಮದುವೆಯಾಗಿ ಸುಖದಿಂದಿರಲು ಬೋಧಿಸಿ ಬರೆದಿರುವರು. ನಮ್ಮೀರ್ವರನ್ನೂ ಆಶೀರ್ವ ದಿಸಿರುವರು. ಇನ್ನು ನಿನ್ನಲ್ಲಿಟ್ಟ ಅವರ ಪ್ರೇಮವು ಉಳಿಯದೆ, ಅಳಿದು ಹೋಗಿದೆ ಎಂದು ಹೇಳಲು ಬಾಧಕವೇನು?"

ಗೌರಿಯು—'ಪುಂಡಲೀಕಾ, ಜೋಕೆ! ಬಾಯಿಗೆ ಬಂದಂತೆ ಬೊಗಳಬೇಡ ನಾನು ಇದೇ ಸ್ಥಳದಲ್ಲಿ ಅಂತಃ ಸ್ಫೂರ್ತಿಯಿಂದ ಬುಕ್ಕರಾಯರಿಗೆ ಪತ್ನಿಯೆಂದು ವಚನ ಕೊಟ್ಟಿದ್ದೇನೆ. ಅದು ಎಂದೆಂದಿಗೂ ಅಸತ್ಯವಾಗದು. ಪ್ರೇಮರಜ್ಜುವಿನಿಂದ ಬಿಗಿಯಲ್ಪಟ್ಟ ನಮ್ಮೀರ್ವರ ವಿವಾಹವು ಮುರಿ ಯುವದುಂಟೇ? ರಾಯರು ನನ್ನನ್ನು ತಿರಸ್ಕರಿಸಲಿ, ಹೊರದೂಡಲಿ, ಕೊಲ್ಲಲಿ, ನಾನು ಮಾತ್ರ ವಚನ ಗೇಡಿಯಾಗಲಾರೆ ಬೈರಾಗಿಣಿಯಾಗಿ ಅವರ ನಾಮ ಜಪ ಮಾಡುತ್ತ ದಿನಗಳೆಯುವೆ.' ಎಂದು ನುಡಿದು ಪುಂಡಲೀಕನ ಕೈಯೊಳಗಿನ ಲಕ್ಕೋಟೆಯನ್ನು ಕಸಿದು ಕೊಂಡು ಮುದುಕನನ್ನು ದುರು ದುರು ನೋಡುತ್ತ 'ಯುದ್ಧದಲ್ಲಿ ಶೌರ್ಯ ತೋರಿಸಿದವರಿಗೆ ಈ ಗಡವನ್ನು ಇನಾಮಾಗಿ ಕೊಡಿರಿ. ಅದರಲ್ಲಿ ನನಗೆ ಆಶೆಯಿಲ್ಲ.' ಎಂದು ನುಡಿಯುತ್ತ ಲಕ್ಕೋಟೆಯನ್ನು ಚೂರು ಚೂರು ಮಾಡಿ, ಬಿಸಾಡಿ ನಡದೊಳ ಗಿಂದೊಂದು ಕಿರಿಗತ್ತಿಯನ್ನು ಹೋದೆಗೆದಳು.

ಅದನ್ನು ಕಂಡು ಪುಂಡಲೀಕನು ಬೆದರಿ ಹಿಂದಕ್ಕೆ ಸರಿದನು. ಗೌರಾಂಬೆಯು ಕಿರಿಗತ್ತಿಯಿಂದ ಇರಿದುಕೊಳ್ಳತಕ್ಕವಳು, ಅಷ್ಟರಲ್ಲಿ ಆ ವೃದ್ಧ ಸೇವ ಕನು ಗೌರಿಯ ಕೈಯನ್ನು ಬಲವಾಗಿ ಹಿಡಿದು ಕಿರಿಗತ್ತಿ ಯನ್ನು ಕಸಿದುಕೊಂಡನು. ಗೌರಿಯು ಸಿಟ್ಟಿನಿ ಅಳತೆ ಗೆಟ್ಟಿತು. ಅವಳು ಸೇವಕನಿಗೆ 'ಮುದಿಮಂಗಾ, ಬುಕ್ಕ ರಾಯನ ಹೆಂಡತಿಯ ಕೈಹಿಡಿದು ಜಡೆಯನ್ನು ಅವ ಮಾನಿಸುವೆಯಾ? ನಾಚಿಕೆಯನ್ನೆಲ್ಲಿಟ್ಟಿರುವೆ?' ಎಂದು ನುಡಿದು ಮೇಲಕ್ಕೆ ನೋಡಲು ಸೋಜಿಗದ ಸುರಿ ಮಳೆಯಾಯಿತು. ವೃದ್ಧ ಸೇವಕನ ರೂಪಾಂತರವು ಬುಕ್ಕರಾಯನಲ್ಲಾಗಿತ್ತು. ಗಡ್ಡ, ಮೀಶೆ, ಜಡೆಗಳೆಲ್ಲ ಮಾಯವಾಗಿ ವೀರವೆಷದಿಂದೊಪ್ಪುವ ಬುಕ್ಕ ರಾಯನು ಕಂಗೊಳಿಸುತ್ತಿದ್ದನು.

ಗೌರಿಯೂ ಪುಂಡಲೀಕನೂ ಬೆಚ್ಚಿಬಿದ್ದರು. ಗೌರಿ ಯ ಬಾಯಿಂದ—'ನನ್ನ ಪ್ರಾಣಪದಕ, ಪ್ರಾಣ ವಲ್ಲಭ, ಬುಕ್ಕಪ್ರಭುಗಳಿವರು! ಎಂಬ ಶಬ್ದಗಳು ಉಚ್ಚ ಸ್ವರದಿಂದ ಹೊರಬಿದ್ದವು ಅವಳು ಮೈ ಮರೆತು ಭೂಮಿಗೆ ಬೀಳುತ್ತಿರಲು ಬುಕ್ಕರಾಯನು ಅವಳನ್ನು ತನ್ನ ಬಾಹುಪಾಶದಲ್ಲಿ ಬಿಗಿದಪ್ಪಿಕೊಂಡನು. ಪುಂಡಲೀಕನು ಕಲ್ಲುಗೋಂಬೆಯಂತೆ ನಿಂತುಕೊಂಡನು.

೭

ಇಂದು ಕರ್ನಾಟಕ ಸಾಮ್ರಾಜ್ಯಸ್ಥಾನವಾದ ವಿಜಯನಗರದಲ್ಲಿ ನೋಡಿದತ್ತೆಲ್ಲ ಆನಂದವೇ ಇಡಗಿ ಕೊಂಡಿತ್ತು. ಗೆಲವುಗೊಂಡ ಹಿಂದುಗಳು ಬುಕ್ಕ ಪ್ರಭುಗಳ ಕಲ್ಯಾಣ ಸಮಾರಂಭಕ್ಕಾಗಿ ಅರಮನೆ ಯಲ್ಲಿ ಸೇರತೊಡಗಿದ್ದರು ವಿದ್ಯಾರಣ್ಯರನ್ನೊಡ ಗೂಡಿ ಬುಕ್ಕರಾಯನು ಬೋರ್ಜಗಲಿಯಮೇಲೆ ನಿಂತು ಕೊಂಡಿದ್ದನು. 'ಸುಮುಹೂರ್ತಸಾವಧಾನ' ಎಂಬ ಧ್ವನಿಯು ಬಗೆಬಗೆಯ ವಾದ್ಯಗಳ ಹಾಗೂ ತೋಪು ತುಬಾಕಿಗಳ ಸಪ್ಪಳದಲ್ಲಿ ಕೂಡಿ, ಪಟ್ಟಣಿಗರ ಜಯ ಘೋಷದಿಂದ ಬೆಳೆದು ಆಕಮಂತ ಭಾಗವನ್ನೆಲ್ಲ ತುಂಬಿಬಿಟ್ಟಿತ. ನಾಗರಿಕರೆಲ್ಲರೂ ಆನಂದದಿಂದ ಅಭಿ ವಾದನಗೈದರು ಹಾಗೂ ಮತ್ತೊಮ್ಮೆ ಬುಕ್ಕರಾಯ ರಿಗೆ ಜಯವಾಗಲಿ. ಭುವನೇಶ್ವರಿಯು ದಂಪತಿಗಳಿಗೆ ದೀರ್ಘಾಯುರಾರೋಗ್ಯವನ್ನು ದಯಪಾಲಿಸಲಿ. ಕರ್ನಾಟಕ ಸಾಮ್ರಾಜ್ಯವು ಚಿರಕಾಲ ಬಾಳಲಿ. ಎಂದು ಜಯಘೋಷ ಮಾಡಿದರು

ಜಯ ಭುವನೇಶ್ವರಿ!!!

---

# ವಿಜಯನಗರದ ಸ್ಮರಣೆ.

## ( ನೆನಪು )

( ಬರೆದವರು:— ಪಂಡಿತ ಶಂಭುಶರ್ಮರು, ಪುತ್ತೂರು. )

ಉತ್ಪಲ ಮಾಲೆ ವೃತ್ತ.

ವಾಲಿ ಬಲೋ[೧]ರ್ಮಿಮಾಲಿ ಗುಡುಗಾಡಿದ ವೀರವಿಹಾರಭೂಮಿ ಪ ॥
ಮ್ಪಾಲಯುಣಾಮುಪಾದಪರಿಧಾವನಪೂತಸುತೀರ್ಥಭೂಮಿ ಪು ॥
ಣ್ಯಾಲಯೆ ಹೇಮವೃಷ್ಟಿಗರೆದಾದ ಸುವರ್ಣಸುಮಾಂಕಭೂಮಿ ಹೊ ।
ನ್ನಾ[೨]ಲುಲಿತಾರ್ಯಧರ್ಮಪರಿಪಾಲನ ಭೂಮಿ ಯಿದೀಗ ಹಂಪೆಯುಂ ॥ ೧ ॥

ಮಾಲಿನೀ.

ವಿಜಯನಗರವಾಗಿತ್ತಂದು ಕರ್ಣಾಟ ಪೃಥ್ವೀ ।
ಭುಜರ ವಿಜಯಲಕ್ಷ್ಮೀವಾಸದುತ್ಫು[೩]ಲ್ಲ ಹೇಮಾಂ ॥
ಬುಜವು ಯಶದ ಪೆಂಪನ್ನಾಂತ ಕಂಪನ್ನು ಸುತ್ತೂ ।
ತ್ರಿಜಗದೆಡೆಗೆ ಹೇರುತ್ತೊಪ್ಪಲೀ ಹಂಪೆಯಲ್ಲಿ. ॥ ೨ ॥

ಚಂಪಕ ಮಾಲೆ

ವರುಷಗಳಾರುನೂರು ಸ[೪]ರಿಯಾದುವು ಕನ್ನಡನಾಡಸ್ವ[೫]ಪು ವೈ ।
ಭರಿಸಿದುದೆಂಬಹಾಗೆ ಮೆರೆವುನ್ನತ ಕೇಸರಿ ಪೀಠದಲ್ಲಿ ಬು ॥
ಕ್ಕರಸನು ನಾ[೬]ಲ್ಕುಕೈಯ್ಯವನು ಸೋದರರಿಂದೆನಲೇರಿ ನಾವು ತತ್ ।
ಸ್ಮರಣೆಯ ಹಬ್ಬವನ್ನೆಸಗಿ ಧನ್ಯತೆಹೊಂದುವುದಿಂದು ಚೆಂದವು ॥ ೩ ॥

ಚಂಪಕ ಮಾಲೆ.

ತುರುಕರು ಭಾರತೀಯರಸು[೭]ವಾದ ಸುಧರ್ಮಗಳನ್ನು ಮಾನವ ।
ನ್ನರಸುಗಳನ್ನು ದೇಗುಲಗಳನ್ನಳಿಸುತ್ತದೊ ಕನ್ನಡಕ್ಕೆ ಬಂ ॥
ದೆರಗಿದರೆಂದು ನೊಂದು ಹೊಸಗನ್ನಡಗದ್ದುಗೆಗೇರಿ ಹೂಣರ ।
ನ್ನಿರಿದನು ಕನ್ನಡಕ್ಕೆ ಗೆಲವಿತ್ತನು ಕೆಚ್ಚಿದೆ ಗಂಡು ಬುಕ್ಕನು ॥ ೪ ॥

---

(೧) ಬಲಸಮುದ್ರನು. [೨] ಆಲುಲಿತ = ಅಸ್ತವ್ಯಸ್ತಮಾಡಲ್ಪಟ್ಟ. (೩) ಉತ್ಫುಲ್ಲ=ಅರಳಿದ. [೪] ಮುಗಿದುವು. (೫) ಪುಣ್ಯವು. [೬] ಚತುರ್ಭುಜನು-ಸಂಗಮನ ಐವರು ಮಕ್ಕಳು ಬುಕ್ಕಾದಿಗಳು. ನಾಲ್ಕು ಸೋದರರು ಬುಕ್ಕನ ನಾಲ್ಕು ಕೈಗಳೆಂಬ ಊಹೆ. (೭) ಅಸುವಾದ= ಪ್ರಾಣದಂತೆ ಇರುವ.

ಮಹಾಸ್ರಗ್ಧರೆ. ನೆನೆಯಣ್ಣಾ! ನಮ್ಮದಾದಾ ವಿಜಯನಗರದಲ್ಲಿದ್ದ ಕರ್ನಾಟಸಿಹ್ಮಾ ।
ಸನವನ್ನಾ ಮಾಧವಾಚಾರ್ಯರ ಗುರು ಸಚಿವಸ್ಥಾನವೈಶಿಷ್ಟ್ಯವನ್ನಂ ॥
ದಿನ ಹಿಂದೂ ದೇಶಧರ್ಮೋದ್ಧರಣ ನಿಪುಣನಾ ವೀರಬುಕ್ಕಣ್ಣಭೂಪಾ ।
ಲನ ವಿದ್ಯಾರಣ್ಯಕಾರುಣ್ಯವಿಶದಯಶವನ್ನಿಂದು ಕೈ ನಮ್ಮದಿಷ್ಟೆ. ॥೫॥

ಮಹಾಸ್ರಗ್ಧರೆ ಭರತೋರ್ವೀಭಾಗವೆಲ್ಲಾ ಮುಸಲರಸರ ಕೈಸೇರಿದಂದಾರ್ಯಧರ್ಮ ।
ಕ್ಕಿರ ಲಿಂಬಿಲ್ಲಾಗಿ ಹಿಂದೂ ಜನಗಳ ಧನಮಾನಕ್ಕೆ ಕಾಪಿಲ್ಲದಂತಾ ॥
ಗಿರಲಿಂದಿಂದಾರುನೂರಬ್ದಗಳ ಮೊದಲು ಕರ್ನಾಟಸಿಂಹಾಸನಕ್ಕಾ ।
ಸರ ವಿದ್ಯಾರಣ್ಯರಿಂದೀ ವಿಜಯನಗರ ವಂದಾದುದು ಸ್ಮರ್ಯವಿಂದು ॥೬॥

ಸ್ರಗ್ಧರೆ ಎತ್ತೋ ಹೋಗಿತ್ತು ಹಿಂದೂ ಜನರಿಸೆಯೊಳಗಿಂದಾಗಲೇ ತಾನೆಯಾ ಸ್ವಾ ।
ಯತ್ತಪ್ರಾಜ್ಯಾರ್ಯ ಸಾಮ್ರಾಜ್ಯದ ರಚಯ ಸಂಕಲ್ಪವಾಪತ್ತು ಮುತ್ತಿ ॥
ಟ್ಟಿತ್ತಾ ಕಗ್ಗತ್ತಲಲ್ಲೇ ವಿಜಯನಗರದಲ್ಲೆದ್ದು ಮೂಡಿತ್ತು ಕರ್ನಾ ।
ಟೋತ್ತುಂಗ ಸ್ವರ್ಣಸಿಹ್ಮಾಸನ ದಿನಮಣಿಯಾ ಮಾಧವಾಚಾರ್ಯರಿಂದ ॥ ೭ ॥

ಚಂಪಕಮಾಲೆ. ಕರಗದು ಯಾವ ಕನ್ನಡಿಗ ಗಂಡಿನ ಕಲ್ಲೆದೆ? ಮುಂಚೆ ಕನ್ನಡ ।
ಕ್ಕರ ಮನೆಯಾದ ಹಂಪೆಯಿದೊ ಹಾಳೆಡೆಕೊಂಪೆಯಿದಾವಿಗಾದುದೊ ॥
ದರೆ ಮುರಿದಿದ್ದ ದೇಗುಲಗಳಿಂದಗಳಿಂದಳಿದಾಳದ ಬಾವಿಯಿಂದ ಹೆ!
ಮ್ಮರಗಳ ಕಾಡಿನಿಂದ ಸಿಡುಕೇರಿಯ ದಾರಿಯ ರೂಪಿನಿಂದಲೂ ॥ ೮ ॥

ಶಾರ್ದೂಲ ವಿಕ್ರೀಡಿತ. ಕರ್ನಾಟಾಂಬೆಯ ಕರ್ಣಭೂಷಣವಿದೆಂಬಂತಿದ್ದ ಕರ್ನಾಟ ಸೌ ।
ವರ್ಣ ಪ್ರೋಜ್ವಲಸಿಹ್ಮಪೀಠವಿನನಂತಾ ಮಾಧವಾಚಾರ್ಯಸಂ ॥
ಪೂರ್ಣಾನುಗ್ರಹದಿಂದ ಕಂಗೊಳಿಸಿತ್ತೈ ಮುನ್ನೂರಹತ್ತಬ್ದವೀ ।
ಕರ್ನಾಟಸ್ಥರ ಭಾಗ್ಯದೊಂದಿಗದು ಕಂತಿತ್ತಿಂದು ಹಾ! ದೈವವೇ ॥ ೯ ॥

---

(೮) ಕೈನಮ್ಮದುಇಷ್ಟೆ = ಇಂದು ನಮ್ಮ ಕೈಯಿಂದ ಆಗುವದು ಇಷ್ಟೇ ಸಾಧ್ಯವು. (೯) ಕಾಪು = ರಕ್ಷಣೆ. (೧೦) ಆಸರೆ = ಆಶ್ರಯವು. [೧೧] ಪ್ರಾಜ್ಯ = ಪ್ರಭೂತ. [೧೨] ಇನನಂತೆ = ಸೂರ್ಯನಂತೆ.

# ವಿಜಯನಗರದ ಅರಸರ ಆಳಿಕೆಯ ಕಾಲದಲ್ಲಿ ಕರ್ನಾಟಕ ಸಾಹಿತ್ಯದ ಬೆಳವಣಿಗೆ.

[ ಲೇಖಕ:—ವಿದ್ವಾನ್; ಕೆ. ವಿ. ಕೃಷ್ಣಭಟ್ಟರು, ಮಂಗಳೂರು ]

ಸಂಸ್ಕೃತದಲ್ಲಿ 'ರಾಜಾ ಕಾಲಸ್ಯ ಕಾರಣಂ' ಎಂಬೊಂದು ಮಾತಿದೆ. ರಾಷ್ಟ್ರಕ್ಕೂ ಪ್ರಜೆಗಳಿಗೂ ಆಳಿಗಾಲವಾಗಲಿ, ಉಳಿಗಾಲವಾಗಲಿ, ಸುಭಿಕ್ಷವಾಗಲಿ, ದುರ್ಭಿಕ್ಷವಾಗಲಿ ಉಂಟಾಗುತ್ತಿರುವುದು ಅರಸರ ಪ್ರಾಬಲ್ಯದಿಂದಾಗಲಿ, ದೌರ್ಬಲ್ಯದಿಂದಾಗಲಿ ಆಗಿದೆಯೆಂಬುದೇ ಈ ಮಾತಿನ ವ್ಯಂಗ್ಯಾರ್ಥವಾಗಿದೆ. ಅರಸನು ಧರ್ಮಿಷ್ಠನೂ, ಪ್ರಜಾಭ್ಯುದಯಾಕಾಂಕ್ಷಿಯೂ, ವಿದ್ಯಾಪಕ್ಷಪಾತಿಯೂ ಆಗಿದ್ದರೆ, ಆತನ ಪ್ರಜೆಗಳೂ ಕೂಡ ಧರ್ಮಾವಲಂಬಿಗಳೂ ವಿದ್ಯಾವಿಲಾಸಿಗಳೂ ಆಗಿದ್ದು ಆತನ ಆಳಿಕೆಯ ಕಾಲವೆಲ್ಲಾ ಸುಖಮಯವಾಗಿರುತ್ತದೆ; ಹಾಗಲ್ಲದೆ, ಆತನು ಧರ್ಮವಿಮುಖನೂ ಪ್ರಜಾಪೀಡಕನೂ ವಿದ್ಯಾವಿದೂರನೂ ಆಗಿದ್ದರೆ, ಆತನ ಪ್ರಜೆಗಳೂ ಸಹ ಧರ್ಮಪ್ರವರ್ತನೆಯಲ್ಲಿ ಉದಾಸೀನರೂ ವಿದ್ಯಾಭ್ಯುದಯಲ್ಲಿ ನಿರುತ್ಸಾಹಿಗಳೂ ಅನೇಕ ಸಂಕಷ್ಟಗಳಿಗೆ ಆಗಾಗ ಈಡಾಗುವವರೂ ಆಗಿದ್ದು, ದುಷ್ಪ್ರಭುವಾದಾತನ ಆಳಿಕೆಯ ಕಾಲವೆಲ್ಲಾ ದುಃಖಮಯವಾಗುವುದಕ್ಕೆ ಅವಕಾಶವು ಹೆಚ್ಚು ಇದಕ್ಕೆ ಇತಿಹಾಸದಲ್ಲಿ ಅನೇಕ ನಿದರ್ಶನಗಳು ಸಿಕ್ಕುತ್ತವೆ. ಹಲವು ಮಂದಿ ರಾಜರುಗಳ ಆಯುಷ್ಯವೆಲ್ಲಾ ನೆರೆಹೊರೆಯ ಅರಸರೊಡನೆ ಕತ್ತಿಕಟ್ಟುವದರಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿಕೊಳ್ಳುವುದರಲ್ಲಿಯೂ ಕಳೆಯುವದುಂಟು; ಕೆಲಮಂದಿ ಭೂಪರು ಅರಸುತನವೆಂಬುದು ದೈವಾಯತ್ತವಾದ ತಮ್ಮದೊಂದು ಹಕ್ಕು ಎಂದು ತಿಳಿದು ಆಳಿಕೆಯ ಕಾಲವನ್ನೆಲ್ಲಾ ಸ್ವಭೋಗ ವಿಲಾಸಗಳಲ್ಲಿ ಕಳೆಯುವರು; ಇನ್ನು ಕೆಲಮಂದಿ ನರಪತಿಗಳು 'ನಾವಿಷ್ಣುಃ ಪೃಥಿವೀಪತಿಃ' ಎಂಬ ಮಾತು ತಮಗಾಗಿಯೇ ಉಂಟಾದುದೆಂದು ಭಾವಿಸುತ್ತ ತಾವು ಭಗವಂತನ ಅವತಾರವೆಂದೂ ಪ್ರಜೆಗಳನ್ನು ಮನಬಂದಂತೆ ನಡೆಯಿಸುವುದು ತಮ್ಮ ಅಧಿಕಾರದಲ್ಲಿಯ ಒಂದು ಧರ್ಮವೆಂದೂ ಗರ್ವಪಡುತ್ತ ಪ್ರಜೆಗಳ ಸುಖಕ್ಕೆ ಒಂದು ತಡೆಗಟ್ಟಾಗಿ ಕಾಲವನ್ನು ನೂಕುವರು. 'ರಾಜಾ ಪ್ರಕೃತಿರಂಜನಾತ್' ಎಂಬಂತೆ ಪ್ರಜೆಗಳ ಕ್ಷೇಮವನ್ನೇ ಹೆಗ್ಗುರಿಯಾಗಿಟ್ಟುಕೊಂಡು ರಾಷ್ಟ್ರದಲ್ಲಿ ಧರ್ಮಪ್ರವರ್ತನೆಯೂ ವಿದ್ಯಾಭ್ಯುದಯವೂ ಉಂಟಾಗುವಂತೆ ಆವ ರಾಜನು ಮನಃಪೂರ್ವಕವಾಗಿ ಪ್ರಯತ್ನಪಡುತ್ತ ತನ್ನಾಳಿಕೆಯ ಕಾಲವನ್ನು ಸುಖಮಯವಾಗಿ ಮಾಡುವನೋ ಆ ರಾಜನ ಕೀರ್ತಿಯು ಆಚಂದ್ರಾರ್ಕವಾಗಿ ನಿಲ್ಲುವದೆಂಬದಕ್ಕೆ ನಮ್ಮ ಭಾರತೇತಿಹಾಸದಲ್ಲಿ ಅನೇಕ ನಿದರ್ಶನಗಳುಂಟು. ಕೆಲವು ಸಂದರ್ಭಗಳಲ್ಲಿ, ಒಬ್ಬ ಅರಸನೇ ಯೇಕೆ, ಪರಂಪರೆಯಾಗಿ ಹಲಮಂದಿ ಅರಸರು ತಮ್ಮ ರಾಜ್ಯವನ್ನು ಸದ್ಧರ್ಮದಿಂದಾಳುತ್ತ ಒಂದೆರಡು ಶತಮಾನಗಳವರೆಗೆ ಬಾಳಿದುದೂ ಉಂಟು. ಇಂತಹ ಕಾಲದಲ್ಲಿ ರಾಷ್ಟ್ರದಲ್ಲಿ ಶಾಂತಿ ಸಮಾಧಾನಗಳು ನೆಲಸಿ, ಪ್ರಜೆಗಳು ಧರ್ಮಪ್ರವರ್ತಕರಾಗುವುದಕ್ಕೂ ವಿದ್ಯಾಪ್ರೇಮಿಗಳಾಗುವುದಕ್ಕೂ ಅನುಕೂಲತೆಗಳು ಹೆಚ್ಚು. ಅರಸರು ವಿದ್ಯಾಪಕ್ಷಪಾತಿಗಳಾಗಿದ್ದರಂತೂ ಕೇಳುವುದೇ ಬೇಡ. ಪ್ರಜಾನಿಕರ-ಮಧ್ಯದಲ್ಲಿ ವಿದ್ವಾಂಸರೂ ಕವಿಗಳೂ ಹೆಚ್ಚತೊಡಗಿ, ಜನತೆಯಲ್ಲಿ ಸಾಹಿತ್ಯಾಭಿರುಚಿಯೂ ಕಲಾಪ್ರೇಮವೂ ನೆಲೆ ನಿಲ್ಲುತ್ತವೆ. ಹೀಗೆ ಜನತೆಯು ಧರ್ಮಪ್ರವರ್ತನೆಗೂ ಸಾಹಿತ್ಯ ಕಲೆಗಳ ಸೇವೆಗೂ ಮನಸ್ಸುಕೊಡಬೇಕಾದರೆ, ಮುಖ್ಯವಾಗಿ ನಾಲ್ಕು ಅನುಕೂಲತೆಗಳು ಇರಬೇಕಾಗುವುವು:—[೧] ರಾಷ್ಟ್ರದಲ್ಲಿ ಆಗಾಗ ಯುದ್ಧಗಳು ನಡೆಯದೆ, ಸುಭಿಕ್ಷವೂ ಶಾಂತಿಯೂ ನೆಲೆಗೊಂಡಿರಬೇಕು. (೨) ರಾಜನು ವಿದ್ಯಾಪಕ್ಷಪಾತಿಯಾಗಿದ್ದು ಪ್ರಜೆಗಳಲ್ಲಿ ವಿದ್ಯಾಪ್ರಸಾರವನ್ನೂ ಸಾಹಿತ್ಯಪ್ರಚಾರವನ್ನೂ ಮಾಡಿಸುವದಕ್ಕೆ ಅನುಕೂಲಿಸುವಂತೆ ಧನವ್ಯಯವನ್ನು ಮಾಡತಕ್ಕವನಾಗಿರಬೇಕು. (೩) ರಾಜನು ವಿದ್ವಾಂಸರಿಗೂ ಕವಿಗಳಿಗೂ ಆಶ್ರಯವನ್ನು ಕೊಡತಕ್ಕವನಾಗಿರಬೇಕು. [೪) ಪ್ರಜೆಗಳಲ್ಲಿ ಸಹೃದಯರು ಹೆಚ್ಚು ಮಂದಿಯಿದ್ದು ಕವಿಗಳಿಗೆ ಪ್ರೋತ್ಸಾಹವನ್ನು ಕೊಡವವರಾಗಿರಬೇಕು.

**ವಿದ್ವಾನ್ ಕೆ. ವ್ಹಿ. ಕೃಷ್ಣಭಟ್ಟರು.**

ಮಂಗಳೂರು



**ಶ್ರೀ ಬಿ. ಕಲ್ಯಾಣಶರ್ಮರು**

ಬೆಳಗಾವಿ.



**ಶ್ರೀ. ಕುಲಕರ್ಣಿ ಪ್ರಲ್ಹಾದರಾಯರು**

ಬೆಳಗಾವಿ.



**ಶ್ರೀ. ಜೋಗ ವಿಶ್ವನಾಥರಾಯರು**

ಬಿ. ಎ. ಎಲ್ಎಲ್. ಬಿ. ಎಂ. ಎಲ್. ಸಿ. ಧಾರವಾಡ



ಭೂಲೋಕದ ಇತಿಹಾಸದಲ್ಲಿ ಸಾಹಿತ್ಯದ ಅಭ್ಯುದಯವು ಮುಖ್ಯವಾಗಿ ಉಂಟಾದ ಸಂದರ್ಭಗಳು ಮೇಲೆ ಹೇಳಿದ ನಾಲ್ಕು ಅನುಕೂಲತೆಗಳೂ ಸ್ವಲ್ಪ ಹೆಚ್ಚುಕಡಿಮೆ ಒಂದೆಡೆ ಸೇರಿದ್ದ ರಾಜರ ಅಥವಾ ರಾಜವಂಶಾವಳಿಗಳ ಕಾಲಗಳಲ್ಲಿ ಮಾತ್ರವೇ ಆಗಿದ್ದುವೆಂಬುದಕ್ಕೆ ಅನೇಕ ನಿದರ್ಶನಗಳು ದೊರಕುತ್ತವೆ. ಗ್ರೀಕ ಇತಿಹಾಸದಲ್ಲಿ ಅಥೆನ್ಸ್ ಮತ್ತು ಅಲೆಗ್ಸಾಂಡ್ರಿಯಾ ರಾಜ್ಯಗಳ ಉಚ್ಛ್ರಾಯಕಾಲಗಳಲ್ಲಿ ವಿದ್ವಾಂಸರಿಗೂ ಕಲಾಕೋವಿದರಿಗೂ ಕವಿಗಳಿಗೂ ರಾಜಾಶ್ರಯವು ವಿಶೇಷವಾಗಿ ದೊರೆಕುದರಿಂದ, ಇಂದಿನ ಪಾಶ್ಚಾತ್ಯ ಭೌತಿಕ ಜ್ಞಾನಕ್ಕೆ ಮೂಲಕಾರಣವೆಂದೆನಿಸುವ ವಿಜ್ಞಾನಶಾಸ್ತ್ರವೂ ಸಾಹಿತ್ಯಕ್ಕೆ ಒಳಪಟ್ಟ ಅನೇಕ ಗ್ರಂಥಗಳೂ ರಚಿತವಾಗಿ ಪ್ರಚಾರಕ್ಕೆ ಬಂದುವು 'ಟಾಲೆಮಿ' ಅರಸರ ಆಳಿಕೆಯಲ್ಲಿ ಅಲೆಗ್ಸಾಂಡ್ರಿಯಾ ರಾಜಧಾನಿಯಲ್ಲಿ ಸ್ಥಾಪಿತವಾದ ಪುಸ್ತಕ ಭಂಡಾರ ಮತ್ತು ಅಪೂರ್ವವಸ್ತುಭಂಡಾರ ಇವುಗಳ ಚರಿತ್ರೆಯನ್ನು ಓದಿದರೆ ಈ ವಿಷಯವು ಮನದಟ್ಟಾಗುವುದು. 'ಪ್ರಪಂಚದ ಸಂಕ್ಷಿಪ್ತ ಇತಿಹಾಸ' (A short History of the World) ಎಂಬ ಪುಸ್ತಕದಲ್ಲಿ ಹೆಚ್. ಜಿ ವೆಲ್ಸ ಮಹಾಶಯರು ಹೀಗೆಂದು ಬರೆದಿರುತ್ತಾರೆ —"For a generation or so during the reigns of Ptolemy I and Ptolemy II there was such a blaze of knowledge and discovery as the world was not to see again until the sixteenth century. A.D............. Ptolemy I not only sought in the most modern spirit to organise the finding of fresh knowledge. He tried also to set up an encyclopaedic store house of wisdom in the Library of Alexandria. It was not simply a store house, it was also a book copying and book-selling organisation. A great many of copyists was set to work perpetually multiplying copies of books" (Page. 97) ಆಂಗ್ಲಸಾಹಿತ್ಯದ ಅತ್ಯುಚ್ಛ್ರಾಯ ಕಾಲವು ವಿಕ್ಟೋರಿಯಾ ಮಹಾರಾಣಿಯ ಆಳಿಕೆಯ ಕಾಲವೆಂದು ತೋರುವುದು. ಅದಕ್ಕಾಗಿಯೇ, ಆಂಗ್ಲ ಸಾಹಿತ್ಯ ಚರಿತ್ರೆಯಲ್ಲಿ "ವಿಕ್ಟೋರಿಯಾ ಯುಗ" (Victorian Age) ಎಂಬದೊಂದು ಕಾಲವಿಭಾಗವು ಪ್ರತ್ಯೇಕವಾಗಿ ಮಾಡಲ್ಪಟ್ಟಿದೆ. ನಮ್ಮ ಭಾರತದ ಇತಿಹಾಸವನ್ನೂ ಆಮೂಲಾಗ್ರವಾಗಿ ಪರಿಶೋಧಿಸಿದರೆ, ಸಂಸ್ಕೃತ ಸಾಹಿತ್ಯವು ಅಲ್ಲಲ್ಲಿ ವಿದ್ವಾಂಸರಿಗೆ ಆಶ್ರಯದಾತರಾದ ಹಲ ಮಂದಿ ರಾಜರುಗಳ ಆಳಿಕೆಗಳಲ್ಲಿ ವೃದ್ಧಿಗೊಳ್ಳುತ್ತ ಬಂತೆಂದು ಹೇಳಬೇಕಾಗುವುದು. ಅನೇಕ ರಾಜರುಗಳು ತಾವೇ ಸ್ವಯಂ ಕವಿಗಳಾಗಿದ್ದು ಉತ್ತಮಕಾವ್ಯಗಳನ್ನು ರಚಿಸಿದರು. ಹಿಂದೂ ದೇಶದ ಇತಿಹಾಸದಲ್ಲಿ ಐದನೆಯ, ಆರನೆಯ ಮತ್ತು ಏಳನೆಯ ಶತಮಾನಗಳು ಸಂಸ್ಕೃತ ಸಾಹಿತ್ಯದ ಸುಗ್ಗಿಯ ಕಾಲವಾಗಿತ್ತೆಂದು ಡಾಕ್ಟರ್, ಭಂಡಾರಕರರು ಬರೆದಿರುವರು. ಈ ಕಾಲವನ್ನು ಅವರು 'ಗುಪ್ತರಯುಗ' (the Age of Guptas) ವೆಂದು ನಿರ್ದೇಶಿಸಿರುವರು ಚಂದ್ರಗುಪ್ತ, ಅಶೋಕ, ಹರ್ಷಚಕ್ರವರ್ತಿ, ಮುಂಜ, ಭೋಜ, ಚಾಳುಕ್ಯ ವಿಕ್ರಮ ಮೊದಲಾದ ಅರಸರ ಕಾಲದಲ್ಲಿ ಬಾಳಿದ ಕವಿಗಳ ಚರಿತೆಯನ್ನೂ ಅವರಿಂದ ಮತ್ತು ಅವರ ಕಾಲದ ಕವಿಗಳಿಂದ ವಿರಚಿತವಾದ ಗ್ರಂಥಸಮುದಾಯದ ಯೋಗ್ಯತೆಯನ್ನೂ ಯೋಚಿಸಿಕೊಂಡರೆ, ವಿದ್ಯಾಪಕ್ಷಪಾತಿಗಳೂ ವಿದ್ವಜ್ಜನಾಶ್ರಯದಾತರೂ ಆದ ಅರಸರು ಆಳಿ ಬಾಳುತ್ತಿದ್ದರೆ ಸಾಹಿತ್ಯದ ಬೆಳವಣಿಗೆಗೆ ಎಷ್ಟೊಂದು ಅನುಕೂಲವೆಂಬದನ್ನು ಮನಗಾಣಬಹುದು. ಹರ್ಷ ಚಕ್ರವರ್ತಿಯು ಸಾಮಾನ್ಯ ರಾಜನೆ? ಭೋಜನು ಕೇವಲ ಭೂಪತಿಯೇ? ಇವರು ಅನೇಕ ಕವಿಶ್ರೇಷ್ಠರಿಗೆ ಆಶ್ರಯದಾತರಾಗಿದ್ದುದು ಮಾತ್ರವಲ್ಲದೆ ತಾವೇ ಉತ್ಕೃಷ್ಟ ಕಾವ್ಯಗಳನ್ನು ರಚಿಸಲಿಲ್ಲವೆ? ಕವಿಗಳ ಪ್ರಶಸ್ತಿಗೆ ಹೇಗೆ ರಾಜಾಶ್ರಯವು ಕಾರಣವೋ, ಹಾಗೆಯೇ ರಾಜನ ಕೀರ್ತಿಪ್ರಸಾರಕ್ಕೂ ಆಶ್ರಿತ ಕವಿಗಳು ಕಾರಣರೆನ್ನಬೇಕು 'ಕಾವ್ಯಂ ಯಶಸೇ ಽರ್ಥಕೃತೇ' ಇತ್ಯಾದಿ ವಾಕ್ಯಗಳ ತಾತ್ಪರ್ಯವನ್ನು ಗ್ರಹಿಸಿಕೊಂಡರೆ, ಈ ಮಾತಿನ ತಥ್ಯಾಂಶವು ತಿಳಿಯುವುದು. ಬಾಣಭಟ್ಟನ ಹರ್ಷಚರಿತವೂ ಬಿಲ್ಹಣನ ವಿಕ್ರಮಾಂಕದೇವಚರಿತವೂ ಇವಕ್ಕೆ ಉತ್ತಮ ನಿದರ್ಶನಗಳೆನ್ನಬಹುದು. ಹಿಂದೂ ದೇಶವು ಪರಹಸ್ತಂಗತವಾಗುವುದಕ್ಕೆ ಪೂರ್ವದಲ್ಲಿ ಇಂತಹ ಸುಪರಿಸ್ಥಿತಿಗಳು ಸಂಸ್ಕೃತ ಸಾಹಿತ್ಯಕ್ಕೆ

ಒದಗಿದ್ದುವೆಂಬುದು ಹೇಳುವುದರಲ್ಲಿ ವಿಚಿತ್ರವೇನೂ ಇಲ್ಲ, ಅಲ್ಲಿಂದ ಮುಂದೆಯೂ ಎಷ್ಟೋ ಕಾಲ ಪರ್ಯಂತ ಅಲ್ಲಲ್ಲಿ ತುಂಡುತುಂಡಾಗಿ ಚದರಿ ಹೋದ ಚಿಕ್ಕ ಪುಟ್ಟ ಹಿಂದೂ ರಾಜರೂ ಕೂಡ ವಿದ್ವಾಂಸರಿಗೂ ಕವಿಗಳಿಗೂ ಆಶ್ರಯವನ್ನಿತ್ತು, ಗ್ರಂಥಗಳನ್ನು ಬರೆಯಿಸುತ್ತಿದ್ದರು ಉದಾಹರಣೆಗಾಗಿ ಓರಂಗಲ್ಲಿನ ಕಾಕತೀಯವಂಶದ ಪ್ರತಾಪರುದ್ರದೇವನು, ಚಾಳುಕ್ಯ ಅರಸರು, ರಾಷ್ಟ್ರಕೂಟ ನೃಪತಿಗಳು, ಹೊಯ್ಸಳ ಬಲ್ಲಾಳ ಅರಸುಗಳು, ವಿಜಯನಗರದ ಅರಸರು, ಕೆಳದಿಯ ನಾಯಕರು ಇತ್ತೀಚಿನ ಮೈಸೂರ ರಾಜವಂಶದವರು,— ಇವರೇ ಮೊದಲಾದವರು ಕವಿಗಳಿಗೂ ವಿದ್ವಾಂಸರಿಗೂ ಆಶ್ರಯದಾತರಾಗಿದ್ದರಷ್ಟೇಯಲ್ಲ, ಆ ಆ ರಾಜವಂಶದವರಲ್ಲಿ ಕೆಲ ಕೆಲವು ಅರಸರೂ ಕೂಡ ತಾವೇ ಕಾವ್ಯರಚನೆಯನ್ನು ಮಾಡಿರುವುದೂ ಉಂಟು. ಇವರ ಆಳಿಕೆಯ ಕಾಲಗಳು ಸಂಸ್ಕೃತ ಸಾಹಿತ್ಯಾಭಿವೃದ್ಧಿಗೆ, ಎಷ್ಟು ಸಾಧಕವೋ, ಕರ್ನಾಟಕ ಸಾಹಿತ್ಯಾಭಿವೃದ್ಧಿಗೆ ಸ್ವಲ್ಪ ಹೆಚ್ಚು ಕಡಿಮೆ ಅಷ್ಟೇ ಸಾಧಕವು ಇವರು ವಿದ್ವತ್ಪಕ್ಷಪಾತಿಗಳೆಂದು ಪ್ರಜೆಗಳು ತಿಳಿದಿದ್ದುದರಿಂದಲೇ ಇವರ ಕಾಲಗಳಲ್ಲಿ ಸಾಹಿತ್ಯದ ಬೆಳವಣಿಗೆಗೂ ಪ್ರಚಾರಕ್ಕೂ ಅನುಕೂಲವಾಯಿತೆನ್ನಬೇಕು. ಚಾಳುಕ್ಯ ವಂಶದ ಪುಲಿಕೇಶಿ-ವಿಕ್ರಮ-ನೂರ್ಮಡಿ ತೈಲಪರೂ; ರಾಷ್ಟ್ರಕೂಟ ವಂಶದ ವಿಷ್ಣುವರ್ಧನ ವೀರಬಲ್ಲಾಳರೂ; ವಿಜಯನಗರದ ಸಂಗಮ ವಂಶದ ಹರಿಹರ-ಬುಕ್ಕ-ಕಂಪ-ಹರಿಹರ- ಪ್ರೌಢದೇವರಾಯರೂ, ಸಾಳುವ ವಂಶದ ನರಸಿಂಹನೂ, ತುಳುವ ವಂಶದ ಕೃಷ್ಣದೇವರಾಯನೂ, ಕೆಳದಿಯ ಹಿರಿಯ ಬಸಪ್ಪನಾಯಕ- ಹಿರಿಯ ವೆಂಕಟಪ್ಪನಾಯಕರೂ, ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರೂ ಈ ವಿಷಯದಲ್ಲಿ ಚಿರಸ್ಮರಣೀಯರಾಗಿರುವರು ಇವರ ಆಳಿಕೆಗಳಲ್ಲಿ ಸಂಸ್ಕೃತ ಸಾಹಿತ್ಯವಂತೂ ವಿಶೇಷವಾಗಿ ಬೆಳೆಯಿತೆಂಬುದು ಸರ್ವವಿದಿತವಾಗಿರುವ ಸಂಗತಿ ಪ್ರಸ್ತುತ, ನಮ್ಮ ವಿಚಾರವು ಕರ್ನಾಟಕ ಸಾಹಿತ್ಯವನ್ನು ಕುರಿತುದಾದುದರಿಂದ, ಅದನ್ನು ನಾವು ಮುಖ್ಯವಾಗಿ ಗಮನಿಸಬೇಕಾಗಿದೆ.

ಕರ್ನಾಟಕ ಸಾಹಿತ್ಯದ ಚರಿತ್ರೆಯನ್ನು ವಿಸ್ತಾರವಾಗಿಯೂ ಸಮಗ್ರವಾಗಿಯೂ ಪ್ರತಿಪಾದಿಸತಕ್ಕ ಉದ್ಗ್ರಂಥದ ರಚನೆಯ ಕಾಲವು ಇನ್ನೂ ಸಮೀಪಿಸಿಲ್ಲವೆಂಬುದಕ್ಕೆ ಕನ್ನಡಿಗರು ವ್ಯಸನಪಡಬೇಕಾಗಿದೆ. ಈ ವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಪ್ರಾಚೀನ ಕಾವ್ಯಗ್ರಂಥಗಳ ಸಂಖ್ಯೆಗಿಂತ, ಮೂಲೆಪಾಲಾಗಿ ಕಾಲನ ಬಾಯಿಗೆ ತುತ್ತಾದ, ತುತ್ತಾಗುತ್ತಿರುವ, ಮುಂದೆ ತುತ್ತಾಗಬಹುದಾದ ಗ್ರಂಥಗಳ ಸಂಖ್ಯೆಯೇ ಅಧಿಕವೆನ್ನಬೇಕು. ಈಗ ಕಯ್ಗೆ ದೊರಕಿದ ಗ್ರಂಥಸಮುದಾಯದ ಆಧಾರದಿಂದ, ಬಹುಕಾಲ ಶ್ರಮಪಟ್ಟು ರಾ॥ ಶ್ರೀ. ಆರ್ ನರಸಿಂಹಾಚಾರ್ಯರು ಪ್ರಸಿದ್ಧಗೊಳಿಸಿದ 'ಕರ್ನಾಟಕಕವಿಚರಿತೆ' ಯ ಅವಲಂಬನದಿಂದಷ್ಟೇ ನಾವು ಕರ್ನಾಟಕ ಸಾಹಿತ್ಯದ(ಇತಿಹಾಸದ) ವಿಸ್ತಾರವೈಭವಗಳನ್ನು ಕಂಡುಕೊಳ್ಳಬೇಕಾಗಿದೆ. ಇದಕ್ಕಾಗಿ, ಕನ್ನಡಿಗರು ಮಾತ್ರವೇಕೆ, ಇಡೀ ಸಾಹಿತ್ಯಪ್ರಪಂಚವೇ ಅವರಿಗೆ ಋಣಿಯಾಗಬೇಕು ಸಮಗ್ರವಾಗಿರುವಂತೆಯೂ ಸಂಶಯರಹಿತವಾಗಿರುವಂತೆಯೂ ಸಂಶೋಧಿಸಿ ಕರ್ನಾಟಕಸಾಹಿತ್ಯಚರಿತ್ರೆಯನ್ನು ಬರೆವುದೆಂದರೆ ಸಾಮಾನ್ಯಕಾರ್ಯವಲ್ಲ ಅದಕ್ಕೆ ಹಲವು ತೊಡಕುಗಳು. ಅಂತೂ ಅದರಲ್ಲಿ ರಾ॥ ಶ್ರೀ. ನರಸಿಂಹಾಚಾರ್ಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿ ಮುಂದೊತ್ತಬೇಕಾದುದು ತರುಣ ಕನ್ನಡಿಗರ ಕರ್ತವ್ಯವಾಗಿದೆಯೆಂಬುದನ್ನಷ್ಟು ಇಲ್ಲಿ ಸೂಚಿಸದಿರಲಾಗುವುದಿಲ್ಲ

ದೇಶದ ರಾಜಕೀಯ, ಧಾರ್ಮಿಕ ಆರ್ಥಿಕ ಸಂಪತ್ತುಗಳಿಗೆ ರಾಜಾಶ್ರಯವು ಹೇಗೆ ಅವಶ್ಯವೋ, ಹಾಗೆ ಭಾಷಾಸಾಹಿತ್ಯದ ಅಭಿವೃದ್ಧಿಗೂ ರಾಜಾಶ್ರಯವು ಅವಶ್ಯವು ಎಂಬುದರ ದಿಗ್ದರ್ಶನಾರ್ಥವಾಗಿ ಮೇಲಿನ ಪೀಠಿಕೆಯಲ್ಲಿ ಸೋದಾಹರಣ ವಿಮರ್ಶಿಸಿಯಾಯಿತು. ಕಾವ್ಯಗಳು ಜನತೆಯ ಮಧ್ಯದಲ್ಲಿ ಪ್ರಚಾರಗೊಂಡು ಕವಿಗಳ ಕೀರ್ತಿಲತೆಯು ಹಬ್ಬಬೇಕಾದರೆ, ಧನವಂತರ ಸಹಾಯ ಸಂಪತ್ತಿ ( ಅರ್ಥಾತ್ ರಾಜಾಶ್ರಯವು ) ಬೇಕೆಂಬುದನ್ನೂ, ಸಹೃದಯರ ಪ್ರೋತ್ಸಾಹ-ಪುರಸ್ಕಾರಗಳು ಅವಶ್ಯವೆಂಬುದನ್ನೂ. ಸಂಸ್ಕೃತ ಕವಿಗಳು ಹೇಗೋ, ಹಾಗೆ ಕನ್ನಡಕವಿಗಳೂ ಬಹುಕಾಲದಿಂದ ನಂಬಿಕೊಂಡು ಬಂದಿದ್ದರೆಂಬುದು ಈ ಕೆಳಗಣ ಪದ್ಯಗಳಿಂದ ತಿಳಿದು ಬರುವದು—(೧) ಬಳ್ಳಿ ಮೊದಲಾಗಿ ಮೊದಲೊಳ । ಗೆಳ್ಪನಿತುಂ ಪೊನ್ನನಿಕ್ಕದೊಡೆ ಪರ್ಬದು ಪೊ- ॥ ನ್ನಳ್ಳ ನರನಿತ್ತೊಡಲ್ಲದೆ । ಬೆಳ್ಳನೆ ಪರ್ಬುಗುಮೆ ಕೀರ್ತಿಲತೆ ದಿಕ್ತಟಮಂ ? ॥ ( ಕವಿಕುಂಜರ). (೨) ಎನಿತನೊರಲ್ದು ಪೇಳ್ವ ಕವಿಯೇವನ ನಮಂ ಪೆಸರಿಟ್ಟು ಮೆಚ್ಚ ಬ- । ಲ್ಲನನರಸಲ್ಕೆ ಪೇಳ್ವುದವನಂ ಜಗದೊಳ್ ಪಡೆಯಲ್ಕೆ ಬಾರದಾ- ॥ ತನ ಮುಖದಿಂದಮಲ್ಲದದು ಸಲ್ಲದು; ಕಟ್ಟಿಯುಮೇನೊ ಮಾಲೆಗಾ- । ರನ ಪೊಸಬಾಸಿಗಂ ಮುಡಿವ ಭೋಗಿ

ಲ್ಲದೆ ಬಾಡಿಪೋಗದೇ? || ( ಜನ್ನ ಮಹಾಕವಿ ).
ವಿಗಳಿಗೆ ರಾಜಾಶ್ರಯವೂ ಸಹೃದಯರ ಪ್ರೋತ್ಸಾ
ಏತಕ್ಕೆ ಬೇಕು ? ಎಂದು ಕೇಳುವದಾದರೆ
ಕ್ಕೆ ಹೀಗೆ ಸಮಾಧಾನವನ್ನು ಹೇಳಬಹುದಾಗಿದೆ:-
ರ್ವಕಾಲದಿಂದಲೂ ಸತ್ಕವಿಗಳಿಗೆ ದುಷ್ಕವಿಗಳ
ಂದ ಮತ್ತು ದುರ್ಜನರತ್ತಣಿಂದ ಸದಾ ಭಯ
ದರಿಂದ ಆ ಭಯವನ್ನು ಹೋಗಲಾಡಿಸಲಿಕ್ಕೆ
ವು ಮುಖ್ಯವಾಗಿ ರಾಜಾಶ್ರಯ
ಲೇ ಬಂಬೇಕಾಗಿದೆ ರಾಜಾಸ್ಥಾನಗಳಲ್ಲಿಯೇ
ವು ಸತ್ಕವಿಗಳೊಳಗೇನೇ ವಾದಗಳುಂಟಾಗಿ ಒಬ್ಬ
ಬ್ಬರು ಸೋಲಿಸಿ ರಾಜರಿಂದ ಸನ್ಮಾನಗಳನ್ನೂ
ಬಾವಲಿಗಳನ್ನೂ ಪಡೆದ ಸಂದರ್ಭಗಳು ಕವಿ
ಯಲ್ಲಿ ಅಲ್ಲಲ್ಲಿ ಸಿಕ್ಕುತ್ತವೆ. ಹೀಗಿರುತ್ತ ದುರ್ಜನ
ವು ಸತ್ಕವಿಗಳೆಲ್ಲರಿಗೂ ಸಾಮಾನ್ಯವಾಗಿತ್ತೆಂಬು
ಪ್ರಾಯಶಃ ಎಲ್ಲಾ ಕನ್ನಡ ಕಾವ್ಯಗಳಲ್ಲಿ ಸಾಕ
ಉದಾಹರಣೆಗಳಿರುವದನ್ನು ನಾವು ನೋಡ
ದು ದುರ್ಜನರಿಂದಾಗತಕ್ಕ ಉಪದ್ರವವನ್ನು ಪರಿ
ವದು ದುಸ್ಸಾಧ್ಯವೆಂದೂ, ಅದನ್ನು ಎಣಿಕೆಗೆ
ದೆ ಕವಿಯು ರಸಭರಿತವಾದ ಕಾವ್ಯವನ್ನು ರಚಿಸು
ವೆಂದೂ, ಮಹಾಕವಿ ಜನ್ನನು--' ..ರಸವತ್ಕೃ
. ಪೆಳ್ಗೆ, ದುರ್ಜನಂ ಪಳಿಯುಕುಪಿ.ರ್ಕೆ, ಬಾಳ್ವ
ಗೊಂಡು ಬಗುಳ್ವುದು ಬೇಳ್ಕುಮೆನ್ನಿರೇ?'[ಅನಂತ
ಪುರಾಣಂ ] ಎಂಬ ಮಾತಿನಿಂದ ಸರಸವಾಗಿ
ಗೊಳಿಸಿರುವನು ಕರ್ನಾಟಕ ಸಾಮ್ರಾಜ್ಯದಲ್ಲಿ
ಪ್ರಾಚೀನ ಕಾಲದಿಂದಲೂ ರಾಜಾಶ್ರಯವು
ಕಿದುದರಿಂದ, ಹಲವು ಕವಿಗಳೂ ವಿದ್ವಾಂಸರೂ
ಉದ್ದಾಮ ಕೃತಿಗಳನ್ನೂ ಗ್ರಂಥಗಳನ್ನೂ
ಕರ್ನಾಟಕ ಭಾಷೆಯನ್ನು ಒಂದು ವ್ಯವಸ್ಥಿತ
ತ್ಯ ಭಾಷೆಯನ್ನಾಗಿ ಮಾಡಿದರಷ್ಟೇಯಲ್ಲದೆ,
ರ್ಣಟಕದ ಕೀರ್ತಿಯನ್ನೂ ಭಾರತದಲ್ಲಿ ಹಬ್ಬಿಸಿದರು
ರ್ನಾಟಕಲೋಕದಲ್ಲಿ, ವಿಶೇಷತ ಸಾಹಿತ್ಯಲೋ
ಪ್ರಕೀರ್ತಿತರಾದ ರಾಜವಂಶಗಳಲ್ಲಿ, ವಿಜಯ
ದ ರಾಜವಂಶದವರೇ ಶ್ರೇಷ್ಠರೆನ್ನಬಹ ದು
ರ ಆಳಿಕೆಯಕಾಲದಲ್ಲಿ ಕರ್ನಾಟಕಸಾಹಿತ್ಯವು
ವಾಗಿ ಬೆಳೆದು ಪ್ರಚಾರಕ್ಕೆ ಬಂತೆಂದು ನಿರ್ಧಾ
ವದಕ್ಕೆ ಪ್ರಬಲವಾದ ಊಹೆಗಳಿವೆ. ತುಂಗ
ತೀರದಲ್ಲಿ ಶ್ರೀವಿದ್ಯಾರಣ್ಯರ ಪ್ರೋತ್ಸಾಹ-ಸಹಾ
ಗಳಿಂದ ಹರಿಹರ-ಬುಕ್ಕರು ವಿದ್ಯಾನಗರಿಯನ್ನು
ಶ. ೧೩೩೬ ರಲ್ಲಿ ಸಂಸ್ಥಾಪಿಸಿದರೆಂದು ಮೊದ

ಲ್ಗೊಂಡು, ಕ್ರಿ. ಶ. ೧೫೬೫ರಲ್ಲಿ ಆಂಧ್ರಕುಲದ ರಾಮ
ರಾಜನಕಾಲದಲ್ಲಿ ವಿಜಯನಗರಸಾಮ್ರಾಜ್ಯವು ಛಿನ್ನ
ಭಿನ್ನವಾಗಿ ಹೋಗುವವರೆಗೆ, ಎಂದರೆ ಸುಮಾರು ಎರ
ಡೂವರೆ ಶತಮಾನಗಳ ಕಾಲ 'ಕಾವೇರಿಯಿಂದ
ಮಾಗೋದಾವರಿವರಮಿರ್ದನಾಡದಾ ಕನ್ನಡ' ವು
ಅವಿಚ್ಛಿನ್ನವಾಗಿ ಒಬ್ಬನೇ ಹಿಂದೂರಾಜನ ಆಳಿಕೆಗೆ
ಒಳಪಟ್ಟಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ.
ಆದುದರಿಂದ ವಿಜಯನಗರದ ಅರಸರ ಆಳಿಕೆಯ ಕಾಲ
ವೆಂದರೆ ಕರ್ನಾಟಕ ಸಾಹಿತ್ಯದ ಎರಡೂವರೆ
ಶತಮಾನಗಳ ಚರಿತ್ರೆಯ ಕಾಲ
ವೆನ್ನಬಹುದು. ಈ ಎರಡೂವರೆ ಶತಮಾನಗಳಲ್ಲಿ
ವಿಜಯನಗರ-ರತ್ನಸಿಂಹಾಸನ ಧಿಷ್ಠಿತರಾಗಿ ಮೂರು
ವಂಶದವರು ಆಳಿದರೂ, ವಿಜಯನಗರ ಸಾಮ್ರಾ
ಜ್ಯವು ಮಾತ್ರ ಮಧ್ಯೆ ಭಂಗವಾಗಲಿಲ್ಲ. ಅವರಲ್ಲಿ
ಮೊತ್ತಮೊದಲನೆಯವರು ಹರಿಹರ-ಬುಕ್ಕರೇ ಮೊದ
ಲದ ಸಂಗಮವಂಶದವರು. ಇವರು ಕ್ಷತ್ರಿಯ
ವಂಶೀಯರೆಂದು ಕೆಲವರು ಹೇಳುತ್ತಾರೆ. ಜನ್ಮತಃ
ಯದುವಂಶೋತ್ಪನ್ನರಾಗಿದ್ದು ( ದಕ್ಷಿಣದೇಶದಲ್ಲಿ
ಕುರುಬರೊಡನೆ ನಂಟತನವನ್ನು ಬಳೆಯಿಸಿದವರಾಗಿ)
ಶ್ರೀವಿದ್ಯಾರಣ್ಯರ ಸಹಾಯದಿಂದ ವಿಜಯನಗರ
ಸಾಮ್ರಾಜ್ಯವನ್ನು ಸ್ಥಾಪಿಸಿ, ದಕ್ಷಿಣಹಿಂದೂದೇಶವನ್ನು
ತುರುಷ್ಕರ ಹಾವಳಿಯತ್ತಣಿಂದ ರಕ್ಷಿಸಿದರೆಂದು ಹಲ
ವರು ಒಪ್ಪಿಕೊಳ್ಳುತ್ತಾರೆ. ಹಿಂದಣ ಕವಿಗಳಲ್ಲಿ ಕೆಲ
ವರು ಇವರನ್ನು "ಕುರುಂಬರಾಯರು" ಎಂದು
ನಿರ್ದೇಶಿಸಿದುದೂ ಉಂಟು ಅಂತೂ ಇವರು ಕನ್ನಡಿ
ಗರಾಗಿದ್ದರೆಂಬುವದರಲ್ಲಿ ಅವ ಸಂಶಯವೂ ಇಲ್ಲವೆಂದು
ತೋರುವುದು. ಎರಡನೆಯದು ಸಾಳುವವಂಶವು.
ಇದು ಬಹು-ಕಾಲ ಬಾಳಲಿಲ್ಲ. ಅನಂತರ ಪಟ್ಟವೇರಿದ
ಕೊನೆಯ ವಂಶವು ತುಳುವರದು ಈ ವಂಶವು ಪ್ರತಾಪಿ
ಯಾದ ಕೃಷ್ಣದೇವರಾಯನ ಖ್ಯಾತಿಯಿಂದ ಹೆಸರು
ಹೊಂದಿದೆ ಇಂತು ಎರಡೂವರೆ ಶತಮಾನಗಳ
ತನಕ ಆಳಿದ ವಿಜಯನಗರದ ಅರಸರಲ್ಲಿ
ಪ್ರಾಯಶಃ ಎಲ್ಲರೂ ಹುಟ್ಟು ಕನ್ನಡಿಗರೇ ಆಗಿದ್ದಿರ
ಬೇಕು; ಇಲ್ಲವಾದರೆ ಬಹುಪಕ್ಷ ಕನ್ನಡ ಭಾಷಾಭಿ
ಮಾನಿಗಳಾದರೂ ಆಗಿದ್ದಿರಬೇಕು. ಇವರ ಆಸ್ಥಾನ
ಗಳಲ್ಲಿ ಕರ್ನಾಟಕ ಕವಿಗಳಿದ್ದರೆಂಬುದೇ ಇದಕ್ಕೆ
ಸಾಕ್ಷಿಯಾಗಿದೆ ಇವರ ಕೈಕೆಳಗಿದ್ದ ಸಾಮಂತರಾಜ
ರಲ್ಲಿಯೂ ದಂಡಾಧೀಶರಲ್ಲಿಯೂ ಕೂಡ ಹಲವು ಮಂದಿ
ಕನ್ನಡ ಕವಿಗಳು ಪುರಸ್ಕೃತರಾದರೆಂಬುದಕ್ಕೆ

ನಿದರ್ಶನಗಳು ಸಿಕ್ಕುತ್ತವೆ. ಬೇರೆಬೇರೆ ಮತದವರು ಅನ್ಯೋನ್ಯ ವೈಷಮ್ಯಗಳನ್ನು ಬದಿಗೊತ್ತಿ ಪರಸ್ಪರ ಸಹಿಷ್ಣುಗಳಾಗಿ ಒಬ್ಬ ಹಿಂದೂ ರಾಜನ ಬಳಿಗೂಡಿಯ ನೆರಳಲ್ಲಿ ನೆಮ್ಮದಿಯಿಂದ ಕಲೆತಿದ್ದುದೆಂದರೆ, ಅದು ಈ ವಿಜಯ ನಗರ ಸಾಮ್ರಾಜ್ಯದ ವೈಭವ ಕಾಲದಲ್ಲಿ ಆಗಿರುವುದು.

ಈಗ ನಮಗೆ ತಿಳಿದ ಮಟ್ಟಿಗೆ ಕರ್ನಾಟಕ ಸಾಹಿತ್ಯದ ಇತಿಹಾಸಕ್ಕೆ ಆಧಾರವಾದ ಪ್ರಾಚೀನಗ್ರಂಥಗಳು ದೊರಕಿರುದು ಕ್ರಿ. ಶ. ೯ನೆಯ ಶತಮಾನದಿಂದೀಚೆಗೆ ಆಗಿರುವುದು. ಅವುಗಳಲ್ಲಿ ನೃಪತುಂಗನ ಕವಿರಾಜಮಾರ್ಗವೇ ಬಹಳ ಹಳೆಯದು. ಆದರೆ ಆ ಗ್ರಂಥವನ್ನು ಓದಿದರೆ, ಅದಕ್ಕಿಂತ ಎಷ್ಟೋ ಶತಮಾನಗಳ ಪೂರ್ವದಲ್ಲಿಯೇ ಕನ್ನಡದಲ್ಲಿ ಉತ್ಕೃಷ್ಟ ಕಾವ್ಯಗಳ ರಚನೆಯಾಗಿದ್ದಿರಬೇಕೆಂದೂ, ಎಷ್ಟೋ ಮಂದಿ ಪ್ರಸಿದ್ಧ ಕವಿಶ್ರೇಷ್ಠರು ಆಗಿ ಹೋಗಿದ್ದಿರಬೇಕೆಂದೂ ಗೊತ್ತಾಗುತ್ತದೆ. ರಾಷ್ಟ್ರಕೂಟರೂ ಚಾಳುಕ್ಯರೂ ಹೇಗೋ ಹಾಗೆಯೇ ಹೊಯ್ಸಳರೂ ಗಂಗರೂ ಕರ್ನಾಟಕ ಸಾಹಿತ್ಯದ ಬೆಳವಣಿಗೆಗೆ ತುಂಬ ಸಾಹಾಯ್ಯವನ್ನು ಮಾಡಿದರು. ಮೇಲೆ ಹೇಳಿದ ಎಲ್ಲ ರಾಜವಂಶಾವಳಿಗಳು ಆಳಿದ ಕಾಲದಲ್ಲಿ ಆಗಿ ಹೋದ ಕವಿಗಳ ಮತ್ತು ಅವರ ಗ್ರಂಥಗಳ ವಿವರವನ್ನು ಪರ್ಯಾಲೋಚಿಸಿದರೆ, ಇದರ ನಿಜತ್ವವು ಮನಸ್ಸಿಗೆ ಹೊಳೆಯುವುದು. ಪಂಪ, ಪೊನ್ನ, ರನ್ನ, ಜನ್ನ, ಗುಣವರ್ಮ, ನೇಮಿಚಂದ್ರ, ನಾಗಚಂದ್ರ ಮೊದಲಾದ ಸುಪ್ರಸಿದ್ಧ ಮಹಾಕವಿಗಳ ಚರಿತ್ರೆಗಳನ್ನು ನೋಡಿದರೆ ಸಾಕು. ಇವರಲ್ಲಿ ಹೆಚ್ಚು ಮಂದಿ ರಾಜಾಶ್ರಯದಲ್ಲಿಯೇ ಬೆಳೆದವರಾಗಿ ಕರ್ನಾಟಕೃತಿಗೆ ಸೀಮಾಪುರುಷರೆಂದೆನಿಸಿಕೊಳ್ಳುವಷ್ಟು ಮಟ್ಟಿನ ಉದ್ದಾಮ ಕೃತಿಗಳನ್ನು ರಚಿಸಿದ್ದಾರೆ. ಇದರಲ್ಲಿ ಕೆಲವರು ಕಾವ್ಯರಚನೆಯಲ್ಲಿ ಮಾತ್ರವಲ್ಲ ರಾಜಕಾರಣದಲ್ಲಿಯೂ ರಣರಂಗದಲ್ಲಿಯೂ ಸ್ವಸಾಮರ್ಥ್ಯವನ್ನು ತೋರಿಸುವಷ್ಟು ಪ್ರತಾಪಶಾಲಿಗಳಾಗಿದ್ದರೆಂಬುದು ಸಾಮಾನ್ಯರ ಮಾತಲ್ಲ. ಪಂಪನ ವಿಕ್ರಮಾರ್ಜುನ ವಿಜಯವೂ ಆದಿಪುರಾಣವೂ ರನ್ನನ ಗದಾಯುದ್ಧವೂ ಅಜಿತತೀರ್ಥಂಕರಪುರಾಣತಿಲಕವೂ, ಜನ್ನನ ಯಶೋಧರಚರಿತೆಯೂ ಅನಂತನಾಥಪುರಾಣವೂ ಗುಣವರ್ಮನ ಪುಷ್ಪದಂತ ಪುರಾಣವೂ, ನೇಮಿಚಂದ್ರನ ಅರ್ಧನೇಮಿಪುರಾಣವೂ, ಲೀಲಾವತೀ ಪ್ರಬಂಧವೂ, ನಾಗಚಂದ್ರನ ಮಲ್ಲಿನಾಥಪುರಾಣವೂ ರಾಮಚಂದ್ರಚರಿತಪುರಾಣವೂ—ಹೀಗೆಯೇ ಇನ್ನೂ ಅನೇಕ ಕವಿಗಳಿಂದ ರಚಿತಗಳಾದ ಕಾವ್ಯ-ನಾಟಕ ಅಲಂಕಾರ-ವ್ಯಾಕರಣ-ಜ್ಯೋತಿಷ-ವೈದ್ಯಶಾಸ್ತ್ರಗಳೇ ಮೊದಲಾದ ಗ್ರಂಥಗಳೂ ಕರ್ನಾಟಕ ಸಾಹಿತ್ಯದೇವಿಯ ಕಿರೀಟದ ರತ್ನಗಳಂತಿವೆ.

ಮೊದಲು ಮೊದಲು ಜೈನ ಕನ್ನಡ ಕವಿಗಳು, ಸಂಸ್ಕೃತ ಸಾಹಿತ್ಯ ಗ್ರಂಥಗಳ ಲಕ್ಷಣಗಳನ್ನೇ ಮಾದರಿಯಾಗಿಟ್ಟುಕೊಂಡು ತಿರುಳ್ಗನ್ನಡದಲ್ಲಿ ವಿದ್ವಜ್ಜನ ಸಂಭಾವ್ಯವಾದ ಕಾವ್ಯಗಳನ್ನು, ಮುಖ್ಯವಾಗಿ ಜೈನ ಧರ್ಮಪ್ರಚಾರದ ದೃಷ್ಟಿಯಿಂದಲೂ, ಗೌಣವಾಗಿ ಕಾವ್ಯಪ್ರಚಾರದ ದೃಷ್ಟಿಯಿಂದಲೂ ಬರೆದರು. ಆದರೆ ಇವುಗಳಲ್ಲಿ ಹೆಚ್ಚಿನವು ಲಕ್ಷಣಬದ್ಧವಾಗಿದ್ದು ಪ್ರೌಢ ಶೈಲಿಯಲ್ಲಿ ಬರೆದಿದ್ದು ಭಾಷಾವ್ಯುತ್ಪತ್ತಿಯಿದ್ದವರಿಗೆ ಮಾತ್ರ ಸಂಸೇವ್ಯಗಳಾಗಿದ್ದುವಲ್ಲದೆ, ಜನತೆಗೆ ಇವುಗಳಿಂದ ಹೆಚ್ಚು ಪ್ರಯೋಜನವಾಗಿತ್ತೆಂದು ಹೇಳಲು ಸಾಧ್ಯವಿಲ್ಲೆಂದು ಕೆಲಮಂದಿ ಆಧುನಿಕರು ಆಕ್ಷೇಪಿಸಬಹುದು. ಏಕೆಂದರೆ, ಈಗಳಿನ "ಸಾಹಿತಿ" (?) ಗಳ ಧ್ಯೇಯವು,-ಸಾಹಿತ್ಯವು ಜನಜೀವನವನ್ನು ಪ್ರತಿಬಿಂಬಿಸತಕ್ಕದ್ದಾಗಿರಬೇಕೆಂದಿರುವುದು; ಹಳೆಯ ಕಾವ್ಯಗಳಲ್ಲಿ, ಆಧುನಿಕರ ಜೀವನಾನುಭವದಂತೆ, ಜೀವನದ ಪ್ರತಿಬಿಂಬವನ್ನು ತೋರಿಸುವ ಸಂದರ್ಭಗಳು ದೊರಕುವುದು ಕಡಿಮೆ ಇದಕ್ಕೆ ಕಾರಣವನ್ನೂ ಒಂದು ವಿಧವಾಗಿ ಹೇಳಬಹುದು -- ಅದಾವುದೆಂದರೆ, ಆ ಕಾಲದ ಜನಗಳು ಸುಖಜೀವಿಗಳಾಗಿದ್ದಿರಬೇಕು. ಇಲ್ಲವೆ, ಜನಗಳಲ್ಲಿ ಹಲವು ಮಂದಿ ಸಹೃದಯರಾದ ವಿದ್ವಾಂಸರೂ ವ್ಯುತ್ಪನ್ನರೂ ಇದ್ದಿರಬೇಕು. ಹೀಗಿದ್ದುದರಿಂದ ಅಂತಹ ಪ್ರೌಢಕೃತಿಗಳು ಇಷ್ಟುಕಾಲ ಬದುಕಿಕೊಂಡವು ಎಂದೆನ್ನಬೇಕಾಗುತ್ತದೆ. ಹೀಗೆ ಜೈನರ ಪ್ರೌಢಕಾವ್ಯಗಳ ಕಾಲವು ಕಳೆದ ಮೇಲೆ, ವೀರಶೈವರ ಸುಲಭಕಾವ್ಯಗಳ ಕಾಲವು ಆರಂಭವಾಯ್ತು. ಸಾಮಾನ್ಯ ಜನಗಳೂ ನೈತಿಕ ಧಾರ್ಮಿಕ ವಿಷಯಗಳನ್ನು ಸುಲಭವಾಗಿ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ವೀರಶೈವ ಭಕ್ತರನೇಕರು ಲಕ್ಷಣ ಬದ್ಧವಾದ ಪದ್ಯಕಾವ್ಯಗಳನ್ನೂ, ವಚನಗಳನ್ನೂ ರಚಿಸಿದರು. ಹಂಪೆಯ ಹರೀಶ್ವರ-ರಾಘವಾಂಕ-ಕೆರೆಯ ಪದ್ಮರಸರೇ ಮೊದಲಾದ ಕವಿಗಳೂ, ಇನ್ನಿತರ ವಚನಕಾರರೂ ಈ ಸಂದರ್ಭದಲ್ಲಿ ಸಂಸ್ಮರಣೀಯರು. ಈ ಕಾಲದಲ್ಲಿಯೂ ಕೆಲವು ಪ್ರೌಢ

ಗಳು ಹುಟ್ಟದೆ ಇಲ್ಲ. ಅಲ್ಲಿಂದ ಮುಂದೆ ಷ್ಣವ ಕವಿಗಳು ಅನೇಕ ಉದ್ಗ್ರಂಥಗಳನ್ನು ದರು. ಅಂತೂ ಕ್ರಮೇಣ ಜನಗಳಲ್ಲಿ ಸಾಹಿ ರುಚಿಯು ಹೆಚ್ಚುತ್ತಾ ಬಂದು, ಕಾವ್ಯಪಠನವು ಜೀವನದ ಒಂದಂಗವಾಗಿ ಪರಿಣಮಿಸಿತು; ಕಾವ್ಯ ಯಲ್ಲಿ ಹೊಸ ಹುರುಪುಂಟಾಯ್ತು. ಂಸರೂ ಕವಿಗಳೂ ಸಹೃದಯರೂ ಮಾತ್ರ ಇತರ ಸಾಮಾನ್ಯಜನಗಳೂ ಕೂಡ ವಿರಾಮ ಗಳಲ್ಲಿ ಕಾವ್ಯಪಠನದಿಂದ ಆನಂದವನ್ನು ದುವುದಕ್ಕೆ ಹೊಂದಿಕೆಯಾಗುವಂತೆ ಸಾಹಿತ್ಯ ಷಟ್ಪದಿ ಕಾವ್ಯಗಳೂ, ಸಾಂಗತ್ಯವೇ ಮೊದಲಾದ ಗಬ್ಬಗಳೂ ತಲೆದೋರಿದುವು ಅವರೆ ಅಲ್ಲಲ್ಲಿ ಕಾಲಗಳಲ್ಲಿ ಎಲ್ಲ ಮತಗಳ ಕೆಲಕೆಲವು ಕವಿ ತಿರುಳಗನ್ನಡದ ಪ್ರೌಢವಾದ ಶೈಲಿಯಲ್ಲಿ ಲಕ್ಷಣ ರಾದ ವಸ್ತುಕ ಪ್ರಬಂಧಗಳನ್ನು ರಚಿಸಿದ್ದಾರೆ. ವೈಷ್ಣವರಿಗೆ ಮಾತ್ರ ಹೆಚ್ಚಾಗಿ ಸೇವ್ಯಗಳಲ್ಲದೆ, ಸಾಮಾನ್ಯಕ್ಕೆ ಸೇವ್ಯಗಳಲ್ಲವೆಂಬುದನ್ನು ಆ ಆ ನಗಳ ಪ್ರಾಚುರ್ಯದಿಂದ ನಿರ್ಧರಿಸಬಹುದಾಗಿದೆ. ಶೈವರ ವಚನಗ್ರಂಥಗಳಲ್ಲಿಯಾಗಲಿ, ಇತರ ದಿ ಕಾವ್ಯಗಳಲ್ಲಿಯಾಗಲಿ ಶೈಲಿಯು ಕ್ಲಿಷ್ಟವಾಗಿ ಜನಸಾಮಾನ್ಯಕ್ಕೆ ಅರ್ಥವಾಗುವಂತಿರುವುದರಿಂದ ಹ ಷಟ್ಪದಿಕಾವ್ಯಗಳು ಕನ್ನಡಿಗರ ಪ್ರತಿಯೊಂದು ಯಲ್ಲಿಂಬಂತೆ ಪ್ರಚಾರಕ್ಕೆ ಬರಲು ಕಾರಣವಾ ನ್ನಬಹುದು. ಕರ್ನಾಟಕ ಸಾಹಿತ್ಯಕ್ಕೆ ಇಂತಹ ವೃದ್ಧಿಯೂ ಪ್ರಾಚುರ್ಯವೂ ಒದಗಿದುದು ಮುಖ್ಯ ವಿಜಯನಗರದ ಅರಸರ ಆಳಿಕೆಯ ಕಾಲದಲ್ಲಿ ಯೆಂಬುದನ್ನು ವಿಶದಪಡಿಸುವದೇ ಪ್ರಸ್ತುತದ ನದ ಮುಖ್ಯೋದ್ದೇಶವಾಗಿದೆ.

ಯನಗರದ ಅರಸರ ವಂಶಾವಳಿಯನ್ನು ಕುರಿತು ಸಂಕ್ಷಿಪ್ತವಾಗಿಯೂ ಸ್ಫೂರ್ತಿದಾಯಕವಾಗಿಯೂ ಶ್ರೀ. ಆಲೂರ ವೆಂಕಟರಾಯರು ತಮ್ಮ 'ಕರ್ನಾಟಕ ವೈಭವ'' ಎಂಬ ಗ್ರಂಥದಲ್ಲಿ ಬಹಳ ಸೊಗಸಾಗಿ ಬರುವರು. ಪ್ರಸ್ತುತ ಲೇಖನಕ್ಕೆ ಬೇಕಾದ ಕೆಲ ವನ್ನು ಇಲ್ಲಿ ಎತ್ತಿ ಬರೆಯುತ್ತೇನೆ.—'' ಶ್ರೀ ರಣ್ಯರು ಹುಕ್ಕ ಬುಕ್ಕರನ್ನು ಪ್ರೋತ್ಸಾಹಿಸಿ, ಸ್ವರಾಜ್ಯ ಸ್ಥಾಪನೆಯ ಕಾರ್ಯವನ್ನು ಕೊನೆಗಾಣಿ ಸು. ಶ್ರೀ ವಿದ್ಯಾರಣ್ಯರು ಆಗ ಶೃಂಗೇರಿಯಲ್ಲಿ ರಾಚಾರ್ಯರಸ್ಥಾನಾಪನ್ನರಾಗಿದ್ದರು. ಆದರೆ ಕ್ಕೆ ಇಂಥ ವಿಪತ್ತು ಬಂದೊದಗಿದಾಗ ಸುಮ್ಮನೆ ಮೂಗು ಹಿಡಿದುಕೊಂಡು ಕುಳ್ಳಿರುವುದು ಮಾತ್ರವೇ ತಮ್ಮ ಕರ್ತವ್ಯವೆಂದೂ ಆ ತಮ್ಮ ಧರ್ಮರಕ್ಷಣಾರ್ಥ ವಾಗಿಯೇ ಸ್ವರಾಜ್ಯವನ್ನು ಸ್ಥಾಪಿಸುವುದು ತಮ್ಮ ಆದ್ಯಕರ್ತವ್ಯವೆಂದೂ ಆಲೋಚಿಸಿ, ಅವರು ವಿಜಯ ನಗರದಲ್ಲಿ ರಾಜ್ಯವನ್ನು ಸ್ಥಾಪಿಸಿದರು ಸಂಗಮ ವಂಶ (೧೩೩೬–೧೪೭೮) ವಿಜಯನಗರದಲ್ಲಿ ಒಟ್ಟು ಮೂರು ವಂಶಗಳು ಆಳಿದುವು. ಮೊದಲನೆಯ ವಂಶವು ಸಂಗಮ ವಂಶವು. ಇದರಲ್ಲಿ "೯ ಜನ ಅರ ಸರು ಆಗಿಹೋದರು. ಇವರು ಯಾದವರು. ಇವರ ಕುಲದೇವತೆ ವಿರೂಪಾಕ್ಷನು. ಬುಕ್ಕರಾಯನೇ ಈ ವಂಶದಲ್ಲಿ ಪ್ರಬಲನಾದ ಮೊದಲನೆಯ ರಾಜನು (೧೩೫೪-೧೩೭೭). ವಿಜಯನಗರದಲ್ಲಿಯ ಕೋಟೆ ಕೊತ್ತಳಗಳನ್ನು ಕಟ್ಟಿಸಿದವನು ಇವನೇ ಇವನಿಗೆ "ಭಾಷೆಗೆ ತಪ್ಪುವ ರಾಯರ ಗಂಡ," "ಪೂರ್ವ ಪಶ್ಚಿಮ-ದಕ್ಷಿಣ ಸಮುದ್ರಾಧೀಶ್ವರ'' ಎಂಬ ಬಿರುದು ಗಳಿದ್ದುವು ೧೪೬೮ನೆಯ ಇಸವಿಯಲ್ಲಿ ಈತನು ಜೈನ ರಿಗೂ ವೈಷ್ಣವರಿಗೂ ಉಂಟಾದ ಜಗಳವನ್ನು ತೀರಿ ಸಿದ ಕಥೆಯು ಮನೋವೇಧಕವಾಗಿದೆ. ಅದರಿಂದ ಈ ಅರಸನು ಧರ್ಮವಿಷಯದಲ್ಲಿ ಎಷ್ಟು ಸಮಬುದ್ಧಿ ಯುಳ್ಳವನಿದ್ದನೆಂಬುದು ಗೊತ್ತಾಗುತ್ತದೆ. ಈ ಬುಕ್ಕ ರಾಯನ ಸೊಸೆಯಾದ ಗಂಗಾದೇವಿಯೆಂಬವಳು "ವೀರ ಕಂಪಣರಾಯ ಚರಿತ'' ವೆಂಬ ಅತ್ಯಂತ ಸರ ಸವಾದ ಸಂಸ್ಕೃತ ಕಾವ್ಯವೊಂದನ್ನು ರಚಿಸಿದ್ದಾಳೆ. ಅದು ಮೊನ್ನೆ ಮೊನ್ನೆ ಪ್ರಸಿದ್ಧವಾಗಿದೆ. ಬುಕ್ಕರಾಯ ಪಟ್ಟಣ ಮುಂತಾದ ಇವನ ಹೆಸರಿನ ಊರುಗಳು ಈಗಲೂ ಪ್ರಸಿದ್ಧವಿರುತ್ತವೆ. ಇವನ ಮಗನಾದ ಹರಿ ಹರನು ವಿದ್ವಾಂಸರಿಗೆ ಬಹಳ ಆಶ್ರಯ ಕೊಡುತ್ತಿ ದ್ದನು. ಈ ೨ನೆಯ ಹರಿಹರರಾಯನನ್ನು 'ಕರ್ನಾಟಕ ವಿದ್ಯಾವಿಲಾಸ'' ನೆಂದು ಕರೆಯುತ್ತಿದ್ದರು. ಈ ಹರಿಹರನ ಕಾಲದಲ್ಲಿ ಗುಂಡನೆಂಬ ಸೇನಾ ನಾಯಕನು ಅನೇಕ ಶೂರಕೃತ್ಯಗಳನ್ನು ಮಾಡಿದನು. ಹರಿಹರನು ೩೦-೮-೧೪೦೪ನೆಯ ಇಸವಿಯಲ್ಲಿ ಮರಣ ಹೊಂದಿದನು.

೨ನೆಯ ದೇವರಾಯನಿಗೆ ಪ್ರೌಢದೇವರಾಯ ನೆಂದೂ ಹೆಸರುಂಟು. ಈತನು ದೂರ್ತವಿಚಾರ ಮಾಡಿ ತನ್ನ ಸೈನ್ಯದಲ್ಲಿ ಮುಸಲ್ಮಾನರನ್ನಿಟ್ಟುಕೊಂಡು, ತನ್ನ ಸೈನಿಕರಿಗೆ ಯುದ್ಧಕಲೆಯನ್ನು ಕಲಿಸಿದನು. ಈತನು ೨೪-೫-೧೪೪೬ ಸತ್ತನು ಇವನ ತರುವಾಯ ಈ

ಸಂಗಮ ವಂಶವು ಕ್ಷಗ್ಗಿತು. ಮುಂದೆ ವಿಜಯನಗರದ ಎರಡನೆಯ ವಂಶವು ಎದ್ದಿತು.

ಸಾಳ್ವರ ಮನೆತನ. (೧೪೭೯-೧೪೯೬) ಸಂಗಮ ಮನೆತನದ ಕೊನೆಯ ಅರಸನಾದ ವಿರೂಪಾಕ್ಷನ ಮುಖ್ಯ ಸರದಾರನಾದ ಸಾಳ್ವನರಸಿಂಹನು ವಿಜಯನಗರದ ಪಟ್ಟವನ್ನು ಸೆಳೆದುಕೊಂಡು ಅರಸನಾದನು. ಮುಸಲ್ಮಾನರಿಗೂ, ವಿಜಯ ನಗರದ ಅರಸರಿಗೂ ಕೃಷ್ಣಾ-ತುಂಗಭದ್ರಾ ನದಿಗಳ ನಡುವಿನ ಸೀಮೆಗಾಗಿ ಆಗಾಗ ಯುದ್ಧಗಳಾಗುತ್ತಿದ್ದವು ಈ ಯುದ್ಧಗಳಲ್ಲಿ ಸಾಳ್ವನರಸಿಂಹನು ಪರಾಕ್ರಮವನ್ನು ತೋರಿಸಿ ಅತ್ಯಂತ ಪ್ರಬಲನಾಗಿದ್ದನು. ಆದುದರಿಂದಲೇ ಇವನಿಗೆ ಸಿಂಹಾಸನವನ್ನು ಎತ್ತಿ ಹಾಕುವುದಕ್ಕೆ ಸಾಧ್ಯವಾಯಿತು. ಆದರೆ ಈತನ ವಂಶಜರು ಬಹಳ ದಿವಸ ಆಳಲಿಲ್ಲ ಈತನ ಮಗನಾದ ಇಮ್ಮಡಿ ನರಸಿಂಹನನ್ನು ನರಸ ಅಥವಾ ನರಸಿಂಗನೆಂಬ ಅವನ ಸೇನಾಧಿಪತಿಯು ೧೪೯೬ನೆಯ ಇಸ್ವಿಯಲ್ಲಿ ಕೊಂದು ಹಾಕಿದಂತೆ ತೋರುತ್ತದೆ

ನರಸ ಮನೆತನ (೧೪೯೬-೧೫೬೭) ಈತನು ಚೇರ ಪಾಂಡ್ಯದೇಶಗಳನ್ನು ಗೆದ್ದನು. ಈತನ ತರುವಾಯ ಈತನ ಮೂರುಮಂದಿ ಮಕ್ಕಳು ಒಬ್ಬರ ಹಿಂದೊಬ್ಬರು ಪಟ್ಟವೇರಿದರು. ಆದರೆ ಅವರಲ್ಲಿ ೨ನೆಯವನಾದ ಕೃಷ್ಣದೇವರಾಯನೇ ಅತ್ಯಂತ ಪ್ರತಾಪಶಾಲಿಯು. ಈತನು ಪಟ್ಟವೇರಿದಕೂಡಲೇ ಮುಸಲ್ಮಾನರೊಡನೆ ಕಾಳಗಕ್ಕೆ ನಿಂತನು ಈತನ ಆಳಿಕೆಯಲ್ಲಿ ಮುಸಲ್ಮಾನರು ಇವನೊಡನೆ ಅನೇಕ ಕಾಳಗಗಳನ್ನು ಹೂಡಿದರೂ, ಅವರಿಗೆ ಒಂದರಲ್ಲಿಯೂ ಜಯಸಿಕ್ಕಲಿಲ್ಲ. ಕೃಷ್ಣರಾಯನು ಮಹಾಪರಾಕ್ರಮಿಯಾಗಿದ್ದುದಲ್ಲದೆ ವಿದ್ಯೆ-ಕಲಾಕೌಶಲ್ಯ-ಔದಾರ್ಯಗಳಲ್ಲಿಯೂ ಬಹು ವಿಖ್ಯಾತನಾಗಿದ್ದನು ... . ಆ ರಾಯನ ಮಾತೃಭಾಷೆಯು ಕನ್ನಡವೇ ಆಗಿತ್ತೆಂದು ಊಹಿಸಲಿಕ್ಕೆ ಬಲವಾದ ಆಸ್ಪದವುಂಟಾಗಿದೆ.” (ಪುಟಗಳು ೮೫-೮೬)

ಈ ವಿಜಯನಗರದ ಅರಸರಕಾಲದಲ್ಲಿ ಆವಾವ ಪ್ರಸಿದ್ಧ ಕವಿಗಳು ಬಾಳಿದರೆಂಬುದನ್ನು ಮೊದಲು ಸಂಕ್ಷೇಪವಾಗಿ ಸೂಚಿಸಿ, ಬಳಿಕ ಕೆಲವು ಪ್ರಸಿದ್ಧ ಕವಿಗಳ ಮತ್ತು ಅವರ ಕಾವ್ಯಗಳ, ತನ್ಮೂಲಕ ಆ ಕಾಲದ ಕರ್ನಾಟಕ ಸಾಹಿತ್ಯಾಭಿವೃದ್ಧಿಯ ಸ್ವರೂಪದ ಸಂಕ್ಷಿಪ್ತ ವಿಮರ್ಶೆಯನ್ನು ಮಾಡುತ್ತೇನೆ ಈ ಸಂದರ್ಭದಲ್ಲಿ ಕರ್ನಾಟಕ ಕವಿಚರಿತೆಯ ೨ ನೆಯ ಸಂಪುಟದ ಅವತರಣಿಕೆ [ ಪುಟಗಳು ೧೬-೧೮ ] ಯಲ್ಲಿ ರಾ|| ಶ್ರೀ|| ನರಸಿಂಹಾಚಾರ್ಯರು ಕೊಟ್ಟ ವಿಜಯನಗರದ ಅರಸರ ಕಾಲದ ಪ್ರಸಿದ್ಧ ಕವಿಗಳ ಸಂಕ್ಷಿಪ್ತ ವಿವರವನ್ನು ಇಲ್ಲಿ ಎತ್ತಿ ಬರೆವುದು ಅನುಚಿತವೆನಿಸದು— “ ವಿಜಯನಗರದ ಅರಸರು— ಒಂದನೆಯ ಹರಿಹರನ ( 1336-1353 ) ಆಳಿಕೆಯಲ್ಲಿ ಮುಗುಳಿಯ ಪುರದ ಅಧಿಪನಾದ ಒಂದನೆಯ ಮಂಗರಸನು ಖಗೇಂದ್ರಮಣಿದರ್ಪಣವನ್ನು ಬರೆದನು. ಧರ್ಮನಾಥ ಪುರಾಣವನ್ನು ಬರೆದ ಮಧುರನು ಎರಡನೆಯ ಹರಿಹರನ ( 1377-1404 ) ಆಸ್ಥಾನ ಕವಿಯಾಗಿದ್ದನು. ಒಂದನೆಯ ಬುಕ್ಕನ ಮಗನಾದ ಕಂಪರಾಜನ ಪುತ್ರ ದೇವರಾಜನು ಸೊಬಗಿನ ಸೋನೆ, ಅಮರುಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಎರಡನೆಯ ದೇವರಾಯನ [ ೧೪೧೯—೧೪೪೬] ಮಂತ್ರಿಗಳಲ್ಲಿ ಲಕ್ಕಣ್ಣ ದಂಡೇಶನು ಶಿವತತ್ವ ಚಿಂತಾಮಣಿಯನ್ನೂ, ಜಕ್ಕಣಾರ್ಯನು ನೂರೊಂದು ಸ್ಥಲವನ್ನೂ ಬರೆದರು. ಇದೇ ರಾಜನ ಮಹಾಪ್ರಧಾನನಾದ ಗುರುರಾಜನ ಪ್ರೇರಣೆಯಿಂದ ಚಂದ್ರಕವಿಯು ವಿರೂಪಾಕ್ಷಾಷ್ಟಕ ಮೊದಲಾದ ಗ್ರಂಥಗಳನ್ನು ರಚಿಸಿದನು. ಇದೇ ದೊರೆಯ ಪ್ರೋತ್ಸಾಹದಿಂದ ಚಾಮರಸನು ಪ್ರಭುಲಿಂಗ ಲೀಲೆಯನ್ನೂ ಮಗ್ಗೆಯ ಮಾಯಿದೇವನು ಶತಕತ್ರಯವನ್ನೂ, ಗುರು ಬಸವನು ಶಿವಯೋಗಾಂಗ ಭೂಷಣವೇ ಮೊದಲಾದ ಸಪ್ತಕಾವ್ಯಗಳನ್ನೂ ಬತ್ತಲೇಶ್ವರನು ರಾಮಾಯಣವನ್ನೂ ಬರೆದರು ಕುಮಾರವ್ಯಾಸನೂ ಇದೇ ರಾಜನ ಆಳಿಕೆಯಲ್ಲಿ ಭಾರತವನ್ನು ಬರೆದಂತೆ ತೋರುತ್ತದೆ. ಮಲ್ಲಿಕಾರ್ಜುನನ (1446-1467) ಆಳಿಕೆಯಲ್ಲಿ ಕಲ್ಲರಸನು ಜನವಶ್ಯವನ್ನೂ ಬರೆದಿದ್ದಾನೆ. ಷಟ್ಸ್ಥಲಜ್ಞಾನ ಸಾರಾಮೃತವನ್ನು ರಚಿಸಿದ ತೋಂಟದ ಸಿದ್ಧಲಿಂಗನು ವಿರೂಪಾಕ್ಷನ [ 1467-1478 ] ಆಳಿಕೆಯಲ್ಲಿ ಬಾಳಿದನು. ಕವಿಲಿಂಗನ ಪದ ಎಂಬ ಗ್ರಂಥವನ್ನು ರಚಿಸಿದ ಕವಿಲಿಂಗನು ಸಾಳುವ ನರಸಿಂಗರಾಯನ(1487-1493) ಆಸ್ಥಾನ ಕವಿಯಾಗಿದ್ದನು. ಕೃಷ್ಣರಾಯನ [1509—1529] ಆಜ್ಞಾನುಸಾರವಾಗಿ ತಿಮ್ಮಣ ಕವಿ ಭಾರತದ ಉತ್ತರ ಭಾಗವನ್ನು ಬರೆದನು, ಚಾಟುವಿಟ್ಠಲನಾಥ ಎಂಬ ಬಿರುದುಳ್ಳ ಸದಾನಂದ ಯೋಗಿಯು ಅಚ್ಯುತರಾಯನ(1530-1543) ಆಳಿಕೆಯಲ್ಲಿಯ ಭಾಗವನ್ನು ಬರೆದಂತೆ ತೋರುತ್ತದೆ. ಸದಾಶಿವರಾಯನ (1543—1567) ಆಳಿಕೆಯಲ್ಲಿ ಸಲಕರಾಜನ ಮಗನಾದ ತಿರುಮಲರಾಯನು ಕಾಲಜ್ಞಾನ

ಬರೆದ ಎಮ್ಮೆ ಬಸವನಿಗೆ ಒಂದು ಗ್ರಾಮವನ್ನು ್ಕಂತೆ ತಿಳಿಯುತ್ತದೆ. ಶಬ್ದಾನ ಶಾಸನವನ್ನು ಭಟ್ಟಾಕಳಂಕನ ಗುರುವಾದ ಭಟ್ಟಾಕಳಂಕನು ಸಿ ಶ್ರೀರಂಗರಾಯನ (1573—158 ) ಆಸ್ಥಾನ ಆತನ ಪ್ರೇರಣೆಯಿಂದ ಸಾರತ್ರಯವನ್ನೂ ಕಾರತ್ರಯವನ್ನೂ ಓದಿ ಕೀರ್ತಿಪಡೆದಂತೆ-

ಂಗರಾಜನೃಪತಿ । ಪ್ರೇರಣೆಯಿಂವಿಜಯ
ಮುನಿಪನುಪದೇಶನದಿಂ ।
ತ್ರಿತಯಮುಮನಲಂ ।
ರತ್ರಿತಯಮುಮನೋದಿಜನಮಂ ಪಡೆವಂ ॥

ಬಿಳಗಿ ತಾಲೂಕಿನಲ್ಲಿರುವ ಒಂದು ಶಾಸನದ ದಿಂದ ತಿಳಿಯುತ್ತದೆ. ಅದೇ ಶಾಸನದಲ್ಲಿ ನುಶಾಸನಕರ್ತನಾದ ಭಟ್ಟಾಕಳಂಕನು ಗನೆಯ ಟಪತಿರಾಯನ ( 1586-1617 ) ಆಳಿಕೆಯಲ್ಲಿ ವಂತೆ ಹೇಳಿದೆ ”

ಗ ಮೇಲೆ ಹೇಳಿದ ಕವಿಗಳಲ್ಲಿ ಕೆಲವರ ಮತ್ತು ಕಾವ್ಯಗ್ರಂಥಗಳ ವಿಚಾರವನ್ನು ಸ್ವಲ್ಪ ಮಾಡು ೆ. ವಿಜಯನಗರ ಸಾಮ್ರಾಜ್ಯಸ್ಥಾಪನೆಯಾದ ದಲ್ಲಿಯಾಗಲಿ ಅದಕ್ಕೆ ಕೊಂಚ ಪೂರ್ವದಲ್ಲಿಯಾ ಕನ್ನಡದಲ್ಲಿ ಷಟ್ಪದೀಕಾವ್ಯಗಳು ವಿಶೇಷ ಪ್ರಚಾ ಬಂದಿದ್ದುವು, ಕಾವ್ಯಪಠನವು ಕೇವಲ ಜೈನ-ೇತರ ಪಂಡಿತರಿಗೆಮಾತ್ರ ಸಾಧ್ಯಕಾರ್ಯವಾಗಿದೆ, ಾನ್ಯರೂ ತಮ್ಮ ಜೀವನದಲ್ಲ ಅಭ್ಯಾಸಿಸಿಕೊಳ್ಳ ವಾದ ಒಂದು ಕಲೆಯಾಗಿ ಪರಿಣಮಿಸಿತು ಷ್ಕರ ಹಾವಳಿಯು ಮತ್ತು ಅನ್ಯಮತೀಯರ ರದ ದಸೆಯಿಂದ ಕಂದಿಕುಂದಿದ್ದ ಹಿಂದೂ ರ್ಕ್ಕೆ ಹಿಂದುರಾಜರ ಪುರಸ್ಕಾರದಿಂದಲಾಗಿ ಪುನಃ ಪೇರಿದುದರಿಂದ ಧರ್ಮಶಾಸ್ತ್ರಗ್ರಂಥಗಳ ಮೇಲೆ ಷ್ಯವ್ಯಾಖ್ಯಾನಗಳೇ ಮೊದಲಾದುವುಗಳೂ, ಹಿಂದೂ ರ್ಮದ ಸಾರವನ್ನು ಪ್ರತಿಬಿಂಬಿಸತಕ್ಕ ಅನೇಕ ವ್ಯಗ್ರಂಥಗಳೂ, ವೇದಾಂತಗ್ರಂಥಗಳೂ ಶ್ರೀವಿದ್ಯಾ —ಸಾಯಣ ಮುಂತಾದ ಹಲವು ವಿದ್ವಾಂಸರಿಂದ ಸ್ಕೃತದಲ್ಲಿ ಹೇಗೆ ರಚಿಸಲ್ಪಟ್ಟುವೊ, ಹಾಗೆ ಕರ್ನಾ ಕವಿಗಳಿಂದ ಪುರಾಣಗಳೂ ಶಾಸ್ತ್ರಗ್ರಂಥಗಳೂ, ವೈ- ಜ್ಯೋತಿಷ- ನೀತಿಗ್ರಂಥಗಳೂ, ಇನ್ನಿತರ ವ್ಯಗ್ರಂಥಗಳೂ, ವಿದ್ವಾಂಸರಲ್ಲದವರೂ ತಿಳಿದು ಳ್ಳಬಹುದಾದ ಸುಲಭಶೈಲಿಯಲ್ಲಿ ನಿತ್ಯ ಪಠನಕ್ಕೆ ೋಗ್ಯವಾಗುವ ರೀತಿಯಲ್ಲಿ, ವಿರಚಿಸಲ್ಪಟ್ಟುವು. ಗಾದುದರಿಂದ ಕನ್ನಡದಲ್ಲಿ ಭಾರತ, ರಾಮಾಯಣ, ಭಾಗವತ, ಜೈಮಿನಿಭಾರತ, ಶಿವಪುರಾಣ, ಆದಿತ್ಯ ಪುರಾಣಗಳೇ ಮೊದಲಾಗಿ ಕಾವ್ಯರೂಪದಲ್ಲಿ ಅನೇಕ ಇತಿಹಾಸಪುರಾಣ ಗ್ರಂಥಗಳು ವಿರಚಿತವಾಗಿ ಕನ್ನಡಿಗರಲ್ಲಿ ಪ್ರಚಾರಕ್ಕೆ ಬಂದುವು. ವೀರಶೈವ ಕವಿಗಳು ಇದೇ ರೀತಿಯಲ್ಲಿ ತಮ್ಮ ಮತಗ್ರಂಥಗಳನ್ನೂ ಷಟ್ಪದೀಕಾವ್ಯಗಳಾಗಿಯೂ ವಚನಗಳಾಗಿಯೂ ಕನ್ನಡಿಸಿದರು. ಈ ಕಾಲದಲ್ಲಿ ಜೈನಕವಿಗಳೂ ಇಲ್ಲದೆ ಇರಲಿಲ್ಲ. ಇದರಿಂದ ವಿಜಯನಗರದ ಅರಸರ ಕಾಲದಲ್ಲಿ ಎಲ್ಲಾ ಮತದ ಕವಿಗಳಿಗೂ ಪುರಸ್ಕಾರವು ದೊರಕುತ್ತಿತ್ತೆಂದು ಧಾರಾಳವಾಗಿ ಹೇಳಬಹುದು. ಆ ಕಾಲದಲ್ಲಿ ಅಲ್ಲಲ್ಲಿ ಹಳ್ಳಿಯ ಜನಗಳೂ ಕೂಡ ವಿರಾಮಕಾಲದಲ್ಲಿ ತಮ್ಮ ಮನೆಗಳಲ್ಲಿ ಈ ಗ್ರಂಥಗಳನ್ನು ರಾಗದಿಂದ ಓದುವುದು ಇಲ್ಲವೆ ಹಾಡಲು ಬಲ್ಲವರಿಂದ ಹಾಡಿಸುವುದು ಮೊದಲಾದ ಕಾರ್ಯಗಳಮೂಲಕ ಸಾಹಿತ್ಯದಲ್ಲಿ ತಮಗಿರುವ ಅಭಿರುಚಿಯನ್ನೂ ಆನಂದವನ್ನೂ ವ್ಯಕ್ತಪಡಿಸ ತೊಡಗಿದರು. ಆಮುಮರಿಂದಲೇ ಲಕ್ಷಣಬದ್ಧವಾದ ಪ್ರೌಢಶೈಲಿಯ ಚಂಪೂಗ್ರಂಥಗಳಿಗಿಂತ, ಇಂತಹ ಷಟ್ಪದೀ ಕಾವ್ಯಗಳೂ, ಹಾಡುಗಬ್ಬಗಳೂ, ವಚನಗಳೂ ಹೆಚ್ಚು ಪ್ರಚಾರಕ್ಕೆ ಬಂದುವೆನ್ನಬೇಕಾಗುತ್ತದೆ. ವಿದ್ವಾಂಸರಲ್ಲದವರೂ ಕೆಲವು ಪೌಳಿ ಗ್ರಂಥರಚನೆಯನ್ನು ಮಾಡುತ್ತಿದ್ದರೆಂಬುದಕ್ಕೆ ಅನೇಕ ನಿದರ್ಶನಗಳು ಸಿಕ್ಕುತ್ತವೆ; ಆದರೆ ಇಂತಹರಿಗೆ ರಾಜಾಶ್ರಯವು ದೊರಕುತ್ತಿತ್ತೆಂದು ಹೇಳಲು ಬರವುದಿಲ್ಲ. ಜನಗಳ ಮನಸ್ಸನ್ನೊಲಿಸಿ. ಅವರಿಗೆ ಆನಂದವನ್ನುಂಟು ಮಾಡಿ. ತನ್ಮೂಲಕ ಸ್ವಧರ್ಮ-ನೀತಿಗಳಲ್ಲಿ ವ ನಸ್ಸು ನೆಡುವಂತೆ ಮಾಡುವದು ಕವಿಯ ಅಥವಾ ಶಾಸ್ತ್ರಕಾರನ ಕರ್ತವ್ಯವೆಂದು ಆ ಕಾಲದ ಜನರು ತಿಳಿದುಕೊಂಡಿದ್ದರು. ಗದುಗು ಭಾರತವೆಂದು ಪ್ರಸಿದ್ಧಿಹೊಂದಿದ ಕನ್ನಡ ದಶಪರ್ವಭಾರತವನ್ನು ಬರೆದ ಗದಗಿನ ನಾರಣಪ್ಪನು ಈ ಅಭಿಪ್ರಾಯವುಳ್ಳ ಕವಿಸಮುದಾಯದಲ್ಲಿ ಅಗ್ರಗಣ್ಯನಾಗಿರುವನೆಂದು ನನ್ನ ಅಭಿಪ್ರಾಯವು ಇವನು ವಿಜಯನಗರದ ಆರಸರ ಸಮ ಕಾಲೀನನಾಗಿದ್ದನೆಂದು ಕೆಲವರೂ, ಮತ್ತೆ ಕೆಲವರು, ಇವನು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತ ಎಷ್ಟೋ ಹಿಂದಿನವನಾಗಿದ್ದನೆಂದೂ, ಇನ್ನೂ ಚರ್ಚೆಯು ನಡೆಯುತ್ತಲಿದೆ. ಅದರಂತೆ ಉಳಿದ ಕೆಲಮಂದಿ ಕವಿಗಳ ಕಾಲ ನಿರ್ಣಯವೂ ಸಂದೇಹಾಸ್ಪದಗಳಾಗಿಯೇ ಉಳಿದಿವೆ. ಕನ್ನಡ ಜೈಮಿನಿಭಾರತದ ಕರ್ತೃವಾದ ಲಕ್ಷ್ಮೀಶನು ವಿಜಯನಗರದ ಮೊದಲನೆಯ ಹರಿಹರನ ಸಮ

ಕಾಲೀನನಾಗಿದ್ದಿರಬೇಕೆಂಬ ಊಹೆಯನ್ನು ರಾ. ಶ್ರೀ. ಮಂಜೇಶ್ವರ ಗೋವಿಂದಪೈಗಳವರು ಹೊರಗೆಡವಿದ್ದಾರೆ:—“ಇವೆಲ್ಲ ಕಾರಣಗಳಿಂದ ಜೈಮಿನಿಭಾರತದಲ್ಲಿ ವಿಜಯನಗರದ ಮೊದಲನೆಯ ಹರಿಹರರಾಯನನ್ನು ವ್ಯಂಗ್ಯವಾಗಿ ಸೂಚಿಸಿದೆ ಎಂದೂ, ಲಕ್ಷ್ಮೀಶನು ಆ ಅರಸನ ಸಮಸಾಮಯಿಕನಾಗಿದ್ದಿರಬೇಕೆಂದೂ ನನ್ನ ನಂಬುಗೆ. ಆದುದರಿಂದ ನನ್ನೀ ತರ್ಕಸರಣಿ ಸರಿಯೆಂದಾದರೆ ಜೈಮಿನಿಭಾರತದ ರಚನೆ ಆ ಹರಿಹರನ ಕಾಲದಲ್ಲಿ ಅಂದರೆ ಕ್ರಿ. ಶ. ೧೩೩೫ ರಿಂದ ೧೩೫೨ ರೊಳಗೆ ಆಗಿದ್ದಿರಬೇಕು” [‘ಕವಿ ಲಕ್ಷ್ಮೀಶ’ ಎಂಬ ಪುಸ್ತಕದಲ್ಲಿ, ರಾ. ಶ್ರೀ. ಗೋವಿಂದಪೈಗಳವರ ‘ಲಕ್ಷ್ಮೀಶಕವಿಯ ಕಾಲ’ ಎಂಬ ಲೇಖನ ಪುಟ ೯೬.) ಈ ಸಿದ್ಧಾಂತವು ಸರಿಯಾದರೆ ಲಕ್ಷ್ಮೀಶನನ್ನೂ ವಿಜಯನಗರದ ಅರಸರ ಆಳಿಕೆಯ ಕಾಲದ ಕವಿಗೋಷ್ಠಿಯಲ್ಲಿ ಪರಿಗಣಿಸಬೇಕಾಗುವುದು. ಲಕ್ಷ್ಮೀಶನ ಜೈಮಿನಿಭಾರತವನ್ನು ಓದದ ಕನ್ನಡಿಗರು ಕಡಿಮೆ; ಕನ್ನಡನಾಡಿನಲ್ಲಿ ಅಷ್ಟು ಪ್ರಸಿದ್ಧವಾಗಿದೆ ಆ ಕಾವ್ಯವು. ಲಕ್ಷ್ಮೀಶನ ಮತ್ತು ಆತನ ಕಾವ್ಯದ ವಿಚಾರವಾಗಿ ಈಗಾಗಲೇ ವಿಮರ್ಶಾಪ್ರಬಂಧಗಳು ಬರೆಯಲ್ಪಟ್ಟಿರುವುದರಿಂದ ಇಲ್ಲಿ ಪ್ರತ್ಯೇಕವಾಗಿ ವಿಸ್ತರಿಸಿ ಹೇಳುವ ಅವಶ್ಯಕತೆಯಿಲ್ಲ. ಕುಮಾರವ್ಯಾಸನೆಂದು ಪ್ರಸಿದ್ಧನಾದ ಗದುಗಿನ ನಾರಣಪ್ಪನೂ, ಕುಮಾರ ವಾಲ್ಮೀಕಿಯೆಂದು ಪ್ರಸಿದ್ಧನಾದ ಮತ್ತು ತೊರವೆ ರಾಮಾಯಣದ ಕರ್ತೃವಾದ ನರಹರಿಯೂ, ಕನ್ನಡ ಭಾಗವತದ ಕರ್ತೃವಾದ ನಿತ್ಯಾತ್ಮಶುಕಯೋಗಿಯೆಂದು ಪ್ರಸಿದ್ಧನಾದ ನಿತ್ಯಾತ್ಮಶುಕಯೋಗಿಯೂ ಕನ್ನಡಿಗರಾದ ಹಿಂದುಗಳಲ್ಲಿ ಯಾರಿಗೆ ತಾನೇ ಅಪರಿಚಿತರು ? ಇವರ ಕಾಲನಿರ್ಣಯದ ವಿಷಯದಲ್ಲಿ, ಮುಖ್ಯವಾಗಿ ಭಾಗವತವು ಒಬ್ಬನೇ ಕವಿಯಿಂದ ರಚಿತವಾಯ್ತೇ ಅಥವಾ ನಾಲ್ವರು ಕವಿಗಳಿಂದ ಬೇರೆ ಬೇರೆ ಸ್ಕಂಧಗಳಾಗಿ ರಚಿತವಾಯ್ತೋ ಎಂಬ ವಿಷಯದಲ್ಲಿ, ಭಿನ್ನಾಭಿಪ್ರಾಯಗಳಿವೆ. ಆದರೆ ಇವರೆಲ್ಲರ ಕಾವ್ಯಗಳ ಪ್ರಾಶಸ್ತ್ಯ ಪ್ರಾಚುರ್‍ಯಗಳ ವಿಷಯದಲ್ಲಿ, ಆವ ಕರ್ನಾಟಕ ಸಾಹಿತಿಗೂ ಭಿನ್ನಾಭಿಪ್ರಾಯಗಳಿದ್ದಂತೆ ತೋರುವುದಿಲ್ಲ. ಒಂದನೆಯ ಹರಿಹರನ ಕಾಲದಲ್ಲಿ ಬಾಳಿದ ಮೊದಲನೆಯ ಮಂಗರಸನು ‘ಖಗೇಂದ್ರಮಣಿ ದರ್ಪಣವೆಂಬ ವಿಷವೈದ್ಯ ಗ್ರಂಥವನ್ನು ಪದ್ಯರೂಪವಾಗಿ ಬರೆದನೆಂದು ಮೊದಲೇ ಸೂಚಿತವಾಗಿರುವುದಷ್ಟೆ! ಅದು ವೈದ್ಯ ಶಾಸ್ತ್ರಗ್ರಂಥವಾದರೂ ಜನಸಾಮಾನ್ಯಕ್ಕೂ ಪ್ರಯೋಜನಕರವಾಗುವ ರೀತಿಯಲ್ಲಿ, “ಕನ್ನಡದಿಂ ಸಮಸ್ತಜನಗೋಚರಮಪ್ಪವೊಲು” ರಚಿಸಲ್ಪಟ್ಟಿದ್ದು, ಬಹಳ ಲಲಿತವಾಗಿದೆ. ಈ ಮಂಗರಸನು ಪ್ರೌಢಕವಿಯೆಂದೂ ಬೇರೆ ಗ್ರಂಥಗಳನ್ನೂ ಬರೆದಿರಬಹುದೆಂದೂ ಕವಿಚರಿತ್ರಕಾರರು ಊಹಿಸುತ್ತಾರೆ. ಬುಕ್ಕರಾಜನ ಮಗನಾದ ಹರಿಹರರಾಯನ ದಂಡಾಧಿಪನಲ್ಲಿ ಆಶ್ರಿತನಾಗಿದ್ದ ಮಧುರ ಕವಿಯು ಸುಮಾರು ಕ್ರಿ. ಶ. ೧೩೮೫ ರಲ್ಲಿ ಇದ್ದಿರಬಹುದೆಂದು ಕವಿಚರಿತ್ರಕಾರರ ಅಭಿಪ್ರಾಯವು. ಈ ಮಧುರಕವಿಯು ಜೈನನು; ಈತನು ಬರೆದ ಧರ್ಮನಾಥ ಪುರಾಣವು, “ಆದಿ ಪುರಾಣಂಗಳ್ ಪಳವಾದುವೆನಲ್ ಮತ್ತೆ ಮಧುರಕವಿತಾಮೃತಮುತ್ಪಾದಿಸೆ” ಚೋದ್ಯವೂ ಅಭಿನವವೂ ಅಯ್ತಂತೆ! ಲಕ್ಷಣಬದ್ಧವಾದ ಈ ಕಾವ್ಯವು ಬಹುಮಟ್ಟಿಗೆ ಜೈನ ಚಂಪೂ ಕಾವ್ಯಗಳನ್ನು ಹೋಲುತ್ತದೆ; ಆದರೆ ಶೈಲಿಯಲ್ಲಿ ಮಾತ್ರ ಪ್ರಾಚೀನ ಕವಿಗಳ ಪ್ರೌಢಿಮೆಯು ಬಿಗುವು ತೋರಿ ಬರುವುದಿಲ್ಲವೆಂದು ಹೇಳಬೇಕಾಗಿದೆ. ಕಾಲಾನುಕೂಲವಾಗಿ ಭಾಷಾಶೈಲಿಯಲ್ಲಾಗುವ ಬದಲಾವಣೆಯು ಇದಕ್ಕೆ ಕಾರಣವಾಗಿದ್ದರೂ ಇರಬಹುದು. ವಿಜಯನಗರದ ಸಂಗಮವಂಶದ ಅರಸರಲ್ಲಿ ಕಂಪರಾಯನ ಮಗನಾದ ದೇವರಾಜನು ಸೊಬಗಿನ ಸೋನೆ ಮತ್ತು ಅಮರುಕ ಎಂಬ ಎರಡು ಗ್ರಂಥಗಳನ್ನು ಬರೆದಿರುವನೆಂದು ಮೊದಲೇ ಹೇಳಿದೆಯಷ್ಟೆ. ‘ಸೊಬಗಿನ ಸೋನೆ’ ಯು ಸಾಂಗತ್ಯವೆಂಬ ಹಾಡುಗಬ್ಬದ ರೀತಿಯಲ್ಲಿ ‘ಚದುರ ಕರ್ಣಾಟದ ಕಳೆಯುರಿವನ ಬಗ್ಗನ ಬಗೆ’ ಯಾಗುವಂತೆ ರಚಿಸಲ್ಪಟ್ಟಿದ್ದು, ನಿಜವಾಗಿಯೂ ಕರ್ನಾಟಕ ಸಾಹಿತ್ಯ ರಸದ ಸೊಬಗಿನ ಸೋನೆಯೇ ಆಗಿದೆ. ಇಂತಹ ರಸವತ್ಕೃತಿಯು ಇನ್ನೂ ಅಚ್ಚಾಗಿ ಪ್ರಕಟವಾಗಿಲ್ಲವಾದುದರಿಂದ, ಇದರ ಸಮಗ್ರ ವಿಮರ್ಶೆಯನ್ನು ಈಗಲೇ ಮಾಡಲು ಸಾಧ್ಯವಿಲ್ಲ.

ವಿಜಯನಗರದ ಅರಸರಲ್ಲಿ ತುಳುವಂಶದ ಕೃಷ್ಣದೇವರಾಯನೇ ಅತ್ಯಂತ ಪ್ರಖ್ಯಾತನು. ಈತನು ‘ಭುಜಬಲದಿ ಪಟ್ಟವ ಕಟ್ಟಿಕೊಂಡು ಅಖಿಳ ಕರ್ಣಾಟಾಧಿಪತಿಯಾಗಿ ಒಲಿದಿಳೆಯನಾಳಿದನು.’ ಈತನು ಅನೇಕ ಕವಿಗಳಿಗೆ ಆಶ್ರಯದಾತನಾಗಿದ್ದನು. ಈತನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳಂತೆ ಎಂಟು ಮಂದಿ ಕವೀಂದ್ರರಿದ್ದುದರಿಂದ, ಈತನನ್ನು ‘ಆಂಧ್ರಭೋಜ’ ನೆಂದು ತೆಲುಂಗರು ನಿರ್ದೇಶಿಸಿರುವರು.

ಕನು ಹುಟ್ಟುಕನ್ನಡಿಗನಾದ ಅರಸನೆಂದು ನಂಬು
ರಕ್ಕೆ ಬಲವಾದ ಆಸ್ಪದಗಳುಂಟಾಗಿವೆ ಎಂದು
,, ಶ್ರೀ ಆಲೂರು ವೆಂಕಟರಾಯರು ಮಾಡಿರುವ
ದ್ಧಾಂತವು ಒಪ್ಪತಕ್ಕದ್ದಾಗಿದೆ ಈತನ ಆಸ್ಥಾನ
ಗಳಲ್ಲಿ ಪ್ರಸಿದ್ಧನಾಗಿದ್ದ ಕರ್ನಾಟಕ ಕವಿ
ುದರೆ ತಿಮ್ಮಣ್ಣ ಕವೀಂದ್ರನ. ಈ ತಿಮ್ಮಣ್ಣ
ಯು ಕೃಷ್ಣರಾಯನ ಅಜ್ಞೆಯಂತೆ ಭಾರತದ
ನೆಯ ಎಂಟು ಪರ್ವಗಳನ್ನು ಕನ್ನಡ ಭಾಮಿನಿ
ಪ್ರದಿಯಲ್ಲಿ ರಚಿಸಿ, 'ಜನಪನರಸಯಕೃಷ್ಣ
ಮುಸಿಗಂಕಿತವನಾಡಿ'' ದ್ದಾನೆ. ಈತನು 'ಭಾನು
ಪ್ಪನ ತನುಜ' ನೆಂದು ಹೇಳಿಕೊಂಡಿರುವದರಿಂದ
ನ ಅಂಕಿತನಾಮವೂ ತಿಮ್ಮಣ್ಣಭಟ್ಟ ಎಂದಿದ್ದಿರ
ಕು. "ಭಾರದ್ವಾಜಕುಲವಿಖ್ಯಾತ ಪದವಾಕ್ಯ
ಮಾಣಜ್ಞಾತಿಶಯವಿಖ್ಯಾತ ಭಾನ ಪೀಂದ್ರ
ತ್ಮಜ'' ಎಂದಿರುವದರಿಂದ ಈತನ ತಂದೆಯಾದ
ನುಭಟ್ಟನು ಘನ ವಿದ್ವಾಂಸನೂ ಕವಿಶ್ರೇಷ್ಠನೂ
ದ್ದನೆಂದು ಹೇಳಬೇಕಾದುದು ಮಾತ್ರವಲ್ಲದೆ,
ವ್ಯಗಳನ್ನೂ ರಚಿಸಿದ್ದಿರಬೇಕೆಂದೂ ಊಹಿಸ
ಕಾಗುತ್ತದೆ. ಆದರೆ ಇದುವರೆಗೆ ಆತನ ಕನ್ನಡ
ವ್ಯವಾವುದೂ ದೊರಕಿದಂತೆ ಕಾಣುವುದಿಲ್ಲ ತಂದೆ
ಂತೆ ಮಗನಾದ ತಿಮ್ಮಣ್ಣ ಭಟ್ಟನೂ ವಿದ್ವಾಂಸ
ಗಿದ್ದು ಪ್ರತಿಭಾಸಂಪನ್ನನಾದ ಕವಿಯಾಗಿದ್ದು
ಂದಲೇ ಕೃಷ್ಣದೇವರಾಯನಂತಹ ಪ್ರಖ್ಯಾತಮಹಾ
ಜನ ಆಸ್ಥಾನದಲ್ಲಿ ಬೆಳಗಿದನೆನ್ನಲು ಅಡ್ಡಿಯಿಲ್ಲ.
ನು ರಚಿಸಿದ ಅಷ್ಟಪರ್ವಭಾರತವನ್ನು ಆಮೂ
ಗ್ರ ಸಾವಧಾನವಾಗಿ ಓದಿದರೆ ಈತನ ಪ್ರೌಢಿ
ಮೂ ಪ್ರತಿಭೆಯೂ ನಿರರ್ಗಳವಾದ ಕವಿತಾ
ವಾಹ ಸೌಲಭ್ಯವೂ ತೋರಿಬರುವುವು ಈತನು
ಮಾರವ್ಯಾಸನಿಗೆ ಆವ ವಿಧದಲ್ಲಿಯೂ ಹಿಂದುಳಿದವ
ವೆಂದು ತೋರುವುದು ಒಂದೆರಡು ವಿಷಯ
ಲ್ಲಿ ಕುಮಾರವ್ಯಾಸನಿಗಿಂತಲೂ ಈತನೆ ಅಧಿಕ
ಬೇಕಾಗುವುದೆಂದು ನನ್ನ ಅಭಿಪ್ರಾಯವು
ಮಾರವ್ಯಾಸನ ವಾಗ್ಲಹರಿಯೇನೋ ಅದ್ಭುತವೂ
ರ್ಗಳವೂ ಆಗಿದೆಯೆಂಬುದು ನಿಜವು; ಆತನ
ತಾ ಪ್ರವಾಹದ ವೇಗವನ್ನೂ ಪ್ರತಿಭಾ ಸಂಪತ್ತಿನ
ಶ್ವರ್ಯವನ್ನೂ ಮೀರಿಸತಕ್ಕ ಕವಿಗಳು ಅಪೂರ್ವ
ಬುದೂ ವಾಸ್ತವವು. ಆದರೆ ಆತನಲ್ಲಿ ವಿಶೇಷ
ಷಾವ್ಯುತ್ಪತ್ತಿಯೂ ಪಾಂಡಿತ್ಯವೂ ಇದ್ದಂತೆ ತೋರುವುದಿಲ್ಲ ತಿಮ್ಮಣ್ಣಭಟ್ಟನು ಒಳ್ಳೆ ವಿದ್ವಾಂಸನು. ಆದುದರಿಂದ ಆತನ ಕವಿತೆಯಲ್ಲಿಯು ಬಂಧಗೌರವವು ಕುಮಾರ ವ್ಯಾಸನದಕಿಂತ ಹೆಚ್ಚಿನದೆನ್ನಬೇಕಾಗುತ್ತದೆ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ರಚಿಸುವಲ್ಲಿ ಕವಿಯ ಪ್ರತಿಭಾ ಪ್ರವಾಹ ಸ್ವಾತಂತ್ರ್ಯಕ್ಕೆ ಎಡೆಯಿರುವಷ್ಟು ಮುಂದಿನ ಎಂಟು ಪರ್ವಗಳಲ್ಲಿಲ್ಲವೆಂದು ಆ ಎರಡು ಭಾಗಗಳನ್ನೂ ತುಲನೆ ಮಾಡಿ ನೋಡಿದರೆ ತಿಳಿಯಬಹುದು ಹೀಗಾಗುವುದಕ್ಕೆ ಆ ಆ ಭಾಗಗಳಲ್ಲಿಯ ಕಥಾವಸ್ತುಗಳೇ ಹೆಚ್ಚಿನ ಮಟ್ಟಿಗೆ ಕಾರಣವೆಂದು ನಾನು ತಿಳಿಯುತ್ತೇನೆ ಶಾಂತಿಪರ್ವದಲ್ಲಿ ರಾಜನೀತಿ ಪ್ರತಿಪಾದಿಸಲ್ಪಟ್ಟದೆಯಷ್ಟೆ. ಅದನ್ನು ಕನ್ನಡಿಸುವಲ್ಲಿ ಕವಿಯು ತನ್ನ ಪ್ರತಿಭೆಯನ್ನು ತೋರಿಸಲು ಅವಕಾಶವು ಕಡಿಮೆ. ಅಲ್ಲಿ ಬೇಕಾದುದು ಪಾಂಡಿತ್ಯದಿಂದೊಡಗೂಡಿದ ಕವಿತಾಶಕ್ತಿ. ತಿಮ್ಮಣ್ಣಭಟ್ಟನು ಅದನ್ನು ಅತ್ಯುತ್ಕೃಷ್ಟ ರೀತಿಯಲ್ಲಿ ಪೂರೈಸಿರುವನು ಈತನು ವಿಶೇಷ ಪ್ರತಿಭಾವಂತನೆಂಬುದನ್ನು-ಸ್ಪಷ್ಟಪಡಿಸತಕ್ಕ ಹಲವು ಅಂಶಗಳು ಈತನ ಕೃಷ್ಣರಾಯ ಭಾರತದಲ್ಲಿ ಹೇರಳವಾಗಿ ಉಂಟು ಈ ವಿಷಯವಾದ ವಿಮರ್ಶೆಯನ್ನು ಎಂದರೆ ಕುಮಾರ ವ್ಯಾಸ ಮತ್ತು ತಿಮ್ಮಣ್ಣಭಟ್ಟ ಇವರ ಶೈಲಿಗಳ ತುಲನಾತ್ಮಕ ವಿಮರ್ಶೆಯನ್ನು. ಲೇಖನ ವಿಸ್ತರ ಭಯದಿಂದಲಾಗಿ, ಇಲ್ಲಿ ಬರೆವುದಕ್ಕಿಂತ ಪ್ರತ್ಯೇಕವಾಗಿ ಬರೆವುದಕ್ಕೆ ಸಂಕಲ್ಪಿಸಿದ್ದೇನೆ

ವಿಜಯನಗರದ ಅರಸರ ಆಳಿಕೆಯ ಕಾಲದಲ್ಲಿ ಬಾಳಿದ ಕವಿಗಳು ಇನ್ನೂ ಅನೇಕರಿದ್ದರು ಇವರಲ್ಲಿ ಹಲವರು ಉತ್ತಮ ಕಾವ್ಯಗ್ರಂಥಗಳನ್ನು ರಚಿಸಿದವರೇ ಕವಿಚರಿತೆಯಲ್ಲಿ ಇವರ ಸಂಕ್ಷಿಪ್ತ ಚರಿತ್ರೆಗಳು ಬರೆದಿರುವುದನ್ನು ನೋಡಿಕೊಳ್ಳಬಹುದು. ಪ್ರಸ್ತುತದಲ್ಲಿ ಇವರೆಲ್ಲರನ್ನೂ ವಿಮರ್ಶೆಗೊಳಪಡಿಸುವುದೆಂದರೆ, ಈಗಳೇ ಇಚ್ಛಿಸಿರುದಕ್ಕಿಂತ ಹೆಚ್ಚಾಗಿದ್ದ ಬಳೆದ ಈ ಲೇಖನವು ದೊಡ್ಡದೊಂದು ಗ್ರಂಥವೇ ಆಗಬಹುದು ಆದುದರಿಂದ ಆ ತೊಡಕಿಗೆ ಹೋಗದೆ ಒಟ್ಟಾರೆ ವಿಜಯನಗರದ ಅರಸರ ಆಳಿಕೆಯಲ್ಲಿ ಕರ್ನಾಟಕ ಸಾಹಿತ್ಯದ ಸರ್ವತೋಮುಖವಾದ ಅಭಿವೃದ್ಧಿಯು ಉಂಟಾಗಿ ಕನ್ನಡ ನಾಡಿನಲ್ಲೆಲ್ಲಾ ವಿಶೇಷ ಪ್ರಚಾರಕ್ಕೆ ಬಂತು ಎಂಬುದನ್ನು ಸೂಚಿಸಿ ಈ ಲೇಖನವನ್ನು ಉಪಸಂಹರಿಸುತ್ತೇನೆ. ಭದ್ರಂ ಶುಭಂ ಮಂಗಳಂ.

# ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ
# ಜೈನಧರ್ಮದ ಪರಿಸ್ಥಿತಿ.

( ಲೇಖಕರು:—ಪ್ರೊ. ಶ್ರೀಪಾದ ರಾಮ ಶರ್ಮಾ ಎಮ್. ಎ. ಫರ್ಗ್ಯುಸನ್ ಕಾಲೇಜ, ಪುಣೆ )

ವಿಜಯನಗರದ ವೈಭವವು ಅನೇಕ ಮೈಗಳುಳ್ಳ ವಜ್ರದಂತಿರುವದು. ಅದರೊಳಗಿನ ಒಂದಂಶವನ್ನು ಕುರಿತು ಇಲ್ಲಿ ಬರೆಯಲಾಗುವದು. ವಿಜಯನಗರದ ಆಧಿಭೌತಿಕ ವೈಭವವು ಎಷ್ಟೇ ಮಿಗಿಲಾದದ್ದು ಇದ್ದರೂ ಅವರ ಆಧ್ಯಾತ್ಮಿಕ ಸಂಪತ್ತಿನ ಮುಂದೆ ಅದು ತೀರ ಕಡಿಮೆಯಾಗಿ ತೋರುವದು. ದಕ್ಷಿಣ ಹಿಂದುಸ್ಥಾನದಲ್ಲಾದ ಹಿಂದುಗಳ ಧರ್ಮಜಾಗೃತಿಯು ತೆರೆಯೇ ವಿಜಯನಗರದ ಉಗಮಕ್ಕೆ ಕಾರಣವು ಆದರೆ ಆ ಜಾಗೃತಿಯು ಮೂಢ ಭಾವನೆಯದಲ್ಲ ಮುಸಲ್ಮಾನರ ಉಪಟಳದಿಂದ ಹಿಂದೂ ಧರ್ಮಕ್ಕೊದಗಬಹುದಾದ ಸಂಕಟದ ಕಲ್ಪನೆಯೇ ಅವರ ಸ್ಫೂರ್ತಿಗೆ ಕಾರಣವಾಗಿದ್ದಿತು. ಈ ರೀತಿಯಲ್ಲಿ ವಿಚಾರ ಮಾಡಿದರೆ ಅದು ಮುಸಲ್ಮಾನ ಧರ್ಮಕ್ಕೆ ವಿರೋಧಕವಾಗಿಯೇ ಇತ್ತೆಂದು ಹೇಳಬಹುದು. ಆದರೆ ತುಸು ವಿಚಾರ ಮಾಡಿದರೆ ಅದು ಹಾಗಿರಲಿಲ್ಲ

ಮುಸಲ್ಮಾನ ಸುಲ್ತಾನರು ಕೂಡಿಕೊಂಡು ಬಂದು ವಿಜಯನಗರವನ್ನು ಹಾಳು ಮಾಡಿದುದರಿಂದ ಅದರ ಆಧ್ಯಾತ್ಮಿಕ ಸ್ವರೂಪವು ವಿಕೃತವಾಗಿ ಕಂಡುಬರುವದು. ನಿಜವಾಗಿಯೂ ಆ ಕದನವು ಒಂದು ರಾಜಕೀಯ ಸ್ವರೂಪದ್ದಿದ್ದಿತಲ್ಲದೆ ಬೇರೊಂದಾಗಿರಲಿಲ್ಲ. ವಿಜಯನಗರದ ಅರಸರು ತಮ್ಮ ರಾಜಕೀಯ ವಿರೋಧಿಗಳ ಸಂಗಡ—ಮುಸಲ್ಮಾನರ ಕೂಡ ಸಹ ಸಹಿಷ್ಣುತೆಯಿಂದ ವರ್ತಿಸುತ್ತಿದ್ದರು. ಈ ವಿಷಯವನ್ನೇ ಚರ್ಚಿಸ ಹೊರಟರೆ ಅದೊಂದು ಬೇರೊಂದು ಹೊತ್ತಿಗೆಯೇ ಆಗಬಹುದು. ಅದನ್ನು ಸಿದ್ಧಗೊಳಿಸಲು ಆಧಾರಗಳೇನೂ ಕಡಿಮೆಯಿಲ್ಲ ಆದರೆ ನಾನು ಇಲ್ಲಿ ಅವರ ಉದಾರ ಧೋರಣೆಯ ಬೇರೊಂದು ಅಂಶವನ್ನು ಕುರಿತು ಎಂದರೆ ಜೈನ ಧರ್ಮದವರಿಗೆ ಅವರಿಂದ ದೊರೆತ ಆಶ್ರಯವನ್ನು ಕುರಿತು ಇಲ್ಲಿ ವಿವೇಚಿಸುವೆನು.

ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ಹೇಳಿದಂತೆ ಮುಸಲ್ಮಾನರ ಆಕ್ರಮಣವನ್ನು ತಡೆ ಹಾಕುವದಕ್ಕಾಗಿ ಉದ್ಭವಿಸಿದ ಈ ಪ್ರಚಂಡ ರಾಷ್ಟ್ರೀಯ ಆಂದೋಲನವು ಮುಸಲ್ಮಾನರ ವಿರುದ್ಧವಾಗಿ ಹಿಂದು ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳನ್ನೆಲ್ಲ ಸಂರಕ್ಷಿಸುವ ಎಲ್ಲ ಬಗೆಗಳಿಂದಲೂ ಕೂಡಿದ್ದಿತು. ಜೈನಧರ್ಮದ ಸಂರಕ್ಷಣೆ ಆಶ್ರಯಗಳ ಪ್ರಶ್ನವೂ ಇವುಗಳಲ್ಲೊಂದಾಗಿತ್ತು ವಿಜಯನಗರದ ಅರಸರಲ್ಲಿ ಪ್ರತಿಯೊಬ್ಬನೂ ತನ್ನ ಒಲವಿಗನುಗುಣವಾಗಿ ಆಚರಿಸುತಿದ್ದರೂ ಧಾರ್ಮಿಕ ಸಹಿಷ್ಣುತೆಯ ಸಾಮಾನ್ಯ ಧೋರಣವು ಮಾತ್ರ ಎಲ್ಲರಲ್ಲಿಯೂ ಕಂಡುಬರುತ್ತದೆ. (೧) ಬಳ್ಳಾರಿಯ ಒಂದು ಶಾಸನದಿಂದ ತಿಳಿಯುವದೇನೆಂದರೆ, ಮೊದಲನೆಯ ಹರಿಹರನ ಆಳಿಕೆಯಲ್ಲಿ ಕೆಲವರು ವರ್ತಕರು ಶಾಂತಿನಾಥ ಜಿನೇಶ್ವರ ಮೂರ್ತಿಯೊಂದರ ಪ್ರತಿಷ್ಠಾಪನೆ ಮಾಡಿದರು. ಆ ಮೂರ್ತಿಯ ಗದ್ದುಗೆಯ ಮೇಲೆ ಕುಂಡ ಕುಂದಾನ್ವಯದ ಅಮರಕೀರ್ತಿ ಆಚಾರ್ಯರ ಶಿಷ್ಯನಾದ ಮಾಘನಂದಿ, ಸರಸ್ವತಿಗಚ್ಛ ಮೂಲಸಂಘದ ಬಲಾತ್ಕಾರಗಣ ಇವರ ಹೆಸರುಗಳಿವೆ. (೨) ಜೈನರ ವಿಷಯವಾಗಿರುವ ವಿಜಯನಗರದ ಅರಸರ ಶಾಸನಗಳಲ್ಲಿ ಬುಕ್ಕರಾಯನ ಕಾಲದ ಸು. ೧೩೬೮ ನೆಯ ಇಸ್ವಿಯ ಶಾಸನವು ಅತಿ ಬೋಧಪ್ರದವಾಗಿರುವದು—

"ಶ್ರೀವೀರ ಬುಕ್ಕರಾಯನ ಆಳಿಕೆಯಲ್ಲಿ ಜೈನರಿಗೂ ಭಕ್ತರಿಗೂ (ವೈಷ್ಣವರಿಗೂ) ನಡುವೆ ಜಗಳ ಬಂದಿತು.

---

(1) Krishnaswami Aiyangar, Some **Contributions of S. India to Indian Culture**, pp. 298-99.

(2) Rangachayra, **Inscriptions of the Madras Presidency I**, by 458.

ಆಗ ಎಲ್ಲ ನಾಡುಗಳ ದೈವದ ಜನರು [ ಜೈನರು ]-- ಬುಕ್ಕರಾಯನಿಗೆ ಭಕ್ತರಿಂದಾದ ಅನ್ಯಾಯದ ಬಗ್ಗೆ ಅರಿಕೆ ಮಾಡಿಕೊಳ್ಳಲು, ಆ ರಾಯನು ಹದಿನೆಂಟು ನಾಡುಗಳ ಆಚಾರ್ಯರನ್ನೊಡಗೊಂಡು ಅಲ್ಲಿಯ ಶ್ರೀವೈಷ್ಣವರ ಹಸ್ತದಲ್ಲಿ, ಜೈನರ ಹಸ್ತವನ್ನಿರಿಸಿ ವೈಷ್ಣವರ ದರ್ಶನ (ಧರ್ಮಶ್ರದ್ಧೆ) ದಲ್ಲಿಯೂ ಜೈನದರ್ಶನದಲ್ಲಿಯೂ ಯಾವದೇ ತರಹದ ಭೇದವಿಲ್ಲೆಂದು ಸಾರಿ ಶಾಸನಗೈದುದೇನೆಂದರೆ, 'ಜೈನದರ್ಶನಕ್ಕೆ ಎಂದಿನಂತೆ ಪಂಚವಾದ್ಯಗಳ ಹಾಗೂ ಕಲಶಗಳ ಅಧಿಕಾರವಿದೆ ಭಕ್ತರಿಂದ ಜೈನದರ್ಶನದ ಹಾನಿ ಇಲ್ಲವೆ ಅಭ್ಯುದಯವು ಆದರೆ, ಶ್ರೀವೈಷ್ಣವರು ಅದು ತಮ್ಮ ದರ್ಶನದ ಹಾನಿ ಅಥವಾ ಅಭ್ಯುದಯವೆಂದು ಭಾವಿಸಬೇಕು. (೩) ಈ ರೀತಿಯ ಶಾಸನವನ್ನು ಶ್ರೀವೈಷ್ಣವರು ನಮ್ಮ ರಾಜ್ಯದೊಳಗಿನ ಎಲ್ಲ ಬಸದಿಗಳಲ್ಲಿ ಸ್ಥಿರಪಡಿಸತಕ್ಕದ್ದು. ಸೂರ್ಯಚಂದ್ರರಿರುವವರೆಗೂ ವೈಷ್ಣವರು ಜೈನದರ್ಶನವನ್ನು ಸಂರಕ್ಷಿಸತಕ್ಕದ್ದು. ವೈಷ್ಣವರೂ, ಜೈನರೂ ಒಂದೇ ಅವರು ಭಿನ್ನರಾಗಿರುವರೆಂದು ಭಾವಿಸಕೂಡದು.'೪

ಈ ಪ್ರಸಿದ್ಧ ಶಾಸನದಲ್ಲಿ, ವಿವರಿಸಲಾದ ವ್ಯವಸ್ಥೆಯಿಂದ, ಬುಕ್ಕನು ( ಭವ್ಯರ ) ಜೈನರ ವಿಷಯದಲ್ಲಿ ಪಕ್ಷಪಾತಿಯಾಗಿದ್ದನೆಂದು ತಿಳಿಯುವುದು. ಜೈನರನ್ನು ರಕ್ಷಿಸುವ ಭಾರವನ್ನು ತನ್ನ ಧರ್ಮಬಾಂಧವರಾದ ಭಕ್ತರ [ ಶ್ರೀವೈಷ್ಣವರ ] ಮೇಲೆ ಹೇರಲಾಯಿತು.(೫) ಜೈನರ ಸಂಬಂಧವಾಗಿರುವ ಇಂತಹ ಧೋರಣದ ಮೂಲಕ, ಜೈನರು, ಬರಬರುತ್ತ ಕೆಲ ಹೆಜ್ಜೆಗಳನ್ನು ಮುಂದಿಟ್ಟರೆಂದು ಹೇಳಬಹುದು. ಯಾಕೆಂದರೆ, ಶ್ರವಣಬೆಳಗೊಳದೊಳಗಿನ ಒಂದು ಶಿಲಾಶಾಸನದಂತೆ ವಿಜಯನಗರದ ಮೊದಲನೆಯ ದೇವರಾಯನ ಅರಸಿಯಾದ ಭೀಮಾದೇವಿಯು, ಜೈನ ಆಚಾರ್ಯನಾದ ಅಭಿನವ ಚಾರುಕೀರ್ತಿ ಪಂಡಿತಾಚಾರ್ಯನ ಶಿಷ್ಯಳಾಗಿದ್ದಳೆಂದೂ, ಬೆಳಗೊಳದೊಳಗಿನ ಮಂಗಾಯಿ ಬಸ್ತಿಯಲ್ಲಿ ಶಾಂತಿನಾಥನ ವಿಗ್ರಹವನ್ನು ಸ್ಥಾಪಿಸಿದಳೆಂದೂ, ತೋರುತ್ತದೆ ೬ ಜೈನಮತದಲ್ಲಿ ನಿರುಪಮ ಶ್ರದ್ಧೆಯನ್ನಿಟ್ಟ ಇರುಗಪ್ಪನೆಂಬ ಇಮ್ಮಡಿ ಹರಿಹರನ ವಿಶ್ವಾಸದ ಜೈನ ದಳವಾಯಿಯು ವಿಜಯನಗರ ರಾಜಧಾನಿಯಲ್ಲಿ ಬಸ್ತಿಗಳನ್ನು ಕಟ್ಟಿಸಿ, ಅವುಗಳಿಗೆ ದತ್ತಿಗಳನ್ನು ಕೊಟ್ಟನು ಹಂಪೆಯೊಳಗಿರುವ ಗಾಣಗಿತ್ತಿ-ಗುಡಿಯ ದೀಪಮಾಲೆಯ ಕಂಬದ ಮೇಲಿರುವ ಶಿಲಾಲಿಪಿಯಲ್ಲಿ, ಜಿನ ಹಾಗೂ ಜಿನ ಶಾಸನಗಳನ್ನು ವರ್ಣಿಸಿದ ಮೇಲೆ 'ಜೈನಾಚಾರ್ಯನಾದ ಸಿಂಹನಂದಿಯ ತತ್ವಗಳನ್ನು ಅವಿರತವಾಗಿ ಆಚರಿಸುವ ಹರಿಹರನ ದಂಡನಾಯಕನಾದ ಚೈಚ ಅಥವಾ ಚೈಚಪನ ಮಗನಾದ ಇರುಗಪ್ಪನು ಕುಂಥು ಜಿನನಾಥನ ಗುಡಿಯನ್ನು ಕಟ್ಟಿಸಿದನು.' ಎಂದು ಬರೆದಿರುವದು. ಮೇಲಾಗಿ, ಈ ಇರುಗಪ್ಪ ಅಥವಾ ಇರುಗದಂಡೇಶ ಅಥವಾ ದಂಡನಾಥನು ನಾನಾರ್ಥರತ್ನಮಾಲಾ ವೆಂಬ ಜೈನಶಬ್ದಕೋಶವನ್ನು ರಚಿಸಿದನೆಂದೂ ತಿಳಿಯುತ್ತದೆ ಕಂಚಿಯೊಳಗಿನ ಒಂದು ಶಿಲಾಲಿಪಿಯಲ್ಲಿ, ಇಮ್ಮಡಿ ಹರಿಹರನ ಮಗ ೨ ನೇ ಬುಕ್ಕರಾಯನ ಕೀರ್ತಿಗಾಗಿ ವೈಚಯ್ಯ (ಬೈಚಪ ಅಥವಾ ಚೈಚಪ ?) ದಂಡನಾಯಕನ ಮಗ ಇರುಗಪ್ಪನು, ಜೈನ ಬಸ್ತಿಗೆ ದತ್ತಿಗಳನ್ನಿತ್ತನೆಂದು ಗೊತ್ತಾಗುತ್ತದೆ. [೭] ಅವನ ಮಗನೂ ಕೂಡ ಜೈನರಿಗೆ ಉತ್ತೇಜನವನ್ನು ಕೊಡುವ ಧೋರಣವನ್ನೇ ತಳೆದನೆಂದು ತೋರುತ್ತದೆ [೮]

ಮೂಡಬಿದ್ರಿ ( ದಕ್ಷಿಣಕನ್ನಡ ಜಿಲ್ಲೆ ) ಯೊಳಗಿನ ಗುರುಗಳ ಬಸ್ತಿಯಲ್ಲಿ ಒಂದು ಶಾಸನವಿದೆ. ಅದರಲ್ಲಿ ಇಮ್ಮಡಿ ಹರಿಹರರಾಯನು, ತಾನಾಗಿ ಜೈನ ಗುಡಿಗಳಿಗೆ ದಾನವನ್ನಿತ್ತ ಸಂಗತಿಯು ಇರುತ್ತದೆ (೯) ವಿಜಯನಗರದ ಸಂಗಮ ಮನೆತನದಲ್ಲಿ ಅತಿ ಪ್ರಖ್ಯಾತನಾದ

---

(3) Cf. Girnar Rock Edict XII (H) of Asoka, p 18, No. 20 above

(4) **Epigraphica Carnatica II**, SB 344, Trans. pp. 146-47.

(5) Cf Heras **The Aravidu Dynasty of Vijayanagar** I. p. 539. Longhurst. **Hampi Ruins Discribed and Illustrated,** pp. 25-6.

(6) **Epigraphica Carnatica II**, SB. 337.

(7) Hultzsch, **South Indian Inscriptions I**, pp. 156 ff. **Ep. India** VII, pp. 115-16.

(8) **Ibid**, VIII, p. 22; Cf. Heras, Op. Cit I, p. 539.

(9) Rangacharya, Op. Cit. II, Sk. 116.

ಇಮ್ಮಡಿ ದೇವರಾಯನು, ಅದೇ ಜಿಲ್ಲೆಯೊಳಗೆ, ಜಿನಾಲಯಗಳಿಗೆ, ಅಂತಹ, ಅನೇಕ ದತ್ತಿಗಳನ್ನು ಕೊಟ್ಟನೆಂದು ತಿಳಿಯುತ್ತದೆ. ಊರೊಳಗೆ ಬರಲಿರುವ ಪ್ರತಿಯೊಂದು ಎತ್ತಿನ ಒಜ್ಜೆಯೊಳಗಿನ ಒಂದು ಬತ್ತದ ಕೊಳಗವು ಬಸದೂರಿನ ಬಸದಿಗೆ ಸಲ್ಲುತ್ತಿತ್ತೆಂದು ಮೇಲೆ ವಿವರಿಸಿದ ಶಾಸನದಿಂದ ಗೊತ್ತಾಗುತ್ತದೆ. [೧೦] ಆದೇ ಇಮ್ಮಡಿ ದೇವರಾಯನ ಕಾಲದಲ್ಲಿ, ಮಂಗಳೂರು ರಾಜ್ಯದೊಳಗೆ ನಾಗಮಂಗಲದ ದೇವರಾಜ ಒಡೆಯನು ಆಳುತ್ತಿರುವಾಗ್ಗೆ (೨೯-೧-೧೪೩೦) ತ್ರಿಭುವನ ಚೂಡಾಮಣಿ ಚೈತ್ಯಾಲಯವನ್ನು ಕಟ್ಟುವ ಗೋಸ್ಕರ ಅಭಿನವ ಚಾರುಕೀರ್ತಿ ಪಂಡಿತಾಚಾರ್ಯನಿಗೆ ದಾನ ಕೊಟ್ಟದ್ದು ಮತ್ತೊಂದು ಶಾಸನದಿಂದ ಕಂಡು ಬರುವದುಂಟು [೧೧] ಇಮ್ಮಡಿ ದೇವರಾಯನ ವಿಜಯನಗರವ ಶಿಲಾಲೇಖವು, ದೇವರಾಯನು "ಬ್ರಾಹ್ಮಣರಿಗೆ ಕಲ್ಪವೃಕ್ಷವಾಗಿದ್ದನೆ"ಂದು ಹೇಳಿದ್ದರೂ, (೧೨) ಅವನು ಜೈನರಿಗೂ ಆಶ್ರಯವನ್ನು ಕೊಡುತ್ತಿದ್ದನೆಂದು ಸ್ಪಷ್ಟವಾಗಿ ಹೇಳುತ್ತದೆ ಆ ಶಾಸನದಲ್ಲಿರುವದು, ' ಚಂದ್ರತಾರಕೆಗಳಿರುವ ವರೆಗೆ ತನ್ನ ಯಶಸ್ಸೂ ಪುಣ್ಯವೂ, ಅಬಾಧಿತವಾಗಿ ನೆಲಿಸಿರಬೇಕೆಂದು, ಸ್ಯಾದ್ವಾದವನ್ನು ಘೋಷಿಸಬಲ್ಲ, ಜ್ಞಾನ ಸಾಮ್ರಾಜ್ಯವನ್ನಾಳುವ ಅರ್ಹತ್ ಪಾರ್ಶ್ವನಾಥನ ಸಲುವಾಗಿ ಚೈತ್ಯಾಲಯವನ್ನು ಕಟ್ಟಿಸಿದನು ಅದು ಕರ್ನಾಟಕ ದೇಶದ ಮಧ್ಯದಲ್ಲಿರುವ ದೇವರಾಯನ ನಲೆವೀಡಾದ ವಿಜಯನಗರದ ಎಲೆ ಅಡಿಕೆಯ (ಕ್ರಮುಕ ಪರ್ಣಾಪಣ) ಪೇಟೆಯಲ್ಲಿದ್ದಿತು (೧೩)

ಇಮ್ಮಡಿ ದೇವರಾಯನ ಮಗನಾದ ವಿರೂಪಾಕ್ಷನ ಕಾಲದಲ್ಲಿ (೧೪) ಎಂಟು ಜನ ವರ್ತಕರು, ಬದಿರೆಯಲ್ಲಿಯ, ಚಂದ್ರೋಗ-ಪಾರ್ಶ್ವ-ತೀರ್ಥಂಕರ ಚಂದ್ರಪ್ರಭಸ್ವಾಮಿ ಮೂರ್ತಿಯ ಅಭಿಷೇಕ ಅರ್ಚಗಳಿಗಾಗಿಯೂ: ಶಾಸ್ತ್ರವಿಹಿತ ದಾನಧರ್ಮಗಳಿಗಾಗಿಯೂ ಬರಕೂರು ರಾಜ್ಯದಲ್ಲಿ, ವಿಟ್ಟರಸನು ಆಳುತ್ತಿರುವಾಗ್ಗೆ (೧೫) ಚರುಕೀರ್ತಿ ಪಂಡಿತದೇವನ ಹೇಳಿಕೆಯ ಮೇರೆಗೆ,ದತ್ತಿಗಳನ್ನಿತ್ತರು. ವಿಜಯನಗರದ ನರಪತಿಗಳಲ್ಲಿ ಘನಪಡೆದ ಕೃಷ್ಣದೇವರಾಯನು(೧೫೦೯–೧೫೨೯) ಬ್ರಾಹ್ಮಣರಿಗೆ ದಾನಕೊಡುವದರಲ್ಲಿ ಹೆಸರು ಪಡೆದಿದ್ದನಷ್ಟೆ. ಅವನು ಚಿಂಗಳಪುಟ್ಟ ಜಿಲ್ಲೆಯೊಳಗಿನ ತ್ರೈಲೋಕ್ಯನಾಥ ಜಿನಾಲಯಕ್ಕೂ ಭೂಮಿಗಳನ್ನು ಕೊಟ್ಟನು (೧೬) ವಿಜಯನಗರದ ಅರಸುಮನೆತನದ ಅಪ್ರಸಿದ್ಧ ಒಡೆಯರು ಕೂಡ, ತಮ್ಮ ಮನೆತನದ ಹಿರಿಯರಸರ ಮಾರ್ಗವನ್ನೇ ಅನುಸರಿಸಿದರೆಂದು ಹೇಳಬಹುದು ಬಳ್ಳಾರಿ ಜಿಲ್ಲೆಯೊಳಗಿನ ಒಂದು ಶಾಸನದಲ್ಲಿ, ರಾಮರಾಜಯ್ಯನು ತನ್ನ ತಂದೆಯಾದ ಮಲ್ಲರಾಜ ಒಡೆಯನ ಕೀರ್ತಿಯ ಸಲುವಾಗಿ ಕುರುಗೋಡು ಗ್ರಾಮದೊಳಗಿನ ಜಿನಾಲಯಕ್ಕೆ ಭೂದಾನವನ್ನು ಮಾಡಿದನೆಂದು ತಿಳಿಯುತ್ತದೆ. (೧೭) ಹೊಯ್ಸಳ ವಿಷ್ಣುವರ್ಧನನು ರಾಮಾನುಜ ಮತವನ್ನು ಸ್ವೀಕರಿಸದ ಮೇಲೆ, ಜೈನಧರ್ಮಕ್ಕೆ ಇಳಿತರವು ಪ್ರಾರಂಭವಾಯಿತೆಂದು ಹೇಳಬಹುದು. ಆದರೂ ವಿಜಯನಗರದವರ ಆಳಿಕೆಯಲ್ಲಿ, ಆ ಧರ್ಮವು ರಾಜರಿಂದ ರಕ್ಷಿಸಲಾಗುತ್ತಿತೆಂದು ಸಹಜವಾಗಿ ಹೇಳಬಹುದು.

ಮೂಡಬಿದ್ರಿ, ಕಾರ್ಕಲ, ಯಣ್ಣೂರು ಮುಂತಾದ ಕಾನಡಾ ಜಿಲ್ಲೆಯೊಳಗಿನ ಸ್ಥಳಗಳಲ್ಲಿ, ವಿಜಯನಗರ

(10) **Ibid**, Sk. 27.

(11) Mangesha Rao, **Mudabidareya Hosa Basadiya Sila-sasanagalu** (Twelveth Karnataka Sahitya Sammelan Report 1927, p. 152.

(12) Hultzsch, Op. Cit I, p. 166.

(13) **Ibid**, p 164

(14) See Surayanarain Rao, **The Never-to be forgotten Empire**, Ch. XVI, pp. 331-43.

(15) Mangesha Rao, Op Cit. p. 157

(16) Rangacharya Op. Cit. I, p. 375, **Madras Epigraphical Report, 1901**, 188.

(17) Rangacharya, Op Cit. I, by 113, **Madras Epigraphical Report** 1904, 63.

ರಣ ಮಾಂಡಲಿಕರಿಂದ, ಜೈನಧರ್ಮವು, ಎಷ್ಟೋ ದಿವಸಗಳ ವರೆಗೆ ಅಭಿವೃದ್ಧಿಯನ್ನು ಪಡೆಯಿತು. ಆ ವಿಷಯವನ್ನಿಲ್ಲಿ ಚರ್ಚಿಸಬೇಕಾದರೆ, ಈ ಲೇಖದ ಮರ್ಯಾದೆಯನ್ನು ಮೀರಬೇಕಾಗುವದು. ವಿಜಯನಗರದ ರಾಯರು ಜೈನಧರ್ಮಕ್ಕಿತ್ತ ಆಶ್ರಯದವಿಷಯವಾಗಿ ಇಲ್ಲಿ ಕಾಣಿಸಿದ ಉದಾಹರಣೆಗಳು, ಧಾರ್ಮಿಕವಿಷಯಗಳಲ್ಲಿರುವ ಅವರ ಉದಾರ ಧೋರಣವನ್ನು ಸಾಕಷ್ಟು ಸ್ಪಷ್ಟಗೊಳಿಸುತ್ತವೆ.

---

# ವಿಜಯನಗರ.

೧

ಶ್ರೀಪಂಪಾಪತಿಯಿತ್ತ ಪ್ರೇಮವರವೇ ।
ವಿದ್ಯಾರಣ್ಯತಪೋಶರುಶ್ರೇಷ್ಠ ಫಲವೇ ।
ಹರಿಹರ ಸ್ಥಾಪನಾ ವಿಜಯಧ್ವಜವೆ ।
ಸಿರಿಕರ್ಣಾಟಕ ರಾಜ್ಯವೇ ವಿಜಯನಗರ ॥

೨

ಪ್ರೇಮದಿ ಪ್ರಜೆ ಪೂಜಿಸಿ ಪೊರೆದ ಕಲಿಯೇ ।
ಪರರಾಜಗ್ರಹ ರೋಲೈಸಿದ ರವಿಯೇ ।
ಮದದರಿಮೃಗಗಳ ಮೆಟ್ಟಿ ಮೆರೆದ ಹರಿಯೇ ।
ನಮ್ಮ ಹೃದಯದ ಹೆಮ್ಮೆಯೇ ವಿಜಯನಗರ ॥

೩

ಚಿತ್ರ ಕವಿತಾ ಗಾನ ಶಿಲ್ಪಕಲೆಗೆಲ್ಲ ।
ದಿವ್ಯ ವಿದ್ಯಾ ಜ್ಞಾನ ಸುಗುಣ ಶಿಕ್ಷಣಕೆಲ್ಲ ।
ಶಾಂತಿ ವೀರ್ಯೌದಾರ್ಯ ಸೌಂದರ್ಯಕೆಲ್ಲ ।
ಪ್ರೇಮ ಮಡಿಲಿತ್ತಮ್ಮ ಘೀ ವಿಜಯನಗರ ॥

೪

ನಿಜವಲ್ಲ ನಿನ್ನಳಿವು ಮರೆಯಾದೆಯಷ್ಟೆ ।
ಏಳು ಬೀಳಿನ ಧರ್ಮ ತೋರಿಸಿದೆಯಷ್ಟೆ ।
ನಿನ್ನದವನತಿಯುದತ್ಯುನ್ನತಿಯುದಷ್ಟೆ ।
ನಿನಗಳಿವೆ ಚಿರಜೀವಿ ಹೇ ವಿಜಯನಗರ ॥

೫

ನಿಶಿಯೊಳು ಮೇಘವು ಮುಸುಕೆ ಧರ್ಮ ಶಶಿಯಂ ।
ನಡೆಯೊಳು ತಡೆ ತಡೆ ದೆಡೆವುತ್ತಿರೆ ಜನಪುಂ ।
ಭರದೊಳು ಬೀಸುತೆ ಬೆಳಗಿದೆ ತಿಳಿ ಬೆಳಕಂ ।
ಸುಜನವಂದಿತ ಶಕ್ತಿಯೇ ವಿಜಯನಗರ ॥

೬

ಜಗದತಿಭಾಗ್ಯದ ಬೀಡನು ಜರೆವಳು ನೀ ।
ನವರತ್ನವ ರಾಶಿಗಳೊಳಗಳೆದಳು ನೀ ।
ಅಂದಿನ ಸಿರಿಯರಸಿಯುಳಂದದ ಮೊಗನೀ ।
ಇಂದಿಗು ಜಗ ಸೋಜಿಗ ನೀ ವಿಜಯನಗರ ॥

೭

ಪಂಕಜವು ಪೃಥ್ವಿ ರಾಜ್ಯಹೂ ಹಾರದಲಿ ।
ಭಾರತದ ಕಣ್ಣು ರಾಣಿ ತಿಂಕಣದಲ್ಲಿ ।
ವರ್ಷ ವಿನ್ನೂರಿಂತು ಘನತೆ ಶಿಖರದಲಿ ।
ಪೊಳೆದಳಿದು ಪೋದೆಯಾ ಹಾ ವಿಜಯನಗರ ॥

೮

ಎಂದಿಗೂ ನೀನಾಳು ನಮ್ಮ ಹೃದಯದಲಿ ।
ನಿನ್ನ ಕೀರ್ತಿ ಜ್ಯೋತಿ ಬೆಳಗುತಿಂಲಲ್ಲಿ ।
ನಿನ್ನಾತ್ಮ ಬಲದೆಮ್ಮ ನೆಚ್ಚರಿಸುತಿರಲಿ ।
ನಿನ್ನ ಸಿರಿ ಮರಳಿತರೆ ಜಯ ವಿಜಯನಗರ ॥

“ ಅಶ್ವತ್ಥ ” ಬೆಂಗಳೂರು.

---

# ವಿಜಯನಗರ ಸ್ಮಾರಕೋತ್ಸವದ ಮಹತ್ವ.

ಬರೆದವರು— ಶ್ರೀಮಾನ್ ಜೋಗ ವಿಶ್ವನಾಥರಾಯರು ಬಿ ಎ ಎಲ್ಎಲ್. ಬಿ. ಎಂ. ಎಲ್. ಸಿ ಧಾರವಾಡ

೧೯೩೬ ರಲ್ಲಿ ನಮ್ಮ ಘನತೆ ಹೊಂದಿದ ಕೊನೆಯ ಮಹಾ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯಲ್ಲಿ ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವವು ಜರುಗುವದೆಂಬುದನ್ನು ಕೇಳಿ ಓದಿ ಆನಂದೋತ್ಸಾಹ ಪುಲಕಿತನಾಗದ ಕನ್ನಡಿಗನು- ಅದೇಕೆ? ಭಾರತೀಯನು ಈ ದೇಶದಲ್ಲಿ ದೊರೆಯಬಹುದೆಂದು ನನಗಂತೂ ಎನಿಸುವದಿಲ್ಲ ಏಕೆಂದರೆ ಅದು ಹಿಂದೂ ಸಂಸ್ಕೃತಿಗೊದಗಿದ ಮಹಾಸಂಕಟವನ್ನು ನಿವಾರಿಸಿ ಅದನ್ನು ರಕ್ಷಿಸಿ ಇಡೀ ಭರತ ಖಂಡಕ್ಕೆ ಮಹೋಪಕಾರ ಮಾಡಿರುವುದು. ಅದಕ್ಕಾಗಿ ತನ್ನ ಸುಮಾರು ೨೫೦ ವರ್ಷಗಳ ಆಯುಷ್ಯದಲ್ಲಿ ಹೋರಾಡಿದ ಇತಿಹಾಸವು ಅತ್ಯಂತ ಉಜ್ವಲವಾಗಿರುವದು ರಾಷ್ಟ್ರೀಯ ದೃಷ್ಟಿಯಿಂದ ಸದ್ಯಸ್ಥಿತಿಯಲ್ಲಿ ಅದು ಅತಿಶಯ ಮಹತ್ವದ ಉತ್ಸವವಾಗಿದೆ ಇಂತಹ ಸ್ಮಾರಕೋತ್ಸವಗಳೆಂದರೆ ಪಿತೃಋಣವನ್ನು ನೆನೆದಂತೆ. ನಮ್ಮ ಪೂರ್ವಜರಾದ ಆ ಮಹಾಮಹಿಮರ ಅದ್ಭುತ ಪರಾಕ್ರಮದ ಅದ್ವಿತೀಯ ತೇಜಸ್ಸಿನ ಅಪ್ರತಿಮ ಸಾಹಸದ ಚರಿತ್ರೆಯಿಂದ ನಮ್ಮ ನಾಡಿನ ಏಳ್ಗೆಯ ಮಾರ್ಗಕ್ಕೆ ಪ್ರಕಾಶವನ್ನು ಒದಗಿಸಬೇಕಾಗಿದೆ

'ನಾವು ಕನ್ನಡಿಗರು, ಎಲ್ಲ ಕನ್ನಡಿಗರೂ, ನಮ್ಮವರು; ಕರ್ಣಾಟಕ ನಮ್ಮ ಪ್ರಾಂತ' ಇದು ನಮ್ಮ ಮಂತ್ರವಾಗಿರುವದು. ಹರಿದು ಹಂಚಿಹೋಗಿ ಅಧೋಗತಿಗಿಳಿಯುತ್ತಿರುವ ನಾಡನ್ನು ಒಂದುಗೂಡಿಸಿ ಅದಕ್ಕೆ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಳ್ಳುವ ಅತ್ಯಂತ ಘನವಾದ ಕರ್ತವ್ಯವನ್ನು ನಾವು ಕೈಕೊಳ್ಳಬೇಕಾಗಿದೆ ಕರ್ನಾಟಕಕ್ಕೊಂದು ಸ್ವತಂತ್ರ ವಿಶ್ವವಿದ್ಯಾಲಯ, ಶಾಸನ ಸಭೆ, ನ್ಯಾಯಾಸನ, ಬಂದರ, ಹಡಗುಪಡೆ ಮೊದಲಾದವುಗಳ ಏರ್ಪಾಟು ಮಾಡಿಕೊಳ್ಳುವದು ಅತ್ಯಗತ್ಯವಾಗಿದೆ. ಶಿಕ್ಷಣ - ಸಂಸ್ಕೃತಿ- ಉದ್ಯೋಗ - ವ್ಯಾಪಾರ-ಕೃಷಿಗಳ ಅಭಿವೃದ್ಧಿಯನ್ನು ಸಾಧಿಸಬೇಕಾಗಿರುವದು. ಇವುಗಳಿಗೆಲ್ಲ ಮುಖ್ಯವಾದ ಅಥವಾ ಮೂಲವಾದ ಕರ್ನಾಟಕ ಏಕೀಕರಣವು ನಮ್ಮ ಮೊದಲನೆಯ ಹಾಗೂ ಜೀವಾಳದ ಪ್ರಶ್ನೆಯಾಗಿರುವದು. ಕರ್ನಾಟಕನ ಸದ್ಯದ ಮುಖಂಡರ ಮೇಲಂತೂ ಸ್ವತಂತ್ರ ಕರ್ಣಾಟಕಕ್ಕಾಗಿ ಹೋರಾಡುವ ದೊಡ್ಡ ಹೊಣೆ ಬಿದ್ದಿದೆ.

ನಾಡಹಬ್ಬ, ಇತರ ರಾಷ್ಟ್ರೀಯ ಮಹಾ ಪುರುಷರ ಉತ್ಸವಗಳು, ಪ್ರದರ್ಶನಗಳು ಮೊದಲಾದ ಸಾರ್ವಜನಿಕ ಕಾರ್ಯಗಳ ಯೋಗದಿಂದ ರಾಷ್ಟ್ರದಲ್ಲಿ ಜಾಗ್ರತಿಯುಂಟಾಗುವದು ಜನರು ಒತ್ತಟ್ಟಿಗೆ ಕೂಡಿ ರಾಷ್ಟ್ರದ ಏಳಿಗೆಯ ಪ್ರಶ್ನೆಗಳನ್ನು ಚರ್ಚಿಸಲು ಈ ಸಂದರ್ಭಗಳು ಸಹಕಾರಿಯಾಗಿವೆ. ಆದರೆ ಇವುಗಳ ಕ್ಷೇತ್ರವು ಬಹಳ ಸಂಕುಚಿತವಾದುದಿರುವದು. ಅಖಿಲ ಕರ್ನಾಟಕದ ಸಾಮುದಾಯಿಕ ಉತ್ಸವವು, ಈ ಎಲ್ಲ ಉತ್ಸವಗಳ ಕೇಂದ್ರೀಕೃತ ಉತ್ಸವವು, ಈ ವಿಜಯನಗರಸಾಮ್ರಾಜ್ಯಸ್ಮಾರಕೋತ್ಸವವಾಗಿದೆ. ಈ ಉತ್ಸವದ ಕಲ್ಪನೆಯು ಭವ್ಯವೂ ಅಷ್ಟೇ ಉಪಯುಕ್ತವೂ ಆಗಿರುವುದು. ೧೯೩೬ರಲ್ಲಿ ಹಂಪೆಯಲ್ಲಿ ಈ ಮಹೋತ್ಸವವನ್ನು ಅಭೂತಪೂರ್ವಕವಾಗಿ ಜರುಗಿಸಿದರೆ, ರೋಮಾಂಚಕಾರಿಯಾದ ರಾಯರ ವೀರಚರಿತ್ರೆಯ ಶ್ರವಣ—ಕರ್ನಾಟಕ ಸಾಮ್ರಾಜ್ಯಸ್ಥಾಪನೆಯ ಕಲ್ಪನೆ—ಬಗೆಬಗೆಯ ವಿದ್ವತ್ಸಮ್ಮೇಲನಗಳು—ಆಟಮೇಲಾಟಗಳ—ಈ ಉತ್ಸವನಿಮಿತ್ತದಿಂದಾಗುವ ವಿಪುಲ ಗ್ರಂಥಗಳ ಪ್ರಕಟನೆ—ವಿವಿಧ ಪ್ರದರ್ಶನಗಳು—ನಮ್ಮ ಅಭಿಮಾನದ ನಷ್ಟವಾದ ರಾಜಧಾನಿಯ ಶೇಷಗಳ ದರ್ಶನ—ಇತ್ಯಾದಿಗಳಿಂದಾಗುವ ಪರಿಣಾಮದ ಅದ್ಭುತತೆಯು ಕಲ್ಪನಾಗಮ್ಯವಾದುದು. ಜಾರ್ಜ ವಾಸಿಂಗ್ಟನ್ನನ ಸ್ಮರಣೆಯಿಂದ ಅಮೇರಿಕನ್ನರೂ ನೆಪೋಲಿಯನ್ನನ ಸ್ಮರಣೆಯಿಂದ ಫ್ರೆಂಚರೂ ಶಿವಾಜಿಯ ಸ್ಮರಣೆಯಿಂದ ಮರಾಟಿಗರೂ ಅವರಂತೆಯೇ ವಿಜಯನಗರದ ಸ್ಮರಣೆಯಿಂದ ಕನ್ನಡಿಗರೂ ಜಾಗೃತರಾಗಿ ಸ್ಫೂರ್ತಿಗೊಳ್ಳದಿರಲಾರರು. ಇಂತಹ ಉತ್ಸವಗಳೆಲ್ಲ ಕೇವಲ ಹಿರಿಯರ ಬಗ್ಗೆ ಕೃತಜ್ಞತೆಯನ್ನು ವ್ಯಕ್ತಪಡಿಸುವುದಕ್ಕಿರದೆ ಬಹುಶಃ ನಮ್ಮ ಜೀವನಕ್ಕೆ ಹೊಸ ಬೆಳಕನ್ನೀಯುವುದಕ್ಕಿರುವವು.

ಆದುದರಿಂದ ವಿಜಯನಗರೋತ್ಸವವನ್ನು ವಿಜಯನಗರದ ಕೀರ್ತಿ ವೈಭವಗಳಿಗೊಪ್ಪುವಂತೆ ಕನ್ನಡಿಗರಲ್ಲಿ ಸ್ವದೇಶ ಸ್ವಸಂಸ್ಕೃತಿಗಳ ಅಭಿಮಾನವೂ ಶೌರ್ಯ ಸಾಹಸಾದಿಗಳೂ ಜಾಗೃತಗೊಳ್ಳುವಂತೆ ಯಶಸ್ವಿಯಾಗಿ ಮಾಡುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ.

---

# ಕರ್ಣಾಟಕತ್ವದ ಬೆಳವಣಿಗೆಯಲ್ಲಿ ವಿಜಯನಗರದವರ ಕಾರ್ಯ.

ಬರೆದವರು:— ಶ್ರೀ. ಕುಲಕರಣಿ ಪ್ರಹ್ಲಾದರಾಯರು. ಬೆಳಗಾವಿ.

ವಸ್ತುವೊಂದು ಇದ್ದು ಅದು ತನ್ನದೆಂಬ ತಿಳುವಳಿಕೆ ಬಂದಮೇಲೆಯೇ ಅದರ ವಿಷಯದಲ್ಲಿ ಅಭಿಮಾನ ಹುಟ್ಟುವುದು. ಕರ್ನಾಟಕ-ಕನ್ನಡ-ಎಂಬಭಿಧಾನವು ಅದಾವಕಾರಣದಿಂದಲೇ ಆಗಲೊಲ್ಲದೇಕೆ ಒಂದು ಜನಾಂಗಕ್ಕೆ-ದೇಶಕ್ಕೆ-ಭಾಷೆಗೆ ಬಂದಮೇಲೆಯೇ ಕರ್ನಾಟಕತ್ವದ-ಕನ್ನಡತನದ-ಕಲ್ಪನೆ ಬಂದಿತೆಂಬುದು ಸಹಜ. ಕನ್ನಡಿಗರಲ್ಲಿ ಕರ್ನಾಟಕತ್ವದ ಕಲ್ಪನೆಯು ಎಂದು ಉದಿಸಿತೆಂಬುದನ್ನು ತಿಳಿದುಕೊಳ್ಳಬೇಕಾದರೆ, ಮೊದಲು ಕರ್ನಾಟಕ ಕನ್ನಡ ಶಬ್ದಗಳು ಎಂದು ಉತ್ಪನ್ನವಾದುದೆಂಬುದನ್ನು ತಿಳಿದುಕೊಳ್ಳಬೇಕು. ಕ್ರಿ. ಶ. ೯ ನೆಯ ಶತಮಾನದಿಂದೀಚೆಯ ಕನ್ನಡ ಗ್ರಂಥಗಳೇ ಉಪಲಬ್ಧವಿವೆ. ಭಾಷೆಗೆ ಮೂರ್ತ ಸ್ವರೂಪ ಬಂದಿದ್ದಿತೆಂದ ಮೇಲೆ ಕರ್ನಾಟಕತ್ವದ ಕಲ್ಪನೆ ಬಂದಿದ್ದಿತೆಂದು ಹೇಳಲಿಕ್ಕೆಯೆ ಬೇಡ. ಕರ್ನಾಟಕ ಕನ್ನಡ-ಶಬ್ದವು ಇದಕ್ಕೂ ಪೂರ್ವದಿಂದಲೇ ಪ್ರಚಾರದಲ್ಲಿದೆ. ಶಡೈಯನ್ ಪರಾಂತಕನ್ ಎಂಬ ಪಾಂಡ್ಯ ರಾಜನು ಸುಮಾರು ೭೭೦ ರಲ್ಲಿ ಬರೆಸಿಕೊಟ್ಟ ವೇಳ್ವಿಕುಡಿ ತಾಮ್ರಶಾಸನದಲ್ಲಿ 'ಕರುನಾಡುಗನ್' ಎಂಬ ಶಬ್ದವು ದೊರೆಯುತ್ತದ ಆರನೆಯ ಶತಮಾನದ ಆದಿಭಾಗದಲ್ಲಿದ್ದ ವರಾಹಮಿಹಿರನು ತನ್ನ ಬ್ರಹತ್ಸಂಹಿತೆಯಲ್ಲಿ 'ಕರ್ನಾಟ' ಎಂಬ ಹೆಸರನ್ನು ಹೇಳಿದ್ದಾನೆ. ಕ್ರಿ. ಶ. ೨ ನೆಯ ಶತಮಾನದವನೆಂದು ಪಾಶ್ಚಾತ್ಯವಿದ್ವಾಂಸರಿಂದ ನಿರ್ಣಯಿಸಲ್ಪಟ್ಟ ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿ 'ಕಣ್ಣಾಟ' ದೇಶದ ಹೆಸರು ದೊರೆಯುತ್ತದೆ. ಸೋಮದೇವನ ಕಥಾಸರಿತ್ಸಾಗರದಲ್ಲಿ ಈ ಕರ್ನಾಟಶಬ್ದವು ಬರುವದರಿಂದ ಅವನ ಮೂಲ ಗ್ರಂಥವಾದ ಗುಣಾಢ್ಯನ ಬೃಹತ್ಕಥೆಯಲ್ಲಿಯೂ ಅದು ಇದ್ದಿರಬೇಕು. ಈ ಗುಣಾಢ್ಯನೂ ಕ್ರಿ ಶ. ೧ನೆಯ ಇಲ್ಲವೆ ೨ ನೆಯ ಶತಮಾನದವನು. ಮಹಾಭಾರತದಲ್ಲಿಯೂ ಕರ್ನಾಟ ಶಬ್ದವು ಬಂದಿರುವುದು. ಮಹಾಭಾರತವು ಕ್ರಿ. ಶ. ಪೂರ್ವದಲ್ಲಿಯೇ ರಚಿತವಾದುದು. ಕೆಳಗಣ ಈಜಿಪ್ತಿನಲ್ಲಿಯ ಆಕ್ಸಿರಿಂಕಸ್ ಎಂಬ ಸ್ಥಳದಲ್ಲಿ ದೊರೆತ ಕ್ರಿಸ್ತಶಕ ಎರಡನೆಯ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ ನಾಟಕದಲ್ಲಿ ಕೆಲವು ಕನ್ನಡ ಶಬ್ದಗಳು ದೊರೆಯುತ್ತವೆ. ಇವನ್ನೆಲ್ಲ ನೋಡುವಲ್ಲಿ ಕ್ರಿ. ಶ ಆರಂಭದಲ್ಲಿಯೇ ಕರ್ಣಾಟಕ-ಕನ್ನಡವೆಂಬ ಜನಾಂಗವೊಂದು, ದೇಶವೊಂದು, ಭಾಷೆಯೊಂದು ರೂಪುಗೊಂಡಿದ್ದಿತೆಂದು ಹೇಳಬಹುದು

ಕರ್ಣಾಟಕ ಕನ್ನಡವೆಂಬ ಹೆಸರಿನ ಜನಾಂಗವೊಂದು ರೂಪುಗೊಂಡಿದ್ದಿತೆಂದು ಹೇಳಿದ ಮಾತ್ರಕ್ಕೆ ಅವರಲ್ಲಿ ಕರ್ಣಾಟಕತ್ವದ ಕಲ್ಪನೆ ಬಂದಿದ್ದಿತೆಂದು ಹೇಳಲಿಕ್ಕೆ ಬರುವುದಿಲ್ಲ- ಜನಾಂಗವಾಗಿ ರೂಪುಗೊಂಡ ಹಲ ವಂಗಡಗಳು ಇಂದಿಗೂ ತಮ್ಮತನವ ಅರವಿಲ್ಲದೆ ಇರುತ್ತವೆ. ಜನಾಂಗದಲ್ಲಿ ತಾವಾಡುವ ಭಾಷೆಗೆ ಮೂರ್ತಸ್ವರೂಪ ಕೊಡಬೇಕೆಂಬ ವ್ಯವಹಾರದ ಭಾಷೆ ಮಾಡಬೇಕೆಂಬ ಕಲ್ಪನೆ ಎಂದು ಬರುವುದೋ ಅಂದೇ ಅವರಲ್ಲಿ ತಮ್ಮತನದ ಹೊಳವು ಬಂದಂತಾಗುವುದು. ಕನ್ನಡಿಗರಲ್ಲಿ ಎಲ್ಲಿಯವರೆಗೆ ತಮ್ಮ ಭಾಷೆಯನ್ನೇ ವ್ಯವಹಾರದ ಭಾಷೆಯನ್ನಾಗಿ ಮಾಡಬೇಕೆಂಬ ಕಲ್ಪನೆಯಿದ್ದಿಲ್ಲವೋ ಅಲ್ಲಿಯವರೆಗೆ ಅವರಲ್ಲಿ ಕರ್ಣಾಟಕತ್ವದ, ಕನ್ನಡತನದ, ಅರಿವು ಇರಲಿಲ್ಲನೆಂಬದು ಸ್ಪಷ್ಟವೆ ಇದೆ. ಶ್ರೀ. ಟಿ. ಎಸ್ ವೆಂಕಣ್ಣಯ್ಯನವರಂಥ ವಿದ್ವಾಂಸರು ಕನ್ನಡ ಭಾಷೆಯಲ್ಲಿ ಕ್ರಿ ಶ. ೧ನೆಯ ೨ನೆಯ ಶತಮಾನದಿಂದಲೇ ಗ್ರಂಥಗಳು ರಚಿತವಾಗಿರಬೇಕೆಂಬ ಊಹೆಯೊಂದನ್ನು ಮುಂದಿರಿಸಿದ್ದಾರೆ. ‡ ಈ ಊಹೆಯು ನಿಜವಾದ ಪಕ್ಷದಲ್ಲಿ ಕನ್ನಡಿಗರಿಗೆ ಅದೊಂದು ಹೆಮ್ಮೆಯ ವಿಷಯವೇ ಎಂಬುದನ್ನು ಹೇಳಬೇಕಾಗಿಲ್ಲ. ಆದರೆ ಪ್ರತ್ಯಕ್ಷ ಪ್ರಮಾಣಗಳು ದೊರೆವ ವರೆಗೆ ಅದೊಂದು ಊಹಾಸಾಮ್ರಾಜ್ಯದ ಮಾತೆ ಕನ್ನಡ ಭಾಷೆಯಲ್ಲಿ ಈಗ ೬ನೆಯ ಶತಮಾನದ ಹಿಂದಿನ ಶಾಸನಗಳು ದೊರೆತಿಲ್ಲ. ಇಷ್ಟೆ ಅಲ್ಲ ಈಗ ದೊರೆತ ೪ನೆಯ ಶತಮಾನದ ವರೆಗಿನ ದಕ್ಷಿಣ ಹಿಂದೂ ದೇಶ

---

‡ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೬ ಸಂ ೪

ದಲ್ಲಿಯ ಶಾಸನಗಳೆಲ್ಲವು ಸಂಸ್ಕೃತ ಇಲ್ಲವೆ ಪ್ರಾಕೃತ ಭಾಷೆಯಲ್ಲಿರುವವು. ಇದರಿಂದ ಇವೇ ದಕ್ಷಿಣ ಹಿಂದೂ ದೇಶದ ವ್ಯವಹಾರದ ಭಾಷೆಗಳಾಗಿದ್ದುವೆಂಬುದು ಸ್ಪಷ್ಟವಿದೆ. ಈಗ ದೊರೆತ ಕನ್ನಡ ಭಾಷೆಯಲ್ಲಿಯ ಪ್ರಾಚೀನ ಶಾಸನಗಳೆಂದರೆ ಬಾದಾಮಿಯ ಚಾಲುಕ್ಯರ ಕಾಲದವು. ಇದರಿಂದ ಇವರ ಕಾಲದಲ್ಲಿಯೆ (೫೫೦-೭೫೩) ಕನ್ನಡಿಗರಲ್ಲಿ ಕರ್ಣಾಟಕತ್ವದ, ಕನ್ನಡತನದ ಅರಿವು ಉಂಟಾಯಿತೆಂದು ಹೇಳಬಹುದು. ಚಾಲುಕ್ಯ ರಾಜರಲ್ಲಿ ಕರ್ಣಾಟಕತ್ವದ ಅರಿವಿದ್ದಿತೆಂಬುದು ಇನ್ನೊಂದು ಮಾತಿನಿಂದಲೂ ಕಂಡುಬರುತ್ತದೆ. ಅದೆಂದರೆ ಚಾಲುಕ್ಯರು ತಮ್ಮ ಸೈನ್ಯಕ್ಕೆ ಕರ್ಣಾಟಕ ಬಲವೆಂದುಕೊಳ್ಳುತ್ತಿದ್ದರು. ರಾಷ್ಟ್ರಕೂಟರಾಜನಾದ ದಂತಿವರ್ಮನು ಅಲ್ಪ ಸೈನ್ಯದೊಡನೆ ಸಾಗಿಹೋಗಿ, ಪಾಂಡ್ಯ, ಚೋಳ, ಕೇರಳ ಕಾಂಚಿ ರಾಜರನ್ನು ಪರಾಭವಗೊಳಿಸಿದ, ಹಾಗೂ ಉತ್ತರ ಹಿಂದುಸ್ತಾನದ ವಜ್ರಟಸೈನ್ಯವನ್ನೂ, ಸಾರ್ವಭೌಮ ಶ್ರೀ ಹರ್ಷನ ಸೈನ್ಯವನ್ನೂ ಸೋಲಿಸಿ ಕೀರ್ತಿ ಸಂಪಾದಿಸಿದ ಕರ್ಣಾಟಕ ಸೈನ್ಯವನ್ನು (ಎಂದರೆ ಚಾಲುಕ್ಯರ ಸೈನ್ಯವನ್ನು) ಸೋಲಿಸಿದನೆಂದು ಕ್ರಿ. ಶ. ೭೫೩ರಲ್ಲಿ ಬರೆಯಲ್ಪಟ್ಟ ಕೊಲ್ಹಾಪುರ ಸಂಸ್ಥಾನದಲ್ಲಿಯ ಸಾಮನಗಡದ ತಾಮ್ರಶಾಸನದಲ್ಲಿ ಉಕ್ತವಾಗಿದೆ + ಅಂತು ಚಾಲುಕ್ಯರ ಕಾಲದಲ್ಲಿ ಕರ್ಣಾಟಕತ್ವದ ಅರಿವು ಬಂದು ಅದು ಪ್ರಸಾರವಾಗತೊಡಗಿತ್ತೆಂದು ಹೇಳಬಹುದು.

ಚಾಲುಕ್ಯರ ಕಾಲದಲ್ಲಿ ಅಂಕುರಿಸಿದ ಕರ್ಣಾಟಕತ್ವವು ರಾಷ್ಟ್ರಕೂಟರ ಕಾಲದಲ್ಲಿ (೭೫೪-೯೭೪) ಮಿಡಿವಾಯಿತು. ರಾಷ್ಟ್ರಕೂಟ ರಾಜನಾದ ನೃಪತುಂಗನು (೮೧೪-೮೭೭) ತನ್ನ ಕವಿರಾಜಮಾರ್ಗದಲ್ಲಿ

ಕಾವೇರಿಯಿಂದಮಾಗೋ
ದಾವರಿವರಮಿರ್ದ ನಾಡೊಳಾಕನ್ನಡದೊಳ್
ಭಾವಿಸಿದ ಜನಪದಂ ವಸು-
ಧಾವಲಯವಿಲೀನವಿಶದವಿಷಯವಿಶೇಷಂ ॥

ಎಂದು ಕನ್ನಡನಾಡಿನ ಸೀಮೆಯನ್ನು ಹೇಳಿ

ಅದರೊಳಗಂ ಕಿಸುವೊಳಲಾ
ವಿದಿತಕೊಪಣನಗರದಾಪುರಿಗೆರೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದತಿರುಳ್ ॥ ×

ಎಂದು ತಿರುಳ್ಗನ್ನಡ ನಾಡನ್ನು ಬೇರೆ ಮಾಡಿ ತೋರಿಸಿದ್ದಾನೆ. ಅಲ್ಲದೆ ಕನ್ನಡ ನಾಡವರ ಪೆರ್ಮೆಯನ್ನು ಈ ಪ್ರಕಾರ ಹೊಗಳಿದ್ದಾನೆ:

ಪದನರಿದು ನುಡಿಯಲುಂ ನುಡಿ-
ದುದನರಿದಾರಯಲುಮಾರ್ಪರಾನಾಡವರ್ಗಳ್
ಚದುರರ್ ನಿಜದಿಂ ಕುರಿತೋ-
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥
ಕುರಿತವರಲ್ಲದೆ ಮತ್ತಂ
ಪೆರರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್ ।
ಕಿರುಮಕ್ಕಳುಮಾಮೂಗರು
ಮರಿಪಲ್ಕರಿವರ್ ವಿವೇಕಮಂ ಮಾತುಗಳಂ ॥ ×

ಇದರಿಂದ ಆ ಕಾಲಕ್ಕೆ ಕರ್ಣಾಟಕತ್ವವು ಆವ ಮಟ್ಟಕ್ಕೆ ಬೆಳೆದು ಬಂದಿದ್ದಿತೆಂಬುದು ಸಹಜ ತಿಳಿದು ಬರುವಂತಿದೆ.

ಇಲ್ಲಿಂದ ಮುಂದಿನ ಕಾಲದಲ್ಲಂತೂ ಹಲವರು ಹೆಸರಾದ ಕವಿಗಳುದಿಸಿ ಕನ್ನಡ ಭಾಷಾರಮಣಿಯನ್ನು ಸಿಂಗರಿಸಿದರು. ಕನ್ನಡಕ್ಕಾದಿಕವಿಯೆನಿಸಿದ ಪಂಪನು ಆದಿಪುರಾಣ ವಿಕ್ರಮಾರ್ಜುನವಿಜಯಗಳಂತಹ ಅಮೌಲ್ಯ ಮಣಿಗಳನ್ನು ಕನ್ನಡ ಭಾಷಾರಮಣಿಯ ಮುಗುಟದಲ್ಲಿ ಕೆಚ್ಚಿದನು. ೯ನೆಯ ಶತಮಾನದ ತರುವಾಯ ಕರ್ಣಾಟಕವನ್ನಾಳಿದ ರಾಷ್ಟ್ರಕೂಟ—ಚಾಲುಕ್ಯ—ಹೊಯ್ಸಳ ರಾಜಮನೆತನಗಳು ಕನ್ನಡ ಭಾಷೆಯ ಅಭಿಮಾನಿಗಳಾಗಿ ಹಲವರು ಕನ್ನಡ ಪಂಡಿತರಿಗೆ ಆಶ್ರಯ ಕೊಟ್ಟರು. ಇದರ ಫಲವಾಗಿ ಈ ಮೂರು ಮನೆತನಗಳವರೂ ಒಬ್ಬೊಬ್ಬ ಕರ್ಣಾಟಕ ಕವಿಚಕ್ರವರ್ತಿಯನ್ನು ಸೃಷ್ಟಿಸಿದರು. ರಾಷ್ಟ್ರಕೂಟ ಕೃಷ್ಣರಾಜ [ಕನ್ನರ] ನಿಂದ ಹೊನ್ನನು ಕವಿಚಕ್ರವರ್ತಿ ಬಿರುದನ್ನು ಸಂಪಾದಿಸಿದರೆ, ಚಾಲುಕ್ಯ ತೈಲಪನಿಂದ ಕವಿರನ್ನನೂ ಹೊಯ್ಸಳ ವೀರಬಲ್ಲಾಳನಿಂದ ಜನ್ನನೂ ಕವಿಚಕ್ರವರ್ತಿ ಬಿರುದನ್ನು ಸಂಪಾದಿಸಿದರು. ೧೦ನೆಯ ಶತಮಾನದಿಂದ ೧೩ನೆಯ ಶತಮಾನದ ವರೆಗಿನ ಕಾಲವು ಕರ್ಣಾಟಕ ಸಾಹಿತ್ಯದಲ್ಲಿ ಉಜ್ವಲವಾಗಿದೆ. ಕನ್ನಡ ಸಾಹಿತ್ಯವು ಈ ಕಾಲ

+ Journal of the Bombay Branch R. A. S. Vol. 2 p. 375.

ದಲ್ಲಿ ಬಹುಮುಖವಾಗಿ ಬೆಳೆಯಿತ. ಇದಕ್ಕೆ ಕಾರಣ ಆ ಕಾಲದ ಸುಶಿಕ್ಷಿತ ಸಮಾಜದಲ್ಲಿ ಕರ್ಣಾಟಕತ್ವವು ಆಳವಾಗಿ ನೆಲಸಿದ್ದುದೆ. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಅಂಕುರಿಸಿದ ಕರ್ಣಾಟಕತ್ವವು ಈ ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ, ಹೊಯ್ಸಳರ ಕಾಲದಲ್ಲಿ ಮರವಾಗಿ ಪಾರಂಬಿಗಳನ್ನು ಬಿಟ್ಟು ಕಂಗೊಳಿಸ ತೊಡಗಿತು. ಸಂಸ್ಕೃತ ಶಬ್ದಗಳನ್ನು ಬೆರಸದೆ **ಅಚ್ಚಗನ್ನಡದಲ್ಲಿಯೇ** ಕಾವ್ಯ ಬರೆವ ಪ್ರತಿಜ್ಞೆ ಮಾಡಿ—"ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದ" ಆಂಡಯ್ಯನ ಕಾವ್ಯವನ್ನೂ ಅದರಲ್ಲಿ ಬರುವ "ಕನ್ನಡ ಮೆನಿಪ್ಪಾನಾಡು ಚೆಲ್ವಾಯ್ತು" "ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾರನಾ ನೆಲನಂ ಪುತ್ತಿನ ಮಾನಿಸರ್ ಪೊಗಳಲೇನಂ ಬಲ್ಲರ್" ಎಂಬ ಮಾತುಗಳನ್ನು ನೋಡಿದರೆ ಕರ್ಣಾಟಕತ್ವವು ಆ ಕಾಲದ ಸುಶಿಕ್ಷಿತ ಸಮಾಜದಲ್ಲಿ ಅದೆಷ್ಟು ಮಟ್ಟಿಗೆ ಬಿಂಬಿಸಿದ್ದಿತೆಂಬುದು ಸಹಜ ತಿಳಿದು ಬರುವಾತಿದೆ.

ರಾಷ್ಟ್ರಕೂಟರ ಚಾಳುಕ್ಯರ ಹೊಯ್ಸಳರ ಕಾಲದಲ್ಲಿ ಕರ್ಣಾಟಕತ್ವದ ಪೂರ್ಣ ಕಲ್ಪನೆ ಬಂದಿದ್ದರೂ ಅದು ಸುಶಿಕ್ಷಿತರ ಮಟ್ಟಿಗೆ ಮಾತ್ರ ಇದ್ದಿತು ಕರ್ಣಾಟಕತ್ವದ ತಳಹದಿಯ ಮೇಲೆಯೇ ಸಾಮ್ರಾಜ್ಯವನ್ನು ಕಟ್ಟಿ ಕರ್ಣಾಟಕತ್ವದ ಅರಿವನ್ನು ನಿರಕ್ಷರಿಗಳ ವರೆಗೂ ಒಯ್ದು ಮುಟ್ಟಿಸಿದ ಶ್ರೇಯಸ್ಸು ವಿಜಯನಗರ ಸಾಮ್ರಾಜ್ಯಕ್ಕೆ ಇರುತ್ತದೆ ವಿಜಯನಗರದ ಅರಸರು ತೆಲುಗರು ಕುರುಬರು ಗೊಲ್ಲರು ಮೊದಲಾಗಿ ಹೇಳುವ ಮಾತು ಹಿಂದಾಗಿ ಹೋಗಿದೆ. ಅವರು ಅಚ್ಚಗನ್ನಡಿಗರೇ ಇದ್ದರೆಂಬುದು ಈಗ ನಿರ್ವಿವಾದವಾಗಿದೆ* ಅಚ್ಚಗನ್ನಡಿಗರೇ ಆಗಿದ್ದ ವಿಜಯನಗರದ ಅರಸರು ಕರ್ಣಾಟಕತ್ವವನ್ನೇ ತಳಹದಿಯಾಗಿ ಮಾಡಿ ತಮ್ಮ ರಾಜ್ಯಕ್ಕೆ ಕರ್ಣಾಟಕ ರಾಜ್ಯವೆಂದು ಹೆಸರು ಕೊಟ್ಟರು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಲ್ಲಿ ವಿದ್ಯಾರಣ್ಯರಿಗೆ ಅಗ್ರಸ್ಥಾನವಿದ್ದುದು ಪ್ರತಿಯೊಬ್ಬ ಕನ್ನಡಿಗನಿಗೂ ಗೊತ್ತಿದೆ. ಇದಕ್ಕಾಗಿಯೆ ಅವರಿಗೆ 'ಕರ್ಣಾಟಕ ಸಿಂಹಾಸನ ಸ್ಥಾಪನಾಚಾರ್ಯ' ಎಂಬ ಬಿರುದು ಬಂದಿದ್ದಿತು. ವಿದ್ಯಾರಣ್ಯರು ಶೃಂಗೇರಿ ಪೀಠಸ್ಥ ಆಚಾರ್ಯರಾದುದರಿಂದ ಆ ಪೀಠಸ್ಥ ಆಚಾರ್ಯರ ಬಿರುದಾವಳಿಯಲ್ಲಿ ಅದು ಇನ್ನೂ ವರೆಗೆ ನಡೆದು ಬಂದಿದೆ ಇವರ ಮೇಲಿಂದ ವಿಜಯನಗರ ಸಿಂಹಾಸನಕ್ಕೆ ಕರ್ಣಾಟಕ ಸಿಂಹಾಸನ ಎನ್ನುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ ಇತ್ತೀಚೆಗೆ ಫಾದರ ಹೆರಾಸ್ (Rev H Heras) ಎಂಬವರು ವಿದ್ಯಾರಣ್ಯರಿಗೂ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೂ ಇದ್ದ ಸಂಬಂಧವನ್ನು ತೋರಿಸುವ ಐತಿಹ್ಯವು ಕಟ್ಟುಕತೆ ಯಾಗಿದೆಯೆಂದು ಹೇಳಿದ್ದಾರೆ. † ಡಾ. ಸಾಲೆತೊರೆ [ Dr, Saletore ] ಇವರಾದರೂ ಅದಕ್ಕೆ ದನಿಗೂಡಿಸಿದ್ದಾರೆ ‡ ಹಲವು ದಿವಸಗಳಿಂದ ನಂಬಿಕೊಂಡು ಬಂದ, ಹಲವು ಐತಿಹಾಸಿಕ ಆಧಾರಗಳೂ ಇದ್ದ ಈ ಸಂಗತಿಯ ವಿಷಯವಾಗಿ ಇನ್ನೂ ಚರ್ಚೆಯಾಗಿ ಸಿದ್ಧಾಂತಕ್ಕೆ ಬರಬೇಕಾಗಿದೆ ಅಲ್ಲಿಯವರೆಗೆ ವಿಜಯನಗರ ರಾಜ್ಯಕ್ಕೆ ಕರ್ಣಾಟಕ ರಾಜ್ಯವೆಂದು ಹೆಸರಿತ್ತೆಂದು ಹೇಳುವ ಈ ಆಧಾರವನ್ನು ಬದಗಿರಿಸಿದರೂ ಉಳಿದ ಆಧಾರಗಳೂ ಸಾಕಷ್ಟಿವೆ. ಬುಕ್ಕರಾಯನ [ 1354—1376 ] ಸೊಸೆಯಾದ ಗಂಗಾದೇವಿಯು ಬರೆದ "ಮಧುರಾವಿಜಯಂ ಅಥವಾ ವೀರಕಂಪಣರಾಯಚರಿತಂ" ಎಂಬ ಕಾವ್ಯದಲ್ಲಿ 'ಬುಕ್ಕರಾಯನು ಜನತೆಯ ನಯನಗಳಿಗೆ ಪೂರ್ಣಚಂದ್ರನೋಪಾದಿಯಲ್ಲಿರುವನೆಂ'ದು ಹೇಳಿದ್ದಾಳೆ ÷ ಇದರಿಂದ ವಿಜಯನಗರದ ಪ್ರಜೆಗಳಿಗೆ ಕರ್ಣಾಟಕ ಜನತೆಯೆನ್ನುತ್ತಿದ್ದರೆಂಬುದು ಸ್ಪಷ್ಟವೆ ಇದೆ. ಬುಕ್ಕರಾಯನ ಮಗನಾದ ಎರಡನೆಯ ಹರಿಹರನಿಗೆ 'ಕರ್ಣಾಟಕ ವಿದ್ಯಾವಿಲಾಸ' ಎಂದು ಬಿರುದಿದ್ದಿತು.

---

* Social and Political life in the Vijayanagara Empire by Dr. B. A.
† Beginning of Vijaaynagar History p 11-34
Saletore M. A. Ph. D. 23-39.
‡ Social and Political life in the Vijayanagara Empire Vol. I p 110-112.
÷ ಕರ್ಣಾಟಲೋಕ ನಯನೋತ್ಸವ ಪೂರ್ಣಚಂದ್ರಃ। ಸಾಕಂ ತಯಾ ಕೃದಯಸಂಮತಯಾ ನರೇಂದ್ರಃ॥
ಕಾಲೋಚಿತಾನ್ಯನುಭವನ್ ಕ್ರಮಶಃ ಸುಖಾನಿ। ವೀರಶ್ಚಿರಾಯ ವಿಜಯಾಖ್ಯಪುರಂ ಮಧ್ಯವಾತ್ಸೀತ್॥

೧೫೬೩ರಲ್ಲಿ ಹುಟ್ಟಿದ ಒಂದು ಶಾಸನದಲ್ಲಿ ಯದುವಂಶದಲ್ಲಿ ಸಂಗಮನೆಂಬ ಪ್ರಖ್ಯಾತ ರಾಜನಾದನು. ಅವನ ಬಲದಿಂದ ಕರ್ಣಾಟಲಕ್ಷ್ಮಿಯು ಯಾವಾಗಲೂ ತನ್ನ ಕರ್ಣಾಭರಣಗಳನ್ನು ಇಟ್ಟುಕೊಳ್ಳಲು ಶಕ್ತಳಾದಳು ( ಅನಾಥೆಯಾಗಿ ಸೌಭಾಗ್ಯ ಚಿಹ್ನವನ್ನು ಕಳೆದುಕೊಳ್ಳದಂತಾದಳು ] ಎಂದು ಹೇಳಿದೆ. § ವಿಜಯನಗರದ ಪ್ರಖ್ಯಾತ ರಾಜನಾದ ಕೃಷ್ಣದೇವರಾಯನಿಗೆ 'ಕನ್ನಡ ರಾಜ್ಯರಮಾರಮಣ' ಬಿರುದಿದ್ದಿತು. ರಾಕ್ಷಸ ತಂಗಡಿ ಕಾಳಗದ ತರುವಾಯ ೧೫೭೧ ರಲ್ಲಿ ತಿರುಮಲರಾಯನ ಕಾಲದ ಶಾಸನದಲ್ಲಿ ಸಹ ಕರ್ಣಾಟಕ ರಾಜರೆಂದೇ ಕರೆದಿವೆ. ‡ ಇದೆಲ್ಲದರ ಮೇಲಿಂದ ವಿಜಯನಗರ ಸಾಮ್ರಾಜ್ಯಕ್ಕೆ ಕರ್ಣಾಟಕ ಸಾಮ್ರಾಜ್ಯವೆನ್ನುತಿದ್ದರೆಂಬುದು ಸ್ಪಷ್ಟವಿದೆ. ಇತ್ತೀಚೆಯ ಇತಿಹಾಸಕಾರರೂ ಕರ್ಣಾಟಕ ಸಾಮ್ರಾಜ್ಯವೆಂದು ವಿಜಯನಗರ ಸಾಮ್ರಾಜ್ಯಕ್ಕೆ ಕರೆದಿದ್ದಾರೆ. ಇದನ್ನು ನೋಡಲು ಕರ್ಣಾಟಕತ್ವದ ತಳಹದಿಯ ಮೇಲೆಯೇ ವಿಜಯನಗರದ ಸಾಮ್ರಾಜ್ಯಸ್ಥಾಪನೆಯಾಯಿತೆಂಬ ಮಾತು ಸ್ಪಷ್ಟವಾಗುವುದು. ವಿಜಯನಗರದ ರಾಜರಲ್ಲಿ ಕರ್ಣಾಟಕತ್ವವು ಆಳವಾಗಿ ನೆಲಸಿತ್ತೆಂಬುದಕ್ಕೆ ಇನ್ನೂ ಒಂದು ಉದಾಹರಣೆ ಕೊಡಬಹುದು. ವಿಜಯನಗರದ ರಾಜರು ಕೊಟ್ಟ ದಾನಪತ್ರಗಳು ಯಾವ ಭಾಷೆಯಲ್ಲಿಯೇ ಇರಲಿ ಅವುಗಳ ರಾಜಮುದ್ರೆಯಲ್ಲಿಯು "ಶ್ರೀ ವಿರೂಪಾಕ್ಷ" ಎಂಬ ಅಕ್ಷರಗಳು ಕನ್ನಡದಲ್ಲಿಯೇ ಇವೆ. × ಕೊನೆಯ ರಾಜರ ಕಾಲದಲ್ಲಿ ರಾಜಮುದ್ರೆಯಲ್ಲಿ 'ರಾಮ' ಎಂಬ ಅಕ್ಷರಗಳು ಇರುತ್ತಿದ್ದವು. ಅವೂ ಕನ್ನಡದಲ್ಲಯೆ + ಪೆನುಗೊಂಡೆಚಂದ್ರಗಿರಿರಾಜರ ಕಾಲದ "ಶ್ರೀವೆಂಕಟೇಶ" ಎಂಬ ಮುದ್ರಿಕೆ ಮಾತ್ರ ತೆಲುಗಿನಲ್ಲಿದೆ. ⚘ ಎಂದರೆ ರಾಕ್ಷಸತಂಗಡಿಯ ಕಾಳಗದ ವರೆಗೂ ವಿಜಯನಗರದ ರಾಜರಲ್ಲಿ ಕರ್ಣಾಟಕತ್ವವು ಅಚ್ಚಳಿಯದೆ ಇದ್ದಿತೆಂಬುದು ಸ್ಪಷ್ಟವಿದೆ.

ವಿಜಯನಗರದ ರಾಜರು ತಮ್ಮ ಸಾಮ್ರಾಜ್ಯಕ್ಕೆ ಕರ್ಣಾಟಕರಾಜ್ಯ, ಕರ್ಣಾಟಕಸಾಮ್ರಾಜ್ಯವೆಂದು ಕರೆದುಕೊಂಡದ್ದರಿಂದ ನಾವು ಕನ್ನಡಿಗರು, ಕನ್ನಡ ಭಾಷೆಯನ್ನಾಡುವವರು, ನಮ್ಮದು ಕರ್ಣಾಟಕ ರಾಜ್ಯ ಎಂಬ ಕಲ್ಪನೆಯು ಸುಶಿಕ್ಷಿತರಲ್ಲಷ್ಟೇ ಅಲ್ಲದೆ ಅಶಿಕ್ಷಿತರಲ್ಲಿಯೂ ಒಡಮೂಡುವಂತಾಯಿತು ಅವರಲ್ಲಿಯೂ ಕರ್ಣಾಟಕದ ಕಲ್ಪನೆ ಬಾದಿತು, ಎಂದರೆ ಕರ್ಣಾಟಕತ್ವದ ಕಲ್ಪನೆಯು ಎಲ್ಲರಲ್ಲಿಯೂ ಹರಡಿತು. ಚಾಲುಕ್ಯರ, ಕಾಲದಲ್ಲಿ ಅಂಕುರಿಸಿದ ಕರ್ಣಾಟಕತ್ವವು ರಾಷ್ಟ್ರಕೂಟರ ಚಾಲುಕ್ಯರ ಹೊಯ್ಸಲರ ಕಾಲದಲ್ಲಿ ಮರವಾಗಿ ಬೆಳೆದು ವಿಜಯನಗರ ಸಮ್ರಾಜರ ಕಾಲದಲ್ಲಿ ಫಲ ನೀಡಿತು ಇಂತು ವಿಜಯನಗರಸಾಮ್ರಾಜ್ಯವು ಕರ್ಣಾಟಕತ್ವದ ಪ್ರಸಾರ ಕಾರ್ಯದಲ್ಲಿ ಅಮೌಲ್ಯವಾದ ಕೆಲಸವನ್ನು ಮಾಡಿದೆ.

ವಿಜಯನಗರ ಸಾಮ್ರಾಜ್ಯದ ನಾಶದಕೂಡ ಕನ್ನಡಿಗರಲ್ಲಿಯ ಕರ್ಣಾಟಕತ್ವವೂ ಸುಷುಪ್ತಾವಸ್ಥೆಯಲ್ಲಿದ್ದಿತು. ಅದರ ತರುವಾಯದಲ್ಲಿ ಆ ಕರ್ಣಾಟಕತ್ವವು ನಡುವೆನಡುವೆ ಎಲ್ಲಿಯೋ ಚೇತರಿಸಿಕೊಂಡಂತೆ ಕಂಡು ಬರುತ್ತದೆ. ಆದರೆ ಅದು ಸಂಪೂರ್ಣ ಎಚ್ಚರವಲ್ಲ. ಬ್ರಿಟಿಶರ ಆಳಿಕೆಯಲ್ಲಿ ಕನ್ನಡ ನಾಡು ಹರಿದು ಹಂಚಿಹೋಗಿ ಕನ್ನಡಿಗರು ಅತಿ ದೈನ್ಯಾವಸ್ಥೆಗಿಳಿದಿದ್ದಾರೆ. ಅದರ ಫಲವಾಗಿಯೂ ಪಾಶ್ಚಾತ್ಯ ಶಿಕ್ಷಣದ ಫಲವಾಗಿಯೂ ಕನ್ನಡಿಗರಲ್ಲಿ ಇಂದು ಹೊಸರೀತಿಯಲ್ಲಿ ಕರ್ಣಾಟಕತ್ವವು ತಲೆದೋರಿದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಬಂದ ಫಲದ ಬೀಜವು ಹೊಸ ಅಂಕುರದೊಡನೆ ಕಾಣಿಸಿಕೊಂಡಿದೆ. ಹಿಂದಿನ ಏಳ್ಗೆಯ ಕಾಲದ ಇತಿಹಾಸದ ನೀರುಗೊಬ್ಬರದಿಂದ ಅದನ್ನು ಬೆಳೆಸೋಣ. ಅಶಿಕ್ಷಿತ ಸುಶಿಕ್ಷಿತರೆಲ್ಲರಲ್ಲಿಯೂ ಅದು ಪ್ರಸಾರವಾಗುವಂತೆ ಮಾಡೋಣ. ಕರ್ಣಾಟಕ ಏಕೀಕರಣದಿಂದ ನವೀನಶಕ್ತಿಯನ್ನು ಪಡೆದು ಭರತಖಂಡದಲ್ಲೊಂದು ಸ್ಥಾನವನ್ನು ಪಡೆಯೋಣ. ಭರತಖಂಡದ ಹಿತವನ್ನು ಸಾಧಿಸೋಣ. ಕನ್ನಡಿಗರೇ ಏಳಿರಿ! ನಡುಕಟ್ಟಿರಿ!!

---

§ Epigraphia Carnatica VIII N. 69 p. 158; Ti. 206, p. 209.
‡ Epigraphia Carnatica XII T. 1, pp 102.
× Epigraphia Carnatica, Passim; Ep. Ind, XIV, pp. 240, 322.
\+ My. Arch. Report for 1910-11. p. 53.
⚘ Epigraphica India XIX, p. 89.

# ರುದ್ರರಂಗ.

—ತಾಳೀಕೋಟೆಯ ಕದನವಾದ ಮೇಲೆ ಆ ರುದ್ರರಂಗದಲ್ಲಿ ಒರಗಿದ್ದ ಹೆಣಗಳ ರಾಶಿಯ ನಡುವೆ ಅಲೆಯುತ್ತ, ರಾಮರಾಜನ ಆತ್ಮವು ಮಡಿದ ವೀರಯೋಧರಿಗಾಗಿ ಮರುಗುತ್ತಿರುವುದು. ಎದೆದಣಿಯೆ ರಣಭೋಜನವನ್ನುಂಡ ರಣಭೈರವಿಯು ಬಳಿಯಲ್ಲಿಯೇ ತೃಪ್ತಿಯಿಂದ ನಲಿಯುತ್ತಿರುವಳು. ಅವಳನ್ನು ಕಂಡು ರಾಮರಾಜನ ಆತ್ಮವು ನುಡಿಯುವುದು'

**ರಾಮರಾಜ—**

ನೋಡಿದೆಯ, ಬಿತ್ತರವ ಬಯಲಿನಲ್ಲೆಲ್ಲಿಯೂ
ಹಸಿಯ ಹೆಣಗಳ ರಾಶಿ ಕಿಕ್ಕಿರಿಹುದು.
ನಿನ್ನ ಮಾಟದ ಬಲೆಗೆ ಸಿಲುಕಿದೋ, ಯೋಧಕರು
ಮುಳುಗಿಹರು ನೆತ್ತರಿನ ಹೊನಲಿನಲ್ಲಿ.
ವೀರರೆದೆ ಬಸಿದ ಬಿಸಿನೆತ್ತರಿನ ಕೆಸರಿನಲಿ
ನನ್ನಡಿಗಳೂ ಅಂಟಿಕೊಳ್ಳುತಿಹುವು
ನಮ್ಮವರ ಆದಟಿಗಿದೆ ಫಲವಾಯ್ತು ಕೊನೆಗೆ!
ಏಂ ನೆತ್ತರಿನ ಹಸಿವೊ, ರಣದೇವಿ, ನಿನಗೆ!

**ರಣದೇವಿ—**

ನಾಡಿನ ಪತಾಕೆಯನು ಬಿಡುಗೊಡದೆ ವೀರ್ಯದಿಂ
ಕೊಳುಗುಳದಿ ಕಾದಾಡಿ ಪೊಡವಿಗರುಳಿ
ಕೊನೆಯುಸಿರನೆಳೆಯುವನ್ನೆಗ ಮದಟನುಕ್ಕಿಸಿದ
ವೀರರಿಗೆ ನೀನೇಕೆ ಮರುಗುತಿರುವೆ?
ಪ್ರಳಯದಲಿ ಸೃಷ್ಟಿಯಿಹೆ; ಮರಣದಿಂದೊಗೆಯುವುದು
ಜನನ. ನಿಮ್ಮವರಿಂತು ಮಡಿದು ಬೀಳೆ,
ನಾನೆ ಕಾರಣಳೆಂದು ನಿನ್ನ ಮನದೆಣಿಕೆ.
ವಿಧಿಯ ಲೀಲೆಯಿದೆಲ್ಲ. ನಾನೆ ಹೊಣೆಯದಕೆ?

**ರಾಮರಾಜ—**

ನಿನ್ನ ತಾಂಡವದ ತಂಬಟೆಯ ದನಿಯನು ಕೇಳಿ
ಉಬ್ಬಿದುವು ವೀರರೆದೆ. ನಿನ್ನ ಮೊಗದ
ಭೈರವೀ ಹಾಸದಿಂದವರ ವಜ್ರಾಂಗದಲಿ
ಹರಿದುಹೋಯ್ತು ತಟಿತ್ಪ್ರಚಂಡಲಹರಿ
ನಿಶ್ಯಕ್ತರಿಗೆ ಭೀಮಬಲವಿತ್ತೆ; ಹೇಳವರಿಗೆ,
ಕುರುಡ ಕುಂಟರಿಗೆ ಅಂಗಾಂಗವಿತ್ತೆ.
ನೀನೆಳೆದ ಸೂತ್ರದಿಂದಾಯ್ತು ರಣಲೀಲೆ.
ನೀನು ಹೊತ್ತಿಸಿದುದೀ ಪ್ರಳಯದಾ ಜ್ವಾಲೆ!

**ರಣದೇವಿ—**

ಕನ್ನಡದ ಕೀರ್ತಿಕಳೆಯಾದಿವರ ಶೌರ್ಯದಲಿ
ಹೆಮ್ಮೆಯಿಲ್ಲವೆ ನಿನಗೆ? ಜಡನೆ ನೀನು?
ಅವರೆತ್ತಿದೊಂದೊಂದು ಅಸಿಯಲಗಿನೊಸಗೆಯಲಿ
ಝುರ್ಝುರಿತವಾಯ್ತೆನ್ನ ನಾಳನಾಳಂ.
ಅವರ ಬಿಲ್ಲಿಂದೊಗೆದ ಕಣೆಗಳೊಂದೊಂದರಲಿ
ಕುದಿದು ಚಿಮ್ಮದೆ ನಿನ್ನ ಹೃದಯ ರಕ್ತಂ?
ಇದುವೆ ಮಡಿದರ ಗೆಲುವು, ಬದುಕಿದರ ಸೋಲು.
ವೀರದಿವಿಗೇರ್ವುದಕೆ ಮೆಟ್ಟಿಲಿನ ಸಾಲು.

**ರಾಮರಾಜ –**

ಇಲ್ಲಿ ಮಡಿದಿಹ ಜೀವವೊಂದೊಂದಕೂ ಅಲ್ಲಿ
ಧರಣಿಯಲಿ ಸಾಯುವವರೆನಿತಿರುವರು!
ಮಡದಿ ಮಕ್ಕಳು ಮುದುಕ ಜವ್ವನಿಗರೆಲ್ಲರೂ
ಕಷ್ಟ ಭಾರದಿನೆಂತು ಕುಸಿಯುತಿಹರು!
ಏಂ ಭಯಂಕರಲೀಲೆ ನಿನ್ನದಿದು, ರಣದೇವಿ?
ಕರುಳಿರುವುದೇ ನಿನಗೆ? ಹೆಣ್ಣೆ ನೀನು?
ಎದೆಯೊಡೆದು ಬಿಸಿ ಜೀವರಕ್ತವನು ಸುರಿಸಿ
ಮಡಿಯೆ, ನೀಂ ನಲಿವೆ ನಾಲಿಗೆಯ ಚಪ್ಪರಿಸಿ!

ಸಾವು ಬಂದೆಮ್ಮ ಬಾಗಿಲನು ತಟ್ಟುವ ಮುನ್ನ
ಸೇನವನ ಕಳುಹಿಸಿದೆ ನಮ್ಮ ಬಳಿಗೆ.
ಮಸಣದಲಿ ಮಣ್ಣಾಗಿ, ಪುಡಿಯ ಹಿಡಿಯಾಗಿ, ಇದೊ,
ಕನ್ನಡದ ಸೌಭಾಗ್ಯ ಕುಸಿದಿರುವುದು.
ನಿನಗೆ ಬಲಿಯಾಗಿ, ಇದೊ, ಅರಸು-ಆಳೆಲ್ಲರೂ
ತಮ್ಮ ದೇಹಾರ್ಪಣವ ಮಾಡಿರುವರ.
ಇನ್ನು ನೀನೆಮ್ಮ ಬಳಿ ಸುಳಿಯದಿರು, ಕ್ರೂರಿ!
ಏಂ ಕಟುಕರೆದೆಯೊ ನಿನ್ನದೆ, ಮಸಣಮಾರಿ!

—ಜಿ. ವಾಸುದೇವರಾವ್
ಬೆಂಗಳೂರು.

# ಕನಕದಾಸರು ಕಂಡ ವಿಜಯನಗರ

( ಲೇಖಕರು:—ಶ್ರೀ. ಬೆಟಗೇರಿ ಕೃಷ್ಣಶರ್ಮರು, ಧಾರವಾಡ )

ಕನಕದಾಸರ ಹೆಸರನ್ನು ಕೇಳದ ಕನ್ನಡಿಗರು ನಮ್ಮ ನಾಡಿನಲ್ಲಿ ವಿರಳರೆಂದೇ ಹೇಳಬಹುದು. ಕನಕನನ್ನು ಕೆಣಕಬೇಡ; ಕೆಣಕಿ ತಿಣುಕಬೇಡ,' ಎಂಬ ಗಾದೆ ಉತ್ತರ ಕರ್ಣಾಟಕದ ಹಳ್ಳಿಗರ ಬಾಯಲ್ಲಿ ಕೂಡ ಇದೆ. ಆದರೂ ಬಹುಜನ ಕನ್ನಡಿಗರಿಗೆ ಈ ದಾಸರು ತಮ್ಮ ಹಾಡು-ಕೀರ್ತನೆಗಳಿಂದಷ್ಟೆ ಪರಿಚಿತರಾಗಿರುವರು. ಇವರು ರಚಿಸಿದ 'ಮೋಹನ ತರಂಗಿಣಿ' 'ನಳಚರಿತ್ರೆ' 'ರಾಘವಧಾನ್ಯ ಚರಿತಂ' ಎಂಬ ನಿಡಿದಾದ ಕಾವ್ಯಗ್ರಂಥಗಳ ಹೆಸರನ್ನು ಕೂಡ ಕೇಳದವರು ನಮ್ಮಲ್ಲಿ ಅನೇಕ ಜನರು ಇದ್ದಾರೆ. ಮೈಸೂರಿನ ಕಾವ್ಯಕಲಾನಿಧಿಯ ಸಂಪಾದಕರ ಕೃಪೆಯಿಂದ ಮುದ್ರಿತವಾಗಿ 'ಮೋಹನ ತರಂಗಿಣಿ' 'ನಳಚರಿತ್ರೆ' ಇವೆರಡು ಕಾವ್ಯಗಳು, ಜಿಜ್ಞಾಸುಗಳಾದ ವಾಚಕರಿಗೆ ನೋಡಲಿಕ್ಕಾದರೂ ಸಿಕ್ಕುತ್ತವೆ. 'ರಾಘವಧಾನ್ಯ ಚರಿತಂ' ಎಂಬ ಗ್ರಂಥವು ಇದುವರೆಗೂ ಮುದ್ರಣಾಲಯದ ಮುಖವನ್ನು ಕೂಡ ನೋಡಿದಂತಿಲ್ಲ.

ಕನಕದಾಸರು ಬದುಕಿ ಬಾಳಿದ ಕಾಲವೆಂದರೆ ಕ್ರಿ. ಶ. ೧೬ನೆಯ ಶತಮಾನದ ಪೂರ್ವಾರ್ಧವು. ಅದು ವಿಜಯನಗರದ ಸಾಮ್ರಾಜ್ಯದ ಕೇವಲ ಘನತೆಯ ಕಾಲವು. ವೀರನರಸು ಕೃಷ್ಣದೇವರಾಯನ ಆಧಿಪತ್ಯದಲ್ಲಿ ವಿಜಯನಗರವು ವೈದಿಕ ಸಂಸ್ಕೃತಿಯ ತವರು ಮನೆಯಾಗಿದ್ದಿತು ಜನರಲ್ಲೆಲ್ಲ ಭಾಗವತ ಧರ್ಮವು ಹಬ್ಬಿ ಹರಡಿದ್ದಿತು. ಆಗಲೆ ಶ್ರೀ ವ್ಯಾಸರಾಯರು ಶ್ರೀಕೃಷ್ಣ ದೇವರಾಯನ ಕುಹುಯೋಗವನ್ನು ನಿವಾರಣೆ ಮಾಡುವುದಕ್ಕೆ ಸಾಮ್ರಾಜ್ಯದ ಸಿಂಹಾಸನವನ್ನೇರಿ ಕುಳಿತಿದ್ದರು. ಆದರಿಂದಲೆ ವ್ಯಾಸರಾಯರಿಂದ ಪುನರುಜ್ಜೀವಿತವಾದ ದಾಸಕೂಟ ಪಂಥಕ್ಕೆ ವಿಜಯನಗರವು ಆಗ ಆಶ್ರಯಸ್ಥಾನವಾಗಿದ್ದಿತು. ಈ ಪಂಥದ ಮುಖ್ಯ ಪ್ರಸಾರಕರಾದ ಪುರಂದರದಾಸರು ಕನಕದಾಸರು ಇವರೆಲ್ಲರೂ ಆ ರಾಜಧಾನಿಯನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರೆ ಆಶ್ಚರ್ಯವೇನೂ ಅಲ್ಲ. ಹಾಗೆ ಮಾಡಿಕೊಂಡಿದ್ದರೆಂಬುದಕ್ಕೆ ಐತಿಹಾಸಿಕ ಪ್ರಮಾಣಗಳೂ ಇಲ್ಲವೆ ಇಲ್ಲ 'ಮೋಹನ ತರಂಗಿಣಿ' ಕಾವ್ಯದಲ್ಲಿಯ ಅನೇಕ ಮಾತುಗಳಿಂದ ಕನಕದಾಸರು ಶ್ರೀ ರಾಮಾನುಜರ ತತ್ತ್ವಜ್ಞಾನದ ಪುರಸ್ಕರ್ತೃಗಳೆಂಬ ಮಾತು ಸ್ಫುಟವಾಗಿ ಗೊತ್ತಾಗುವುದು. ಆದರೆ ಅವರು ಶ್ರೀ ವ್ಯಾಸರಾಯರಿಗೆ ಸಾಕ್ಷಾತ್ ಶಿಷ್ಯರಾಗಿದ್ದುಕೊಂಡು, ಅವರ ದಾಸಕೂಟ ಮಾರ್ಗಕ್ಕೆ ಸೇರಿದವರಾಗಿದ್ದರೆಂದೂ ಮಾಧ್ವಸಮಾಜದಲ್ಲಿಯ ಪರಂಪರೆಯ ಕಥೆಗಳಿಂದ ಕಂಡುಬರುವುದು

ದಾಸಕೂಟದ ಎಲ್ಲ ದಾಸರಿಗಿಂತಲೂ ಕನಕದಾಸರ ಹಾಡು ಕೀರ್ತನೆಗಳಲ್ಲಿ ಒಂದು ಬಗೆಯ ವಿಶೇಷ ಗುಣವಿದೆ ಅದರಂತೆಯೆ ಇವರ ಕಾವ್ಯಗ್ರಂಥಗಳಲ್ಲಿಯೂ ವಿಶಿಷ್ಟವ್ಯಕ್ತಿತ್ವವನ್ನು ನಾವು ಕಾಣದೆ ಇರಲಾರೆವು ಮೋಹನತರಂಗಿಣಿಯಲ್ಲಿಯಂತೂ ಇವರು ತಮ್ಮ ಕಾಲದ ಜನಜೀವನವನ್ನು ಗ್ರಂಥಮುದ್ದಕ್ಕೂ ಚೆನ್ನಾಗಿ ಹೆಣೆದು ಬಿಟ್ಟಿದ್ದಾರೆ ಇನ್ನುಳಿದ ನಮ್ಮ ಕನ್ನಡ ಕವಿಗಳಂತೆಯೆ ಕನಕದಾಸರೂ ಸಾಂಪ್ರದಾಯಿಕವಾದ ಅಷ್ಟಾದಶ ವರ್ಣನೆಗಳ ಕಟ್ಟಿಗೆ ಒಳಗಾಗದೆ ಇಲ್ಲ; ಆದರೆ ಅವೆಲ್ಲ ವರ್ಣನೆಗಳೂ 'ಯಾವ ಲೋಕದುವೇನೋ!' ಎಂದೆನಿಸದೆ, ತಮ್ಮ ಕಾಲದ ಜನಜೀವನ ಜಾನಪದ ಜೀವನಗಳ ಪಡಿನೆಳಲನ್ನು ತುಂಬು ತುಂಬಾಗಿ ಮೂಡಿಸಿಕೊಂಡು ನಿಂತಿವೆ.

ಕನಕದಾಸರು ಬರೆದ 'ಮೋಹನ ತರಂಗಿಣಿ'ಯು ಭಾಗವತದೊಳಗಿನ ಕೆಲವು ಕಥಾಭಾಗಗಳನ್ನೊಳಗೊಂಡ ಶ್ರೀಕೃಷ್ಣ ಭಕ್ತಿಯದೊಂದು ವರ್ಣಕಕಾವ್ಯವು. ಇವರಲ್ಲಿ 'ಪುರಹರ ದಹನ' ಕಾಮೋತ್ಪತ್ತಿ, ವರಶಂಬರಾಸುರ ವಧೆ, ಕಂತು ಸುತನ (ಅನಿರುದ್ಧನ) ಭಾಸುರ ಲೀಲೆ ಬಾಣನ ಗೆದ್ದ ಜಯಲಕ್ಷ್ಮೀಶನ (ಶ್ರೀಕೃಷ್ಣನ) ಕೃತಿ, ಇವೆಲ್ಲವುಗಳೂ ಬಂದುಹೋಗಿವೆ. ಇಷ್ಟೆಲ್ಲ ವಿಷಯಗಳು ಬಂದು ಹೋಗಿದ್ದರೂ ಕಾವ್ಯನಾಯಕನು 'ಶ್ರೀಕೃಷ್ಣರಾಯ'ನೆ! ಕಾವ್ಯವೆಲ್ಲವೂ ಜಾನಪದ ವೃತ್ತನಾಗಿದ್ದ ಸಾಂಗತ್ಯದ ಛಂದಸ್ಸಿನಲ್ಲಿದೆ. ಹೇಳುವ ರೀತಿ ಪಂಡಿತ-ಪಾಮರರಿಗೂ ರಂಜಕವಾಗಿದೆ. ಲಾಕ್ಷಣಿಕರ ಒರೆಗಲ್ಲಿಗೆ ಈ ಕಾವ್ಯವು, ಮಹಾಕಾವ್ಯವಾಗಿ ಇಳಿಯಲಾರದಾದರೂ ಕುಲರಸಿಕರಿಗೆ ಇದೊಂದು ರಸ

ಸಂಪತ್ತಿ ಸಂಪೂರ್ಣವಾದ ರಮಣೀಯವಾದ ಮಹಾ ಕಾವ್ಯವೆ ಆಗಿದೆಯೆನ್ನಲಿಕ್ಕೆ ಅಭ್ಯಂತರವೇನೂ ಇರದು.

ಕನಕದಾಸರು ತಮ್ಮ ಈ ಕಾವ್ಯದ ಆರಂಭದಲ್ಲಿ 'ದೇಶಾಧಿಪ ಕೃಷ್ಣರಾಯನ' 'ದ್ವಾರಾವತಿಯ ಸಂಪೂರ್ಣ ಶೃಂಗಾರ' ವರ್ಣಿಸುವುದಕ್ಕೆ ಹೊರಡುವರು. ಅವರ ದ್ವಾರಾವತಿಯ ವರ್ಣನೆಯೆಂದರೆ ಕೃಷ್ಣರಾಯನ ಕಾಲದ ವಿಜಯನಗರದ ವರ್ಣನೆಯೇ ಆಗಿದೆ. ರಾಜ್ಯದ ವರ್ಣನೆ, ರಾಜಧಾನಿಯ ಹೊರವಳಯ, ಕೋಟೆ, ಪೇಟೆ, ಬೇರೆ ಬೇರೆ ಬೀದಿಗಳು ಇವೆಲ್ಲವುಗಳ ವರ್ಣನೆಗಳೂ ಅಂದಿನ ವಿಜಯನಗರದ ವಸ್ತುಸ್ಥಿತಿಯನ್ನೆ ಕಣ್ಣೆದುರಿಗೆ ತಂದು ನಿಲ್ಲಿಸುತ್ತವೆ. ಪರದೇಶದ ಪ್ರವಾಸಿಗಳು ಬಂದು ಬಂದು, ವಿಜಯನಗರವನ್ನು ಕಣ್ಣಾರೆಕಂಡು, ಬರೆದಿಟ್ಟಿದ್ದ ವಾಸ್ತವ ವರ್ಣನೆಗಳಿಗೂ ಮೋಹನ ತರಂಗಿಣಿಯಲ್ಲಿಯ ಕಾವ್ಯ ವರ್ಣನೆಗೂ—ಕೇವಲ ಸಾಂಪ್ರದಾಯಿಕ ಅಲಂಕಾರಗಳನ್ನು ಬಿಟ್ಟು ಬಿಟ್ಟರೆ-ವ್ಯತ್ಯಾಸವೇನೂ ಕಾಣುವದಿಲ್ಲ.

ಕನಕದಾಸರು ತಮ್ಮ ವರ್ಣನೆಯಲ್ಲಿ-ಓದುಗರನ್ನು ಒಡಗೊಂಡು—ವಿಜಯನಗರದ ರಾಜ್ಯದೊಳಗಿಂದ ಕ್ರಮ ಕ್ರಮವಾಗಿ ಹೊರಡುವರು. ಅವರು ಹೊರಟ ದಾರಿಯಲ್ಲಿ 'ನಗರ, ಪಟ್ಟಣ, ಖೇಡ, ಖರ್ವದ, ಪುರ, ಗ್ರಾಮ' ಗಳೆಂಬ ನಾನಾ ಹೆಸರುಗಳನ್ನಾಂತ ಊರುಗಳಿರುವುವು. ಹಾಳಾದಬೀಳುವಳ್ಳಿಗಳುಎಲ್ಲಿಯೂ ಇಲ್ಲವೆ ಇಲ್ಲ. ಆ ಪ್ರದೇಶದಲ್ಲಿ 'ಷಡ್‌ದರ್ಶನಾರ್ಯ' ರಿಗೆ ಅಗ್ರಹಾರವಾಗಿ ಕೊಟ್ಟ ತೊರೆಯ ದಂಡೆಯ ಊರುಗಳೂ, ವೀರರಿಗೆ 'ವೀರಮಾನ್ಯ' ವಾಗಿ ಕೊಟ್ಟ ಪುರಗಳೂ ಒಪ್ಪುತ್ತಿದ್ದವು. ಯಾವ ಗ್ರಾಮಾನುಗ್ರಾಮಗಳಲ್ಲಿಯೂ ಶಿವನ-ವಿಷ್ಣುವಿನ ದೇವಾಲಯಗಳೂ 'ಪಾಕ್ರಭೋಗ ತೀವಿದ ಮೃಷ್ಟಾನ್ನಸತ್ರ' ಗಳೂ ಇರುವುವು. ಜನರೆಲ್ಲರೂ 'ಸಮಯನಿಷ್ಠರು, ಉನ್ನತಕೀರ್ತಿವಿನರು. ವಿಕ್ರಮವಿದ್ಯಾಭಾಗ್ಯಾಧಿಪರು (ಶಕ್ತಿ-ವಿದ್ಯೆ-ಸಂಪತ್ತಿಗಳುಳ್ಳವರು), ಸುಮತಿಗಳು, ಅಭವ [ಶಿವ] ಅಚ್ಯುತ ಭಜಕರು.'

ದಾಸರು ಬಣ್ಣಿಸುತ್ತ ಹೊರಟ ದಾರಿಯಲ್ಲಿ ಕೆರೆ ಬಾವಿಗಳಲ್ಲದ ಅಗ್ಗಡಪೆಡೆಗಳೂ ಇದ್ದವು. ಅಲ್ಲಿಯೆಲ್ಲ ಧರ್ಮಿಷ್ಠರಾದವರು 'ತೊರೆಯ ನೀರುಗಳನ್ನು ಕಂಬಿ (ಕಾವಡಿ) ಗಳಲ್ಲಿ ತರಿಸಿ, ಮಾಡಿಸಿದ ಅರವಟ್ಟಿಗೆಗಳು ಇರುವವು ಕೆರೆಬಾವಿಗಳು ಇರದೆಡೆಯಲ್ಲಿ ನೆರಳು ಕೊಡುವ ಮರಗಳೂ ಇರಲಾರವಲ್ಲವೇ! ಅದಕ್ಕಾಗಿ 'ಪಟಬದ್ಧ ದೀರ್ಘದಂಡಾಂಕ ನರಾಶ್ರಯ ಮಠಗಳು' ಎಂದರೆ ಡೇರೆಗುಡಾರಗಳು ಇರುವುವು. ಅವೆಲ್ಲವೂ ಕಂಪೆಸೆವ ಘಟಭರಿತ ಗಂಧಶೈತ್ಯೋದಕದ ಅರವಟ್ಟಿಗೆಯ ಮನೆಗಳು' ಆಗಿರುವವು.

ದಾರಿದಾರಿಗಳ 'ಉಭಯತಟದ ಸಾಲುಮರದೊಳು ದಾರಿಕಾರರನ್ನು ಕರೆಕರೆದು, ಬೆಲ್ಲದ ಪಾನಕವನ್ನು ಎರೆದು, ಅಲ್ಲವನ್ನು ಬೆರಸಿ ರುಚಿಯಾಗಿ ಮಾಡಿದ ಕೆನೆ ಮೊಸರಶನವನು ಎಲ್ಲರಿಗೂ ಉಣಬಡಿಸುವರು.' ಶುಚಿವಂತರಾದ —ಸ್ವಹಸ್ತಪಾಕಿಗಳಾದ ಶ್ರೀವೈಷ್ಣರಿಗಾಗಿ, ದಾರಿದಾರಿಗ ಏಕಾಂತ ನಿಳಯಗಳು' ನಿರ್ಮಿತವಾಗಿರುವವು. ಅವುಗಳಲ್ಲಿ ಅವರು ಒಬ್ಬೊಬ್ಬರೆ 'ಸ್ವಯಂಪಾಕವನ್ನು ಮಾಡಿ ಭುಂಜಿಸುತ್ತಿರುವರು.'

ಆ ಪ್ರದೇಶದಲ್ಲಿಯ ಸಿಹಿನೀರಿನ ದೊಡ್ಡ ದೊಡ್ಡ ಕೆರೆಗಳು 'ಜಲವಿದ್ದೊಡೇನು? ಪಾನಕೆ ಯೋಗ್ಯವಲ್ಲ; ಫಲಭೋಗಕೆ ಒದಗುವದಲ್ಲ. ಮಲಿತ ಮೈ ನೀರು [ಮೂತ್ರ]' ಎಂದು ಸಮುದ್ರಗಳನ್ನು ಜರಿದು ನುಡಿಯುತ್ತಿರುವವು. ಮತ್ತೆ ಭಾಗೀರಥಿದೇವಿಯರು ಸಾಸಿರ ಮೊಗವಾಗಿ ಸಾಗರವನ್ನು ಸೇರಿದಂತೆ ರಾಗಿಪ ಪರಿಗಾಲುವೆಗಳು ಸಾಸಿರಮೊಗವಾಗಿ ಸದ್‌ವನವ ಸೇರಿರುವವು

ವಿಜಯನಗರದ ಸುತ್ತಣ ಪ್ರದೇಶದಲ್ಲಿ 'ಬೆಳ್ಗಬ್ಬು' ಗಳ ತೋಟ ಬಹಳವಲ್ಲವೆ! ಅಲ್ಲಿ ಕಬ್ಬಿನ ತೋಟಗಳಲ್ಲಿ ಮಿಂಚಿವೆಣ್ಣುಗಳನು ಅಗಲಿದ್ದ 'ಚದುರರಾದ ತೋಟಗಾರರು, ಇವು 'ನಮ್ಮ ದಂಡಿಪ ಸ್ಮರಚಾಪವೆಂದು' ಕುಡಗೋಲಗಳಿಂದ ಖಂಡಿಸಿ ಖಂಡಿಸಿ, ಭಂಡಿಗಳನ್ನು ತುಂಬಿ, ಕಬ್ಬಗಳನ್ನು ಅಲೆಮನೆಗಳತ್ತ ಸಾಗಿಸುತ್ತಿರುವರು. 'ಅಲೆಮನೆಗಳ ಮುಂದೆ, 'ಮುದ್ದು ನಾಲುಕು ಮೂಲೆಯಾದಂತೆ' ಇಗುವ ತನಿಬೆಲ್ಲದ ಉದ್ದಕ (ಚೌಕು ಇಟ್ಟಿಗೆ) ಗಳೂ 'ಹೆದ್ದೊರೆಯ ಮಳಲೊಟ್ಟೆನಂತೆ' ಪಂಚಧಾರೆ (ಸಕ್ಕರೆ) ಯೂ ಬಿದ್ದುಬಿಟ್ಟಿರುವುದು.

ಕನಕದಾಸರ ದಾರಿಯೋಗ ರಾಜಧಾನಿಯನ್ನು ಸಮೀಪಿಸಿ ನಡೆಯಿತು. ಅಲ್ಲಿಯ ದಾರಿಯುದ್ದಕ್ಕೂ 'ಪಲಸು, ನೇರಿಲು, ಚೂತ (ಮಾವು), ಪಿಚುಮಂದ (ಬೇವು), ನ್ಯಗ್ರೋಧ [ಆಲ], ಚಲಪತ್ರ (ಅರಳಿ) ಬಿಲ್ವ, ಆಮಲಕ (ನೆಲ್ಲಿ) ಮೊದಲಾದ ಸಾಲ ಮರಗಳು ಒಪ್ಪುತ್ತಿದ್ದುವು. ರಾಜಧಾನಿಯ ಹೊರವಳಯದಲ್ಲಿ ಅದೆಷ್ಟೊ 'ಹೊಕ್ಕರಣೆ (ಪುಷ್ಕರಣಿ)

ಗಳೂ 'ಹೊಂಗಳಸದ ದೇಗುಲ ಸಾಲು' ಗಳೂ 'ಬೇದಕ್ಕರಿಗರ ಜಪಶಾಲೆಗಳೂ" ಸೊಕ್ಕಾನೆ ಕುದುರೆಯ ವೈಹಾಳಿಯಂಕಣದ ಇಕ್ಕೆ [ಸ್ಥಳ]' ಗಳೂ ಕಂಗೊಳಿಸುತ್ತಿದ್ದುವು.

ಕೋಟೆಯನ್ನು ನೋಡಿದ ಕನಕದಾಸರು ಅದರ 'ಕೊತ್ತಳನಿಚಯ' 'ಕೋಟೆಯ ತೆನೆಗಳ' 'ಅಳ್ವೇರಿಗಳು' 'ಕೋಟೆಯ ಹುಲಿಮೊಗಗಳು' 'ಹೊನ್ನಗಸೆಯ ಕವಾಟಗಳು' ಇವುಗಳನೆಲ್ಲ ಬಣ್ಣಿಸಿ ಆ ಮೇಲೆ ಪಟ್ಟಣದ ಮುಖ್ಯ ಬೀದಿಗಳಾದ 'ಸೋಮಸೂರಿಯ ವೀಧಿ' ಗಳಿಗ ನಡೆಯುವರು. ಆ ಬೀದಿಗಳ ಇಕ್ಕೆಲಗಳಲ್ಲಿಯೂ 'ಸೌಧದ ಓಳಿ' ಯಿದೆ ರವಣೀಯವಾದ ಕಳಸಗಳುಳ್ಳ ಬೇರೆ ಬೇರೆ ಅಂಗಡಿಗಳಿವೆ 'ಪೇಟೆಯಭಾಗದ ಅಂಗಡಿ' ಗಳೆಲ್ಲವು ನಗರರಚನೆಯ 'ಆಗಮಜ್ಞರು' ಹಂಚಿಕೊಟ್ಟಂತೆ-ಜನರ ಅನುಕೂಲತೆಗೆ ತಕ್ಕಂತೆ—ಇವೆ.

ಮೊದಲಿಗೆ ತಂಬುಲಿಗರ 'ಬೆಳ್ಳೆಲೆಗಳ ಅಂಗಡಿಗಳು; ಆ ಮೇಲೆ ಗಂಧದ ತಿಗುರುಗಳನ್ನು ತೇಯುತ್ತಿರುವ ಗಟ್ಟಿವಳ್ತಿಯರ ಅಂಗಡಿಗಳು; ತರುವಾಯ 'ಸುರಗಿ' ಸೇವಂತಿಗೆ, ಕಂದ, ಮಂದಾರ, ಪಾದರಿ ಕಂಚಿ, ಕಣಿಗಲೆ, ದವನ, ಬಿರಿದ ಕೆಂಜಾಜಿ, [ಗುಲಾಬಿ], ಮೊದಲಾದ ಪುಷ್ಪದಂಗಡಿಗಳು.. ... ಪರುರವಿಸಿದ್ದುವು ಸುಗಂಧದ ಅಂಗಡಿಗಳು 'ಭೋಜಿಸ ಕಸ್ತುರಿ, ಜೀರ್ಣಜವಾಜಿ, ಪುಣುಗು, ಬಹುತೈಲ, ಇವೆಲ್ಲವುಗಳಿಂದ 'ಸೋಜಿಗವಡೆದು ರಾಜಿಸುತ್ತಿದ್ದುವು' ಇನ್ನೊಂದೆಡೆಯಲ್ಲಿ ಇಕ್ಕೆಲದಲ್ಲಿಯೂ ಹೆಸರುವಡೆದ ದಿವ್ಯಮೂಲಿಕೆ, ಪಾಷಾಣ [ಸೋಮಲ] ರಸದ್ರವ್ಯ (ಪಾರದಾದಿಗಳು) ಸಕಲ ಸಂಭಾರದ (ಮಸಾಲೆಗಳನ್ನು)' ಇಟ್ಟುಕೊಂಡು, ಯಾರಾದರೂ 'ಬೆಸಗೊಂಡು ಬೇಡಲು' ಕೂಡಲೆ ತೂಗಿ ತೂಗಿ ಕೊಡುವ ಗಂದಿಗರ ಪಸರಗಳು ಒಪ್ಪುತ್ತಿದ್ದುವು. ಅದಕ್ಕೆ ಹೊಂದಿಕೊಂಡಾಗಿಯೆ ಒಣಗಿದ್ದ ಹಣ್ಣುಗಳನ್ನು ಮಾರುವ ಪಸರಿಗರು 'ಉತ್ತತ್ತಿ' ಖರ್ಜೂರ, ದ್ರಾಕ್ಷಿ, ಸಕ್ಕರೆ--ಬೆಲ್ಲ ಮೆತ್ತೆಯಿಸಿದ ಕಾಯಿಭಾಗ[ಕೊಬ್ಬರಿ]' ಇವೆಲ್ಲವುಗಳನ್ನೂ ಇತ್ತೆರದಲ್ಲಿಯೂ ಇಟ್ಟುಕೊಂಡು ಮಾರುತ್ತಿರುವರು.

ಮತ್ತೊಂದು ಕಡೆಯಲ್ಲಿ 'ಗೋದಿ, ಕಡಲೆ, ನಾನಾ ಧಾನ್ಯಂಗಳರಾಸಿಯ' ಅಂಗಡಿಗಳು ಇವೆ. ಅವುಗಳ ಮುಂಗಡೆಯಲ್ಲಿಯೆ 'ಚಿತ್ರಗೆಲಿಸಿ, ಚಿಪ್ಪಿಗರ ಅಯುಧಂಗಳ ಕೇರಿಗಳು' ಒಪ್ಪುತ್ತಿವೆ. ಅವುಗಳಿಗೆ ಸಮೀಪದಲ್ಲಿಯೆ 'ಕಂಚುಗಾರರು, ಕೈದುಗಾರರು, ಹೊಳೆವ ಹೊಮ್ಮಿಂಚಗಾರರು, ಶಿಲ್ಪಿಗರು' ಸಂಚುಗಾರರು ಇವೆಲ್ಲ ಕೆಲಸಗಳನ್ನು ಮಾಡುವ 'ಸದ್ವಿದ್ಯಾಧಿಕರಾದ ಪಾಂಚಾಳರು, ಇಕ್ಕೆಲಗಳಲ್ಲಿಯೂ ಮನೆಮಾಡಿಕೊಂಡಿದ್ದಾರೆ ಹಾಗೆಯೆ ಮುಂದಕ್ಕೆ ಹೋದರೆ ಬಳೆಗಾರರ ಅಂಗಡಿಯ ಸಾಲುಗಳು ಅಲ್ಲಿಯ ಬಳೆಗಾರರು 'ಕಳೆವೆತ್ತ ವಾರನಾರಿಯರ ಕನ್ನಿಕೆಯರ ಮೊಳೆ ಮೊಲೆಗಳ ನೋಡಿ ನಗುತ, ಎಳವೆರಲ್ಗಳ ಚಿಟುಕೊತ್ತಿ (ಬೆರಳುಗಳನ್ನು ಲಟಕ್ಕೆನ್ನಿಸಿ)' ಬಳೆಗಳನ್ನು ತೊಡಿಸುತ್ತಲಿದ್ದಾರೆ. ಅದಕ್ಕೆ ಮುಂದೆ ಜವುಳಿಯಂಗಡಿಯ ಸಾಲು ಮಳಿಗೆಗಳು. ಅಲ್ಲಿ ಹಲವು ಬಗೆಯ 'ದೀಪ್ತಿಯ (ಮೆರುಗಿನ)ಒಟ್ಟಿ, ಝುಲ್ಲಿ, ನಾನಾವರ್ಣತಳೆದ ಚಿತ್ರಾಂಬರ (ಚೀಟಿ) ನಿಚಯ, ಸುಲಲಿತ ದೇವಾಂಗ ವಸ್ತ್ರದ ಒಟ್ಟಿಲು' ಇವೆಲ್ಲ ತುಂಬಿಕೊಂಡಿವೆ. ಬಳಿಕ ಮುಂಗಡೆಗೆ 'ರತ್ನಭೂಷಣಕೈವ ಸೊನ್ನಾರರ' ಅಂಗಡಿಗಳೂ 'ಸಾಣೆಯಮೇಲೆ ರನ್ನಗಳಿಟ್ಟು ಮಸೆದು ಒಪ್ಪಗಾಣಿಸಿಕೊಡುವ ಪೇಟಗರ' ಅಂಗಡಿಗಳೂ 'ಆಣಿಮುತ್ತಿಗೆ ನೆಗ್ಗಳ ಬೆಲೆಕಟ್ಟುವ ವಾಣಿಜರ' ಅಂಗಡಿಗಳೂ ಇಕ್ಕೆಲದಲ್ಲಿ ರಂಜಿಸುತ್ತಲಿವೆ.

ಮುನ್ನೊಂದೆಡೆಯಲ್ಲಿ 'ಚಪ್ಪನ್ನದೇಶದ ನಾಣೆಯಂಗಳ ನೋಟಿತಪ್ಪದ ಚತುರ ಸೆಟ್ಟಿಗಳು, ಹಣ-ಹೊನ್ನ ಕುಪ್ಪೆಯ ಮುಂದಿಟ್ಟುಕೊಂಡು ಒಪ್ಪವಡೆದು ಕುಳಿತಿದ್ದರು.' ಕಟ್ಟೆಗಳಮೇಲೆ ಚಿನ್ನವರದರು ಕುಳಿತುಕೊಂಡು ಒರೆಗಲ್ಲಿಗೆ ಹತ್ತಿಕೊಂಡಿದ್ದ ಚಿನ್ನದ ರಜವನ್ನು ಮೇಣದಲ್ಲಿ ಒತ್ತಿತೆಗೆದು, ಕರಗಿಸಿ, ಆ ಚಿನ್ನಕ್ಕೆ ಬಂದ ಬೆಲೆಯನ್ನು ನೆರೆದುಬಂದ ಯಾಚಕರಿಗೆ ಹಂಚಿಕೊಡುತ್ತಿರುವರು ಅದಕ್ಕೆ ಮುಂದೆ ಮರಕಾಲರು (ಸಮುದ್ರವರ್ತಕರು) ಹಡಗಿನ ವ್ಯವಹಾರದಿಂದ ಗಳಿಸಿದ ಹಣವನ್ನು ಎಣಿಸಲಾರದವರಾಗಿ 'ಭಾರಸಂಖ್ಯೆಯಲಿ ತೂಗುವರು.' ಅವರು ಬೇಡಿದರೆ ಕುಬೇರನಿಗೆ ಕೈಗಡವ ಕೊಡುವ' ಧನಪತಿಗಳು. ಈ ಇದ್ದಲ್ಲಿಯೇ ಇರುವ ಪೇಡೆಯ ಅಂಗಡಿಗಳಲ್ಲದೆ ತಿರುಗಾಡಿ ಮಾರುವವರ ಅಂಗಡಿಗಳೂ ಇರುವವು. ಆ 'ಎಡೆಯಾಟದ ವ್ಯವಹಾರಜನರು ಕೋಟೆ, ಕಾಡು, ಅರಂಬ, ಕರ್ಬುಗದ್ದೆಗಳಿಗೆ, ಕುದುರೆ ಆನೆ ಬಂಡಿಗಳ ಮೇಲಿಂದಲೂ ತಲೆಯಮೇಲೆ ಹೊತ್ತುಕೊಂಡೂ ಸರಕುಗಳನ್ನೊಯ್ದು ಮಾರಾಟಮಾಡುವರು.

ಅಂಗಡಿಬೀದಿಯನ್ನು ದಾಟಿ ಬಂದರೆ ಮುಂದೆ 'ತಾಳ, ಮದ್ದಳೆ, ಪಾವುಜ, ಶ್ರುತಿ, ಮುಖವೀಣೆ, ಸಾರಂಗ' ಮೊದಲಾದ ವಾದ್ಯಗಳೊಂದಿಗೆ ಹಾಡುವ 'ಶುದ್ಧಗಾನೆಯರ ಮೇಳ' ದ ಮನೆಗಳೂ, ನಟ್ಟುವ ನಾನಾವಿದ್ಯೆಯ (ನಾಟ್ಯಾಭಿನಯಶಾಸ್ತ್ರದ) ಗಟ್ಟಿವಾಳ (ಸಿಷ್ಟಾಚಾರ) ರ' ಮನೆಗಳೂ ಶೋಭಿಸುವುವು. ಅದಕ್ಕೆ ಹೊಂದಿಯೇ ಸೂಳೆಯರ ಕೇರಿಯಿರುವುದು. ಆ ಮೇಲೆ 'ತೋರಿಯ ಭುಜವೆತ್ತು ಜಗಜಟ್ಟಿ ಮಸೆದ ಕಠಾರಿ ಖಂಡೆಯದ ಮಾಸಾಳುಗಳು' ಎಂಬಂತಹ, ಕ್ಷತ್ರಿಯ ವೃತ್ತಿಯನ್ನು ಅವಲಂಬಿಸಿಕೊಂಡಿದ್ದ ಜನರ ಬೀದಿಗಳಿರುವುವು.

ಬ್ರಾಹ್ಮಣರ ಬೀದಿಯನ್ನಂತೂ ಕನಕದಾಸರು ಕಣ್ಣಲ್ಲಿ ಕಣ್ಣಿಟ್ಟು ನೋಡಿ, ಹೊಗಳಿ ಹಾಡಿದ್ದಾರೆ. ಬೀದಿಯುದ್ದಕ್ಕೂ 'ಹೊಂದಗಡಿನ ಹೊದಿಕೆಯ ಮನೆಗಳು; ಆ ಮನೆಗಳಿಗೆಲ್ಲ 'ನೇರಂದವಡೆದ ಪಟ್ಟಿಶಾಲೆಗಳು'; ಪಟ್ಟಿಶಾಲೆಗೆ ಮುಂದೆಸೆಯಲ್ಲಿ ತುಳಸಿಯ ಮಂಟಪಗಳು ಮಂಟಪಮಂಟಪಗಳಲ್ಲಿಯೂ ಗೋವಿಂದನನ್ನು ಕೀರ್ತಿಸುತ್ತ ಜನರು ಕುಳಿತಿರುವರು. ಮನೆಮನೆಗಳಲ್ಲಿಯೂ 'ಸಾತ್ವಿಕಪೌರಾಣ ಶಾಸ್ತ್ರಾರ್ಥಗೋಷ್ಠಿ' ಗಳೂ 'ಗಾಣದಂಡಿಗೆ' (ತಂಬೂರಿ) ಯೊಂದಿಗೆ ಭಾಗವತಸಂಕೀರ್ತನೆಯೂ ನಡೆದಿರುವುದು. ರಾಮಾನುಜರ ತತ್ವದಂತೆ ವರ್ತಿಸುವ ಭೂಮೀಸುರರು ಸಂದಣಿಸಿ, ಸಾಮವೇದದ ಘೋಷಣೆಯನ್ನೂ ವಿಷ್ಣುಪ್ರೀತ್ಯರ್ಥವಾದ ಹೋಮಗಳನ್ನೂ ಅಲ್ಲಲ್ಲಿ ಮಾಡುತ್ತಿರುವರು. (ನಿಜವಾದ ದ್ವಾರಕೆಯಲ್ಲಿ ರಾಮಾನುಜ ಪಂಥದವರು ಎಲ್ಲಿ ಬರಬೇಕು!)

ಪಂಡಿತರಾದ ಪಾರ್ವರನೇಕರು, 'ಹೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ, ಕೂಳು, ವಿಳೆಯಗಳನ್ನು ಕೂಡ ತಾವಾಗಿಯೆಕೊಟ್ಟು, ಅವರನ್ನು ದೊಡ್ಡವರನ್ನಾಗಿಮಾಡಬೇಕೆಂದು ಪಾಠಗಳನ್ನು ಹೇಳುತ್ತಿರುವರು. ಅಲ್ಲಿ ಯಾವಾಗಲೂ ರವಿಸಿದ್ಧಾಂತಪಾಠಕರು (ಜ್ಯೋತಿಷಿಗಳು), ಅಷ್ಟಭಾಷಾಕವಿಗಮಕಿಗಳು, ತಾರ್ಕಿಕರು ಇವರೆಲ್ಲರ ವಿದ್ವತ್ ಸಭೆಗಳು, ನೆರೆಯುತ್ತಿರುವವು.

ಪ್ರಾಥಮಿಕ ಪಾಠಶಾಲೆಗಳಲ್ಲಿ 'ಸಣ್ಣವರುಗಳನು ಓದಿಸುತಿರ್ಪ ಕಸೆಯಗೋಲ (ಛಡಿ) ಅಣ್ಣಗಳು' ಹುಡುಗರಿಂದ ಚೌಪದಿಗವಿತೆಗಳನ್ನು ಹೇಳಿಸುತ್ತಿರುವರು. ಬೇರೆ ಬೇರೆ ಪುಸ್ತಕಗಳನ್ನು ಬರೆದು ಬರೆದು ಕೊಟ್ಟು, ಉಪಜೀವನವನ್ನು ಸಾಗಿಸಿರುವ 'ಪುಸ್ತಕ ಲಿಖಿತಜ್ಞರು ಕನ್ನಡಕಗಳ ವಾಳ್ದು ಇಹರು' (ಶ್ರೀಕೃಷ್ಣನ ದ್ವಾರಕೆಯಲ್ಲಿ ಆಗಲೂ ಕನ್ನಡಕಗಳಿದ್ದುವೇ!)

ಕನಕದಾಸರು ಬ್ರಾಹ್ಮಣರ ಬೀದಿಯ ಒಂದು ವಿಧ್ಯಾಹ್ನದ ವರ್ಣನೆಯನ್ನು ಬಲು ಸೊಗಸಾಗಿ ಮಾಡಿದ್ದಾರೆ:—"ಅಲ್ಲಲ್ಲಿಯೆ ಇರುವ ಚಂದ್ರಕಾಂತ ಸೋಪಾನದ ಪುಷ್ಕರಣಿಗಳಿಗೆ ನಾನಾದೇಶದ ನಾನಾ ಭಾಷೆಯ ಬ್ರಾಹ್ಮಣರು ಅನುಷ್ಠಾನಕ್ಕೆಂದು ಬಂದರು. ಅವರೆಲ್ಲರೂ 'ಹಚ್ಚಡ (ಉತ್ತರೀಯ)' 'ಚಂದಿಕುಪ್ಪಸ (ಅಂಗಿ)' ಗಳನ್ನು ಬಿಚ್ಚಿ ಬರಿಮೈಯಿಂದಲೆ ಬಂದು ಸ್ವಚ್ಛವಾದ 'ಬೈರ್ನಾಸ' 'ಕೃಷ್ಣ! ಗೋವಿಂದ! ಶ್ರೀವತ್ಸಲಾಂಛನ! ಶರಣು' ಎಂತ ಬೆಚ್ಚದೆ, ಮುಳುಗಿ ಮುಳುಗಿ ಕೊಳಗಳಲ್ಲಿ ಮಿಂದರು. ಬಳಿಕ ಹೊರವಟ್ಟು 'ಪಟ್ಟಾವಳಿಧೋತ್ರ, ಬಹಿರ್ವಾಸ, ತಳೆದು, ತಳಿರುಗಾವಿಯನ್ನುಟ್ಟು' ಜಪದ ಮಂಟಪಗಳಲ್ಲಿ ಸಂದಣಿಸಿ ಕುಳಿತರು. ಅವರಲ್ಲಿಯ ಕೆಲವರಿಗೆ ಪಟ್ಟೆನಾಮ ತಿರುಚೂರ್ಣಗಳೂ ಇನ್ನು ಕೆಲವರಿಗೆ ಗೋಪಿಚಂದನದ ಪಂಚಮುದ್ರೆಗಳೂ ಮತ್ತೆ ಕೆಲವರಿಗೆ ಭಸಿತಗಂಧಾಕ್ಷತೆಗಳೂ 'ಭಾಳಲಂಛನ' ಗಳಾಗಿದ್ದುವು. (ದ್ವಾಪಾರದಲ್ಲಿಯ ದ್ವಾರಕೆಯಲ್ಲಿ ಇವೆಲ್ಲ ಇದ್ದಿರಬಹುದೇ?)."

"ಎಲ್ಲರೂ ಜಪತಪಾನುಷ್ಠಾನಗಳನ್ನು ತೀರಿಸಿಕೊಂಡು, ಮಡಿಯಿಂದಲೆ ಗೀತಾರ್ಥಗಳನ್ನು ಪರಿಸುತ್ತ ಅನ್ನಸತ್ರಶಾಲೆಗಳ ಕಡೆಗೆ ಬಂದರು. ಅಲ್ಲಿ ತಮ್ಮ ತಮ್ಮ 'ಹೇಮಸಂಪುಟದಲ್ಲಿಯ ವಿಷ್ಣುವಿಗ್ರಹ, ಸಾಲಗ್ರಾಮದೇವರ ಪೂಜೆಗೈದು, ನಿತ್ಯನಿಯಮಗಳನ್ನು ತೀರಿಸಿದರು. ಬಳಿಕ "ಅದ್ದಿಕದವರ (ಸತ್ರದ ವ್ಯವಸ್ಥಾಪಕರ") ಆಜ್ಞೆಯಂತೆ ಎದ್ದು, ಊಟದ ಮನೆಗಳಿಗೆ ಹೊರಟರು ಎಲ್ಲರೂ 'ನಾನು ಮುಂದೆ ತಾನು ಮುಂದೆ' ಎಂದು ನುಗ್ಗುತ್ತಿರುವಾಗ, ಊಟದ ಮನೆಯ ಬಾಗಿಲು ಹಿಡಿದಂತಾಗಿ ಅನೇಕರು ತಮ್ಮತಮ್ಮೊಳಗೆ ಗುದ್ದಾಡಿದರು. ಬಳಿಕ ಎಲ್ಲರೂ ಒಳಕ್ಕೆ ಹೋಗಿ ಗದ್ದುಗೆಗಳನ್ನು ಹಿಡಿದುಕೊಂಡು ಇಕ್ಕೆಲದಲ್ಲಿಯೂ ಸಾಲುಸಾಲಾಗಿ ಕುಳಿತರು."

"ಆಗ ಎಲ್ಲರಿಗೂ ಹೊಂದಟ್ಟೆಯೊಳಗೆ ಕುಂಕುಮ ರಸಪೂರಿತ ಗಂಧಾಕ್ಷತೆಯನ್ನು ಕೊಟ್ಟು 'ಅಂದವಡೆದ ಕದಳಿಯ ಪರ್ಣ [ಬಾಳೆಯೆಲೆ] ದೊನ್ನೆಗಳನ್ನು ತಂದು ತಂದು ಇರಿಸಿದರು, (ಸತ್ರಗಳಲ್ಲಿ ಅಡಿಗೆಯ

ವರು ಬಡಿಸುವರು ತಿಗುಳರು; ಎಂದರೆ ತಮಿಳು ನಾಡಿನ ಬ್ರಾಹ್ಮಣರು, ದ್ವಾರಾವತಿಯಲ್ಲಿ ತಿಗುಳರು ಎಲ್ಲಿಯವರು ಬರಬೇಕು? ಕೂಡಲೆ ತಿಗುಳರು ಬಂದು, ಮೊದಲು ಪಾತ್ರಾಭಿಗಾರವನ್ನು ಮಾಡಿ, ಬಳಿಕ ಪರಮಾನ್ನ ಸಣ್ಣಕ್ಕಿಯ ಓಗರ ತೊವ್ವೆ ಪಳಿದ್ಯಗಳನ್ನೆಲ್ಲ ತರತರದಿಂದ ಬಡಿಸಿದರು.''

"ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸು—
"ಖಿನುಂಡೆ ವಡೆ ಗಾರಿಗೆಯು ॥
ನಾನಾಭಕ್ಷ್ಯಭೋಜ್ಯಂಗಳ ಪರಮ ಸು—
"ವ್ಯಾನದೆ ಬಡಿಸಿದರೊಲೆದು ॥
"ಹುಳಿದಾಳಿದ ಸಾರು ಶಿಖರಿಣಿ ಬಹುಕೂಟ—
"ದಳಿನ ನಿಂಬೆಯ ಹಣ್ಣು ಸವಿಸು ॥
"ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು
"ಸುಳಿದು ಹೋಯಿತು ಬಹಿಃಸ್ಥಳಕೆ॥
"ಘನವ ಘೃತವ ತಂದೆರೆದರು + ಸತ್ರ ಭಾ—
"ಜನ ತುಂಬಿ ಕಡೆಕೋಡಿವರಿಯೆ ॥
"ಅನಲಾಕೃತಿಯಬ್ರಾಹ್ಮರುಮುದದಿಂದಾಪೋ—
"ಶನವಕೊಂಡರು ಮಹೋತ್ಸವದೆ ||
"ಸಿತರಾಜಾನ್ನ ಸದ್ಘೃತ ತೊವ್ವೆಗೂಡಿ ನಿ-
"ರ್ಮಿತವಾದ ತೋಯದುಪ್ಪುಗಳ ॥
"ಜತನದಪ್ಪದೆ ಕೈಕೊಂಡರು ಕೃಷ್ಣಾ—
"ರ್ಪಿತವೆಂದು ಪರಿತೋಷವಡೆದು ॥
"ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸ—
"ರೊಳ್ಳೆಯ ಬಹಳುಪ್ಪುಗಾಯಿ ॥
'ಫಲ್ಲಿಸಿ ಗಟ್ಟಿಯ ಕಟ್ಟಿದರ್ ಪಿರಿಯರು—
"ಪುಲ್ಲಿಗೆಗಳು ತರತರಿಸೆ ॥

\+ ಸತ್ರಭಾಜನ = ದೊನ್ನೆ,

" ಬ್ರಾಹ್ಮಣರೆಲ್ಲರೂ ರಸರಸಾಯನಂಗಳನು ಚಪ್ಪರಿದು,' ನೀರ್ಮಜ್ಜಿಗೆಯನ್ನು ಕುಡಿದು, ಹೊಸವಾದ ವಿಘ್ನರಾಜನ (ಲಂಬೋದರನ) ಬಳಗವಿದೇನೋ! ಎಂಬಂತೆ ಏಳಲಾರದವರಾಗಿಯೆ ಮೇಲೆ ಕೈದ್ದರು, ಎದ್ದುಹೋಗಿ ಎಲ್ಲರೂ ಸತ್ರ ಬತ್ತಿನ (ಬಳಿಯ) ಮುಂಗಾಲುವೆಯಲ್ಲಿ ಕೈಗಳನ್ನು ತೊಳೆದುಕೊಂಡು, ಕರ್ಪೂರಮಿಶ್ರ ತಾಂಬೂಲವನ್ನು ಉತ್ಸವದಿಂದ ತೆಗೆದುಕೊಂಡು ಆ ಮೇಲೆ ' ತಮ್ಮನೆ ತುಪ್ಪ-ಕಜ್ಜಾಯ-ಪಾಯಸದಿಂದ ದಮ್ಮನೆ ದಣಿದೆ-ವೆಂದು ತಮ್ಮತಮ್ಮೊಳಗೆ ಮಾತನಾಡಿಕೊಳ್ಳುತ್ತ ಶಯನಸ್ಥಳಗಳ ಕಡೆಗೆ ವಾಮಕುಕ್ಷಿಗಾಗಿ ನಡೆದರು"

ಮುಂದೆ ದಾಸರು ಅರಮನೆಯನ್ನು ಬಣ್ಣಿಸಿರುವರು- " ಸಮುದ್ರಮಧ್ಯದಲ್ಲಿ ಹುಟ್ಟಿದ್ದ ಹೊಂದಾವರೆಯಂತೆ ಇರುವ ಊರದ ಮಧ್ಯದಲ್ಲಿ, ' ಕೃಷ್ಣರಾಯನ ಅರಮನೆಯು '—ಜನರಿಂದ ಗಜಬಜಿಸುತ್ತ ಆ ಹೊಂದಾವರೆಯ ಕರ್ಣಿಕೆಯಂತೆ ಕಂಗೊಳಿಸುತ್ತಿರುವುದು. ಅದು ' ಹರಬ್ರಹ್ಮಾದಿ ದೇವತೆಗಳ ರಾಜಮಂದಿರಗಳನ್ನು ಕೀಳ್ ಪಡಿಸಿ ಶೋಭಿಸುವ ಪರಮ ಐಶ್ವರ್ಯಗಳಿಂದ ' ಮೆರೆಯುತ್ತಿರುವುದು. ಅರಮನೆಯ ಮುತ್ತಿನ ಚಾವಡಿಯು ' ಮಕರ ತೋರಣ, ಮಣಿನಿಕರ, ಹೊಂಗುಬ್ಬಿಯ ನಿಕರ, ಸೀಗುರಿ ಮೊದಲಾದುವುಗಳಿಂದ ನೋಟಕರ ಕಣ್ಗೆ ಕೌತುಕವ ಬೀರುತ್ತಿರುವುದು. ' ಅಂತಃಪುರಕ್ಕೆ ಶಿಖಾಮಣಿಯಂತೆ ಒಪ್ಪುವ ಜಂತದ [ ಹಸ್ತಿದಂತದ ] ಚಾವಡಿಯೊಳಗೆ, ಸಂತತವೂ ಸಿಂಹವಿಷ್ಟರದಲ್ಲಿ ಲಕ್ಷ್ಮೀಕಾಂತನು ಕುಳಿತಿರುವನು."

ಇದು ಕನಕದಾಸರು ಕಂಡ ವಿಜಯನಗರದ ಬಣ್ಣನೆಯು ಮಾತ್ರ. ಮೋಹನ ತರಂಗಿಣಿ ಕಾವ್ಯವನ್ನು ಓದಿ ನೋಡುವವರಿಗೆ ವಿಜಯನಗರದ ಕೃಷ್ಣರಾಯರ ಕಾಲದ ನಾಗರಿಕತೆ, ಅರಮನೆಯಬಾಹತ್ತರನಿಯೋಗ ವ್ಯವಸ್ಥೆ, ಅಂತಃಪುರದ ರೀತಿ ನೀತಿ, ಜಾನಪದ ಜನರ ಬದುಕು ಬಾಳುಗಳು, ಯುದ್ಧದ ವರ್ಣನೆ ಇವೆಲ್ಲವೂ ಕಣ್ಣಿಗೆ ಬೀಳದಿರವು. ವಿಜಯನಗರದಲ್ಲಿ ಕಾಮನ ಹಬ್ಬವು ವಿಜೃಂಭಣೆಯಿಂದ ಜರುಗುತ್ತಿದ್ದ ವಿಷಯವು ಅನೇಕರಿಗೆ ಗೊತ್ತು. ಆ ಹಬ್ಬದಲ್ಲಿ ಓದಲಿಕ್ಕೆಂದೆ ಕೃಷ್ಣದೇವರಾಯನು ಕನಕದಾಸರಿಂದ ಶೃಂಗಾರ ರಸಪ್ರಧಾನವಾದ—ರತಿ ಮನ್ಮಥಲೀಲಾ ಚರಿತ್ರವನ್ನು ಒಳಗೊಂಡಿರುವ ಈ ವರ್ಣಕ ಕಾವ್ಯವನ್ನು ಬರೆಯಿಸಿರಲಿಕ್ಕೆ ಸಾಕು. ಭಕ್ತಿಮಾರ್ಗಿಗಳಾದ ಕನಕದಾಸರು ಈ ಕಾವ್ಯಕ್ಕೆ-ಮನ್ಮಥ-ಅನಿರುದ್ಧರು ಮುಖ್ಯರಾಗಿದ್ದರೂ ಅವರನ್ನು ಬಿಟ್ಟು— ಶ್ರೀಕೃಷ್ಣನನ್ನು ತಮ್ಮ ಕಥಾನಾಯಕನನ್ನಾಗಿ ಮಾಡಿಕೊಂಡಿದ್ದಾರೆ. ಪಂಪನ ವಿಕ್ರಮಾರ್ಜುನ, ರನ್ನನ ಸಾಹಸಭೀಮ, ಪೊನ್ನನಭುವನೈಕರಾಮ ಇವರಂತೆಯೆ ಕನಕದಾಸರ ' ದೇಶಾಧಿಪ ಕೃಷ್ಣರಾಯನು ಕಥಾನಾಯಕನಾಗಿರುತ್ತಾನೆ.

## ವಿಜಯ ವಿಟ್ಠಲನ ಗುಡಿಯ ನೋಟಗಳು.



ದೃಶ್ಯ ೧.



ದೃಶ್ಯ ೨.

# ಕರ್ಣಾಟಕವೂ ಶ್ರೀವಿಟ್ಠಲ ಪರಂಪರೆಯೂ.

**[ ಪಂಢರಿ ವಿಠಲನು ವಿಜಯನಗರಿಗೆ ಬಂದುದು. ]**

**ಲೇಖಕರು:—ಶ್ರೀ. ಶಂ. ಬಾ. ಜೋಶಿ. ಧಾರವಾಡ.**

ಶ್ರೀ ಪುರಂದರದಾಸರೇ ಮೊದಲಾದ ಯಾವ ದಾಸರಾಯರ ಕೀರ್ತನೆಯನ್ನೂ ನೋಡಬಹುದು; ವಿಠಲನ ಮುದ್ರಿಕೆಯಿಲ್ಲದೆ ಮುಕ್ತಾಯವಾದ ಹಾಡುಗಳಿರುವುದು ಬಹಳ ಕಡಿಮೆ. 'ಪುರಂದರ ವಿಠಲ' 'ಜಗನ್ನಾಥ ವಿಠಲ' 'ರಂಗ ವಿಠಲ' 'ವಿಜಯ ವಿಠಲ' ಎಂದು ಮುಂತಾಗಿ ನೂರಾರು ಬಗೆಬಗೆಯ 'ವಿಠಲ' ನಾಮಗಳು ಕೀರ್ತನೆಗಳಲ್ಲಿ ದೊರಕುತ್ತವೆ. ಸಾಮಾನ್ಯವಾಗಿ ದಾಸಕೂಟದ ಅಧಿದೈವತವೆಂದರೆ ಶ್ರೀ ವಿಠ್ಠಲನೇ ಆದುದರಿಂದ ಪಂಢರಪುರವು ಒಂದು ಕಾಲಕ್ಕೆ ಕರ್ಣಾಟದ ಹರಿದಾಸರ ಆಗರವಾಗಿದ್ದಲ್ಲಿ ಸೋಜಿಗವಿಲ್ಲ.

ಮಹಾರಾಷ್ಟ್ರದ 'ವಿಠ್ಠಲ ವಾರಕರಿ ಪಂಥವು' ಆರಂಭವಾದದು ಜ್ಞಾನದೇವನಿಂದ. (೧೨೭೬ ಕ್ರಿ. ಶ.) ಇವನು ಮಾಡುವ ಶ್ರೀ ವಿಠ್ಠಲನ ವರ್ಣನೆಯನ್ನು ನೋಡಿದರೂ ಮೇಲಣ ವಿಧಾನಕ್ಕೇ ಪುಷ್ಟಿ ದೊರೆಯುತ್ತದೆ. ಜ್ಞಾನದೇವನೊಬ್ಬನೆ ಅಲ್ಲ, ಇವನಂತೆ ಇನ್ನೂ ಅನೇಕ ಮಹಾರಾಷ್ಟ್ರದ ಸಾಧು ಸಂತರೂ ತಮ್ಮ "**ಅಭಂಗವಾಣಿ**"ಯಿಂದ ವಿಠ್ಠಲನು ಕನ್ನಡ ದೇವನೆಂಬುದನ್ನೇ ಒತ್ತಿ ಒತ್ತಿ ಹೇಳಿದ್ದಾರೆ "ಕಾನಡಾಹೋ ವಿಠ್ಠಲು ಕರ್ಣಾಟಕು" (ವಿಠ್ಠಲನು ಕನ್ನಡಿಗನು); "ವಿಠ್ಠಲ ಕಾನಡೇ ಬೋಲೂ ಜಾಣೇ" (ವಿಠ್ಠಲನು ಕನ್ನಡನ್ನಾಡಬಲ್ಲ); "ಕಾನಡಿಯಾ ವಿಠಲಾ ಕಾನಡಿಯಾ ಬಹು ಆವಡೇ ಜಿವಾಪಾಸೋನಿಯಾ'; [ಕನ್ನಡ ವಿಠಲನಿಗೆ ಕನ್ನಡವೆಂದರೆ ಬಲು ಜೀವ]; ಕಾನಡಾ ಹೋ ವಿಠಲು ವಿಠ್ಠಲು ಕರ್ಣಾಟಕೂ! ಯೇಣೇ ಮಜ ಲಾವಿಲಾ ವೇಧೂ" (ಈ ಕನ್ನಡ ವಿಠ್ಠಲನು ನನ್ನ ಹೃದಯವನ್ನು ಸೆಳೆದಿದ್ದಾನೆ.) ಎಂಬಿವೇ ಮೊದಲಾದ ಉದ್ಗಾರಗಳೆ ಇದಕ್ಕೆ ಸಾಕ್ಷಿ.

ಪಂಢರಿ ವಿಠಲನು ಕರ್ಣಾಟಕ ಅಧಿದೇವತೆಯೆಂಬುದರ ನೆನಪು ಮಹಾರಾಷ್ಟ್ರದಲ್ಲಿ ಏಕನಾಥ ಮಹಾರಾಜನ ವರೆಗೂ ಇದ್ದ ಹಾಗೆ ತೋರುತ್ತದೆ. "ತೀರ್ಥ ಕಾನಡೇ, ದೇವ ಕಾನಡಾ ಕ್ಷೇತ್ರ ಕಾನಡೇ ಪಂಢರಿಯೇ, ವಿಠ್ಠಳ ಕಾನಡಾ, ಭಕ್ತ ಕಾನಡೇ" ಎಂಬುದಿದು ಏಕನಾಥನು ಮಾಡಿದ ಉದ್ಘೋಷ. ಆದರೆ ಈ ನೆನಹು ತುಕಾರಾಮಾದಿ ಸಂತರ ಪೀಳಿಗೆಗೆ ನಷ್ಟವಾಗುತ್ತ ಬಂದಿತು. ಶ್ರೀ ಜ್ಞಾನದೇವನು ಹೇಳುವಂತೆ ಒಂದು ಕಾಲಕ್ಕೆ ವಿಠ್ಠಲಪಂಥವು ಕರ್ಣಾಟಕದ ವೈಶಿಷ್ಟ್ಯವಾಗಿದ್ದರೂ ತುಕಾರಾಮಾದಿಗಳಿಂದ ಮುಂದೆ ಇದಕ್ಕೆ "ಮಹಾರಾಷ್ಟ್ರ ಧರ್ಮ" ವೆಂಬ ಹೆಸರು ಪ್ರಾಪ್ತವಾಗಲಾರಂಭಿಸಿತು.

ಪಂಢರಿ ವಿಠಲನ ಬಗ್ಗೆ ಸಂಶೋಧಕರು ಈ ವರೆಗೆ ಕಂಡು ಹಿಡಿದಿರುವ ಸಂಗತಿಗಳೂ ಬಹಳ ಮಹತ್ವದವುಗಳಿವೆ.

(೧) ಕೆಲರ ಅಭಿಪ್ರಾಯದಂತೆ ಪಂಢರಿ ವಿಠ್ಠಲನು ಜೈನದೇವತೆಯು. ಶ್ರೀ ಗೋಡಬೋಲೆ ಎಂಬವರು "ಭರತಖಂಡಾಚಾ ಅರ್ವಾಚೀನ ಕೋಶ" ಎಂಬ ಗ್ರಂಥದಲ್ಲಿ "**ನೇಮಿನಾಥ**ಸ್ಯಯಾ ಮೂರ್ತಿ: ತ್ರಿಷು ಲೋಕೇಷು ವಿಸ್ತುತಾ" ಎಂದು ಆರಂಭವಾಗುವ ಶ್ಲೋಕವನ್ನು ಕೊಟ್ಟಿರುವರು. ಇದು ಜೈನ ಮಂದಿರವೇ ಇರಬೇಕೆಂದು ಸೊಲ್ಲಾಪುರದ ಗ್ಯಾಝಿಟಿಯರಿನಲ್ಲಿ ವರ್ಣನೆಯಿದೆ. ಅಲ್ಲದೆ ಇನ್ನೂ ಕೆಲವು ವಿದ್ವಾಂಸರೂ ಈ ಮತವನ್ನೆ ಪುಷ್ಟೀಕರಿಸಿ "ಚಿತ್ರಮಯ ಜಗತ್" ಮೊದಲಾದ ಪತ್ರಿಕೆಗಳಲ್ಲಿ ಚರ್ಚೆ ಮಾಡಿದ್ದು ಉಂಟು

(೨) ಈ ಊರ ಮೊದಲಿನ ಹೆಸರು ಪಾಂಡುರಂಗಪುರ. ಉಡಪಿಯಂತೆ ಇದು ಆರಂಭದಲ್ಲಿ ಶೈವ ಕ್ಷೇತ್ರನೆ ಆಗಿರಬೇಕು ಆದರೆ ಭಾಗವತ ಧರ್ಮವು ಊರ್ಜಿತ ಸ್ಥಿತಿಯಲ್ಲಿದ್ದಾಗ 'ಹರಿಹರ ವಿಭೇದವನ್ನು ಕಿತ್ತುಹಾಕುವ ಆ ಕಾಲದಲ್ಲಿ ಪಾಂಡುರಂಗ (ಶಿವ)ನೂ ವಿಷ್ಣುವೂ ಸಾಮರಸ್ಯವನ್ನು ಹೊಂದಿ ವಿಠ್ಠಲ ಸ್ವರೂಪವನ್ನು ತಾಳಿರಬೇಕು. ಇದನ್ನು ಕುರಿತು ಶ್ರೀಮಾನ್ ನಾ. ಶ್ರೀ. ರಾಜಪುರೋಹಿತರ ಸೊಗಸಾದ ಒಂದು ಲೇಖನವು ಕರ್ಣಾಟಸಾಹಿತ್ಯ ಪರಿಷತ್ಪತ್ರಿಕೆಯ ೯ನೆಯ ಸಂಪುಟದಲ್ಲಿ ಬಂದಿದೆ. ವಿಠ್ಠಲನು ತಲೆಯ ಮೇಲೆ ಶಿವಲಿಂಗವನ್ನು ಧರಿಸಿರುವನೆಂದು ಶ್ರೀ ಜ್ಞಾನೇಶ್ವರ ರಾಮದಾಸಾದಿ ಮಹಾರಾಷ್ಟ್ರ ಸಾಧುಸಂತರು ವರ್ಣಿಸಿದುದು ಈ ಮಾತಿಗೇ ಪೋಷ

ಕವಾಗಿದೆ. ( Mysticism in Maharashtra P. 41 ).

( ೩ ) ಪುಂಡಲೀಕನಿಂದ ಈ ಕ್ಷೇತ್ರದ ಆರಂಭ ವಾಯಿತೆಂದು ಹೇಳುವ ಪೌರಾಣಿಕ ಕಥೆಯು ಶಬ್ದಶಃ ಸರಿಯಲ್ಲದಿದ್ದರೂ ಅದರಲ್ಲಿ ಹುರುಳಿರಬೇಕು. ಪುಂಡಲೀಕನು ಪುಂಡ್ರರ-ಪೌಂಢ್ರರೆಂಬ ಜನಾಂಗದ ಪ್ರತಿನಿಧಿಯಾಗಿರಬೇಕು. ಮಲ್ಲರ ಅರಿ–ಮಣಿಮಲ್ಲಾ ಸುರನನ್ನು ಸಂಹರಿಸಿದ ದೇವರು- **ಮಲ್ಲಾರಿ;** ಕಂಡರ ಅರಿ—ಕಂಡರನ್ನು ನಿಗ್ರಹಿಸಿದ ದೇವರು- ಕಂಡಾರಿ, ಹಾಗೆಯೆ ಪುಂಡರನ್ನು-ಪುಂಡಲೀಕನನ್ನು ಹಾದಿಗೆ ತಂದ ದೇವರು ಪುಂಡಾರಿ—ಪುಂಡರೀಕ ನಾಗಿರಬೇಕೆಂದು ಊಹಿಸಿದರೆ ತಪ್ಪಾಗದು. ದೇವಗಿರಿ ಯಾದವರ ಪಳುವಾಯಿ ಮಲ್ಲಶೆಟ್ಟಿಯ ಒಂದು ದಾನಪತ್ರದಲ್ಲಿ "**ಪೌಂಡರೀಕ ಕ್ಷೇತ್ರ**" ವೆಂದೂ ಈ ಊರ ಹೆಸರಿದೆ. ಸೊಲ್ಲಾಪು ರದ ಸುತ್ತಲಿನ ನಾಡಿಗೆ ಪ್ರಾಚೀನಕಾಲದಲ್ಲಿ "ಪೌಂಢ್ರ" ವೆಂಬ ಹೆಸರಿದ್ದಿತ್ತೆಂದು ಶ್ರೀ ಚಾಂದೋರಕರರು "ಸಹ್ಯಾದ್ರಿ" ಮಾಸಪತ್ರಿಕೆ [I. 142-147 ] ಯಲ್ಲಿ ಬರೆಯುತ್ತಾರೆ!

ಮಲ್ಲಾರಿ, ಕಂಡಾರಿ, ಪುಂಡಾರಿ [ಪುಂಡರೀಕ] ದೇವತೆಗಳ ಮುಖ್ಯ ಭಕ್ತಸಮುದಾಯವೆಲ್ಲವೂ ಕನ್ನಡ ಮಲ್ಲಾರಿ, ಕಂಡಾರಿಗಳ ಉತ್ಸವಗಳಲ್ಲಿಯ "**ಏಳು ಕೋಟಿ**" ಯ ಉದ್ಘೋಷವು ಕನ್ನಡ ಭಕ್ತರ ಪ್ರಾಮುಖ್ಯತೆಗೆ ಸಾಕ್ಷಿಯಾಗಿದೆಯೆಂದು ಶ್ರೀಮಾನ್ ರಾಜಪುರೋಹಿತರು [ ಕ್ರಿ. ಶ. ೧೯೧೩- ೧೩ರಲ್ಲಿಯೆ ] ಎಲ್ಲರ ನಿದರ್ಶನಕ್ಕೆ ತಂದುಕೊಟ್ಟಿ ದ್ದಾರೆ. ಮತ್ತು ಮಲ್ಲಾರಿ ಕಂಡಾರಿಗಳು ನಿಜವಾಗಿ ವೀರಪುರುಷರು, ವೀರಪೂಜೆಯ ಅವಶೇಷವೆಂದು ಶ್ರೀಮಾನ್ ರಾಜಪುರೋಹಿತರು ಪ್ರತಿಪಾದಿಸುವದೂ ಬಹಳ ಸಮಂಜಸವಾಗಿದೆ. ಮಲ್ಲಾರಿ, ಕಂಡಾರಿ ಗಳಂತೆಯೇ **ಪುಂಡಾರಿಯೂ** ದೇವತಾಸ್ವರೂಪವನ್ನು ಹೊಂದಿದ್ದ **ಒಬ್ಬ ವೀರ ಮಹಾಪುರುಷನೇ** ಆಗಿರ ಬೇಕೆಂದು ತೋರುತ್ತದೆ. "ವೀರ" ವಿಠ್ಠಲನೆಂಬೂ ವಿಠ್ಠಲನ ಒಂದು ರೂಪವಿದ್ದು ಈ ರೂಪದಲ್ಲಿ ಆತ ನನ್ನು ಪೂಜಿಸುವವರೂ ಕಲವರಿದ್ದಾರೆ.

ಈ ಮಲ್ಲಾರಿ, ಕಂಡಾರಿ, ಪುಂಡಾರಿಗಳು ಮಲ್ಲ ರನ್ನು, ಕಂಡರನ್ನು ಮತ್ತು ಪುಂಡ ( ಪುಂಢ್ರ )ರನ್ನು ತಳ್ಳಿ ಕನ್ನಡಿಗರಿಗೆ ನೆಮ್ಮದಿಯಿಂದ ಬಾಳಿ ಬದುಕಲು ಇಂಬು ಮಾಡಿಕೊಟ್ಟ ಮಹಾತ್ಮರಾಗಿರಬೇಕು, ಆದು ದರಿಂದ ಮುಂದೆ ರಾಮಕೃಷ್ಣಾದಿಗಳಂತೆ ದೇವತಾ ಸ್ವರೂಪವನ್ನೂ ತಾಳಿರಬೇಕು. ಮತ್ತು ಈ ದೇವತೆ ಗಳ ಭಕ್ತಕೋಟಿಯಲ್ಲಿ ಕನ್ನಡಿಗರಿಗೇ ಪ್ರಧಾನ್ಯವಿರುವು ದಕ್ಕೂ ಇದುವೆ ಮುಖ್ಯಕಾರಣವಾಗಿರಬೇಕು. ಮಲ್ಲಾರಿ, ಕಂಡಾರಿಗಳಂತೆ ಪುಂಡಾರಿಯೂ ಮೊದಲು **ಶಿವ**ರೂಪನಾಗಿಯೆ ಇದ್ದರೆ ಸೋಜಿಗವಲ್ಲ ಆದುದ ರಿಂದ ಶ್ರೀ. ರಾಜಪುರೋಹಿತರು ಊಹಿಸುವಂತೆ ಪಂಢರಿಯು ಮೊದಲು ಶೈವಕ್ಷೇತ್ರವಾಗಿರುವುದೂ ಸಂಭವನೀಯವಾಗಿದೆ [ ಕಣ್ಮರೆಯಾದ ಕನ್ನಡ ಪುಟ ೭೮-೭೩ ಓದಿ ]

( ೪ ) ಫ್ರಾನ್ಸದೇಶದ ಸುಪ್ರಸಿದ್ಧ ಸಂಶೋಧಕರಾದ ಪ್ರೊ. ಪ್ರಿಲಸ್ಕಿ ( Pizylusky ) ಅವರು ವಿಠಲನು [ ವಿಷ್ಣುವು ] ದ್ರಾವಿಡರ ದೇವರು' ಎಂದು ವಿವೇಚಿಸಿ ಒಂದು ಲೇಖವನ್ನು ಬರೆದಿರುವರು [See mythic Society Journal, silver Jubilee Number ] 'ದ್ರವಿಡ' ಶಬ್ದದೊಳಗಿನ ಕೊನೆಯ '**ವಿಡ**' ವು '**ವಿಠ**', '**ವಿಠಲ**' ದ ಒಂದು ರೂಪವೆಂದೂ ವಿರಲ-ವಿಟ್ಟಿಗ [ ಬಿಟ್ಟಿಗ ] ದೇವನೆ ಸುಸಂಸ್ಕೃತ ರೂಪತಾಳಿ ವಿಷ್ಣುವಾದನೆಂದೂ ಅವರು ನಿರ್ಣಯಿ ಸಿದ್ದಾರೆ.

ಇದರಿಂದ ಪ್ರೊ ಪ್ರಿಲಸ್ಕಿಯವರ ವಿಚಾರಗಳೂ ಕಣ್ಮರೆಯಾದ ಕನ್ನಡದಲ್ಲಿ ಈ ಮೊದಲೆ ಬಂದಿರುವ ಅಂಶಗಳೂ ತುಂಬಾ ಪರಸ್ಪರ ಪೋಷಕವಾಗಿವೆ ಯೆಂದು ವ್ಯಕ್ತವಾಗುತ್ತಿದೆ.

ಇನ್ನೊಂದು ಮಾತು, ಮಲ್ಲಾರಿ ಮತ್ತು ಕಂಡಾರಿ ಇವೆರಡೂ ಕೂಡಿ ಮಲ್ಲಾರಿ ಅಥವಾ ಖಂಡೋಬಾ ಎಂಬ ಒಂದೇ ಹೆಸರಿನ ದೇವತೆಯಾಗಿರುವಂತೆ ಪುಂಡಾರಿ ಮತ್ತು ವಿಠ್ಠಲ ಎರಡೂ ಒಂದೇ ಆಗಿದ್ದುದೂ ಗೋಚರವಾಗುತ್ತಿದೆ.

ಇದಂತಿರಲಿ. ಜ್ಞಾನದೇವ ನಾಮದೇವಾದಿ ಮಹಾ ರಾಷ್ಟ್ರದ ಸಾಧು ಸಂತರು ಹೇಳುವಂತೆ, ಫ್ರಾನ್ಸಿನ ಪ್ರೊ. ಪ್ರಿಲಸ್ಕಿಯವರು ಶೋಧಿಸಿರುವಂತೆ ವಿಠ್ಠಲನು ಒಂದು ಕಾಲಕ್ಕೆ ಕನ್ನಡ-ದ್ರಾವಿಡ ದೇವತೆಯಾಗಿ ದ್ದರೂ ಇಂದು ಪಂಢರಿ ಪುರವು ಕನ್ನಡ ಕ್ಷೇತ್ರವೆಂದು ಹೇಳುವುದೂ ಸಾಹಸದ ಮಾತಾಗಿ ಬಿಟ್ಟದೆಯಲ್ಲ. ಪಂಢರಿಯು ಹೇಗೆ ಕನ್ನಡಿಗರ ಕೈ ಬಿಟ್ಟಿರಬಹುದು?

× × ×

ವಿಜಯನಗರದ ಕೃಷ್ಣದೇವರಾಯನು ಒಯ್ದ ಪಂಢರಿಯ ಶ್ರೀ. ವಿಠ್ಠಲಮೂರ್ತಿಯನ್ನು ಸಂತ ಭಾನುದಾಸನು (ಕ್ರಿ. ಶ. ೧೪೪೮-೧೫೧೩) ಮರಳಿ ಪಂಢರಿಗೆ ತಂದಹಾಗೆ ಮಹಾರಾಷ್ಟ್ರದಲ್ಲಿ ಐತಿಹ್ಯವಿದೆ (ಪಾಂಗಾರಕರ ಕೃತ ಏಕನಾಥಚರಿತೆ, ಭಾವೆ ಕೃತ ಮಹಾರಾಷ್ಟ್ರ ಸಾರಸ್ವತಗಳಲ್ಲಿ ನೋಡಿ). ಅಲ್ಲದೆ ಬಳ್ಳಾರಿ ಗ್ಯಾಝಿಟಿಯರಿನಲ್ಲಿಯೂ ಈ ಮಾತಿಗೆ ಆಧಾರವು ಸಿಕ್ಕುತ್ತದೆ. ಕೃಷ್ಣರಾಜನು ಪಂಢರಿಯಿಂದ ವಿಠ್ಠಲಮೂರ್ತಿಗಳನ್ನು ಏಕೆ ತಂದಿರಬಹುದು? ಇದನ್ನು ಕುರಿತು ಸ್ಪಷ್ಟವಾದ ಸಾಕಷ್ಟು ಆಧಾರಗಳು ಇನ್ನೂ ದೊರೆತಿಲ್ಲ.

(೧) ಪಂಢರಿಪುರವು ಮುಸಲ್ಮಾನರ ಆತಳಿತಕ್ಕೊಳಪಟ್ಟಿದ್ದಿದ್ದು ಅಲ್ಲಿ ಶ್ರೀ. ವಿಠ್ಠಲನ ಮೂರ್ತಿಯು ಪವಿತ್ರವಾಗಿ ಉಳಿಯಲಾರದೆಂಬ ಹೆದರಿಕೆಯಿಂದ ಕೃಷ್ಣರಾಯನು ಅದನ್ನು ವಿಜಯನಗರಿಗೆ ತಂದಿರಬಹುದೆಂದು ಕೆಲರ ಊಹೆ

ಆದರೆ ಭಾನುದಾಸನು ಮರಳಿ ಆ ಮೂರ್ತಿಯನ್ನು ಒಯ್ದಾಗ ಮುಸಲ್ಮಾನರ ಹೆದರಿಕೆಯೇನೂ ಕಡಿಮೆಯಿದ್ದಿಲ್ಲ. ಆದುದರಿಂದ ಮೇಲಣ ಊಹೆಯು ಅಷ್ಟು ಸಫಲವೆನಿಸುವದಿಲ್ಲ

[೨] ಕೃಷ್ಣದೇವರಾಯನು ತಾನು ವೈಭವದಿಂದ ಕಟ್ಟಿದ ವಿಜಯವಿಠ್ಠಲಮಂದಿರದಲ್ಲಿ ಸ್ಥಾಪಿಸಲು ಯೋಗ್ಯವಾದ ಮೂರ್ತಿಯೆಂದರೆ ಪಂಢರಿಯಲ್ಲಿರುವ ಅನಾದಿಕಾಲದ್ದೆಂದೂ ಸ್ವಯಂಭುವೆಂದೂ ಪ್ರಖ್ಯಾತವಾಗಿರುವ ಶ್ರೀ ವಿಠ್ಠಲ ಮೂರ್ತಿಯೆ ಸರಿ, ಎಂಬ ವಿಚಾರದಿಂದ ಆ ಪ್ರತಿಮೆಯನ್ನಿಲ್ಲಿಗೆ ತಂದಿರಬಹುದೇನೊ, ಎಂದೂ ಒಂದು ವಿಚಾರವಿದೆ. ಈ ವಿಚಾರಕ್ಕೆ 'ಪಂಢರಿಯಲ್ಲಿ ಮುಸಲ್ಮಾನರ ಹೆದರಿಕೆ ಬೇರೆ', ಎಂಬ ಮಾತೂ ಪುಷ್ಟಿಯನ್ನಿತ್ತಿರಬಹುದು.

ಕೃಷ್ಣರಾಯನು ಮೂರ್ತಿಯನ್ನು ತಂದರೂ ಅದು ವಿಜಯನಗರಿಯಲ್ಲಿ ಬಹಳ ದಿನಗಳ ವರೆಗೆ ಉಳಿಯಲಿಲ್ಲವೆಂದು ತೋರುತ್ತದೆ. ಪಂಢರಿಯಿಂದ ವಿಜಯನಗರಕ್ಕೆ ಬಂದ ವಿಠ್ಠಲನು ಆ ವೈಭವಶಾಲಿಯಾದ ವಿಜಯವಿಠಲನ ಮಂದಿರವನ್ನು ನೋಡಿ ತಾನು ಒಡಬಗ್ಗರ ದೇವರು ಈ ರಾಜವೈಭವದಲ್ಲಿ ತನಗೆ ಇರುವದು ಸೊಗಸದು' ಎಂದು ಹೇಳಿ ಮರಳಿ ಪಂಢರಿಗೆ ಹೊಂಟು ಹೋದನೆಂದು ಬಳ್ಳಾರಿ ಗ್ಯಾಝಿಟಿಯರಿನಲ್ಲಿ ಬರೆದಿದೆ.

ಪಂಢರಿಗೆ ಯಾತ್ರೆಗೆ ಬರುವ ಲಕ್ಷಾವಧಿ ಭಕ್ತಸಮುದಾಯವು ತಮ್ಮ ಇಷ್ಟ ದೇವತೆಯ ಸ್ಥಲಾಂತರದಿಂದ ಕಳವಳಗೊಂಡು ಮೂರ್ತಿಯನ್ನು ಮರಳಿ ದೊರಕಿಸುವದಕ್ಕೆ ಶಕ್ಯವಿದ್ದ ಪ್ರಯತ್ನಗಳನ್ನು ನಡೆಸಿದ್ದರೆ ನೋಡಿಗನಲ್ಲ "ಭಕ್ತಭಾಗವತ ನಿಃಶಬ್ದ ತೇ ರೇಲೇ ತುಜವಿಣ' ಎಂದೂ "ರಕುಮಾಯಿ ಆಯೀ ತೇ ಜಾಹಲಿ ಅಸೇ ಉದಾಸ (ತುಜವಿಣ)" ಎಂದೂ ಭಾನುದಾಸನು ವಿಜಯನಗರದಲ್ಲಿ ವಿಠ್ಠಲನ ಸನ್ನಿಧಾನದಲ್ಲಿ ಪ್ರಾರ್ಥನೆ ಮಾಡಿ "ಚಾಲ ಅಮ್ಹಾಂಸವೇ" ಎಂದೂ ಕೊರಗಿ ಮರಗಿ ಬೇಡಿಕೊಂಡ ಹಾಡುಗಳಿವೆ.

ಭಾನುದಾಸನಿಗೆ ಮೂರ್ತಿಯು ಹೇಗೆ ದೊರೆತಿತೋ! ಕೊನೆಗೊಮ್ಮೆ ದೊರೆತುದಂತೂ ನಿಶ್ಚಿತ. ಆದರೆ ಇದು ತೀರ ಅಸಾಧ್ಯವಾಗಿದ್ದುದು ಸಾಧ್ಯವಾಯಿತೆಂಬುದು ಭಾನುದಾಸನು ಹೇಳುವ ಮಾತಿನಿಂದಲೇ ಕಂಡು ಬರುತ್ತಿದೆ "ಕೋರಡಿಯೊ ಕಾಷ್ಠೀ ಅಂಕುರ ಫುಟಲೇ (ಕೊರಡು ಕೊನರಿತು)! ಯೇಥೇ ಯೇಣೇ ಜಾಹಲೇ ವಿಠೋಬಾಚೇ (ವಿಠ್ಠಲನು ಇಲ್ಲಿಗೆ ಬಂದ)! ಎಂಬ ಪಲ್ಲವಿಯ ವೇಳೆಯೆ ಅಂದು ಮೂರ್ತಿಗಳನ್ನು ಒಯ್ದ ಮೇಲೆ ಪಂಢರಿಪುರದಲ್ಲಿ ಭಾನುದಾಸನ ಹರಿಕೀರ್ತನೆ ಯಾಯಿತಂತೆ!

ವಿಜಯನಗರದವರು ಪಂಢರಿಯ ಭಕ್ತಕೋಟಿಗೆ ನಿರುತ್ಸಾಹ ಮಾಡಬಾರದೆಂದು ತಂದಮೂರ್ತಿಗಳನ್ನು ತಿರುಗಿ ಕೊಟ್ಟಿರಬಹುದು ವಿಠ್ಠಲನ ಆ ಮೂರ್ತಿಯನ್ನು ಇಟ್ಟುಕೊಂಡರೆ ಶುಭವಾಗಲಿಕ್ಕಿಲ್ಲವೆಂಬ ಹೆದರಿಕೆಯು ಕಾರಣವಾಗಿರಬಹುದು. ಇಲ್ಲವೇ 'ಈ ಮೂರ್ತಿ ಕೊಟ್ಟು ಬಿಡಿ' ರೆಂದು ಸ್ವಪ್ನ ದೃಷ್ಟಾಂತಗಳಾಗಿದ್ದರೂ ಇರಬಹುದ.

ಆದರೆ ಇಷ್ಟರಿಂದ ಪಂಢರಿಪುರವು ಕರ್ನಾಟಕದ ದಾಸಕೂಟಕ್ಕೆ ಏಕೆ ದೂರವಾಯ್ತೆಂಬುದರ ಗುಟ್ಟು ಇನ್ನೂ ಚೆನ್ನಾಗಿ ಬೆಳಕಿಗೆ ಬರುವದಿಲ್ಲ.

ವಿಜಯನಗರದ ರಾಜರಲ್ಲಿ ವಿಠ್ಠಲ ಭಕ್ತಿಗೆ ಆರಂಭವಾದುದು ಕೃಷ್ಣರಾಯನಿಂದಲೆ ಅಲ್ಲ. ಇವರ ತಂದೆಯು ಕಾಲಕ್ಕೇ ಶ್ರೀ ವಿಠ್ಠಲನು ಶ್ರೀ ವಿರೂಪಾಕ್ಷದೇವರೊಡನೆ ರಾಜಮರ್ಯಾದೆಗಳನ್ನು ಸ್ವೀಕರಿಸುತ್ತಿದ್ದನೆಂದೂ ಶ್ರೀ ವ್ಯಾಸರಾಯರು ವಿಜಯನಗರಿಯಲ್ಲಿ ಪ್ರವೇಶಿಸಿದ ಕಾಲಕ್ಕೆ ವಿಠ್ಠಲನ ಪ್ರಭೆಯು ಪಟ್ಟಣದಲ್ಲೆಲ್ಲ ಹರಡಿಕೊಂಡಿತ್ತೆಂದೂ ವರ್ಣನೆ

ಗಳಿವೆ (ವ್ಯಾಸರಾಯ ಚರಿತೆ: ಬಿ ವೆಂಕೋಬರಾವ) ಹೀಗೆ ವಿಜಯನಗರವೂ ಪಂಢರಿಯಂತೆ ಒಂದು ವಿಠ್ಠಲ ಕ್ಷೇತ್ರವಾಗಲಾರಂಬಿಸಿದುದು ಗೋಚರವಾಗುತ್ತದೆ. ಕೃಷ್ಣದೇವರಾಯನು ವಿಜಯ ವಿಠ್ಠಲ ಮಂದಿರಕ್ಕೆ ಕೊಟ್ಟ ಪ್ರಾಶಸ್ತ್ಯವೂ ಈ ಮಾತಿಗೆ ಬೆಂಬಲವನ್ನೀಯುತ್ತಿದೆ

ವಿಜಯ ವಿಠ್ಠಲನ ಮಂದಿರವನ್ನು ಕಟ್ಟುವುದಕ್ಕೆ ಕೃಷ್ಣರಾಯನ ಕಾಲದಲ್ಲಿ ಆರಂಭವಾಗಿ ಮುಂದೆ ಹಾಗೆ ೫೦-೬೦ ವರುಷಗಳ ವರೆಗೆ ಸಾಗಿತು. ಆದರೆ ಅದರಲ್ಲಿ ಮೂರ್ತಿಯು ಸ್ಥಾಪನೆಯೇ ಆಗಲಿಲ್ಲವೆಂದು ಮೈಸೂರು ಗ್ಯಾಝಿಟಿಯರು ಹೇಳುತ್ತದೆ.

ಕೃಷ್ಣರಾಯನೂ ಆತನ ಹೆಂಡತಿಯೂ ವಿಜಯ ವಿಠ್ಠಲನಿಗೆ ದತ್ತಿಬಿಟ್ಟ ಶಾಸನಗಳು ದೊರೆಯುತ್ತವೆ. ಮೂರ್ತಿ ಸ್ಥಾಪನೆಯೇ ಆಗದ ದೇವರ ಹೆಸರಿನಿಂದ ದಾನ ಕೊಡುವುದು ಹೇಗೆ ಸಾಧ್ಯ? ಆದುದರಿಂದ ಕೃಷ್ಣರಾಯನ ಕಾಲಕ್ಕೆ ವಿಜಯ ವಿಠಲನ ಮಂದಿರದಲ್ಲಿ ಮೂರ್ತಿ ಸ್ಥಾಪನೆಯಾಗಿರಲಿಕ್ಕೆ ಬೇಕೆಂಬುದು ಸ್ಪಷ್ಟ. ಇಲ್ಲಿ ಸ್ಥಾಪಿಸಿದ ಮೂರ್ತಿಯು ಪಂಢರಿಪುರದ್ದೋ ಅಥವಾ ಬೇರೊಂದು ಮೂರ್ತಿಯೋ ಎಂಬುದು ಮಾತ್ರ ನಿಶ್ಚಿತವಾಗಿ ತಿಳಿದಿಲ್ಲ

ಭಾನುದಾಸನು ಮೂರ್ತಿಯನ್ನು ಮರಳಿ ಒಯ್ದ ಮೇಲೆ ಬೇರೆ ಮೂರ್ತಿಯನ್ನು ಸ್ಥಾಪಿಸದೆ ಇದ್ದುದರಿಂದ ವಿಜಯ ವಿಠ್ಠಲನ ಮಂದಿರದಲ್ಲಿ ಇಂದಿಗೂ ತೆರವಾದ ಜಗುಲಿಯು ಹಾಗೆಯೆ ಇದೆಯೆಂಬದಾಗಿ ಕೆಲವರು ಹೇಳುತ್ತಾರೆ.

ಒಂದು ಕಡೆಗೆ ಸ್ಥಾಪಿಸಿದ ಮೂರ್ತಿಯನ್ನು ಕಿತ್ತು ಬೇರೆ ಕಡೆಗೆ ಒಯ್ಯುವುದು ನಮ್ಮ ಪರಂಪರೆಗೆ ಹೇಗೊ ಎನಿಸುತ್ತಿದೆ, ಈ ಬಗ್ಗೆ ಸಹ ಸಂದೇಹ ಪಡುವ ಕಾರಣವಿಲ್ಲ. ಏಕೆಂದರೆ ಕೃಷ್ಣರಾಯನು ಈ ಬಗೆಯಾಗಿ ಇನ್ನೂ ಕೆಲವು ಮೂರ್ತಿಗಳನ್ನು ಹೊರಗಿನಿಂದ ತಂದ ಆಧಾರಗಳು ದೊರೆಯುತ್ತವೆ. ಕಲಿಂಗ ವಿಜಯದ ಕಾಲಕ್ಕೆ ಯಾದಗಿರಿಯಿಂದ ತಂದ 'ಕೃಷ್ಣ'ನ ಮೂರ್ತಿಯನ್ನು ವಿಜಯನಗರದಲ್ಲಿ ಸ್ಥಾಪಿಸಿದ ಶಿಲಾಶಾಸನವು ಆ ಗುಡಿಯಲ್ಲಿಯೇ ಇದೆ (ಬಳ್ಳಾರಿ ಗ್ಯಾಝಿಟಿಯರ ನೋಡಿರಿ.)

ಆದರೆ ಈ ಮಾತಿಗೂ ಆಧಾರವು ಕಾಣುವದಿಲ್ಲ. ಕೃಷ್ಣರಾಯನ ತರುವಾಯ ಪಟ್ಟಕ್ಕೆ ಬಂದ ಅಚ್ಯುತರಾಯನೂ ಸದಾಶಿವರಾಯನೂ ವಿಜಯ ವಿಠ್ಠಲನ ಸನ್ನಿಧಾನದಲ್ಲಿ ಕೊಟ್ಟ ದಾನಪತ್ರಗಳು ಸಿಕ್ಕುತ್ತವೆ. (Epigraphica Indica Vol III P. 149 Forgotten Empire P. 163)

ಈಗ ವಿಜಯವಿಠಲ ಮಂದಿರದಲ್ಲಿ ಮೂರ್ತಿ ಇಲ್ಲದುದಕ್ಕೆ ಕಾರಣವನ್ನು ಹುಡುಕುವುದೆ ಆದರೆ ಮುಸಲ್ಮಾನರು ವಿಜಯನಗರವನ್ನು ಸುಲಿದುದರಲ್ಲಿ ಸಿಕ್ಕುವುದು, ಅಥವಾ ಭಕ್ತರು ಮುಸಲ್ಮಾನರ ಕೈಗೆ ಮೂರ್ತಿಯು ಸಿಕ್ಕಬಾರದೆಂದು ಸ್ಥಳಾಂತರ ಮಾಡಿಸಿರುವ ಸಂಭವವೂ ಇಲ್ಲದಿಲ್ಲ

ಅಂತೂ ವಿಜಯ ನಗರದ ಕೊನೆಯ ವರೆಗೂ ಇಲ್ಲಿ (ವಿಜಯನಗರದಲ್ಲಿ) ವಿಠ್ಠಲನ ಪ್ರಾಶಸ್ತ್ಯವು ಚೆನ್ನಾಗಿಯೆ ಇದ್ದಿತೆಂದು ಹೇಳಬಹುದು ಪುರಂದರದಾಸರು ಪಂಢರಿವಿಠಲನ ಸನ್ನಿಧಾನದಲ್ಲಿ ಕೆಲಕಾಲ ಕಳೆದರು, ವಿಜಯನಗರದಲ್ಲಿ ತಮ್ಮ ಕೊನೆಯ ದಿನಗಳನ್ನು ಕಳೆದರು. ವಿಠ್ಠಲನ ಸನ್ನಿಧಾನವಿಲ್ಲದೆ ಇದ್ದರೆ ಇವರು ಇಲ್ಲಿ ಒಂದು ದಿನವಾದರೂ ನಿಲ್ಲುವುದ ಸಾಧ್ಯವಿದ್ದಿಲ್ಲ ಪುರಂದರ ದಾಸರೊಡನೆ ಇನ್ನೂ ನೂರಾರು ವಿಠ್ಠಲ ಭಕ್ತರು ಇಲ್ಲಿಯ ಕಾಲಕ್ಷೇಪ ಮಾಡುತ್ತಿದ್ದುದು ಇತಿಹಾಸದಿಂದ ಗೊತ್ತಾಗುತ್ತದ ಆದುದರಿಂದ ಆ ಕಾಲಕ್ಕೆ ವಿಜಯನಗರವೂ ಒಂದು ಪ್ರತಿ ಪಂಢರಿಪುರವಾಗುತ್ತ ಬಂದಿರಬೇಕು. ಶ್ರೀ ವ್ಯಾಸರಾಯರ ವೃಂದಾವನೆಯಿಂದ ನವವೃಂದಾವನವು ಈಗಾಗಳೆ ಆರಂಭವಾಗಿದ್ದಿತು

ಆದುದರಿಂದ ಚಂದ್ರಭಾಗಾ ತೀರಕ್ಕೆ ಸರತಿಗೆ ಹೋಗುತ್ತಿದ್ದ ವೈಷ್ಣವ ಭಕ್ತಕೋಟಿಯು ಬರಬರುತ್ತ ತುಂಗಾ ತೀರದ ವಿಜಯವಿಠ್ಠಲನ (?) ಕಡೆಗೆ ತಿರುಗಲಾರಂಭಿಸಿದ ಹಾಗ ಕಾಣುತ್ತದ.

ಹೀಗೆ ಕ್ರಮದಿಂದ ಪಂಢರಿಯಲ್ಲಿ **ಕರ್ನಾಟಕ ವೈಷ್ಣವ ಸಮಾಜವು**, ಕಡಿಮೆಯಾಗಿ ಅದು **ಮಹಾರಾಷ್ಟ್ರದ ವಿಷ್ಣುಭಕ್ತರ ಕ್ಷೇತ್ರವಾಗಿ ಪರಿಣಮಿಸಿರಬೇಕನಿಸುತ್ತದೆ**

ಕರ್ನಾಟಕದ ವೈಷ್ಣವ ಸಮಾಜವು ಪಂಢರಿ ವಿಠ್ಠಲನನ್ನು ಪೂರ್ಣ ಮರೆತು ಬಿಡದಿದ್ದರೂ ವಿಠ್ಠಲನನ್ನು ಎತ್ತಿಕೊಂಡು ಪಂಢರಿಪುರದಿಂದ ತಮ್ಮ ಮನಸ್ಸನ್ನು ಏಕೆ ತಿರುಗಿಸಿರಬೇಕೆಂಬದು **'ಶ್ರೀದವಿಠಲರ'** ಕ್ರಿ ಶ. ೧೭ ಶತಮಾನದ ಕೊನೆಗೆ ಒಂದು ಪದ್ಯದಿಂದ ಚೆನ್ನಾಗಿ ಗೊತ್ತಾಗುವಂತಿದೆ.

ನೀನಿಲ್ಲಿಗೆ ಬಂದ್ಯಾ ವಿಠಲಾ। ಏನಿದು ಕೌತುಕವು॥
ಮಧ್ವದ್ವೇಷಿಗಳು ಮಾಡುವ ಪದ್ಧತಿಯನು ಕಂಡು॥

ಶ್ರೀ. ನಂದಗಡ ಭೀಮರಾಯರು
ಬಿ ಎ ಎಲ್‌ಎಲ್. ಬಿ ಬೆಳಗಾಂ



ಶ್ರೀ ಆರ್. ಎಸ್. ಸಾಲೆತ್ತೂರ
ಎಂ. ಎ ಮುಂಬಯಿ



ಈ ಸಂಚಿಕೆಯ ಮುದ್ರಣಕಾರ್ಯದಲ್ಲಿ ಸಹಾಯ ಮಾಡಿದ ಕೆಲಸಗಾರರು.



ಹೃದ್ಯವಾಗದೆ ಕದ್ದು ಕಳ್ಳನಂತೆ ಎದ್ದಿಲ್ಲಿಗೆ ಬಂದ್ಯಾ॥೧॥ ಮಿಥ್ಯಾವಾದಿಗಳು ನಿರಂತರ ಸುತ್ತಿ ಮುತ್ತಿಕೊಂಡು। ಅತ್ತು ಕರೆದು ಕೂಗುತ್ತಿರೆ ಕಂಡು ॥ ಬೇಸತ್ತು ಬಂದ್ಯಾ ವಿಠಲಾ ॥ ಶ್ರೀದವಿಠಲ ನಿನ್ನ ಸದ್ಗುಣ ವೇದ ಶಾಸ್ತ್ರಗಳು । ಶೋಧಿಸಿ ನೋಡಲು ಭೂದೇವರಿ ಗೊಲಿದು ಆದರಿಸಲು ಬಂದ್ಯಾ ವಿಠಲಾ ॥

+ + +

ಗಿರಿಯಲ್ಲಿ ನವರಾತ್ರಿ ಮತ್ತು ಮುಕ್ಕೋಟಿ ದ್ವಾದಶಿಗೂ ಮಂತ್ರಾಲಯದಲ್ಲಿ ಶ್ರೀ. ರಾಘವೇಂದ್ರರಾಯರ ಆರಾಧನೆಯ ಕಾಲಕ್ಕೂ ನೆರೆಯುವಷ್ಟು **ಕನ್ನಡ ದಾಸಕೂಟವು** ಪಂಢರಿಯಲ್ಲಿ ಆಷಾಢ-ಕಾರ್ತೀಕ ಏಕಾದಶಿಗಳಿಗೂ ಸೇರುವುದೊ ಇಲ್ಲವೊ ಎಂಬ ಸಂದೇಹ! ಇಂದಿಗೂ ವಿಜಯನಗರವು ಕಣ್ಮರೆಯಾದರೂ ತುಂಗಾತೀರವು (ಮಂತ್ರಾಲಯ) ಮಾತ್ರ ದಾಸಕೂಟದ ಆಶ್ರಯ-ಸ್ಥಾನವಾಗಿ ಹಾಗೆಯೆ ಉಳಿದಿದೆಯೆನ್ನಬಹುದು. ಈಗ ನಮ್ಮ ದಾಸರುಗಳಿಗೆ ಪಂಢರಿಗಿಂತಲೂ ಉಡುಪಿ ಮ... ...ಗಳು ಬಹಳ ಹತ್ತಿರವೆನಿಸುತ್ತಿವೆ!

---

# ಶಾಪಗ್ರಸ್ತ ವಿಜಯನಗರ.

—ಇದು ಯಾವ ಹೊಳಲು ?
ಲಕ್ಷಾನುಲಕ್ಷ ಮುಖದಲಿ ಕಲ್ಪನೆಯು ಕನಸು
ಬಾಷ್ಪದಲಿ ತೇಲುತಿದೆ! ಯಾವ ಕಾಲನ ಶಾಪ-
ವೋ ಕಾಣೆ, ನಲಿದುಲಿದ ಚಲುವು ಹಾ! ಮೂರ್ಛೆಯು
ಮಲಗಿಹುದು! ಪಾಳಿನಲಿ ಯಾವದೋ ಸೌಂದರ್ಯ-
ದಾತ್ಮವದು ಮೌನದಲಿ ನರಳುತಿದೆ! ರಾಜತೇ-
ಜವು, ತಪವು, ಯಶವು, ಕಲೆಗಳು—ಎಲ್ಲ
ಶಿಲೆಯಾಗಿ ಬಿದ್ದಿಹವು! ನೂರ್ನೂರು ವರಿಸಗಳ
ಹಳೆಯ ಹೆಮ್ಮರಗಳಲಿ ಯಾವ ಸ್ಮೃತಿಯೋ ಏನೊ,
ತಲೆದೂಗಿ ಸುಯ್ಯುತಿದೆ! ಅಲ್ಲಲ್ಲಿ ಒಳಗೊಳಗೆ
ಮರುಕು ಮಿಸುಕಾಡುತಿದೆ! ಯಾವ ಮಾಯೆಯೊ ಏನೊ,
ಇಂಥ ಪಾಳಲಿ ಕೂಡ, ಸುಪ್ತ ಭವ್ಯನ ತೆರದಿ
ಕಣ್ಮನವ ಸೆಳೆಯುತಿದೆ! ಕನಸಿನಲಿ ಕಂಪಿಸುವ
ದೇನಾ ಸರೋವರಂ? ಕನವರಿಪಳೆಂ ತುಂಗೆ?
—ಅದೊ ಹೇಗೆ ಮಿಸುಕುತಿದೆ? ಇಲ್ಲ. ಸತ್ತಿಲ್ಲ ಇದು!
ಶಾಪದಾ ಭಾರದಲಿ ವೈಭವದ ತೀರದಲಿ
ನಿದ್ರೆಗೈಯುತಲಿಹುದು! ಶಾಪಮೋಕ್ಷದಿ ಮತ್ತೆ
ನಿದ್ರೆ ತೊರೆದೇಳಲಹ! **ಏಂ. ಚಂದವಾನಂದ!**

**—ಈಶ್ವರ ಸಣಕಲ್ಲ,**
ರಬಕವಿ.

---

# ಶ್ರೀವಿದ್ಯಾರಣ್ಯ ಶ್ರೀವ್ಯಾಸರಾಯರ,

## ಗ್ರಂಥಗಳ ಸಾಮಾನ್ಯ ಪರಿಚಯ.

( ಲೇಖಕರ :— ಪಂಡಿತ ರಾಮಾಚಾರ್ಯ ಗಲಗಲಿ, ಬೆಳಗಾವಿ. )

ವಿಜಯನಗರ ಸಾಮ್ರಾಜ್ಯವನ್ನು ಪ್ರತಿಷ್ಠಾಪಿಸಿದ ಶ್ರೀ ವಿದ್ಯಾರಣ್ಯರ, ಮತ್ತು ಅದನ್ನು ಸಂರಕ್ಷಿಸಿದ ಶ್ರೀ ವ್ಯಾಸರಾಯರ ಅಗಾಧ ಚರಿತ್ರೆಯನ್ನು ಅರಿಯದ ಕನ್ನಡಿಗರು ವಿರಳ ಇವರೀರ್ವರು ಐಹಿಕ ಸಾಮ್ರಾಜ್ಯ ಪ್ರತಿಷ್ಠಾಪಕರಿಷ್ಟೇ ಅಲ್ಲ. ಪಾರಮಾರ್ಥಿಕ ವೇದಾಂತ ಸಾಮ್ರಾಜ್ಯ ಸಂರಕ್ಷಕರೆಂದು ಪ್ರಸಿದ್ಧಿ ಪಡೆದವರು. ಶ್ರೀ ವಿದ್ಯಾರಣ್ಯರು ಅದ್ವೈತ ಸರೋವರವನ್ನು ತಮ್ಮ ಗ್ರಂಥಗಳೆಂಬ ಕಮಲ ಕಲ್ಹಾರಗಳಿಂದ ಅಲಂಕರಿಸಿದರೆ ಶ್ರೀ ವ್ಯಾಸರಾಯರು ದ್ವೈತವೇದಾಂತ ನಂದನವನವನ್ನು ಚಂದ್ರಿಕಾದಿ ಗ್ರಂಥಗಳೆಂಬ ಪಾರಿಜಾತ, ಕಲ್ಪವೃಕ್ಷಗಳಿಂದ ಶೋಭಿಗೊಳಿಸಿದರು. ಇಬ್ಬರೂ ವೀರಸನ್ಯಾಸಿಗಳು, ರಾಜಕಾರಣ ಧುರಂಧರರು; ಅತ್ಯಂತ ತಪಸ್ವಿಗಳು. ಉತ್ತಮ ಗ್ರಂಥಕರ್ತರು, ಒಬ್ಬರು ಸಾಮ್ರಾಜ್ಯವನ್ನು ಸಂಸ್ಥಾಪಿಸಿದರೆ ಮತ್ತೊಬ್ಬರು ಸಾಮ್ರಾಜ್ಯವನ್ನು ಸಂರಕ್ಷಿಸಿದರು. ಸನ್ಯಾಸ, ರಾಜಕಾರಣ, ತಪಸ್ಸು ಗ್ರಂಥಕರ್ತೃತ್ವ ಇವೆಲ್ಲ ಗುಣಗಳೂ ಇವರೀರ್ವರನ್ನು ಬಿಟ್ಟರೆ ಯಾವ ಐತಿಹಾಸಿಕ ಪುರುಷನಲ್ಲಿಯೂ ಒತ್ತಟ್ಟಿಗೆ ಕಂಡು ಬರುವದಿಲ್ಲ. ಇತರ ಪ್ರಾಂತಗಳ ಇತಿಹಾಸದಲ್ಲಿ ರಾಜಕಾರಣ ಪಟುಗಳೂ ವಿರಕ್ತರೂ ತಪಸ್ವಿಗಳೂ ಆದ ಒಂದೊಂದು ವ್ಯಕ್ತಿಯು ಕಂಡುಬಂದರೂ ಸಂಸ್ಕೃತದಲ್ಲಿ ಶಾಸ್ತ್ರ ಗ್ರಂಥಕಾರರೆಂದು ಎಣಿಸಲ್ಪಡುವ ವ್ಯಕ್ತಿಗಳು ಅಪರೂಪ, ಅಥವಾ ಇಲ್ಲವೆಂದೇ ಹೇಳಿದರೆ ಅದೇನೂ ಅತಿಶಯೋಕ್ತಿಯಾಗಲಾರದು. ಇತರ ದೇಶಗಳಿಗೆ ದೊರಕದಿರುವ ಈ ಭಾಗ್ಯವು ಲಭಿಸಿದುದಕ್ಕೆ ಕರ್ಣಾಟಕವು ವಿಶೇಷ ಅಭಿಮಾನ ಪಡುವ ಸಂಗತಿಯಾಗಿದೆ.

ಇನ್ನು ಈ ವೀರ ಸನ್ಯಾಸಿಗಳ ಗ್ರಂಥಗಳ ಪರಿಚಯವನ್ನು ಕ್ರಮದಿಂದ ವಾಚಕರಿಗೆ ಮಾಡಿ ಕೊಡುವಾ.

ಶ್ರೀವಿದ್ಯಾರಣ್ಯರು ಸೂತಸಂಹಿತಾ, ವೇದಾರ್ಥ ಪ್ರಕಾಶವೆಂಬ ನಾಲ್ಕುವೇದಗಳ ಭಾಷ್ಯ. ಬ್ರಾಹ್ಮಣಗಳಿಗೆ ಭಾಷ್ಯ, ಪರಾಶರಸ್ಮೃತಿವ್ಯಾಖ್ಯಾ,ಜೈಮಿನೀಯ ನ್ಯಾಯಮಾಲಾ ವಿಸ್ತಾರವೆಂಬ ಪೂರ್ವಮೀಮಾಂಸಾ ಗ್ರಂಥ, ಸರ್ವದರ್ಶನ ಸಂಗ್ರಹ, ಅನುಭೂತಿಪ್ರಕಾಶ, ದಶೋಪನಿಷದ್ದೀಪಿಕಾ; ಜೀವನ್ಮುಕ್ತಿ ವಿವೇಕ, ಅಪರೋಕ್ಷಾನುಭೂತಿಟೀಕಾ, ಮಾಧವನಿದಾನ, ಧಾತುವೃತ್ತಿ, ಶ್ರೀಶಂಕರದಿಗ್ವಿಜಯ ಎಂಬ ಗ್ರಂಥಗಳನ್ನು ರಚಿಸಿರುವರು. ಈ ಗ್ರಂಥಗಳಲ್ಲಿ ಶಂಕರದಿಗ್ವಿಜಯವು ಕಾವ್ಯಗ್ರಂಥವು. ಧಾತುವೃತ್ತಿಯು ವ್ಯಾಕರಣಶಾಸ್ತ್ರಪ್ರಕರಣವು. ಜೈಮಿನೀಯ ನ್ಯಾಯಮಾಲಾ ವಿಸ್ತಾರವು ಪೂರ್ವಮೀಮಾಂಸಾ ವಿಷಯಕವಾದದ್ದು ಮಾಧವನಿದಾನವು ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ್ದು. निदाने माधवः श्रेष्ठः ಎಂದು ಪ್ರಸಿದ್ಧವಾದ ಗ್ರಂಥವು. ಪರಾಶರಸ್ಮೃತಿ ವ್ಯಾಖ್ಯೆಯು ಧರ್ಮಶಾಸ್ತ್ರ ವಿಚಾರವಾದದ್ದು. ವೇದಭಾಷ್ಯ ಮತ್ತು ಬ್ರಾಹ್ಮಣ ಗ್ರಂಥಗಳಭಾಷ್ಯ, ಇವೆರಡನ್ನು ಬಿಟ್ಟು ಉಳಿದ ಎಲ್ಲ ಗ್ರಂಥಗಳು ಉತ್ತರಮೀಮಾಂಸಾ ಅಂದರೆ ವೇದಾಂತಪರವಾದವುಗಳು ಅದರಲ್ಲಿಯೂ ಸರ್ವದರ್ಶನ ಗ್ರಂಥದಲ್ಲಿ ಎಲ್ಲ ಮತಗಳ ಸಾರವು ಸುಗಮರೀತಿಯಿಂದ ವಿವರಿಸಲ್ಪಟ್ಟಿದೆ. ಇವೆಲ್ಲ ಗ್ರಂಥಗಳನ್ನು ಪರ್ಯಾಲೋಚಿಸಿದರೆ, ಶ್ರೀವಿದ್ಯಾರಣ್ಯರ ಸರ್ವತೋಮುಖಿಯಾದ ಬುದ್ಧಿವೈಭವವನ್ನು ನೋಡಿ ಮನವು ಅಚ್ಚರಿಗೊಳ್ಳುವದು. ಏಕಸ್ಮಿನ್ ಜನ್ಮನಿ ಏಕಮೇವ ಶಾಸ್ತ್ರಂ, ಎಂಬಂತೆ ಒಂದು ಜನ್ಮದಲ್ಲಿ ಒಂದೇ ಶಾಸ್ತ್ರದಲ್ಲಿಪ್ರಾವೀಣ್ಯವನ್ನು ಸಂಪಾದಿಸಬಹುದು. ಆದರೆ ಶ್ರೀವಿದ್ಯಾರಣ್ಯರು ಇದಕ್ಕೆ ಅಪವಾದವಾಗಿ ಒಂದು ಜನ್ಮದಲ್ಲಿ ಎಲ್ಲ ಶಾಸ್ತ್ರಗಳ ಜ್ಞಾನವನ್ನಷ್ಟೇ ಅಲ್ಲ; ವಿಶೇಷವಾಗಿ ಪಾಂಡಿತ್ಯವನ್ನು ಸಂಪಾದಿಸಿದುದು, ಅವರ ವಿಭೂತಿಮತ್ವವನ್ನು ಸ್ಪಷ್ಟಗೊಳಿಸುತ್ತದೆ. ಶಾಸ್ತ್ರಪಂಡಿತರಿಗೆ ಸಾಹಿತ್ಯದೇವಿಯ ಅನುಗ್ರಹವು ಬಹಳ ಕಡಿಮೆ. ಆದರೆ ಸರ್ವಶಾಸ್ತ್ರನಿಷ್ಣಾತರಾದ ಶ್ರೀವಿದ್ಯಾರಣ್ಯರು ಸಾಹಿತ್ಯ ದೇವಿಯನ್ನು ಪ್ರಸನ್ನೀಕರಿಸಿ ಕೊಂಡಿದ್ದರೆಂಬುದಕ್ಕೆ ಶಂಕರದಿಗ್ವಿಜಯವೆಂಬ

ಸರಸವಾದ ಕಾವ್ಯವೇ ಸಾಕ್ಷಿಯಾಗಿರುವದು. ರಾಜ್ಯ ಪ್ರತಿಷ್ಠಾಪನೆಯಂಥ ಮಹತ್ತರ ಕಾರ್ಯದಲ್ಲಿ ನಿರತರಾದ ವಿದ್ಯಾರಣ್ಯರು, ಇಷ್ಟು ಜ್ಞಾನವನ್ನು ಯಾವಾಗ ಸಂಪಾದಿಸಿದರೋ, ಯಾವಾಗ ಇಷ್ಟು ಗ್ರಂಥಗಳನ್ನು ಬರೆದರೋ, ಇದೆಲ್ಲವು ಸಾಮಾನ್ಯ ಮನುಷ್ಯರ ಬುದ್ಧಿಗೆ ನಿಲುಕದ ಮಾತಾಗಿದೆ. ಇನ್ನೊಂದು ವಿಚಾರಣೀಯವಾದ ವಿಷಯವು-ಧರ್ಮವು ರಾಷ್ಟ್ರದ ಪ್ರಗತಿಯ ಪ್ರತಿಬಂಧಕವೆಂದು ಪ್ರತಿಪಾದಿಸುವವರು, ಧರ್ಮೈಕಪ್ರವಣರಾದ ಶ್ರೀ ವಿದ್ಯಾರಣ್ಯರು ರಾಜ್ಯಸ್ಥಾಪನೆಯನ್ನು ಮಾಡಿದ ಸಂಗತಿಯನ್ನು ಮನವಂಕೆ ಮಾಡಿಕೊಂಡು ತಮ್ಮ ದುರಾಗ್ರಹವನ್ನು ದೂರ ಮಾಡುವ ಔದಾರ್ಯವನ್ನು ತೋರಿಸಬಹುದಲ್ಲವೇ ? ಧರ್ಮವು ದೇಶದ ಏಳಿಗೆಯನ್ನು ತಡೆಯುವದಿಲ್ಲವೆಂದಿಷ್ಟೇ ಅಲ್ಲ. ಧರ್ಮವು ಉನ್ನತಿಯ ತಳಹದಿಯಾಗಿದೆಯೆಂದು ನಿಶ್ಚಯವಾಗಿ ಹೇಳಬಹುದು. ಧರ್ಮದ ಬಲದಿಂದಲೇ ವಿದ್ಯಾರಣ್ಯ ವ್ಯಾಸರಾಯರು ರಾಜ್ಯವನ್ನು ಗಳಿಸಿದರು. ಮತ್ತು ಉಳಿಸಿದರು. ತಪಸ್ಸಿನ ಬಲವಿಲ್ಲದಿದ್ದರೆ ವಿಜಯನಗರದ ಸಾಮ್ರಾಜ್ಯದ ಇತಿಹಾಸವೆ ಆಗುತ್ತಿತ್ತೋ ಇಲ್ಲವೋ. ಇದೂ ಸಂಶಯಾಸ್ಪದವು. ಸನಾತನ ಧರ್ಮವು ಕಾಲದೇಶಪರಿಸ್ಥಿತಿಯಿಂದ ಪರಿವರ್ತನವನ್ನು ಸಹಿಸಲಾರದೆಂದು ಶ್ರೀ ವಿದ್ಯಾರಣ್ಯರು ಪರಾಶರ ಸ್ಮೃತಿಯ ವ್ಯಾಖ್ಯೆಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ತಾವು ಧರ್ಮದಿಂದ ನಡೆದು, ರಾಜರನ್ನೂ ಧರ್ಮದಿಂದ ನಡಿಸಬೇಕೆಂತೇ ವಿದ್ಯಾರಣ್ಯರ ಆಶಯವಿರುವದರಿಂದಲೇ ಅವರು ಸ್ಮೃತಿಯ ವ್ಯಾಖ್ಯೆಯನ್ನು ಮಾಡಿದರು. ಇರಲಿ

ಶ್ರೀವಿದ್ಯಾರಣ್ಯರು ಮಾಡಿದ ಎಲ್ಲ ಗ್ರಂಥಗಳಲ್ಲಿರುವ ವಿಷಯಗಳನ್ನು ಸಂಕ್ಷೇಪ ರೀತಿಯಿಂದ ಹೇಳಿದರೂ ಕೂಡ ಅದೊಂದು ಚಿಕ್ಕ ಗ್ರಂಥವೇ ಆಗಬಹುದು. ಆದುದರಿಂದ ಆ ಮೋಹವನ್ನು ಬಿಗಿ ಹಿಡಿದು ಆ ಗ್ರಂಥಗಳೊಳಗೆ ಅತ್ಯುತ್ತಮವಾದ ಪಂಚದಶೀ ಗ್ರಂಥವನ್ನಷ್ಟೇ ವಾಚಕರ ಪರಿಚಯಕ್ಕಾಗಿ ಸ್ವಲ್ಪ ವಿವೇಚಿಸಬೇಕೆಂದಿದ್ದೇವೆ.

"ಪಂಚದಶೀ" ಎಂಬ ಸಂಪೂರ್ಣ ಗ್ರಂಥವನ್ನು ಒಬ್ಬ ವಿದ್ಯಾರಣ್ಯರೇ ಮಾಡಿದವರಲ್ಲ, ಭಾರತೀ ತೀರ್ಥರೆಂಬ ಸನ್ಯಾಸಿಗಳೂ ಅದಕ್ಕೆ ಸಹಾಯಕರು. ಈ ಗ್ರಂಥದಲ್ಲಿ ಐದು ವಿವೇಕ ಐದು ದೀಪ ಐದು ಆನಂದ ಹೀಗೆ ಹದನೈದು ಪ್ರಕರಣಗಳುಂಟು. ಆದರೆ ತತ್ವ ವಿವೇಕ, ಪಂಚಮಹಾಭೂತ ವಿವೇಕ, ಪಂಚಕೋಶ ವಿವೇಕ, ದ್ವೈತವಿವೇಕ, ಮಹಾವಾಕ್ಯ ವಿವೇಕ, ಈ ಐದು ವಿವೇಕಗಳು ಚಿತ್ರದೀಪ, ತೃಪ್ತಿದೀಪ, ಕೂಟಸ್ಥದೀಪ, ಧ್ಯಾನದೀಪ, ನಾಟಕದೀಪ ಈ ಪ್ರಕಾರ ಐದು ದೀಪಗಳು; ಮತ್ತು ಯೋಗಾನಂದ-ಆತ್ಮಾನಂದ, ಅದ್ವೈತಾನಂದ, ವಿದ್ಯಾನಂದ, ವಿಷಯಾನಂದ ಹೀಗೆ ಐದು ಆನಂದಗಳು ಉಂಟು. ಇವುಗಳಲ್ಲಿ ಮೊದಲಿನ ಐದು ವಿವೇಕಗಳು. ಮತ್ತು ದೀಪಗಳಲ್ಲಿ ಮೊದಲಿನ ಚಿತ್ರದೀಪ ಈ ಆರು ಪ್ರಕರಣಗಳನ್ನಷ್ಟೇ ವಿದ್ಯಾರಣ್ಯರು ಮಾಡಿರುವರು. ಉಳಿದ ಒಂಭತ್ತು ಪ್ರಕರಣಗಳನ್ನು ಮಾಡಿದವರು ಭಾರತೀ ತೀರ್ಥರು. ಈ ಭಾರತೀ ತೀರ್ಥರು ವಿದ್ಯಾರಣ್ಯರ ತಮ್ಮಂದಿರೆಂದೂ ಚಿಕ್ಕಂದಿನಲ್ಲಿಯೇ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶೃಂಗೇರಿ ಪೀಠವನ್ನು ಅಲಂಕರಿಸಿದರೆಂದೂ ಕೆಲವರು ಹೇಳುವರು. ಇರಲಿ. ವಿದ್ಯಾರಣ್ಯರು ಮಾಡಿದ ಆರು ಪ್ರಕರಣಗಳ ಹೆಸರಿನಿಂದಲೇ ಅವುಗಳಲ್ಲಿ ವಿವರಿಸಲ್ಪಟ್ಟ ವಿಷಯಗಳ ಸಾಮಾನ್ಯ ಜ್ಞಾನವಾಗುವಂತಿದೆ. ಅವುಗಳಲ್ಲಿಯ ಎಲ್ಲ ವಿಷಯಗಳನ್ನು ವಿವೇಚಿಸುವದು ಪ್ರಸ್ತುತ ಸ್ಥಳವೂ ಅಲ್ಲ ಕಾಲವೂ ಅಲ್ಲೆಂದು ಲೇಖಣಿಯನ್ನು ಬಿಗಿಹಿಡಿಯಬೇಕಾಗಿದೆ.

ಶ್ರೀವ್ಯಾಸರಾಯರು ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ, ಭೇದೋಜ್ಜೀವನ, ಮಂದಾರಮಂಜರೀ ಇತ್ಯಾದಿ ಗ್ರಂಥಗಳನ್ನು ಮಾಡಿ ದ್ವೈತ ಮತವನ್ನು ಅತ್ಯಂತ ಊರ್ಜಿತ ಸ್ಥಿತಿಗೆ ತಂದರು. ಈ ಗ್ರಂಥಗಳಲ್ಲಿ ಚಂದ್ರಿಕಾ ಗ್ರಂಥವು ಶ್ರೀಮಧ್ವಾಚಾರ್ಯರ ಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥರ ತತ್ವಪ್ರಕಾಶಿಕಾ ಎಂಬ ಟೀಕಾಗ್ರಂಥಕ್ಕೆ ಟಿಪ್ಪಣೀ ರೂಪವಾಗಿದ್ದು ಅತಿಶಯ ಪ್ರೌಢವಾದ ಗ್ರಂಥವು. ಇದರಲ್ಲಿ ಪೂರ್ವಮೀಮಾಂಸಾ ಪದ್ಧತಿಯಿಂದ ಬಹು ಮನೋಹರವಾಗಿ ವಿಷಯಗಳು ವಿವೇಚಿಸಲ್ಪಟ್ಟಿರುವವು. ಇವರು ಗ್ರಂಥಾರಂಭದಲ್ಲಿ,

"सूत्रे भाष्येऽनुभाष्येच सन्न्यायविवृतौतथा ॥
टीकासुच यदस्पष्ट तत्स्पष्टी करिष्यते ॥ १ ॥
प्रतिसूत्रं प्रतिपदं घटनाघटनं मया ॥
स्वीयान्यपक्षयोः सम्यग्विदांकुर्वंतु सूरयः ॥ २ ॥

ಎಂದು ಪ್ರತಿಜ್ಞೆ ಮಾಡಿದಂತೆ ಸೂತ್ರ ಭಾಷ್ಯ ಅನುಭಾಷ್ಯ, ನ್ಯಾಯವಿವರಣ, ಟೀಕಾಗ್ರಂಥಗಳಲ್ಲಿ

ಅಸ್ಪಷ್ಟವಾದ ವಿಷಯವನ್ನು ಸ್ಪಷ್ಟಮಾಡಿದ್ದಾರೆ. ಇವರದು ಇನ್ನೊಂದುವೈಶಿಷ್ಟ್ಯವೇನಂದರೆ ಇವರುಪ್ರತಿ ಸೂತ್ರದಲ್ಲಿಯೂ ಉಭಯವಾದಿಗಳಿಗೂ ಸಮ್ಮತವಾದ ಪೂರ್ವಮೀಮಾಂಸಾ ರೀತಿಯನ್ನನುಸರಿಸಿಯೇ ಸ್ವಪಕ್ಷದ ಸಮರ್ಥನೆಯನ್ನೂ ಪರಪಕ್ಷದ ನಿರಾಕರಣೆಯನ್ನು ಮಾಡಿ ದ್ವೈತ ಮತವು ಸೂತ್ರಕ್ಕೆ ಹೇಗೆ ಸಂಗತವಾಗುವದೆಂದೂ ಇತರ ಮತಗಳು ಹೇಗೆ ಅಸಂಗತವಾಗುವವೆಂದೂ ಚನ್ನಾಗಿ ಪ್ರೌಢ ವಿಚಾರಗಳಿಂದ ತರ್ಕಶುದ್ಧವಾಗಿ ವಿವೇಚಿಸಿದ್ದಾರೆ. ಚಂದ್ರಿಕೆಯಂದರೆ ವಿದ್ವಚ್ಚಕೋರಗಳಿಗೆ ಆನಂದಗೊಳಿಸುವ ಚಂದ್ರಿಕೆಯೇ ಆಗಿರುವದು. ನ್ಯಾಯಾಮೃತವು ಅದ್ವೈತ ಸಿದ್ಧಿಯೆಂಬ ಗ್ರಂಥದ ಖಂಡನವಾಗಿರುವದು. ಇದರಲ್ಲಿ ನಾಲ್ಕು ಪರಿಚ್ಛೇದಗಳುಂಟು. ಅವುಗಳಲ್ಲಿ ಜಗತ್ತು ಮಿಥ್ಯಾ ಎಂದು ಹೇಳುವ ಪ್ರತಿಪಕ್ಷಿಗಳ ಮತವು ಪ್ರತ್ಯಕ್ಷ ಅನುಮಾನ ಆಗಮಗಳೆಂಬ ಪ್ರಬಲ ಪ್ರಮಾಣಗಳಿಂದ ಅಸಂಗತವಾದದ್ದೆಂದು ಸಿದ್ಧಮಾಡಿ ಜಗತ್ತಿನ ಸತ್ಯತ್ವವನ್ನೂ ಇತರ ದ್ವೈತ ಮತದ ತತ್ವಗಳನ್ನು ಬಹು ವಿಶದವಾಗಿ ವಿವೇಚಿಸಿದ್ದಾರೆ. ಈ ತಮ್ಮ ಗ್ರಂಥದ ವಿಷಯಕ್ಕೆ ಶ್ರೀ ವ್ಯಾಸರಾಯರು ಹೀಗೆ ಹೇಳಿದ್ದಾರೆ.

" श्रीमध्वशास्त्रदुग्धाब्धि धीमंदर महीभृता ॥
आमथ्योद्ध्रियते न्यायामृतं विबुधतृप्तये" ॥

ಶ್ರೀಮಧ್ವಶಾಸ್ತ್ರವೆಂಬ ಕ್ಷೀರಸಮುದ್ರವನ್ನು ಮತಿಯೆಂಬ ಮಂದರ ಪರ್ವತದಿಂದ ಕಡೆದು ವಿಬುಧ ಸಂತೋಷದ ಸಲುವಾಗಿ ನ್ಯಾಯಾಮೃತವು ಉದ್ಧರಿಸಲ್ಪಡುತ್ತದೆ. ಅರ್ಥಾತ್ ದ್ವೈತ ಮತೋಜ್ಜೀವನಕ್ಕೆ ತಾವು ಧನ್ವಂತರಿಯಂತೆ ಇರುವವೆಂಬೀ ಅರ್ಥವನ್ನು ಧ್ವನಿಯಿಂದ ವ್ಯಕ್ತಮಾಡಿದ್ದಾರೆ. ಇದರಿಂದ ತಮ್ಮ ಪಾಂಡಿತ್ಯವನ್ನು ವ್ಯಕ್ತಮಾಡಿದ್ದಾರೆ. ಇದರಿಂದ ತಮ್ಮ ಪಾಂಡಿತ್ಯದ ವಿಷಯದಲ್ಲಿ ಅವರ ಆತ್ಮವಿಶ್ವಾಸವೆಷ್ಟಿತ್ತೆಂಬುವದೂ ಗೊತ್ತಾಗುತ್ತದೆ. ಶ್ರೀ ವ್ಯಾಸರಾಯರು ಶಾಸ್ತ್ರಪಂಡಿತರಾಗಿದ್ದರೂ ಕಾವ್ಯಸಾಹಿತ್ಯದಲ್ಲಿಯಾರೂ ಅವರದು ಉತ್ತಮ ಪ್ರಗತಿಯಿತ್ತೆಂದುಶಬ್ದಾಲಂಕಾರ ಅರ್ಥಾಲಂಕಾರಗಳಿಂದಯುಕ್ತವಾದ ಶಾಸ್ತ್ರಾರ್ಥಸಂಗ್ರಾಹಕವಾದ ನ್ಯಾಯಾಮೃತದ ಮಂಗಳಾಚರಣದ ಒಂದೇ ಶ್ಲೋಕದಿಂದ ಗೊತ್ತಾಗುತ್ತದೆ.

"निखिलगुणनिकायं नित्यनिर्धूतहेयं
शुभतममतिमेयं शुद्धसौख्यादयुपायम् ॥
सकलनिगमगेय सर्वशब्दाभिधेय
नवजलधरकायं नौमि लक्ष्मीसहायम् ॥ १ ॥

ಈ ಶ್ಲೋಕದಿಂದ ಬ್ರಹ್ಮನು ನಿರ್ಗುಣನು ನಿರಾಕಾರನು ಅವಾಚ್ಯನು ಮಾಯಾ ಸಂಬಂಧವನ್ನು ಹೊಂದುವವನು ಎಂದು ಹೇಳುವ ಮತಕ್ಕೆ ಸಂಕ್ಷೇಪವಾಗಿ ಉತ್ತರವನ್ನು ಕೊಟ್ಟು ಅದನ್ನೇ ಇಡೀ ಗ್ರಂಥದಲ್ಲಿ ವಿಶದ ರೀತಿಯಿಂದ ಸ್ಪಷ್ಟೀಕರಿಸಿದ್ದಾರೆ. ನ್ಯಾಯಾಮೃತವು ಅದ್ವೈತ ಸಿದ್ಧಿಯ ಖಂಡನಾತ್ಮಕ ಗ್ರಂಥವೆಂದು ಹಿಂದಕ್ಕೆ ಹೇಳಿದ್ದೇವೆ. ಇದಕ್ಕೆ ಬ್ರಹ್ಮಾನಂದೀಯಂಬ ಗ್ರಂಥವನ್ನು ಖಂಡಿಸುವ ತರಂಗಿಣೀ ಎಂಬ ಸರಸವಾದ ಟಿಪ್ಪಣಿ ಇರುತ್ತದೆ. ತರ್ಕತಾಂಡವವೆಂಬ ಗ್ರಂಥವು ತಾರ್ಕಿಕರ ಖಂಡನದ ಸಲುವಾಗಿಯೇ ಪ್ರವೃತ್ತವಾದದ್ದೆಂದು ಅದರ ಹೆಸರಿನಿಂದಲೇ ತಿಳಿದು ಬರುತ್ತದೆ. ಇದರಲ್ಲಿ ಸರ್ವಜ್ಞನಾದ ಈಶ್ವರನಿಂದ ರಚಿತವಾದುದರಿಂದ ವೇದವು ಪ್ರಮಾಣವೆಂದು ಹೇಳುವ ತಾರ್ಕಿಕರನ್ನು ಕುರಿತು :-ಈಶ್ವರನು ಸರ್ವಜ್ಞನನೆಂದು ಸಿದ್ಧಿಸಬೇಕಾದರೆ ವೇದ ಪ್ರಮಾಣದಿಂದಲೇ. ವೇದವು ಪ್ರಮಾಣವೆಂದು ಸಿದ್ಧಿಸಬೇಕಾದರೆ, ಸರ್ವಜ್ಞನಾದ ಈಶ್ವರನಿಂದ ನಿರ್ಮಿತವಾದದ್ದರಿಂದಲೇ; ಅಂದರೆ ಈಶ್ವರನು ಸರ್ವಜ್ಞನೆಂದು ತಿಳಿದ ಹೊರತು ವೇದಪ್ರಮಾಣವೆಂದು ತಿಳಿಯುವದಿಲ್ಲ; ವೇದಪ್ರಮಾಣವೆಂದು ತಿಳಿದ ಹೊರತು ಈಶ್ವರನು ಸರ್ವಜ್ಞನೆಂದು ತಿಳಿಯುವದಿಲ್ಲ. ಹೀಗೆ ಅನ್ಯೋನ್ಯಾಶ್ರಯವೆಂಬ ದೋಷವನ್ನು ಹೇಳಿದ್ದಾರೆ. ಇದೇ ರೀತಿಯಿಂದ ಅನೇಕ ಯುಕ್ತಿಗಳಿಂದಲೂ ಪ್ರಮಾಣಗಳಿಂದಲೂ ವೇದವು ಸ್ವತಃ ಪ್ರಮಾಣವೆಂದು ಹೃದಯಂಗವಾಗಿ ಸಮರ್ಥಿಸಿದ್ದಾರೆ. ದ್ವೈತವಾದಿಗಳಾದ ತಾರ್ಕಿಕರು ಅದ್ವೈತವನ್ನು ಖಂಡಿಸಿ ದ್ವೈತವನ್ನು ಸಮರ್ಥಿಸುವ ನ್ಯಾಯಾಮೃತ ಗ್ರಂಥವನ್ನು ಅತ್ಯಂತ ಆದರಿಸಿದ್ದರು. ಆದರೆ ತಮ್ಮ ಮತವನ್ನೇ "ತರ್ಕತಾಂಡವದಿಂದ ಖಂಡಿಸಿದ್ದನ್ನು ನೋಡಿ "न्यायामृताऽर्जिता कीर्तिस्तांडवेन विनाशिता,". ಎಂದು ಕೆಲವರು ಸಿಟ್ಟಿನ ಉದ್ಗಾರವನ್ನು ಹೊರಡಿಸಿದ್ದಾರೆ. ವ್ಯಾಸರಾಯರು " तांडवे न विनाशिता " ಎಂದು ಪದಚ್ಛೇದವನ್ನು ಮಾಡಿಕೊಂಡು ನ್ಯಾಯಾಮೃತದಿಂದ ಸಂಪಾದಿಸಿದ ಕೀರ್ತಿಯು ತರ್ಕತಾಂಡವ

ದಲ್ಲಿಯಾದರೂ ನಾಶವಾಗದೆ ಊರ್ಜಿತವಾಯಿತು ಎಂದು ಉತ್ತರವನ್ನು ಕೊಟ್ಟರೆಂದು ಐತಿಹ್ಯವದೆ. ಇರಲಿ,ಈಮೂರುಗ್ರಂಥಗಳು ವ್ಯಾಖ್ಯಾನತ್ರಯವೆಂದು ಪ್ರಸಿದ್ಧವಾಗಿರುತ್ತವೆ ಭೇದೋಜ್ಜೀವನವು ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್ '' ಎಂದು ಪ್ರತಿವಾದಿಗಳ ಅನುಮಾನದಲ್ಲಿ ಬಹಳ ದೋಷಗಳನ್ನು ಹೇಳಿ ಜಗತ್ತು ಸತ್ಯವೆಂತಲೂ ಜೀವೇಶ್ವರರು ಯಾವಾಗಲೂ ಭಿನ್ನರೆಂತಲೂ ಅನೇಕ ರೀತಿಯಿಂದ ಸಾಧಿಸಿದ್ದಾರೆ. ಮಂದಾರಮಂಜರೀ ಎಂಬ ಹೆಸರುಳ್ಳ ಮೂರು ಗ್ರಂಥಗಳು ಮಾಯಾವಾದಖಂಡನ, ಮಿಥ್ಯಾತ್ವಾನುಮಾನಖಂಡನ, ಉಪಾಧಿಖಂಡನ, ಎಂಬ ಶ್ರೀಮಧ್ವಾಚಾರ್ಯರ ಗ್ರಂಥಗಳಿಗೆ ಇರುವ ಜಯತೀರ್ಥರ ಟೀಕಾಗ್ರಂಥಕ್ಕೆ ಟಿಪ್ಪಣಿ ರೂಪಗಳಾಗಿರುವವು ಇವರ ಗ್ರಂಥಗಳಲ್ಲಿ ನ್ಯಾಯಾಮೃತ, ಭೇದೋಜ್ಜೀವನ, ತರ್ಕತಾಂಡವ ಈ ಮೂರು ಗ್ರಂಥಗಳು ಸ್ವತಂತ್ರವಾದವುಗಳು ಉಳಿದವುಗಳು ಟಿಪ್ಪಣಿ ರೂಪಗಳಾಗಿದ್ದರೂ ಸ್ವತಂತ್ರ ಗ್ರಂಥಗಳಷ್ಟು ಮಹತ್ವವನ್ನು ಪಡೆದಿರುತ್ತವೆ ಇವೆಲ್ಲ ಗ್ರಂಥಗಳನ್ನು ಹೆಚ್ಚಿಗೆ ವಿಮರ್ಶಿಸ ಹೋದರೆ ವಾಚಕರು ಬೇಸರಬಹುದೆಂದು ಇಲ್ಲಿಗೆ ಲೇಖಣಿಗೆ ವಿಶ್ರಾಂತಿಯನ್ನು ಕೊಡುತ್ತೇವೆ.

---

# ಪಂಪಾಸರೋವರ!

(ಕಳೆದ ಡಿಶೆಂಬರಿನಲ್ಲಿ ವಿಜಯನಗರವನ್ನು ನೋಡಹೋದಂದು
ಪಂಪಾಸರಸ್ಸನ್ನು ಕಂಡು ಬಗೆ ಕೆರಳಿ ಬರೆದುದು )

ಯುಗ ಯುಗಾಂತರಗಳ ಅನಂತ ಚಿರ ನಿದ್ರೆಯಲಿ
ನಿಷ್ಪಂದ ಮೂಕತೆಯ ಜಲಸಮಾಧಿಯೊಳಿಲ್ಲಿ
ಸ್ತಬ್ಧವಾಗಿದೆ ಸರೋವರ ದೇಹ—ದಡದಲ್ಲಿ
ರಾಮಾಯಣದ ಮಹಾಸ್ವಪ್ನ ಚಿನ್ಮುದ್ರೆಯಲಿ
ಶೈಲತಾಪಸಿಯರ್ಕಳಮರವಾಣಿಯಿನೇಳ್ವ
ಮಾಧುರ್ಯ ತೂರ್ಯದಲಿ, ತೂಗುತಿಹ ಕಿಷ್ಕಿಂಧ
ತೊಟ್ಟಿಲಲಿ ಕಾವ್ಯ ಶಿಶು ವಾಲ್ಮೀಕಿ-ಕಾವ್ಯಾಂಧ
ಮೋಹದಲಿ-ಮಲಗಿಹನು. ಅವನ ನಲ್ನುಡಿ ಕೇಳ್ವ
ಚಪಲತೆಯಿನಿದೊ, ಮಹಾರಣ್ಯ ತಣಿವನ್ನೆವರ
ಕಾತರೋನ್ಮಾದದಲಿ ಹಗಲಿರುಳು ಕುಣಿಯುತಿದೆ!
ಇದೊ ವಿರಾಟವಾಗುತಿದೆ ಮತ್ತೆ ಕಿಷ್ಕಿಂಧದೆದೆ!
ಸಮುದ್ರವಾಗಿದೆ ಮಹಾಮಾನಸ ಸರೋವರ!!
ಭಾವ ಸೀತಾನ್ವೇಷಣದಿ ಮತ್ತೆ ಕನಲುತಿದೆ
ಕಾವ್ಯ ರಾಮನ ವಿರಹ ಪ್ರೇಮದುನ್ಮಾದದಿ!

—ಶ್ರೀಪರಮೇಶ್ವರ

# ವಿಜಯನಗರ ಸಾಮ್ರಾಜ್ಯವು ಉದಯಿಸದಿದ್ದರೆ?

( ಲೇಖಕರು:— ಬುರ್ಲಿ ಬಿಂದುಮಾಧವಾಚಾರ್ಯರು ಬಾಗಿಲುಕೋಟೆ. )

ಕರ್ನಾಟಕ ರಾಜಕೀಯ ಪರಿಷತ್ತಿನ ಕಾಲಕ್ಕೆ ಅಧ್ಯಕ್ಷರಾಗಿ ಬಂದ ಬನಾರಸದ ಶ್ರೀ ಶ್ರೀಪ್ರಕಾಶರು ಇಲ್ಲಿ [ ಕರ್ನಾಟಕದಲ್ಲಿ ] ಜೀವಂತವಿದ್ದ ಆರ್ಯ ಸಂಸ್ಕೃತಿಯನ್ನೂ ಆಚಾರ, ವಿಚಾರ, ಪರಂಪರೆಗಳನ್ನೂ ಕಂಡು ಬೆರಗಾಗಿ ಇವೆಲ್ಲವೂ ಇಲ್ಲಿ ಹೇಗೆ ಜೀವಂತ ಉಳಿಯಿತು? ಎಂದು ಉದ್ಗಾರ ತೆಗೆದರು. ಆಗ ನನ್ನ ತಲೆಯಲ್ಲಿ ಇದೆಲ್ಲವೂ ವಿಜಯನಗರ ಸಾಮ್ರಾಜ್ಯದ ಪುಣ್ಯವೆಂಬ ವಿಚಾರಗಳು ಬರಹತ್ತಿದವು ವಿಜಯ ನಗರ ಸಾಮ್ರಾಜ್ಯವು ಉದಯಿಸದಿದ್ದರೆ ದಕ್ಷಿಣ ಹಿಂದುಸ್ಥಾನದ — ಆರ್ಯ ಸಂಸ್ಕೃತಿಯ — ಹಿಂದೂ ಧರ್ಮದ ಗತಿಯು ಏನಾಗುತ್ತಿತ್ತು? ಎಂಬ ಕಲ್ಪನೆಗಳು ಬರಹತ್ತಿದವು. ಅವನ್ನೇ ಇಲ್ಲಿ ಸಂಗ್ರಹವಾಗಿ ಬರೆಯಲು ಯತ್ನಿಸಿದ್ದೇನೆ

೧೩-೧೪ನೇ ಶತಮಾನಗಳೆಂದರೆ, ಭಾರತದ ಭಾಗ್ಯಹೀನತೆಯ ಕಾಲ ಎಲ್ಲಿ ನೋಡಿದರೂ ಕಗ್ಗತ್ತಲೆಯೇ ಮುಸುಕಿ ಹೋಗಿತ್ತು ವೇದಧರ್ಮದ ಮೇಲೆ ಆಘಾತಗಳಾಗಿ ಧರ್ಮವು ಜರ್ಜರಿತವಾಗತೊಡಗಿತ್ತು. ಆರ್ಯ ಸಂಸ್ಕೃತಿಯು ಜೀವಂತ ಉಳಿಯುವದೇ ಎಂಬ ಸಂಶಯವು ಉಂಟಾಗಿತ್ತು. ಆರ್ಯ ತತ್ವಜ್ಞಾನದ ರಹಸ್ಯವು ಮಲಿನವಾಗಿ ವೇದಾಂತದ ದುರುಪಯೋಗವಾಗತೊಡಗಿತ್ತು ಧೀರ ವೃತ್ತಿಯ ತ್ಯಾಗವು ಮೈಗಳ್ಳರು ವೈಯಕ್ತಿಳಿಸಿಕೊಳ್ಳುವ ಸಾಧನವಾಗಿತ್ತು. ಮ್ಲೇಂಛರ ಉಗ್ರಸ್ವರೂಪದಲ್ಲಿ ಭಾರತೀಯರ ಕ್ಷಾತ್ರ ವೃತ್ತಿಯು ಮಾಯವಾಗಿ, ನಮ್ಮಷ್ಟಕ್ಕೆ ನಾವು ಸುಖದಿಂದ ಇದ್ದರೆ ಸಾಕು ಪರರ ಗೊಡವೆ ನಮಗೇಕೆ? ಧರ್ಮಕ್ಕೆ ಇದು ಕಲಿಕಾಲ, ವೇದಾಂತಿಗಳಿಗೆ ಈ ವ್ಯವಹಾರ ಏತಕ್ಕೆ ಬೇಕು ಎಂಬ ಇವೇ ಮೊದಲಾದ ಹೇಡಿವಿಚಾರಗಳು ಸಮಾಜದಲ್ಲಿ ಮನೆಮಾಡಿಕೊಂಡಿದ್ದವು. ವೇದದಲ್ಲಿ ವರ್ಣಿಸಿದ ಬ್ರಹ್ಮತೇಜಸ್ಸೂ ಕ್ಷತ್ರಿಯರ ಬಾಹುಬಲವೂ ಕಟ್ಟು ಕಥೆಗಳಾಗಿ ಪರಿಣಮಿಸತೊಡಗಿದ್ದವು. ಆರ್ಯ ತತ್ವಜ್ಞಾನವೆಲ್ಲವೂ, ಯಾರೋ ಹುಚ್ಚರು ಬಡಬಡಿಸಿದ ಮಾತುಗಳೇನೋ ಎಂಬ ಭ್ರಮೆಯು ಮೆಲ್ಲ ಮೆಲ್ಲನೆ ನೆಲೆಯೂರಹತ್ತಿತ್ತು. ಆರ್ಯ ಸಂಸ್ಕೃತಿಯು ದಿಕ್ಕುಗಾಣದೆ ತನ್ನನ್ನು ರಕ್ಷಿಸುವ ಆರ್ಯರಿಲ್ಲವೇ ಎಂದು ಗೋಳಿಡುವ ಸಮಯದಲ್ಲಿ ವಿಜಯನಗರದ ರಾಜ್ಯವು ಉದಯವಾಯಿತು

ವಿಜಯನಗರ ರಾಜ್ಯಪ್ರವರ್ತಕರಾದ ಶ್ರೀವಿದ್ಯಾರಣ್ಯರು ಆರ್ಯ ತತ್ವಜ್ಞಾನದ ಮೇಲಿನ ಧೂಳನ್ನು ಝಾಡಿಸಿ ಅದರ ದಿವ್ಯ ಪ್ರಕಾಶವನ್ನು ಹೊರಗೆಡವಿದರು. ಯಾವ ತತ್ವಜ್ಞಾನದಿಂದ ಭಾರತವು ಇಲ್ಲಿಯವರೆಗೆ ಜೀವಂತವಿರುವದೋ ಯಾವ ತತ್ವಜ್ಞಾನವು ಭಾರತೀಯರಲ್ಲಿ ದಿವ್ಯ ತೇಜನ್ನೂ ಸ್ಫೂರ್ತಿಯನ್ನೂ ಉಂಟು ಮಾಡುವದೋ ಆ ತತ್ವಜ್ಞಾನವನ್ನೂ ಆ ಆರ್ಯ ಸಂಸ್ಕೃತಿಯನ್ನೂ ರಕ್ಷಿಸದಿದ್ದರೆ, ಅದರ ಫಲವಾದ ಜ್ಞಾನವು ಯಾರಿಗೂ ಶಕ್ಯವಿಲ್ಲೆಂದೂ, ಈ ಯಜ್ಞ ಚಕ್ರವನ್ನು ಸಾಗಿಸದಿರುವದು ದೇವದ್ರೋಹವೆಂದೂ ಅದನ್ನು ರಕ್ಷಿಸುವದೇ ಈಗಿನ ಕಾಲಧರ್ಮವೆಂದೂ ಉಪದೇಶಿಸಿ ವಿದ್ಯಾರಣರು ಧರ್ಮದ ಹೆಸರಿನಿಂದ ಮೈಯುಳಿಸಿಕೊಳ್ಳುವ ಮೈಗಳ್ಳರನ್ನು ಬೈಲಿಗೆಳೆದು ತೇಜಸ್ವಿಗಳನ್ನಾಗಿ ಮಾಡಿದರು. ಜ್ಞಾನಿಯಾಗಿ ಆತ್ಮಸ್ಥಿತಿಗೆ ಯಾವ ಕ್ಷತಿಯೂ ಉಂಟಾಗದಂತೆ ವೇದಧರ್ಮವನ್ನು ರಕ್ಷಿಸುವದೇ ವೀರ (ನಿಜವಾದ) ಧರ್ಮವೆಂದೂ ಯುಗಧರ್ಮವೆಂದೂ ಅದನ್ನಾಚರಿಸುವದು ಶಕ್ಯವಿದೆಯೆಂದೂ ಜ್ಞಾನಿನಾ ಚರಿತುಮ್ ಶಕ್ಯಮ್ ಸಮ್ಯಕ್ ರಾಜ್ಯಾದಿ ಲೌಕಿಕಮ್ ಎಂಬ ಉಕ್ತಿಯನ್ನು ಸಾರಿ, ಪ್ರಸ್ಥಾಪಿಸಿದರು. ಆರ್ಯ ಧರ್ಮದ ತಿರುಳಾದ ವೀರಧರ್ಮದ ಪ್ರವರ್ತಕರಾದರು ವ್ಯಕ್ತಿಯ ಜೀವನದ ಕಲ್ಪನೆಯನ್ನು ವಿಸ್ತರಿಸಿ ಸಾಂಘಿಕ ಜೀವನದ ಕಲ್ಪನೆಯ ಪ್ರಸಾರ ಮಾಡಿದರು. ಇದೇ ಕಲ್ಪನೆಯನ್ನೇ ಶಾಂತಕವಿಗಳು ಈ ರೀತಿಯಲ್ಲಿ ಹಾಡಿದ್ದಾರೆ.

ಏಳುನಾರಾಯಣ ಕಟ್ಟುಗ್ರಂಥವ। ಏಳು ಪಂಪಾಕ್ಷೇತ್ರಕೆ।
ಗಾಳಿಗಂಟುಗಳೋದಿದೇತಕೆ। ಏಳು ಈ ಕ್ಷಣಮಾತ್ರಕೆ॥

ಹೀಗೆ ಧರ್ಮಾಭಿಮಾನಿಗಳನ್ನೂ ತಪಸ್ವಿಗಳನ್ನೂ ಹುರಿದುಂಬಿಸಿ, ನಿಜವಾದ ತತ್ವಜ್ಞಾನದ ಕಡೆಗೆ, ಅವರನ್ನು ಹೊರಳಿಸಿದರು. ವಿದ್ಯಾರಣ್ಯರು ಭಾರತವನ್ನು ಜೀವಂತಗೊಳಿಸಿದರು. ವಿಜಯನಗರದ ರಾಜ್ಯವು ಉದಯಿಸದಿದ್ದರೆ, ಈ ಹೊಸ ತತ್ವಗಳು ಉದಯವಾಗದೆ, ಆರ್ಯತತ್ವ ಜ್ಞಾನದ ಸಂಸ್ಕೃತಿಯ ಗತಿಯು ಏನಾಗುತ್ತಿತ್ತೋ ನಾವರಿಯೆವು !

ಇನ್ನೊಂದು ದೃಷ್ಟಿಯಿಂದ ವಿಚಾರಿಸೋಣ. ಮುಸಲ್ಮಾನರ ಹಾವಳಿಯನ್ನು ಅಡ್ಡಗಟ್ಟಲು ವಿಜಯನಗರದ ರಾಜ್ಯದಂಥ ಗಂಡುಗಲಿಗಳ ರಾಜ್ಯವು ಹುಟ್ಟಿರದಿದ್ದರೆ, ದಕ್ಷಿಣಹಿಂದುಸ್ಥಾನವು ಈ ರೂಪದಿಂದ ನಮ್ಮ ದೃಷ್ಟಿಗೆ ಬೀಳುತ್ತಿರಲಿಲ್ಲ ಸದ್ಯಕ್ಕೆ ಕಾಣುವ ಗುಡಿ ಗೋಪುರಗಳು ಮಾಯವಾಗಿ ಪುಣ್ಯಕ್ಷೇತ್ರಗಳು ಹಾಳಾಗಿ ಅವುಗಳಲ್ಲಿ ಒಡಮೂಡಿದ ನಮ್ಮ ಕಲೆ, ಸಂಸ್ಕೃತಿ ಮೊದಲಾದವುಗಳೆಲ್ಲವೂ ಹೇಳಹೆಸರಿಲ್ಲದೆ ಹೋಗುತ್ತಿದ್ದವು. ಇಂದಿಗೂ ನಮ್ಮ ಕಣ್ಣಿಗೆ ಬೀಳುವ ಆರ್ಯತತ್ವಜ್ಞಾನದ ಶಾಖೆಗಳಾದ ದ್ವೈತ ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ, ಜೈನ ಮೊದಲಾದ ತತ್ವಜ್ಞಾನದ ಸೂಕ್ಷ್ಮರೂಪಗಳೂ, ಅವುಗಳ ಆಚರಣೆಯೂ, ಪರಂಪರೆಯೂ, ಎಂದೋ ಮುಳುಗಿ ಹೋಗುತ್ತಿದ್ದವು ಎಲ್ಲ ಜಾತಿ ಪಂಗಡಗಳು ಧ್ವಂಸವಾಗಿ ಉತ್ತರ ಹಿಂದುಸ್ಥಾನದಂತೆಯೇ ನಮ್ಮ ಸ್ಥಿತಿಯೂ ಆಗುತ್ತಿತ್ತು. ಉತ್ತರದಲ್ಲಿ ಈ ತತ್ವಜ್ಞಾನದ ಸೂಕ್ಷ್ಮರೂಪಗಳೂ, ಪರಂಪರೆಯೂ ಕಣ್ಣಿಗೆ ಬೀಳಲಾರವು. ಇದೇ ಶ್ರೀ. ಶ್ರೀಪ್ರಕಾಶರ ಆಶ್ಚರ್ಯಕ್ಕೆ ಕಾರಣವು. ವಿಜಯನಗರವು ಉದಯಿಸದಿದ್ದರೆ, ಸಮ್ಮಿಶ್ರವಾದ ಒಂದು ಮಾನವರ ಗುಂಪು ಕಣ್ಣಿಗೆ ಬೀಳುತ್ತಿತ್ತು

ಮೃಗರಾಜನು ಕ್ರೀಡಿಸಿ ಗವಿಯನ್ನು ಸೇರಿದ ನಂತರ ವನದಲ್ಲೆಲ್ಲ ನರಿಗಳ ಚಲ್ಲಾಟವೇ ಆಗುವಂತೆ ಭಾರತದ ವೀರಶ್ರೀಯು ಮಂದವಾದ ಕೂಡಲೆ ಮುಸಲ್ಮಾನರ ಉಪಟಳಕ್ಕೆ ಮೇರೆ ದಪ್ಪಿತ್ತು. ಎಲ್ಲಿ ನೋಡಿದಲ್ಲೆಲ್ಲ ಕೊಲೆಸುಲಿಗೆಗಳೂ ಪಾತಿವ್ರತ್ಯ ಭಂಗವೂ ದೇವಾಲಯಗಳ ನಾಶವೂ ತೆರಪಿಲ್ಲದೆ ನಡೆದಿದ್ದವು. ಕ್ರೂರವಾದ ಹುಲಿಯನ್ನು ಕಂಡು ಎರಳೆಗಳು ಎದೆಯೊಡೆದು ದಿಕ್ಕೆಡುವಂತೆ, ಮುಸಲ್ಮಾನರ ಈ ಉಗ್ರಸ್ವರೂಪವನ್ನು ಕಂಡು ಸಹಿಸಲಾರದೆ ಹತವೀರ್ಯರಾದ ಭಾರತೀಯರೆಲ್ಲರೂ, ಬಾಯಿಯಲ್ಲಿ ಅಕ್ಕಿಕಾಳು ಹಾಕಿಕೊಂಡು, ಜೀವರಕ್ಷಣೆಯು ಸಲುವಾಗಿ, ಅಲೆಯುಹತ್ತಿದಾಗ ಇಡೀ ಭಾರತದಲ್ಲಿ ಇವರನ್ನು ಅಡ್ಡಗಟ್ಟುವ ಗಂಡುಗಲಿಗಳು ಒಬ್ಬರೂ ಇರಲಿಲ್ಲ. ಇಡೀ ಭಾರತವು ಯವನ ಸಂಸ್ಕೃತಿಮಯವಾಗುವ ಹೊತ್ತು ಬಂದಿತ್ತು. ಇಂಥ ವೇಳೆಯಲ್ಲಿ ವಿದ್ಯಾರಣ್ಯರಂಥ ತಪಸ್ವಿಗಳೂ ಹುಕ್ಕ ಬುಕ್ಕರಂಥ ಗಂಡುಗಲಿಗಳೂ, ಉದಯಿಸಿ, ಮುಸಲ್ಮಾನರ ಹಾವಳಿಯನ್ನು ಅಡ್ಡಗಟ್ಟಿ ಅವರ ಉಗ್ರಸ್ವರೂಪವನ್ನು ಅಡಗಿಸಿ, ವಿಜಯನಗರ ರಾಜ್ಯವನ್ನು ಸ್ಥಾಪಿಸಿದರು

ದಕ್ಷಿಣಹಿಂದುಸ್ಥಾನದಲ್ಲಿ **ಮುಸಲ್ಮಾನರನ್ನು ಅಡ್ಡಗಟ್ಟಿ ಎದುರಿಸಿದವರಲ್ಲಿ ಹುಕ್ಕಬುಕ್ಕ ವಿದ್ಯಾರಣ್ಯರೇ ಮೊದಲನೇಯವರು** ದಕ್ಷಿಣಹಿಂದುಸ್ಥಾನವೇ ಏಕೆ ? ಇಡೀಭಾರತದಲ್ಲಿಯೇ ಎಂದರೂ ಸಲ್ಲುವದು. ಇಷ್ಟೇ ಅಲ್ಲ, ಇದಕ್ಕೂ ಹೆಚ್ಚಿನ ಮಹತ್ವವೆಂದರೆ, ಭಾರತವು ಕಂಗೆಟ್ಟು ಕಂಗಾಲಾದಕಾಲದಲ್ಲಿ ಭಿನ್ನ ಭಿನ್ನ ರಾಜ ಕುಲಗಳು ಸ್ವಾರ್ಥಪರವಾಗಿ, ಬೇಕಾದ್ದನ್ನು ಮಾಡಲು ಸಿದ್ಧವಿದ್ದ ಕಾಲದಲ್ಲಿ ಎಲ್ಲರನ್ನೂ ಒಟ್ಟುಗೂಡಿಸಿ, ಪಾರತಂತ್ರ್ಯಸ್ಥಿತಿಯಲ್ಲಿದ್ದರೂ ಕೂಡ ಬಲಿಷ್ಠರೂ ಕ್ರೂರರೂ, ಪರಧರ್ಮೀಯರೂ ಆದ ಶತ್ರುಗಳ ಕೂಡ ಹೋರಾಡಿ ಧರ್ಮರಾಜ್ಯ (ದೇವರಾಜ್ಯ) ವನ್ನು ಸ್ಥಾಪನೆಮಾಡಿದ್ದು ಭಾರತೀಯ ಇತಿಹಾಸದಲ್ಲಿಯೇ ಇದು ಮೊದಲನೆಯ ಪ್ರಸಂಗವು. ಇಲ್ಲಿಯ ವರೆಗೆ ಭಾರತೀಯ ರಾಜರು ತಮ್ಮ ಸೈನ್ಯಬಲದಿಂದಲೇ ಹೋರಾಡುತ್ತಿದ್ದರು. ಜನಾಂಗಕ್ಕೆ ಜನಾಂಗವೇ ಜಾಗೃತಗೊಳಿಸಿ ಸಂಘಶಕ್ತಿಯ ಅದ್ಭುತ ಸಾಮರ್ಥ್ಯವನ್ನು ತೋರಿಸಿದ ಮೊದಲನೆಯ ಪ್ರಸಂಗವಿದೇ ಕ್ಷಾತ್ರತೇಜಸ್ಸಿನೊಂದಿಗೆ, ಬ್ರಹ್ಮತೇಜಸ್ಸು ಬೆರೆತರೆ, ಅದರ ಪ್ರಖರ ತೇಜಸ್ಸನ್ನು ಸಹಿಸುವದು ಎಂಥ ಬಲಿಷ್ಠರಿಗೂ, ಅತ್ಯಂತ ಕಠಿಣವೆಂಬುದು ಜಗತ್ತಿಗೆ ತಿಳಿಯಿತು. ಹೀಗೆ ರಾಷ್ಟ್ರವು ವಿಪತ್ತಿನಲ್ಲಿರುವಾಗ ಇಡೀ ಜನಾಂಗವೇ ಅದರ ರಕ್ಷಣೆಯನ್ನು ಗೈಯುವದು ಅವಶ್ಯವೆಂದೂ, ಜನಾಂಗವು ಜಾಗೃತವಾದರೆ ಅದರಲ್ಲಿ ಅದ್ಭುತ ಸಾಮರ್ಥ್ಯವು ಉಂಟೆಂದೂ ಹೊಸ ತತ್ವಗಳ ಪ್ರಚಾರವನ್ನು ಈ ರಾಜ್ಯವು ಮಾಡಿತು.

ವಿಜಯನಗರ ರಾಜ್ಯದ ಉದಯವನ್ನು ವಿಚಾರಿಸಿದಂತೆ ಅದರಲ್ಲಿ ಹೊಸ ಹೊಸ ತತ್ವಗಳೇ ಎದ್ದು ಕಾಣುತ್ತವೆ. ಭಿನ್ನ ಭಿನ್ನ ಜಾತಿ ಭಿನ್ನ ಭಿನ್ನ ಸಂಘ ಭಿನ್ನ

ಭಿನ್ನ ಧರ್ಮಗಳುಳ್ಳ ಜನಾಂಗಗಳನ್ನು ಒಂದೆಡೆಗೆ ಒಂದೇ ಮಂತ್ರದಿಂದ ಒಟ್ಟುಗೂಡಿಸಿದ್ದೇ ಆಶ್ಚರ್ಯದ ಸಂಗತಿಯು. ಆ ಜನಜೀವನದ ಜೀವಾಳವನ್ನು ಹುಡುಕಿ ತೆಗೆದುದು ಅದಕ್ಕೂ ಆಶ್ಚರ್ಯ. ಧರ್ಮಜೀವನವಾದ ಭಾರತವು ಜಾಗೃತ ಉಳಿಯಬೇಕಾದರೆ, ಗೋ, ದೇವ, ದ್ವಿಜಪ್ರತಿಪಾಲನನೇ ಹಿಂದುರಾಜ್ಯದ ಧ್ಯೇಯವಿರಬೇಕೆಂದು ಕಂಡುಹಿಡಿದು, ವಿಜಯನಗರದ ರಾಜ್ಯವು ಈ ತತ್ವಗಳ ಪುರಸ್ಕಾರಕ್ಕಾಗಿಯೆ ಉದಯವಾಗಿವೆ ಎಂದು ಸಾರಿದರು.

निर्माय विद्यानगरम् । नृपहरिहराभिदम् ॥
गोदेव द्विजरक्षार्थं । अभ्यषिंचन् नृपासने ॥.

ಇದೇ ಮಂತ್ರವನ್ನೇ ಜಪಿಸಿ, ಶಿವಾಜಿಮಹಾರಾಜರಂಥ ವೀರ ಕ್ಷತ್ರಿಯರು ಸ್ಫೂರ್ತಿಗೊಂಡರು ಹೀಗೆ ವಿಜಯನಗರ ರಾಜ್ಯದ ಅಸ್ತಿಭಾರವನ್ನು ಧರ್ಮದ ಮೇಲೆ ಕಟ್ಟಿದ್ದಲ್ಲದೆ, ವೇದಕಾಲದ ಧರ್ಮರಾಜ್ಯ (ದೇವರಾಜ್ಯ) ವನ್ನು ಪ್ರಾರಂಭ ಮಾಡಿದರು. ಹಿಂದುರಾಜರು ರಾಜ್ಯವು ವ್ಯಕ್ತಿಗತವೆಂದೂ, ಅದು ತಮ್ಮ ಸ್ವತ್ತೆಂದೂ,ಭಾವಿಸಿ,ಮನಬಂದಂತೆ,ನಡೆಯ ಹತ್ತಿದ್ದರು. ಇದರಿಂದ ರಾಷ್ಟ್ರದ ಮೇಲೆ ವಿಪತ್ತುಗಳು ಬಂದರೂ, ಆರ್ಯ ಸಂಸ್ಕೃತಿಯು ನಷ್ಟವಾಗುವ ಹೊತ್ತು ಬಂದರೂ, ಅವರು ಕಣ್ಣು ತೆಗೆಯುತ್ತಿದ್ದಿಲ್ಲ. ಅವಿವೇಕಿಗಳಂತೂ, ರಾಜ್ಯಮದದಿಂದ ಮದವೇರಿ ಪ್ರಜಾಪೀಡೆಯನ್ನೇ ಉಂಟು ಮಾಡುತ್ತಿದ್ದರು. ಈ ಎಲ್ಲ ಅನರ್ಥಗಳನ್ನು ತಪ್ಪಿಸುವದಕ್ಕಾಗಿ, ವಿಜಯನಗರ ರಾಜ್ಯಪ್ರತಿಷ್ಠಾಪನಾಚಾರ್ಯರಾದ ವಿದ್ಯಾರಣ್ಯರು ತಾವು ವೇದಧರ್ಮ ಪುಗಸ್ಕರ್ತರೆಂದೂ ಆ ಕಾಲದ ರಾಜ್ಯಪದ್ಧತಿಯನ್ನೇ ನೆಲೆಗೊಳಿಸುವವರೆಂದೂ ಅದಕ್ಕಾಗಿ ತಾವು ಸ್ಥಾಪಿಸಿದ ರಾಜ್ಯವು ಮಾನವರ ರಾಜ್ಯವಲ್ಲವೆಂದೂ, ದೇವರಾಜ್ಯವೆಂದೂ ಸಾರಿದರು. ಈ ಪಟ್ಟವನ್ನು ಆಳುವವರು ಶ್ರೀ ವಿರೂಪಾಕ್ಷನ ಪ್ರತಿನಿಧಿಯೆಂದು ಹೇಳಿದರು. ಆದ್ದರಿಂದಲೇ ಬುಕ್ಕರಾಯನು ತಾನು "ಧರ್ಮಪಾದಪ" ನೆಂದು ಹೇಳಿಕೊಂಡಿದ್ದಾನೆ. ವಿಜಯನಗರದ ದೇವರಾಯನು ಕೊರಿಸಿದ ಸಂಸ್ಕೃತ ಕನ್ನಡ ಶಾಸನಗಳಲ್ಲ ಕೊನೆಗೆ ರಾಜರ ಅಂಕಿತ (ಸಹಿ) ವು ಇರದೆ "ವಿರೂಪಾಕ್ಷ" ವೆಂಬ ದೇವರ ಅಂಕಿತವಿರುವದು. ಪಟ್ಟದ ಮೇಲೆ ಕುಳಿತು ರಾಜನು ತಾನು ರಾಜನಲ್ಲವೆಂದೂ ದೇವರ ಪ್ರತಿನಿಧಿಯೆಂದೂ, ಜನಸೇವೆಯೇ ತನ್ನ ಕರ್ತವ್ಯವೆಂದೂ ತಿಳಿಯುವ ವೇದಕಾಲದ ರಾಜ್ಯಪದ್ಧತಿಯು ಮತ್ತೆ ವಿಜಯನಗರ ರಾಜ್ಯದಲ್ಲಿ ಪ್ರಾರಂಭವಾಯಿತು. ಇಂಥ ಉದಾತ್ತ ಧರ್ಮನೀತಿಗಳ ತಳಹದಿಯಮೇಲೆ ಕಟ್ಟಲ್ಪಟ್ಟ ವಿಜಯನಗರ ಸಾಮ್ರಾಜ್ಯಕ್ಕೆ ಇದರ ಬುಡದಲ್ಲಿ ನೀತಿಯು ಅಸ್ತಿವಾರವೇ ಇಲ್ಲವೆಂದು ಪ್ರತಿಪಾದಿಸುವ ರಿಯಾಸತಕಾರರಾದ ಸರದೇಸಾಯಿಯವರಿಗೆ ಏನೆನ್ನಬೇಕೋ ತಿಳಿಯದು!

ಮುಸಲ್ಮಾನ ರಿಯಾಸತ:—

ಪು ೩೮೯. (ख) नीतिमत्तेचा अभाव.

........ पण ह्या हिंदु राज्याच्या पायास न्याय व नीति ह्यांचि भर नव्हति........प्रजेच्या किंवा राष्ट्राच्या सबधाने आपली अमूक एक जबाबदारी आहे आणि स्वत: त्रास सोसून ती जबाबदारी पार पाडिली पाहिजे अशी भावना विजयनगरांत राज्यकर्त्यांच्या ठिकाणीं उत्पन्न झालेली नाहि...

ಇತ್ಯಾದಿ ಅನೇಕ ಅತ್ಯಂತ ಅಸಹನೀಯ ಆರೋಪಗಳನ್ನು ಮಾಡಿದ್ದು ನೋಡಿ, ಕೆಡಕೆನಿಸುತ್ತದೆ. ಕೇವಲ ತಮ್ಮನ್ನು ಹೊಗಳಿಕೊಳ್ಳುವ ಭರದಲ್ಲಿ ಪರರನ್ನು ನಿಂದಿಸುವದು ಯೋಗ್ಯವಾಗಲಾರದು. ಸರದೇಸಾಯಿಯರು ಮಹಾರಾಷ್ಟ್ರಾಭಿಮಾನದ ದೃಷ್ಟಿಯನ್ನು ಬದಿಗಿರಿಸಿ, ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ವಿಜಯನಗರದ ರಾಜ್ಯದ ಗುರಿಯನ್ನೇ ಶ್ರೀಛತ್ರಪತಿ ಶಿವಾಜಿಮಹಾರಾಜರು ಅನುಸರಿಸಲಿಲ್ಲವೇ ? ವಿಜಯನಗರದ ರಾಜ್ಯವು ಮೇಲೆ ವರ್ಣಿಸಿದ ತತ್ವಗಳಂತೆ, ಎಲ್ಲಿಯವರೆಗೆ ನಡೆದರೋ ಅಲ್ಲಿಯವರೆಗೆ, ಅವರ ಉನ್ನತಿಯಾಯಿತು; ಎಂದು ತತ್ವಚ್ಯುತರಾದರೋ ಅಂದೇ ಅಳಿಗಾಲವೂ ಪ್ರಾರಂಭವಾಯಿತು. ಮರಾಠರ ಇತಿಹಾಸವು ಇದನ್ನೇ ಹೇಳುವದಿಲ್ಲವೇ ? ಇತಿಹಾಸಜ್ಞರು ಇದಕ್ಕೆ ಯೋಗ್ಯ ಉತ್ತರವೀಯಬೇಕು.

ಅಂತೂ ವಿಜಯನಗರರಾಜ್ಯವು ಉದಯಿಸಿ, ನವತತ್ವಗಳಪ್ರಚಾರವನ್ನುಮಾಡಿ ಹಿಂದೂಧರ್ಮದ ಮೇಲೆ ಆರ್ಯಸಂಸ್ಕೃತಿಯ ಮೇಲೆ,ಮಾಡಿದ ಅನಂತ ಉಪಕಾರಗಳನ್ನು ಯಾವ ಭಾರತೀಯನೂ ಮರೆಯುವಂತಿಲ್ಲ. ಇಂದಿನ ಕರ್ನಾಟಕದ ನವಯುವಕರು ಈ ದಿವ್ಯ ತತ್ವಗಳ ತಳಹದಿಯಮೇಲೆ ನಿಂತು, ದೇವರಾಜ್ಯವನ್ನು ಮತ್ತೆ ನೆಲೆಗೊಳಿಸಬೇಕೆಂದು ಬಿನ್ನವಿಸಿ ಈ ಬರಹವನ್ನು ಇಲ್ಲಿಗೆ ಮುಗಿಸುತ್ತೇನೆ.

---

**ಶ್ರೀ. ಎನ್. ಅನಂತಾಚಾರ್ಯ**
ಎಂ. ಎ. ಬಿ.ಟಿ. ಶಾಸನದ ಇಲಾಖೆ ಮೈಸೂರು.



**ಪಂಡಿತ ರಾಮಾಚಾರ್ಯ ಗಲಗಲಿ**
ಬೆಳಗಾವಿ.



**ಶ್ರೀ. ಈಶ್ವರಪ್ಪ ಸಣಕಲ್. ಬೆಳಗಾವಿ.**



**ಶ್ರೀ. ಚೆನ್ನಬಸವಸ್ವಾಮಿ ಹಿರೇಮಠ.**
ಸಂಪಾದಕ ಕರ್ನಾಟಕಬಂಧು ಗದಗ.



# ವಿಜಯನಗರ ಸಾಮ್ರಾಜ್ಯದ ಸಾಹಿತ್ಯ ಪ್ರಪಂಚ.

( ಲೇಖಕರು:—ಶ್ರೀ. ಎನ್. ಅನಂತಾಚಾರ್ಯ ಎಂ ಎ. ಬಿ ಟಿ. ಶಾಸನದ ಇಲಾಖೆ ಮೈಸೂರು. )

ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾದುದು ದಕ್ಷಿಣ ಭಾರತದಲ್ಲಿ ಅನೇಕ ದೃಷ್ಟಿಗಳಿಂದ ಬಹು ಮುಖ್ಯವಾದುದು. ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಮಹಮ್ಮದೀಯರು ದಕ್ಷಿಣದಕಡೆ ಪ್ರವೇಶಿಸಿದಂದಿನಿಂದ ಅಲ್ಲಿದ್ದ ಹಿಂದುಗಳಿಗೆ ಉಳಿಗಾಲವಿಲ್ಲದಾಯಿತು. ಹಿಂದೂ ದೇವಾಲಯಗಳು ನೆಲಸಮನಾದುವು. ಅವರ ಬಹು ಪವಿತ್ರವಾದ ವೇದಶಾಸ್ತ್ರ ಗ್ರಂಥಗಳು ಅಗ್ನಿಯ ಪಾಲಾದವು ಅಪೌರ್ವೇಯವಾಗಿ ನಡೆದು ಬಂದ ಹಿಂದೂ ಸಂಪ್ರದಾಯಗಳೂ ಧರ್ಮಗಳೂ ನಾಮಾವಶೇಷವಾಗುತ್ತಿದ್ದುವು. ಈ ಸನ್ನಿವೇಶವನ್ನು ಪ್ರತ್ಯಕ್ಷ ನೋಡಿದ ಅಥವಾ ನೋಡಿದವರಿಂದ ಸ್ವತಃ ಕೇಳಿದ ಕಂಪರಾಯನ ಪತ್ನಿಯಾದ ಗಂಗಾದೇವಿಯು ತನ್ನ ಕಂಪರಾಯಚರಿತ್ರದಲ್ಲಿ ಆ ಕಾಲದ ಸ್ಥಿತಿಯನ್ನು ಹೀಗೆಂದು ವರ್ಣಿಸಿದ್ದಾಳೆ:—

ಶ್ರುತಿರಸ್ತಮಿತಾನಯಃ ಪ್ರಲೀನೋನಿರತಾಧರ್ಮ
ಕಥಾಚ್ಯುತಂಚರಿತ್ರಂ
ಸುಕೃತಂಗ ತಮಾಭಿಜಾತ್ಯಮಸ್ತಂ ಕಿಮಿವಾನ್ಯತ್ಕಲಿ
ರೇಕಏವಧನ್ಯಃ ॥

ಇಂತಹ ವಿಷಮ ಸ್ಥಿತಿಯನ್ನು ಎದುರಿಸಿ ಕ್ಷಾಭ್ಯಮಾನಸ್ಕರಾದ ಹಿಂದುಗಳಿಗೆ ಶಾಂತಿಯನ್ನುಂಟು ಮಾಡಿ ಅವರಿಗೆ ಆಶ್ರಯವನ್ನು ಕೊಡಲು ದಕ್ಷಿಣ ದೇಶದಲ್ಲಿ ಪ್ರಬಲವಾದ ಹಿಂದೂ ರಾಜ್ಯವಾವುದೂ ಇರಲಿಲ್ಲ. ಅತಿ ಪ್ರಬಲರಲ್ಲದಿದ್ದರೂ ಸ್ವತಂತ್ರವಾಗಿ ದಕ್ಷಿಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ಹೊಯ್ಸಳರೂ ಪಾಂಡ್ಯರೂ ಒಂದಾಗಿ ಶತ್ರುಗಳನ್ನು ಹಿಂದಕ್ಕಟ್ಟಬಹುದಾಗಿತ್ತು. ಆದರೆ ಬಹುಕಾಲದಿಂದ ಅವರಿಗೆ ಪರಸ್ಪರ ದ್ವೇಷವಿದ್ದುದರಿಂದ ಅವರು ಒಂದಾಗುವ ಸಂಭವವಿರಲಿಲ್ಲ ಆದುದರಿಂದ ಈ ದುಃಸ್ಥಿತಿಯನ್ನು ಹೋಗಲಾಡಿಸಿ ಉತ್ತರದ ಕಡೆಯಿಂದ ತರಂಗ ತರಂಗವಾಗಿ ಪ್ರವಹಿಸುತ್ತಿದ್ದ ಮಹಮ್ಮದೀಯ ವಾಹಿನಿಯನ್ನು ತಡೆದು ಹಿಂದುಗಳಿಗೆ ಆಶ್ರಯವನ್ನು ಕಲ್ಪಿಸಿಕೊಟ್ಟು ಅವರ ಧರ್ಮವನ್ನು ಏಕರೀತಿಯಾಗಿ ನಡೆಸಿಕೊಂಡು ಬರುವುದಕ್ಕಾಗಿ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಯಿತು. ಈ ರಾಜ್ಯದರಸರೆಲ್ಲರೂ ವೀರರೂ ಮೇಧಾವಿಗಳೂ ಆದುದರಿಂದ ಯೋಗ್ಯರೂ ದಕ್ಷರೂ ಆದ ಮಂತ್ರಿಗಳ ಸಹಾಯದಿಂದ ರಾಜ್ಯ ಪರಿಪಾಲನೆಯನ್ನು ಮಾಡಿದರು. ಇದರಿಂದ ಹಿಂದುಗಳಿಗೆ ಬಂದೊದಗಿದ್ದ ವಿಪತ್ತು ದೂರವಾಯಿತು. ಧರ್ಮಾವಲಂಬಿಗಳಾದ ಈ ಸಾಮ್ರಾಜ್ಯದ ದೊರೆಗಳು ಧರ್ಮಸಂಸ್ಥಾಪನೆಯನ್ನೇ ಮುಖ್ಯ ಧ್ಯೇಯವನ್ನಾಗಿಟ್ಟುಕೊಂಡಿದ್ದುದರಿಂದ ಆರ್ಯ ಧರ್ಮಕ್ಕೂ ಅದರ ಆಧಾರಭೂತರಾದ ವಿದ್ವಾಂಸರಿಗೂ ವಿಶೇಷವಾದ ಆಶ್ರಯವು ದೊರಕಿತು. ರಾಜರು ವಿದ್ವಾಂಸರ ಮತ್ತು ಧರ್ಮಸಂಸ್ಥೆಗಳ ಅಭಿವೃದ್ಧಿಗೆ ಅನೇಕ ದತ್ತಿಗಳನ್ನು ಬಿಟ್ಟರು. ವಿದ್ವಾಂಸರನ್ನು ಉಚ್ಚವಾದ ಬಿರುದು ಸನ್ಮಾನಿಸಿದರು. ಇದರ ಫಲವಾಗಿ ರಾಜ್ಯದ ಮೂಲೆ ಮೂಲೆಗಳಲ್ಲಿ ನಿರಾಶ್ರಯರಾಗಿದ್ದ ಅನೇಕ ವಿದ್ವಾಂಸರೂ ಕವಿ ಶಾಸ್ತ್ರವೇತ್ತರೂ ರಾಜಾಸ್ಥಾನದಲ್ಲಿ ಬಂದು ಸೇರಿ ರಾಜಾಶ್ರಯವನ್ನು ಪಡೆದು ವಿಶೇಷವಾಗಿ ಗ್ರಂಥರಚನೆಯನ್ನು ಮಾಡಿದರು. ತಮಗೆ ಆಶ್ರಯವಿತ್ತು ಪೋಷಿಸಿದ ಕೃತಿಭರ್ತರ ಹೆಸರನ್ನು ಶಾಶ್ವತಗೊಳಿಸಲು ಕೃತಿಕರ್ತರು ತಮ್ಮ ಗ್ರಂಥಗಳನ್ನು ಅವರ ಅಂಕಿತದಿಂದ ರಚಿಸಲು ಮೊದಲು ಮಾಡಿದರು. ಕವಿಗಳ ಮತ್ತು ವಿದ್ವಾಂಸರ ಸಹವಾಸದಿಂದ ಅನೇಕ ರಾಜರುಗಳು ಸ್ವತಃ ಉದ್ದಾಮ ಕವಿಗಳಾದರು. ಅಲ್ಲದೆ ಬಹು ಮಂದಿ ಅರಸರು ಪರಾಕ್ರಮಶಾಲಿಗಳಾಗಿದ್ದುದರಿಂದ ಅನೇಕ ಕಾವ್ಯಗಳಿಗೆ ನಾಯಕರೂ ಚರಣಭೂತರೂ ಆದರು. ಹಾಗೆಯೆ ರಾಜರ ಕೈಕೆಳಗಿನ ಅಧಿಕಾರಿಗಳಲ್ಲನೇಕರು ತಮ್ಮ ಯಜಮಾನರನ್ನನುಸರಿಸಿ ತಮ್ಮ ಕೈಲಾದಷ್ಟು ಕವಿಗಳಿಗೆ ಪೋಷಕರೂ ಪ್ರೇರಕರೂ ಸಹಾಯಕರೂ ಆದರು. ಇದರಿಂದ ವಿಜಯನಗರ

---

Sources page 28.

ಸಾಮ್ರಾಜ್ಯವು ಬೆಳೆದ ಹಾಗೆಲ್ಲ ಅಲ್ಲಿಯು ಸಾರಸ್ವತ ಪ್ರಪಂಚವೂ ವಿಶೇಷವಾಗಿ ಅಭಿವೃದ್ಧಿ ಹೊಂದಿ ಅದರ ಅತ್ಯುನ್ನತ ಸ್ಥಿತಿಯಲ್ಲಿ ಒಂದು ಅಭೂತಪೂರ್ವವಾದ ಸಾಹಿತ್ಯಸಾಮ್ರಾಜ್ಯವು ನೆಲೆಗೊಂಡಿತು. ವಿದ್ಯಾರಣ್ಯ ಸ್ವಾಮಿಗಳು ದಕ್ಷಿಣದೇಶದಲ್ಲಿ ಒಂದು ಧರ್ಮಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂದು ಯೋಚಿಸಿ ತಮ್ಮ ತಪಃ ಪ್ರಭಾವದಿಂದ ಭುವನೇಶ್ವರಿಯ ಅನುಗ್ರಹ ಪಡೆದು ಸುವರ್ಣವೃಷ್ಟಿಯನ್ನುಂಟುಮಾಡಿ ಹರಿಹರ ಬುಕ್ಕರಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರೆಂದೂ, ಈ ಸಾಮ್ರಾಜ್ಯವು ಆರ್ಯ ಸಂಸ್ಕೃತಿಗೆ ಆವಾಸ ಸ್ಥಾನವಾಗಿರಬೇಕೆಂಬ ಉದ್ದೇಶದಿಂದ ಅದರ ರಾಜಧಾನಿಗೆ ವಿದ್ಯಾನಗರಿಯೆಂಬ ನಾಮಧೇಯವನ್ನಿತ್ತರೆಂದೂ ಪ್ರತೀತಿಯುಂಟು. ಇದು ಎಷ್ಟುಮಾತ್ರ ನಂಬಲರ್ಹವೋ ಹೇಳಲಾಗುವುದಿಲ್ಲ. ಆದರೆ ವಿಜಯನಗರದ ರಾಜರ ವಿಶೇಷವಾದ ಪ್ರೋತ್ಸಾಹದಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೆಂದೂ ಇಲ್ಲದ ಸಾಹಿತ್ಯ ಪ್ರಪಂಚದ ಸುವರ್ಣ ಯುಗವು ನೆಲೆಗೊಂಡಿತೆಂದು ಹೇಳುವುದರಲ್ಲಿ ಯಾವ ಸಂದೇಹವೂ ಇಲ್ಲ.

ವಿಜಯನಗರ ಸಾಮ್ರಾಜ್ಯವು ೧೩೩೬ನೆಯ ವರ್ಷದಿಂದ ಸುಮಾರು ೨೦೦ ವರ್ಷಗಳಕಾಲ ಯಶಸ್ವಿಯಾಗಿ ಬಾಳಿ ತನ್ನ ಕೀರ್ತಿಧ್ವಜವನ್ನು ಪ್ರಪಂಚದಲ್ಲೆಲ್ಲಾ ಮೆರೆಯಿಸಿತು ಸಂಗಮವಂಶದವರೂ ಸಾಳುವರೂ ತುಳುವರೂ ಅರುವೀಡು ವಂಶಸ್ಥರೂ ಸಾಮ್ರಾಜ್ಯ ಸಿಂಹಾಸನವನ್ನಲಂಕರಿಸಿದರು. ಪ್ರತಿ ಒಂದು ವಂಶದಲ್ಲಿಯೂ ಅನೇಕ ದೊರೆಗಳು ಸಾಹಿತ್ಯ ಪ್ರಪಂಚಕ್ಕೆ ವಿಶೇಷವಾಗಿ ಸಹಾಯ ಮಾಡಿದ್ದಾರೆ. ಅವರುಗಳೆಲ್ಲರೂ ಮಾಡಿರುವ ಕಾರ್ಯವನ್ನು ಕರಿತು ವಿಚಾರ ಮಾಡುವುದೇ ಈ ಲೇಖನದ ಮುಖ್ಯ ಉದ್ದೇಶ. ಆದರೆ ಪ್ರತಿಯೊಬ್ಬರ ಕೆಲಸವನ್ನೂ ವಿಶದವಾಗಿ ಚರ್ಚಿಸಲು ಈ ಸಣ್ಣ ಲೇಖನದಲ್ಲಿ ಸಾಧ್ಯವಿಲ್ಲವಾದುದರಿಂದ ಪ್ರತಿಯೊಂದು ವಂಶದ ಅರಸರ ಕೈಕೆಳಗೆ ನಡೆದ ಸಾಹಿತ್ಯ ಕಾರ್ಯವನ್ನು ಸ್ಥೂಲದೃಷ್ಟಿಯಿಂದ ಪರಿಶೀಲಿಸಲು ಇಲ್ಲಿ ಪ್ರಯತ್ನಪಟ್ಟಿದೆ.

ವಿಜಯನಗರ ಸಾಮ್ರಾಜ್ಯವು ತೆಲುಗು ಕನ್ನಡ ತಮಿಳು ಪ್ರಾಂತಗಳಲ್ಲೆಲ್ಲಾ ವ್ಯಾಪಿಸಿತ್ತು. ಆದುದರಿಂದ ವಿಜಯನಗರದ ಅರಸುಗಳು ದೇಶಭಾಷೆಗಳಾದ ಈ ಮೂರು ಭಾಷೆಗಳಿಗೂ ಪ್ರೋತ್ಸಾಹವನ್ನಿತ್ತರು. ಅಲ್ಲದೆ ಇವುಗಳೆಲ್ಲಕ್ಕೂ ಪ್ರಾಚೀನವಾದ ಮತ್ತು ಬಹುಕಾಲದಿಂದ ಪೂಜ್ಯವೆನಿಸಿಕೊಂಡಿರುವ ಸಂಸ್ಕೃತ ಭಾಷೆಗೆ ಇವರಿಂದ ಸಹಾಯಸಿಕ್ಕದೆ ಹೋಗಲಿಲ್ಲ. ಕೆಲವು ರಾಜರ ಆಶ್ರಯದಲ್ಲಿ ಸಂಸ್ಕೃತವೇ ದೇಶಭಾಷೆಗಳಿಗಿಂತ ಹೆಚ್ಚಿನ ಪ್ರೋತ್ಸಾಹವನ್ನು ಹೊಂದಿದೆ. ದೇಶಭಾಷಾಭಿವೃದ್ಧಿಗೆ ಮತಾವೇಶವೇ ಮುಖ್ಯ ಕಾರಣವಾದುದರಿಂದ ರಾಜರ ಮತಾಭಿಮಾನವು ಹೆಚ್ಚಿದ ಹಾಗೆಲ್ಲಾ ಭಾಷೆಯೂ ವಿಶೇಷ ಅಭಿವೃದ್ಧಿಯನ್ನು ಹೊಂದಿದೆ.

ಸಂಗಮ ವಂಶದಲ್ಲಿ ಬುಕ್ಕ ಹರಿಹರರೇ ವಿಜಯನಗರದ ಮೊದಲನೆಯ ಅರಸರು. ಇವರ ತರುವಾಯ ಇಮ್ಮಡಿ ಬುಕ್ಕ ಇಮ್ಮಡಿ ಹರಿಹರ ಮೊದಲಾದವರು ರಾಜ್ಯಭಾರ ಮಾಡಿದರು. ಬುಕ್ಕ ಹರಿಹರರು ರಾಜಧಾನಿಯಲ್ಲಿ ರಾಜ್ಯಭಾರ ಮಾಡುತ್ತಿರುವ ಕಾಲದಲ್ಲಿಯೇ ಇವರ ಸಹೋದರರೂ ಮಕ್ಕಳನೇಕರೂ ರಾಜ ಪ್ರತಿನಿಧಿಗಳಾಗಿ ಅನೇಕ ಮಂಡಲಗಳಲ್ಲಿ ಆಳುತ್ತಿದ್ದರು. ಇವರೆಲ್ಲರಿಗೂ ರಾಜ್ಯಭಾರ ನಿರ್ವಹಣ ಕಾರ್ಯದಲ್ಲಿ ಸಹಾಯ ಮಾಡಿದವರು ವಿದ್ವಾಂಸರೂ ರಾಜಕಾರ್ಯ ಧುರಂಧರರೂ ಆದ ಮಾಧವ ಸಾಯಣ ಭೋಗನಾಥ ಸಹೋದರರು. ಇವರು ರಾಜಕಾರ್ಯದಲ್ಲಿಯೇ ಅಲ್ಲದೆ ಯುದ್ಧ ವಿಷಯದಲ್ಲಿಯೂ ಭವಿಷ್ಯದ್ರಾಜರ ಪೋಷಣೆಯಲ್ಲಿಯೂ ವಿಶೇಷವಾದ ಬುದ್ಧಿ ಕೌಶಲ್ಯವನ್ನು ತೋರಿಸಿದರು. ಇವರ ಸಹಾಯದ ಜೊತೆಗೆಸಂಗಮವಂಶೀಯರಿಗೆ ರಾಜಕಾರ್ಯದಲ್ಲಿ ಶೃಂಗೇರಿಮಠದ ಸ್ವಾಮಿಗಳ ಸಲಹೆಗಳೂ ಪ್ರೋತ್ಸಾಹವೂ ದೊರಕಿದುವು. ಶೃಂಗೇರಿ ಮಠದ ವಿದ್ಯಾತೀರ್ಥ ಸ್ವಾಮಿಗಳೂ ವಿದ್ಯಾರಣ್ಯರೂ ವಿಜಯನಗರದ ರಾಜರಿಗೆ ಸಹಾಯ ಮಾಡಿರುವುದು ಅನೇಕ ಶಾಸನಗಳಿಂದ ಶ್ರುತಪಡುತ್ತದೆ. ಅವರ ಸಹಾಯಕ್ಕೆ ಪ್ರತಿಯಾಗಿ ಅರಸರೂ ಆ ಮಠಕ್ಕೆ ಅನೇಕ ವಿಧದಲ್ಲಿ ತಮ್ಮ ಕೃತಜ್ಞತೆಗಳನ್ನು ತೋರ್ಪಡಿಸಿದರು. ಈ ಪರಸ್ಪರ ಸಹಾಯದಿಂದ ಒಂದು ಕಡೆ ರಾಜ್ಯ ವಿಸ್ತರಣವೂ ಮತ್ತೊಂದು ಕಡೆ ಧರ್ಮಾಭಿವೃದ್ಧಿಯೂ ಏಕಕಾಲದಲ್ಲಿ ಉಂಟಾಯಿತು.

ರಾಜ್ಯಸ್ಥಾಪನೆಯಲ್ಲಿ ಸಂಗಮರಾಜರು ಜೈನಗುರುವಾದ ಕಾಶೀವಿಲಾಸ ಕ್ರಿಯಾಶಕ್ತಿ ಎಂಬ ವಿದ್ವಾಂಸನಿಂದ ವಿಶೇಷ ಸಹಾಯವನ್ನು ಹೊಂದಿರಬಹುದು. ಈತನು ಅವರ ಕುಲಗುರು. ಈತನು ಒಂದನೆಯ ಬುಕ್ಕರಾಯನ ಮೊದಲ್ಗೊಂಡು ಇಮ್ಮಡಿ ಹರಿಹರ ರಾಯನ ಕಾಲದವರೆಗೆ ವಿಜಯನಗರದ ಅರಸುಗಳ

ಕುಲಗುರುವಾಗಿದ್ದಂತೆ ಅನೇಕ ಶಾಸನಗಳಿಂದ ವ್ಯಕ್ತಪಡುತ್ತದೆ. ಬನವಾಸಿಯಲ್ಲಿ ಮಂತ್ರಿಯಾಗಿದ್ದ ಮಾಧವ ಮಂತ್ರಿಗೆ ಗುರುವಾಗಿದ್ದವನೂ ಈತನೆ[೨]. ಮಾಧವ ಮಂತ್ರಿ ಮತ್ತು ಮಾರಪ್ಪನಿಂದ ರಚಿತವಾದ 'ಸರ್ವಾಗಮಸಾರಸಂಗ್ರಹ' ದ ರಚನೆಗೆ ಈತನೇ ಪ್ರೇರಕನಾಗಿರಬೇಕು.[೩] ಸೊರಬದ ೩೭೫ ನೆಯ ಶಾಸನದಲ್ಲಿ ಈತನು ಗಿರೀಶನ ಅಪರಾವತಾರವೆಂಬದಾಗಿಯೂ ತ್ರಿಯಂಬಕನಷ್ಟು ಕೀರ್ತಿವಂತನೆಂಬದಾಗಿಯೂ ಹೇಳಿದೆ. ಚನ್ನರಾಯಪಟ್ಟಣದ ೨೫೬ ನೆಯ ಶಾಸನದಲ್ಲಿ ಇಮ್ಮಡಿ ಹರಿಹರರಾಯನು ಇವನನ್ನು 'ಶ್ರೀಮದ್ರಾಜಗುರು ಮಹಾಮಂಡಲಾಚಾರ್ಯ ವಾಣೀವಿಲಾಸ ಕ್ರಿಯಾಶಕ್ತಿ' ಎಂಬದಾಗಿ ಸಂಬೋಧಿಸಿ ಇವನು ತನ್ನ ಕುಲಗುರುವೆಂದು ಹೇಳಿಕೊಂಡಿದ್ದಾನೆ. ಗಂಗಾದೇವಿಯ 'ವೀರಕಂಪರಾಯ ಚರಿತ'ದಲ್ಲಿ ಕ್ರಿಯಾಶಕ್ತಿಯೇ ಬುಕ್ಕರಾಯನ ಮಗನಾದ ಇಮ್ಮಡಿ ಕಂಪಣ್ಣನ ಕುಲಗುರುವೆಂದು ಹೇಳಿದೆ. ೧೩೮೯ನೆಯ ವರ್ಷದ ಶಾಸನವೊಂದರಲ್ಲಿ ಇಮ್ಮಡಿ ಬುಕ್ಕನು ಕ್ರಿಯಾಶಕ್ತಿ ದೇಶಿಕನ ಆಜ್ಞೆಯಪ್ರಕಾರ ಶೃಂಗೇರಿಯ ವಿದ್ಯಾಶಂಕರಸ್ವಾಮಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದೆಲ್ಲವನ್ನು ನೋಡಿದರೆ ಕ್ರಿಯಾಶಕ್ತಿ ದೇಶಿಕನ ಪ್ರಭಾವವು ಸಂಗಮರಾಜರಲ್ಲಿ ವಿಶೇಷ ಕೆಲಸ ಮಾಡಿರುವರಂತೆ ತೋರುತ್ತದೆ. ಕ್ರಿಯಾಶಕ್ತಿದೇಶಿಕನು ನಕುಲಾಗಮಕ್ಕೆ ಸೇರಿದ ಪಾಶುಪತಮತಾವಲಂಬಿಯಾದ ಶೈವಗುರು. ಹಾಗೆಯೇ ಸಂಗಮರಾಜರಿಗೆ ಸಹಾಯ ಮಾಡಿದ ಶೃಂಗೇರಿಮಠದ ಸ್ವಾಮಿಗಳೂ ಮಾಧವಸಾಯಣರೂ ಅದ್ವೈತಿಗಳು. ಆದುದರಿಂದ ವಿಜಯನಗರದ ಮೊದಲನೆಯ ರಾಜವಂಶದವರ ಆಶ್ರಯದಲ್ಲಿ ಸ್ವಾಭಾವಿಕವಾಗಿ ಶೈವಮತವೂ ಶೈವಗ್ರಂಥಗಳೂ ಪ್ರಾಬಲ್ಯಕ್ಕೆ ಬಂದವು.

ಮೇಲೆ ಹೇಳಿದ ಮಂತ್ರಿಗಳಿಂದಲೂ ಗುರುಗಳಿಂದಲೂ ಪ್ರೇರಿತರಾದ ಸಂಗಮವಂಶೀಯರು ತಮಗೆ ಅವರಲ್ಲಿದ್ದ ಗಾಢವಾದ ಭಕ್ತಿವಿಶ್ವಾಸಗಳನ್ನು ಸೂಚಿಸುವದಕ್ಕಾಗಿಯೂ ಅವರಿಂದ ಪಡೆದ ಸಹಾಯಕ್ಕೆ ಪ್ರತಿಫಲವಾಗಿಯೂ ತಮಗಿದ್ದ ಮತಾಭಿಮಾನವನ್ನು ತೋರ್ಪಡಿಸಿಕೊಳ್ಳುವದಕ್ಕಾಗಿಯೂ ತಮ್ಮ ಕರ್ತವ್ಯವಾದ ಧರ್ಮಸಂಸ್ಥಾಪನೆ ಮತ್ತು ಧರ್ಮಾಭಿವೃದ್ಧಿಗಾಗಿಯೂ ತಮ್ಮ ಗುರುಗಳಿಗೂ ಅವರ ಶಿಷ್ಯರಾದ ಅನೇಕ ವಿದ್ವಾಂಸರಿಗೂ ಗ್ರಾಮ, ಭೂಮಿ, ದ್ರವ್ಯ ಮೊದಲಾದುವನ್ನು ಕೊಟ್ಟರು. ಹುಲಿಕೆರೆಯ ತಾಮ್ರಶಾಸನ[೫] ಅಗ್ರಹಾರ ಬಾಚಹಳ್ಳಿಯ ತಾಮ್ರಶಾಸನ[೬] ಹರಿಹರದ ಶಿಲಾಶಾಸನ[೭] ಇವುಗಳಲ್ಲಿ ಸಾಯಣಾಚಾರ್ಯರಿಗೂ ಇತರ ವಿದ್ವಾಂಸರಿಗೂ ಗ್ರಾಮಗಳನ್ನು ಕೊಟ್ಟಂತೆ ಹೇಳಿದೆ. ತೀರ್ಥಹಳ್ಳಿಯ ೧೫೪ನೆಯ ಶಾಸನದಲ್ಲಿ[೮] ಹರಿಹರಮಹಾರಾಯನು ವೇದಮಾರ್ಗಪ್ರತಿಷ್ಠಾಪನಾಚಾರ್ಯನಾದ ಹರಹರಿದೇವನಿಗೆ ಶಾಂತಲಿಗೆಯೆಂಬ ಗ್ರಾಮವನ್ನು ದಾನಮಾಡಿರುವುದು ಲಿಖಿತವಾಗಿದೆ. ಬುಕ್ಕಮಹಾರಾಯನೂ ಅವನ ತರುವಾಯ ಬಂದ ಅರಸರೂ ಶೃಂಗೇರಿಯ ಮಠದಲ್ಲಿ ಸಂತತವಾಗಿ ಪಾಠ ಪ್ರವಚನ ಕಾಲಕ್ಷೇಪಾದಿಗಳು ನಡೆಯುವದಕ್ಕಾಗಿ ಅನೇಕ ದತ್ತಿಗಳನ್ನು ಬಿಟ್ಟಿದ್ದಾರೆ. ೧೩೮೦ನೆಯ ವರ್ಷದ ಒಂದು ಕಡತದಿಂದ ಇಮ್ಮಡಿ ಹರಿಹರರಾಜನು ಆ ವರ್ಷದಲ್ಲಿ ಶೃಂಗೇರಿ ಮಠಕ್ಕೆ ಒಂದು ಹೊಸ ಶಾಸನವನ್ನು ಕೊಟ್ಟು ಹಿಂದೆ ಕೊಟ್ಟಿದ್ದ ಶಾಸನಗಳನ್ನೆಲ್ಲಾ ಅದರಲ್ಲಿ ಹೊಗಳಿ ಅವುಗಳನ್ನು ಊರ್ಜಿತಪಡಿಸಿದಂತೆ ತಿಳಿಯಬಹುದಾಗಿದೆ.[೯] ಇಮ್ಮಡಿ ಹರಿರಾಯನ ಹೆಬ್ಬಸೂರು ತಾಮ್ರಶಾಸನದಿಂದ[೧೦] ಬುಕ್ಕ ಮಹಾರಾಜನು ವಿದ್ಯಾತೀರ್ಥ ಮುನಿಗಳಿಗೆ ವಿಶೇಷವಾಗಿ ಸನ್ಮಾನ ಮಾಡಿದಂತೆಯೂ ಅವರ ಸಹಾಯದಿಂದ ಅವನು ಬಹುಖ್ಯಾತಿಗೆ ಬಂದಂತೆಯೂ ತಿಳಿದುಬರುತ್ತದೆ ಇಮ್ಮಡಿ ಹರಿಹರನು ತನ್ನ ಕುಲಗುರುವಾದ ಕ್ರಿಯಾಶಕ್ತಿಯ ಆಜ್ಞೆಯ ಪ್ರಕಾರ ಗಡಗು ಪ್ರಾಂತವನ್ನು ೬೬ ಹಳ್ಳಿಗಳಾಗಿ ಭಾಗಿಸಿ ವಿದ್ವಾಂಸರಿಗೆ ದಾನ ಮಾಡಿದನೆಂಬುದು ಡಾಂಬಲ್ ತಾಮ್ರಶಾಸನದಿಂದ[೧೧] ಶ್ರುತವಾಗುತ್ತದೆ. ಇವುಗಳನ್ನು ಪಡೆದವರಲ್ಲಿ ಸೋಮಭಟ್ಟ ಶ್ರೀರಂಗಭಟ್ಟ ಹನುಮಾನ್ ಎಂಬುವರು ಉದ್ದಾಮ ಕವಿಗಳಾಗಿದ್ದ

---

೨ E. c VIII Sorab 375 ೩ Ibid

೪ E. c V Chaunarayapama 256. ೫ Ibid. ೬ Mar 1935 para57. ೭ E c XI Dv 34

೮ E c VIII Thirthalli 154 ೯ M ER 1918 para 94. ೧೦ E. c IV yedatore 46.

ರೆಂದೂ ವಿರೂಪಾಕ್ಷನೆಂಬುವನು ಉತ್ತಮವಾದ ಜ್ಯೋತಿಷ್ಕನೆಂದೂ ಹರಿ ಎಂಬುವನು 'ಜ್ಯೋತಿರ್ವಿದಾಭೋಗ' ಎಂಬುದರ ಕರ್ತೃವೆಂದೂ ನರಸಿಂಹನೆಂಬುವನು ಸಾಮವೇದದ ಪ್ರತ್ಯಕ್ಷಮೂರ್ತಿಯೆಂದೂ ವೆಂಕಟನು ಶಾಸ್ತ್ರಜ್ಞನೆಂದೂ ಕಾಶಿನಾಥನು ಶಾಸ್ತ್ರ ಪಾರನಾರ ಪಾರಂಗತನೆಂದೂ ಅದೇ ಶಾಸನದಲ್ಲಿ ಹೇಳಿದೆ. ಇದೇ ಶಾಸನದಲ್ಲಿ ಶೃಂಗೇರಿಮಠಕ್ಕೆ ಸೇರಿದ ಶೃಂಗೇರಿಭಟ್ಟ ವಿದ್ಯಾಶಂಕರಭಟ್ಟ ಎಂಬಿಬ್ಬರಿಗೂ ವೃತ್ತಿಗಳು ಕೊಡಲ್ಪಟ್ಟವೆ. ಮಾಧವಮಂತ್ರಿಯೂ ಕೂಡ ಕ್ರಿಯಾಶಕ್ತಿದೇಶಿಕನ ಆಜ್ಞೆಯ ಮೇರೆಗೆ ಒಂದು ವರ್ಷ ತಪಸ್ಸುಮಾಡಿ ವರ್ಷಾಂತ್ಯದಲ್ಲಿ ಬುಕ್ಕ ಮಹಾರಾಜನಿಂದ ಮುಚ್ಚುಂದಿ ಎಂಬ ಗ್ರಾಮವನ್ನು ತೆಗೆದುಕೊಂಡು ಅದನ್ನು ವೃತ್ತಿಗಳನ್ನಾಗಿ ಭಾಗಿಸಿ ಎಂಬತ್ತು ಜನ ಕಾಶ್ಮೀರದೇಶದ ಶೈವ ವಿದ್ವಾಂಸರಿಗೆ ದಾನಮಾಡಿದನೆಂಬುದು ಶಿಕಾರಿಪುರದ ಒಂದು ಶಾಸನದಿಂದ ೧೨ ವ್ಯಕ್ತಪಡಿಸುತ್ತದೆ ಮುಳುಬಾಗಿಲು ಕಾಲ್ಲೋಶಿನ ೧೫೮ ನೆಯ ಮತ್ತು ಗೋರೀಬಿದನೂರಿನ ೪೬ನೆಯ ಶಾಸನಗಳಲ್ಲಿ ಬುಕ್ಕ ಮಹಾರಾಯನು ನಾಚಿನ ಸೋಮನೆಂಬುವನಿಗೆ ಒಂದು ಅಗ್ರಹಾರವನ್ನು ದಾನಮಾಡಿದುದಾಗಿ ಹೇಳುವ ಈ ಕೆಳಗಿನ ಶ್ಲೋಕಗಳು ಸಿಕ್ಕುವುವು.

ಆಪಸ್ತಂಭಾಖ್ಯ ಸೂತ್ರಾಯ ಭಾರದ್ವಾಜಾಖ್ಯ
ಾಯಿನೆ ।
ಯಾಜುಷಾಣಾಂ ವರೇಣ್ಯಾಯ ಸಕಲಾಗಮ
। ॥
ಅಷ್ಟಾದಶಪುರಾಣಾನಾಮಭಿಜ್ಞಾತಾರ್ಥವೇದಿನೆ ।
ಅಷ್ಟಭಾಷಾಕವಿತ್ವಶ್ರಿ ಶ್ರೀವಾಣೀಜಿತಸಂಪದೆ ॥
ಸೋಮಾಯನಾಚಿನಾಂಬೋಧೇಃ ಸೋಮಾಯಾ
ಮಿತತೇಜಸೆ ।
ಬುಕ್ಕರಾಯ ಪುರಖ್ಯಾತಂ ಪ್ರತಿನಾಮ್ನಾಚ
ಶೋಭಿತಂ ।
ಸಹಿರಣ್ಯಪಯೋಧಾರಾ ಪೂರ್ವಕಂದತ್ತವಾನ್
ಮುದಾ ॥

ಇವುಗಳಿಂದ ನಾಚಿನಸೋಮನು ಅಷ್ಟಭಾಷೆಗಳಲ್ಲಿ ಕವಿತ್ವಮಾಡುವಶಕ್ತಿಯುಳ್ಳವನೆಂಬುದೂ ವೇದಾಗಮಪುರಾಣಜ್ಞನೆಂಬುದೂ ಬುಕ್ಕಮಹಾರಾಯನಿಂದ ಬುಕ್ಕರಾಯಪುರವನ್ನು ದಾನವಾಗಿ ಪಡೆದನೆಂಬದೂ ಶ್ರುತಪಡುವುದು. ಈ ನಾಚಿನ ಸೋಮನೇ ಸುಪ್ರಸಿದ್ಧನಾದ ಇದೇ ಹೆಸರುಳ್ಳ ಆಂಧ್ರಕವಿಯೆಂಬದಾಗಿ ಪಂಡಿತರು ಒಪ್ಪಿರುತ್ತಾರೆ. ಇವನ ಆಂಧ್ರಭಾಷೆಯಲ್ಲಿ 'ಹರಿವಂಶಮು' ಮತ್ತು 'ವಸಂತವಿಲಾಸಮು' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾನೆ. ಇವನ ಕವಿತಾ ದೃಷ್ಟಿಯಿಂದ ಇವನು ಭಾರತವನ್ನು ರಚಿಸಿದ ಆಂಧ್ರ ಕವಿತ್ರಯಕ್ಕಿಂತ ಮಿಗಿಲೆಂಬದಾಗಿ ವೀರೇಶಲಿಂಗಂಪಂತಲು ಅವರು ಅಭಿಪ್ರಾಯ ಪಡುತ್ತಾರೆ ೧೩

ವಿದ್ವಾಂಸರಿಗೆ ರಾಜಾಶ್ರಯವು ದೊರೆತುದುದರಿಂದ ಅವರು ನಿಯೋಚನೆಯಿಂದ ಗ್ರಂಥ ರಚನೆಯನ್ನು ಮಾಡಲು ಅನುಕೂಲವಾಯಿತು. ಈ ಕಾಲದ ಸಾಹಿತ್ಯ ಪ್ರವಾಹವು ರಾಜಾಸ್ಥಾನದಿಂದಲೇ ಹೊರಟಂತೆ ತೋರುತ್ತದೆ. ಬುಕ್ಕ ಹರಿಹರರ ಮಂತ್ರಿಗಳಾದ ಮಾಧವ ಸಹೋದರರು ಉದ್ದಾಮ ವಿದ್ವಾಂಸರು; ವೇದಮಾರ್ಗ ಪ್ರವರ್ತಕರು. ಧರ್ಮ ಸಂಸ್ಥಾಪನೆಯಲ್ಲಿ ನಿರತರು. ಆದುದರಿಂದ ರಾಜ್ಯಸ್ಥಾಪನೆಯ ಕಾರ್ಯವು ಒಂದು ಘಟ್ಟಕ್ಕೆ ಬರಲು ಧರ್ಮಸ್ಥಾಪನೆಗೆ ಸಾಧಕವಾದ ಗ್ರಂಥರಚನೆಗೆ ಮೊದಲುಮಾಡಿದರು ಪ್ರಾಚೀನ ಧರ್ಮಕ್ಕೆ ಮೂಲಾಧಾರವಾದ ಶ್ರುತಿಸ್ಮೃತಿಗಳು ಎಲ್ಲರಿಗೂ ಸುಲಭ ಗ್ರಾಹ್ಯವಾಗಿರಲಿಲ್ಲವಾದುದರಿಂದ ಅವುಗಳಿಗೆ ಭಾಷ್ಯಗಳನ್ನೂ ವ್ಯಾಖ್ಯಾನಗಳನ್ನೂ ರಚಿಸುವದು ಪ್ರಥಮ ಕರ್ತವ್ಯವೆಂದು ಅವರಿಗೆ ತೋರಿತು. ಅದೇಪ್ರಕಾರ ಮಾಧವಾಚಾರ್ಯನು ಪರಾಶರ ಸ್ಮೃತಿಯ ವ್ಯಾಖ್ಯಾನವಾದ 'ಪರಾಶರ ಮಾಧವೀಯ' ವೆಂಬ ಗ್ರಂಥವನ್ನು ಮೊದಲು ರಚಿಸಿದನು. ವ್ಯವಹಾರ ಮಾಧವ 'ಕಾಲಮಾಧವೀಯ' ಅಥವಾ 'ಕಾಲನಿರ್ಣಯ' 'ಜೀವನ್ಮುಕ್ತಿವಿವೇಕ' 'ಜೈಮಿನೀಯ ನ್ಯಾಯಮಾಲಾ ವಿಸ್ತರ' ಇವು ಆತನ ಇತರ ಗ್ರಂಥಗಳು. ಇವುಗಳಲ್ಲಿ 'ಪರಾಶರ ಸ್ಮೃತಿ ವ್ಯಾಖ್ಯಾನ'ವು ಹಿಂದುಗಳ ನಿತ್ಯನೈಮಿತ್ತಿಕ ಧರ್ಮಗಳನ್ನು ವಿವರಿಸುತ್ತದೆ. 'ವ್ಯವಹಾರಮಾಧವ'ವು ರಾಜನೀತಿಗಳನ್ನು ತಿಳಿಸುವುದು. 'ಕಾಲನಿರ್ಣಯವು' ಧರ್ಮಗಳನ್ನು ಮಾಡುವ ಕಾಲವನ್ನು ನಿರ್ಣಯಿಸು

೧೧ B. B. R. A S XII p. 338. ( ಇವರ ಗುರುತು ಹಿಂದಿನ ಪುಟದಲ್ಲಿದೆ )
೧೨ E. C. VI Shikarpur 281 ೧೩ W. Y. X ... X p. 116

ವುದು 'ಜೀವನ್ಮುಕ್ತಿ ವಿವೇಕವು' ಪರಾಶರ ಸ್ಮೃತಿ ವ್ಯಾಖ್ಯಾನದ ಅನುಬಂಧದಂತಿದೆ ಇದರಲ್ಲಿ ಪರಮಹಂಸರೆಂಬ ಸನ್ಯಾಸಿಗಳ ಧರ್ಮವು ಉಕ್ತವಾಗಿದೆ. ಯಜ್ಞಯಾಗಾದಿಗಳ ಕ್ರಮವನ್ನು ಅದಕ್ಕೆ ಸಂಬಂಧಪಟ್ಟಿರುವ ವೈದಿಕ ಪ್ರಕ್ರಿಯೆಗಳನ್ನೂ ವಿವರಿಸುವ ಜೈಮಿನಿಯ ಸೂತ್ರಗಳ ವಿಸ್ತಾರವೇ 'ಜೈಮಿನೀಯ ನ್ಯಾಯಮಾಲಾ ವಿಸ್ತಾರ' ಇವುಗಳೆಲ್ಲವೂ ಬುಕ್ಕಮಹಾರಾಜನ ಆಶ್ರಯದಲ್ಲಿ ರಚಿತವಾದುವು ಮಾಧವಾಚಾರ್ಯನ ಸಹೋದರನಾದ ಸಾಯಣನೂ ವಿದ್ವಾಂಸನೂ ಪ್ರತಿಭಾಶಾಲಿಯೂ ಆಗಿದ್ದುದರಿಂದ 'ಸುಭಾಷಿತಸುಧಾನಿಧಿ' 'ಪುರುಷಾರ್ಥ ಸುಧಾನಿಧಿ' 'ಪ್ರಾಯಶ್ಚಿತ್ತ ಸುಧಾನಿಧಿ' 'ಯಜ್ಞತಂತ್ರ ಸುಧಾನಿಧಿ' 'ಅಲಂಕಾರ ಸುಧಾನಿಧಿ' 'ವೇದಾರ್ಥ ಪ್ರಕಾಶ' ಮೊದಲಾದುವುಗಳನ್ನು ರಚಿಸಿದನು ಇವುಗಳಲ್ಲಿ 'ಸುಭಾಷಿತ ಸುಧಾನಿಧಿ' 'ಪುರುಷಾರ್ಥ ಸುಧಾನಿಧಿ' ಇವೆರಡೂ ಪ್ರಾಚೀನ ಮಹನೀಯರ ಉಪದೇಶ ವಾಕ್ಯಗಳ ಸಂಕಲನ. 'ಯಜ್ಞತಂತ್ರ ಸುಧಾನಿಧಿ'ಯು ಯಜ್ಞಯಾಗಾದಿಗಳ ವಿಧಾನವನ್ನು ವಿವರಿಸುವ ಗ್ರಂಥ 'ಪ್ರಾಯಶ್ಚಿತ್ತ ಸುಧಾನಿಧಿ'ಯು ನಾನಾಪಾತಕಗಳ ಪರಿಹಾರಕ್ಕೋಸ್ಕರ ಆಚರಿಸತಕ್ಕ ಸತ್ಕರ್ಮಗಳನ್ನು ಕುರಿತುದು. ಇದಕ್ಕೆ ಕರ್ಮವಿಪಾಕವೆಂಬ ಹೆಸರೂ ಉಂಟು. 'ಆಯುರ್ವೇದ ಸುಧಾನಿಧಿಯು' ವೈದ್ಯಗ್ರಂಥ. 'ಅಲಂಕಾರ ಸುಧಾನಿಧಿ'ಯು ಕಾವ್ಯದ ಅಂಗಾಂಗಗಳಾದ ಅಲಂಕಾರಗಳ ಸ್ವರೂಪವನ್ನು ವಿವರಿಸುತ್ತದೆ. 'ಧಾತುವೃತ್ತಿಯು' ಸಂಸ್ಕೃತ ಧಾತುಗಳ ವಿಷಯಿಕವಾದುದು. ವೇದದ ಅಂತರ್ಭಾವವನ್ನು ಸಾಮಾನ್ಯ ಲೋಕಕ್ಕೆ ಸಾಂಗವಾಗಿ ವಿಶದಪಡಿಸುವ ವೇದಭಾಷ್ಯವೇ ವೇದಾರ್ಥಪ್ರಕಾಶ ಇವುಗಳಲ್ಲಿ ವೇದಾರ್ಥಪ್ರಕಾಶದ ರಚನೆಗೆ ಬುಕ್ಕಮಹಾರಾಯನೇ ಕಾರಣಭೂತನೆಂಬುದು, ವೇದಭಾಷ್ಯದ ಪ್ರಸ್ತಾವನೆಯ ಶ್ಲೋಕದಿಂದಲೂ ಆಶ್ವಾಸಾಂತ್ಯವಾಕ್ಯದಿಂದಲೂ ವಿಶದಪಡುವುದು.

ಯತ್ಕಟಾಕ್ಷೇಣತದ್ರೂಪಂದಧದ್ಬುಕ್ಕಮಹೀಪತಿಃ ।
ಆದಿಶನ್ಮಾಧವಾಚಾರ್ಯಂ ವೇದಾರ್ಥಸ್ಯಪ್ರಕಾಶನೆ ॥
ಯೇಪೂರ್ವೋತ್ತರಮೀಮಾಂಸೆ ತೇವ್ಯಾಖ್ಯಾಯಾತಿ ಸಂಗ್ರಹಾತ್
ಕೃಪಾಲುರ್ಮಾಧವಾಚಾರ್ಯಃ ವೇದಾರ್ಥಂವಕ್ತು ಮುದ್ಯತಃ ॥

ಇತಿ ಸಾಯಣಾಚಾರ್ಯ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ—

'ಪ್ರಾಯಶ್ಚಿತ್ತ ಸುಧಾನಿಧಿ' 'ಅಲಂಕಾರ ಸುಧಾನಿಧಿ' ಧಾತುವೃತ್ತಿ ಇವು ಸಂಗಮರಾಜನ ಆಶ್ರಯದಲ್ಲಿ ರಚಿತವಾದುವು.[೧೪]

ಯಜ್ಞತಂತ್ರಸುಧಾನಿಧಿಯೂ ಅಥರ್ವೇದ ಮತ್ತು ಶತಪಥ ಬ್ರಾಹ್ಮಣ ಭಾಷ್ಯವೂ ಇಮ್ಮಡಿ ಹರಿಹರನ ಕಾಲದಲ್ಲಿ ಮುಗಿದುವು. ಮಾಧವನ ಮತ್ತೊಬ್ಬನ ಸಹೋದರನಾದ ಭೋಗನಾಥ ಕವಿಯು ಸಂಗಮರಾಜನ ನರ್ಮಸಚಿವನಾಗಿದ್ದುಕೊಂಡು ವೇದಶಾಸ್ತ್ರಗಳ ಗೋಜಿಗೆ ಹೋಗದೆ ಭಾವನಾ ಪ್ರಪಂಚದಲ್ಲಿ ಮಗ್ನನಾಗಿ ಮನೋಹರವಾದ ಕಾವ್ಯಗಳನ್ನು ರಚಿಸಿದನು. 'ರಾಮೋಲ್ಲಾಸಂ,' 'ತ್ರಿಪುರವಿಜಯಂ' 'ಉದಾಹರಣಮಾಲಾ' 'ಮಹಾಗಣಪತಿಸ್ತವಂ' 'ಶೃಂಗಾರಮಂಜರಿ' 'ಗೌರೀನಾಥಾಷ್ಟಕಂ' ಇವು ಆರೂ ಭೋಗನಾಥ ಕವಿಕೃತವಾದುವು. ಭೋಗನಾಥನು ಸ್ವತಃ ಕವಿಯಾಗಿದ್ದುದಲ್ಲದೆ ಇತರ ಪಂಡಿತರ ಯೋಗ್ಯತೆಯನ್ನು ಪರೀಕ್ಷೆ ಮಾಡುವಷ್ಟು ದಕ್ಷನೂ ಅವರಿಗೆ ಆಶ್ರಯವನ್ನು ಕೊಡುವಷ್ಟು ಉದಾರಿಯೂ ಆಗಿದ್ದನು ಸಾಯಣನ ಪುತ್ರನಾದ ಮಾಯಣ ಅಥವಾ ಸಾಯಣ ಮಾಧವನು ಈ ಕಾಲದ ಮತ್ತೊಬ್ಬ ವಿದ್ವಾಂಸ. ಈತನು 'ಸರ್ವದರ್ಶನ ಸಂಗ್ರಹ' ವೆಂಬ ಗ್ರಂಥವನ್ನು ಕಂಪಣ್ಣ ಒಡೆಯರ ಆಶ್ರಯದಲ್ಲಿ ರಚಿಸಿದನು

ಸಂಗಮರಾಜರ ಮಂತ್ರಿಗಳು ಇತ್ತ ರಾಜಧಾನಿಯಲ್ಲಿ ಈ ರೀತಿಯಾಗಿ ಸಾಹಿತ್ಯ ಸೇವೆಯನ್ನು ಮಾಡುತ್ತಿರಲು ಅತ್ತ ಶೃಂಗೇರಿಯಲ್ಲಿ ಅವರ ಗುರುಗಳಾದ ವಿದ್ಯಾತೀರ್ಥ ವಿದ್ಯಾರಣ್ಯ[೧೫] ಭಾರತೀ ತೀರ್ಥ ಮೊದಲಾದವರು ಸ್ವತಃ ಗ್ರಂಥರಚನೆಯನ್ನು ಮಾಡುತ್ತಿದ್ದುದಲ್ಲದೆ ತಮ್ಮ ಶಿಷ್ಯರನೇಕರನ್ನು ಆ ಕಾರ್ಯದಲ್ಲಿ ನಿಯೋಗಿಸಿ ಅವರಿಂದಲೂ ಕೆಲಸ ಮಾಡಿಸುತ್ತಿದ್ದರು. 'ಅಪರೋಕ್ಷಾನುಭೂತಿ' 'ವಿವರಣ

೧೪. Ind Ant 1916 P 2

೧೫ ಶೃಂಗೇರಿಯ ಮಠದ ಸ್ವಾಮಿಗಳಾದ ವಿದ್ಯಾರಣ್ಯರು ಹಿಂದೂ ರಾಜ್ಯಸ್ಥಾಪನೆಯ ಮೂಲಕ ಧರ್ಮ ಸಂಸ್ಥಾಪನೆಯನ್ನು ಮಾಡಬೇಕೆಂಬ ಉದ್ದೇಶದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪನೆಮಾಡಿ

ಪ್ರಮೇಯ ಸಂಗ್ರಹ' ಇವೆರಡೂ ವಿದ್ಯಾರಣ್ಯ ಕೃತವಾದುವು. 'ದೇವ್ಯಾಪರಾಧಸ್ತೋತ್ರ' 'ಶಂಕರ ವಿಜಯ' 'ವೈಯಾಸಿಕ ನ್ಯಾಯಮಾಲಾ' ಮೊದಲಾದುವೂ ವಿದ್ಯಾರಣ್ಯ ಕೃತವೆಂಬ ಪ್ರತೀತಿ ಇದೆ. ವೇದಾಂತ ಪಂಚದಶಿಯು ವಿದ್ಯಾರಣ್ಯ ಭಾರತೀ ತೀರ್ಥರಿಬ್ಬರಿಂದಲೂ ರಚಿತವಾದುದು.

---

ಅದರ ಪ್ರಥಮ ರಾಜರಾದ ಹುಕ್ಕ ಬುಕ್ಕರಿಗೆ ಮಾಧವರೆಂಬ ಅಪರ ನಾಮಧೇಯದಿಂದ ಮಂತ್ರಿಗಳಾಗಿದ್ದು ಅನೇಕ ಯುದ್ಧಗಳನ್ನು ಜಯಿಸಿ ರಾಜ್ಯವಿಸ್ತರಣೆಯನ್ನು ಮಾಡಿದರೆಂದೂ ರಾಜ್ಯಭಾರ ನಿರ್ವಹಣಕ್ಕಾಗಿಯೂ ಧರ್ಮಪ್ರಸಾರಣೆಗಾಗಿಯೂ 'ಪರಾಶರಸ್ಮೃತಿವ್ಯಾಖ್ಯೆ' 'ವೇದಭಾಷ್ಯ' ಮೊದಲಾದವುಗಳನ್ನು ತಮ್ಮ ತಮ್ಮಂದಿರಾದ ಸಾಯಣರ ಸಹಾಯದಿಂದ ರಚಿಸಿದರೆಂದೂ ಅನೇಕ ನವೀನ ಗ್ರಂಥಗಳಲ್ಲಿ ಹೇಳಿದೆ. ಇದನ್ನು ಪೋಷಿಸುವ ಲೋಕವಾರ್ತೆಯೂ ಉಂಟು. ಇವುಗಳ ಆಧಾರದ ಮೇಲೆ ಅನೇಕ ಚರಿತ್ರಕಾರರು ತಮ್ಮ ಗ್ರಂಥಗಳಲ್ಲಿ ಹಾಗೆಯೇ ಬರೆದಿದ್ದಾರೆ. ಆದರೆ ಈ ವಿಷಯವು ಶುದ್ಧವಾದ ಐತಿಹಾಸಿಕ ದೃಷ್ಟಿಯಿಂದ ಅಷ್ಟು ನಿರ್ದಿಷ್ಟವಾಗಿ ಹೇಳುವುದಕ್ಕಾಗುವುದಿಲ್ಲವೆಂದು ತೋರುತ್ತದೆ. ಈ ವಿಷಯವನ್ನು ಕುರಿತು ಶ್ರೀಮಾನ್ ರಾವ್ ಬಹಾದೂರ್ ಆರ್. ನರಸಿಂಹಾಚಾರ್ಯರು ೧೯೧೬ನೆಯ ವರ್ಷದಲ್ಲಿ ಇಂಡಿಯನ್ ಆಂಟಿಕ್ವೆರಿ ಎಂಬ ಪತ್ರಿಕೆಯಲ್ಲಿ 'ಮಾಧವಾಚಾರ್ಯನೂ ಅವನ ಸಹೋದರರು' ಎಂಬ ಲೇಖನದಲ್ಲಿ ಹೀಗೆಂದು ಹೇಳಿದ್ದಾರೆ. "ಮಾಧವ ವಿದ್ಯಾರಣ್ಯರು ಏಕವ್ಯಕ್ತಿಗಳು ಎಂಬದಾಗಿ ಯಾವ ನಂಬಬಹುದಾದ ಶಾಸನದಲ್ಲಿಯೂ ಹೇಳಿಲ್ಲ. ಒಂದು ವೇಳೆ ಇದ್ದರೂ ಇರಬಹುದು" ಈಚೆಗೆ ಶ್ರೀಮಾನ್ ಡಿ. ವಿ. ಗುಂಡಪ್ಪನವರು ತಮ್ಮ 'ವಿದ್ಯಾರಣ್ಯರ ಕಾಲವಿಚಾರ' 'ವಿದ್ಯಾರಣ್ಯರ ಸಮಕಾಲೀನರು' ಎಂಬ ಗ್ರಂಥಗಳಲ್ಲಿ ಮಾಧವ ವಿದ್ಯಾರಣ್ಯರು ಏಕವ್ಯಕ್ತಿಗಳೆಂದೂ ವಿದ್ಯಾರಣ್ಯರೇ ವಿದ್ಯಾನಗರಿಯನ್ನು ೧೩೩೬ ರಲ್ಲಿ ಸ್ಥಾಪಿಸಿದರೆಂದೂ ಸಾಯಣ ಭೋಗನಾಥರು ವಿದ್ಯಾರಣ್ಯರ ಸಹೋದರರೆಂದೂ ಪರಾಶರ ಸ್ಮೃತಿ ವ್ಯಾಖ್ಯಾನಾದಿ ಗ್ರಂಥಗಳು ವಿದ್ಯಾರಣ್ಯ ಕೃತವೆಂದೂ ಹೇಳಿ ತಮ್ಮ ಹೇಳಿಕೆಗೆ ಆಧಾರಭೂತವಾಗಿ ಹಂಪೆಯ ಶಾಸನ ಬಾಗೇಪಲ್ಲಿಯ ೭೦ನೆಯ ಶಾಸನ ಮುಳುಬಾಗಿಲಿನ ಶಾಸನ ಶೃಂಗೇರಿಯ ಶಾಸನ, ಅಹೋಬಲ ಪಂಡಿತೀಯವೆಂಬ ಆಂಧ್ರ ವ್ಯಾಕರಣ ಮೊದಲಾದವುಗಳಿಂದ ಕೆಲವು ಭಾಗಗಳನ್ನು ಎತ್ತಿ ತೋರಿಸಿದ್ದಾರೆ. ಇವುಗಳಲ್ಲಿ ಯಾವ ಶಾಸನವೂ ಶಾಸ್ತ್ರ ದೃಷ್ಟಿಯಿಂದ ನಂಬಲರ್ಹವಲ್ಲ. ಹಂಪೆ, ಬಾಗೇಪಲ್ಲಿ, ಶೃಂಗೇರಿಯ ಶಾಸನಗಳಿಗೆ ಮೂಲ ಪ್ರತಿಗಳೇ ಸಿಕ್ಕಿಲ್ಲ. ಉಳಿದುವು ಕೃತಕಗಳಿರಬಹುದೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಆಂಧ್ರ 'ಶಬ್ದಾನುಶಾಸನ' ಕರ್ತೃವಾದ ಅಹೋಬಲ ಪಂಡಿತನು ವಿದ್ಯಾರಣ್ಯರ ಸಮಕಾಲೀನನಲ್ಲವೆಂದೂ ಅವರಿಂದ ೩೦೦ ವರ್ಷಗಳಾದರೂ ಈಚೆಗೆ ಇದ್ದಿರಬಹುದೆಂದೂ ಆಂಧ್ರ ಸಾಹಿತ್ಯ ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಆದುದರಿಂದ ಅತನ ಮಾತಿಗೂ ಪೂರ್ಣವಾದ ಬೆಲೆಯನ್ನು ಕೊಡಲು ಸಾಧ್ಯವಿಲ್ಲ. ಸಾಯಣ ಭೋಗನಾಥರು ವಿದ್ಯಾರಣ್ಯರ ಸಹೋದರರೆಂಬ ವಾದವು ಮಾಧವ ವಿದ್ಯಾರಣ್ಯರು ಏಕವ್ಯಕ್ತಿಯೆಂಬ ಒಪ್ಪಿಕೊಂಡ ಮೇಲೆ ಹೇಳುವ ಮಾತು. ಈ ವಿಷಯವು ಪೂರ್ಣವಾಗಿ ನಂಬಬಹುದಾದ ಯಾವ ಶಾಸನದಲ್ಲಿಯಾಗಲಿ ಅಥವಾ ಆ ಕಾಲದ ಗ್ರಂಥಗಳಲ್ಲಾಗಲಿ ಅನುಮೋದಿತವಾಗಿಲ್ಲ. ಇದೇ ವಿಷಯದಲ್ಲಿ ಈಚೆಗೆ ಮೈಸೂರು ಶಾಸನದ ಇಲಾಖೆಯ ಶ್ರೀಮಾನ್ ಆರ್. ರಾಮರಾವ್ ಬಿ. ಎ. ಅವರು 'ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ' ಎಂಬ ತ್ರೈಮಾಸಪತ್ರಿಕೆಯಲ್ಲಿ 'ಮಾಧವ ವಿದ್ಯಾರಣ್ಯರ ಐಕ್ಯತವಾದ ಎಂಬ ಲೇಖ' ನದಲ್ಲಿ ಇವರಿಬ್ಬರೂ ಭಿನ್ನ ವ್ಯಕ್ತಿಗಳಿರಬಹುದು ಎಂಬುವುದಕ್ಕೆ ಈ ಕೆಳಗೆ ಕಂಡ ಕಾರಣಗಳನ್ನು ಕೊಟ್ಟಿದ್ದಾರೆ.

ಅ ] ಶೃಂಗೇರಿಯ ಸಂಪ್ರದಾಯಗಳನ್ನು ತಿಳಿಸುವ 'ವಿದ್ಯಾರಣ್ಯ ಕಾಲಜ್ಞಾನ' 'ಗುರುವಂಶ ಕಾವ್ಯ' ಮೊದಲಾದುವುಗಳಲ್ಲಿ ವಿದ್ಯಾರಣ್ಯರು ಮಾಧವಾಚಾರ್ಯರಿಗಿಂತ ಭಿನ್ನ ವ್ಯಕ್ತಿಯೆಂಬದಾಗಿ ಹೇಳಿದೆ.

ಆ ] ಸುಮಾರು ಕ್ರಿ. ಶ. ೧೭೦೮ನೆಯ ವರ್ಷದಲ್ಲಿ ರಚಿತವಾದ ಶಿವತತ್ವ ರತ್ನಾಕರದಲ್ಲಿ 'ವಿದ್ಯಾರಣ್ಯರ ಪೂರ್ವ ನಾಮಧೇಯವು ಶಿವಧರ್ಮ ಎಂಬದಾಗಿ ಹೇಳಿರುವುದಲ್ಲದೆ ಅವರು ಮಾಧವಾಚಾರ್ಯರಿಂದ ಭಿನ್ನರೆಂಬದಾಗಿ ಹೇಳಿದೆ.

ಇ ) ನಂಬಬಹುದಾದ ಯಾವ ಶಾಸನದಲ್ಲಿಯೂ [illegible] ಐಕ್ಯತೆಯು ಹೇಳಿಲ್ಲ.

ರಾಜಧಾನಿಯಲ್ಲಿ ಪ್ರಾರಂಭವಾದ ಸಾಹಿತ್ಯಪ್ರವಾಹವು ಅತಿ ಶೀಘ್ರದಲ್ಲಿ ನಾನಾಮುಖವಾಗಿ ಹರಿಯಲಾರಂಭಿಸಿತು. ಪಂಡಿತರ ಸಂಸರ್ಗದಿಂದ ಅನೇಕ ರಾಜಮನೆತನದವರೂ ಮಂತ್ರಿಗಳೂ ದಂಡನಾಯಕರೂ ಸ್ವತಃ ಗ್ರಂಥಗಳನ್ನು ರಚಿಸಿದರು. ಇಮ್ಮಡಿ ಕಂಪರಾಯನ ಪತ್ನಿಯಾದ ಗಂಗಾದೇವಿಯು ತನ್ನ ಪತಿಯ ವಿಜಯ ಯಾತ್ರೆಯನ್ನು ಚಿರಸ್ಥಾಯಿಯನ್ನಾಗಿ ಮಾಡುವದಕ್ಕಾಗಿ 'ವೀರ ಕಂಪರಾಯ ಚರಿತ'ವೆಂಬ ಉತ್ಕೃಷ್ಟವಾದ ಕಾವ್ಯವನ್ನು ಬರೆದಳು.[೧೬] ಗೋವಾ ಪ್ರಾಂತದ ರಾಜಪ್ರತಿನಿಧಿಯಾಗಿದ್ದ ಮಾರಪ್ಪ ಒಡೆಯರ ಮಂತ್ರಿಯಾದ ಮಾಧವ ಮಂತ್ರಿಯು ಸೂತಸಂಹಿತೆಗೆ 'ತರ್ಕದೀಪಿಕೆ' ಎಂಬ ವ್ಯಾಖ್ಯಾನವನ್ನು ರಚಿಸಿದನು.[೧೭] ಇದರಲ್ಲಿ ಇವನು ತನ್ನನ್ನು 'ಉಪನಿಷನ್ಮಾರ್ಗಪ್ರತಿಷ್ಠಾಪನಾಚಾರ್ಯ' ಎಂಬದಾಗಿ ಸಂಬೋಧಿಸಿಕೊಂಡಿದ್ದಾನೆ. ಸೊರಬದ ೩೭೫ ನೆಯ ಶಾಸನದಿಂದ 'ಶೈವಾಗಮಸಾರಸಂಗ್ರಹ' ವನ್ನು ರಚಿಸಿದ ಮಾರಪ್ಪ ಒಡೆಯರಿಗೆ ಈತನು ಗ್ರಂಥರಚನೆಯಲ್ಲಿ ಸಹಾಯ ಮಾಡಿದಂತೆ ತಿಳಿದು ಬರುತ್ತದೆ. ಇದೇಕಾಲದಲ್ಲಿ ಚನ್ನಭಟ್ಟನೆಂಬುವನು ಹರಿಹರರಾಯನ ಆಶ್ರಯದಲ್ಲಿ 'ತರ್ಕಭಾಷ್ಯವಾಖ್ಯೆ' ಯನ್ನು ರಚಿಸಿರುವನೆಂಬುದು ಆ ಗ್ರಂಥಾಂತ್ಯದ 'ಇತಿಶ್ರೀ ಹರಿಹರಪಾಲಿತೇನ ಸಹಜ ಸರ್ವಜ್ಞ ವಿಷ್ಣುದೇವಾರಾಧ್ಯತನೂಜೇನ ಚನ್ನಭಟ್ಟೇನ ವಿರಚಿತಾಯಾಂ' ತರ್ಕಭಾಷ್ಯಾಖ್ಯಾಯಾಂ ಎಂಬ ವಾಕ್ಯದಿಂದ ವ್ಯಕ್ತಪಡುತ್ತದೆ. ಜೈನಮತೀಯನಾದ ಇರುಗಪದಂಡನಾಥನು ತನ್ನ 'ನಾನಾರ್ಥರತ್ನಮಾಲೆ' ಎಂಬ ಕೋಶವನ್ನು ರಚಿಸಿದುದೂ ಹರಿರಾಯನ ಆಶ್ರಯದಲ್ಲಿಯೇ.[೧೮] ಈತನು ತನ್ನ ಗ್ರಂಥದಲ್ಲಿ ತನ್ನನ್ನು 'ಹರಿಹರಸ್ಯದ್ವಿತೀಯಮಂತಕರಣಂ' ಎಂಬದಾಗಿ ವಿಶೇಷಿಸಿಕೊಂಡಿದ್ದಾನೆ. ಹರಿಹರನ ಮಗನಾದ ಯುವರಾಜ ವಿರುಪಾಕ್ಷ ಅಥವಾ ವಿರುಪಣ್ಣ ಒಡೆಯರು 'ನಾರಾಯಣವಿಲಾಸ' ವೆಂಬ ನಾಟಕವನ್ನು ತನ್ನ

ಈ ) ಮಾಧವಸಾಯಣರ ಗ್ರಂಥಗಳಲ್ಲಿ ಈ ಐಕ್ಯತೆಯು ಹೇಳಿಲ್ಲದೇ ಇರುವುದಲ್ಲದೆ ಭಿನ್ನತೆಯೇ ವ್ಯಕ್ತಪಡುತ್ತದೆ.

ಉ ) ವಿದ್ಯಾರಣ್ಯರು ಸನ್ಯಾಸಿಗಳು, ಇವರ ಹೆಸರು ಬರುವ ಶಾಸನಗಳಲ್ಲೆಲ್ಲಾ ರಾಜನು ಇವರನ್ನು ಗುರುವೆಂಬದಾಗಿ ಸ್ತೋತ್ರಮಾಡಿ ಅವರ ಅಜ್ಞೆಯ ಪ್ರಕಾರ ದಾನಗಳನ್ನು ಕೊಟ್ಟಿದ್ದಾನೆ. ಮಾಧವನು ಗೃಹಸ್ಥ; ಯಜ್ಞಯಾಗಾದಿಗಳನ್ನು ಮಾಡಿದನು. ಈತನು ರಾಜನ ವಿಧೇಯನಾಗಿ ಆತನ ಅಜ್ಞೆಯ ಪ್ರಕಾರ ಕೆಲಸ ಮಾಡಿರುವುದು ಗ್ರಂಥಗಳಲ್ಲಿ ಲಿಖಿತವಾಗಿದೆ.

ಊ ] ಮಾಧವಾಚಾರ್ಯನು ಒಂದನೆಯ ಬುಕ್ಕಮಹಾರಾಯನ ಕಾಲದವನು; ವಿದ್ಯಾರಣ್ಯರ ಶಾಸನಗಳೆಲ್ಲವೂ ವಿಶೇಷವಾಗಿ ಇಮ್ಮಡಿ ಹರಿಹರರಾಯನ ಕಾಲದವು ೧೩೭೭ನೆಯ ವರ್ಷಕ್ಕಿಂತ ಹಿಂದೆ ವಿದ್ಯಾರಣ್ಯರ ಹೆಸರು ಬರುವ ಯಾವ ನಂಬಬಹುದಾದ ಶಾಸನವೂ ಇದುವರೆಗೆ ದೊರೆತಿಲ್ಲ. ಈ ಕಾರಣಗಳಿಂದ ವಿದ್ಯಾರಣ್ಯರು ಸಾಯಣ ಸಹೋದರನಾದ ಪರಾಶರಸ್ಮೃತಿ ವ್ಯಾಖ್ಯಾನವೆ ಮೊದಲಾದ ಗ್ರಂಥಗಳ ಕರ್ತೃವಾದ ಮಾಧವನಿಂದ ಭಿನ್ನರಿರಬಹುದು ಎಂದು ಬರೆದಿದ್ದಾರೆ.

ಇದಕ್ಕೆ ಪ್ರತಿಯಾಗಿ ಶ್ರೀಮಾನ್ ಮಾರ್ಕಂಡೇಯ ಶರ್ಮರು ಅದೇ ಪತ್ರಿಕೆಯಲ್ಲಿ ಮಾಧವ ವಿದ್ಯಾರಣ್ಯರ ಐಕ್ಯತೆಯನ್ನು ಸ್ಥಾಪಿಸುವುದಕ್ಕೆ ಪ್ರಯತ್ನಪಟ್ಟು ಕೆಲವು ಸಮಾಧಾನಗಳನ್ನೂ ಹೇಳಿದ್ದಾರೆ. ಅವು ಸರಿಯಾದ ಸಮಾಧಾನಗಳಂತೆ ತೋರುವುದಿಲ್ಲ. ಶ್ರೀಮಾನ್ ಶರ್ಮರಿಗೆ ರಾಯರು ಅದೇ ಪತ್ರಿಕೆಯಲ್ಲಿ ಪುನಃ ಉತ್ತರವನ್ನೂ ಬರೆದಿರುತ್ತಾರೆ. ಶ್ರೀಮಾನ್ ಎಂ. ಎ. ದೊರೆಸ್ವಾಮಯ್ಯಂಗಾರ್ ಎಂ. ಎ. ಬಿ. ಎಲ್. ಅವರು ಜರ್ನಲ್ ಆಫ್. ಇಂಡಿಯನ್ ಹಿಸ್ಟರಿ ಎಂಬ ಪತ್ರಿಕೆಯಲ್ಲಿ ರಾಮರಾಯರ ವಾದವನ್ನು ಪೋಷಿಸಿದ್ದಾರೆ. ಇದು ವರೆಗೆ ಈ ವಿಷಯವಾಗಿ ಸಿಕ್ಕಬಹುದಾದ ಆಧಾರಗಳ ಪರಾಮರ್ಶೆಯಿಂದ ನಮ್ಮ ಅಭಿಪ್ರಾಯವೂ ಈ ಕಡೆಯೇ ಹೆಚ್ಚು ಒಲಿಯುವುದರಿಂದ ಈ ಲೇಖನದಲ್ಲಿ ವಿದ್ಯಾರಣ್ಯ ಮಾಧವರನ್ನು ಭಿನ್ನ ವ್ಯಕ್ತಿಗಳೆಂದು ಸೂಚಿಸಿದೆ.

---

೧೫ W. V. L. x p 116. ೧೬ Sources p. 23 ೧೭ Ibid p. 51 ೧೮ Ibid p. 52

ತಂದೆಯ ಪ್ರೋತ್ಸಾಹದಿಂದ ರಚಿಸಿದನು. ೧೯ ಇದರ ಪ್ರಾರಂಭದಲ್ಲಿ ಸೂತ್ರಧಾರನು ಇವನನ್ನು 'ಸಕಲಕಲಾವಿಲಾಸಿನೀಸ್ವಯಂವರಪತಿಃ' ಎಂಬದಾಗಿ ಕರೆದಿದ್ದಾನೆ.

ಇದು ವರೆಗೆ ಪ್ರಸ್ತಾಪಿಸಿದ ಗ್ರಂಥಗಳೆಲ್ಲವೂ ಸಂಸ್ಕೃತ ಭಾಷೆಯವು. ಸಂಗಮರಾಜರ ಕೃಪಾಕಟಾಕ್ಷವು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪ್ರಸರಿಸದೇ ಹೋಗಲಿಲ್ಲ. ಕನ್ನಡ ಸಾಹಿತ್ಯವು ಬುಕ್ಕಹರಿಹರರ ಕಾಲದಲ್ಲಿ ಸಾಮಾನ್ಯವಾದ ಪ್ರೋತ್ಸಾಹವನ್ನು ಪಡೆದು ಕ್ರಮೇಣ ಬಂದ ರಾಜರ ಕಾಲದಲ್ಲಿ ಸ್ವಲ್ಪ ಸ್ವಲ್ಪವಾಗಿ ತನ್ನ ಸ್ಥಾನವನ್ನು ಬಲಪಡಿಸಿಕೊಂಡು ಆ ವಂಶದ ಕೊನೆಯ ರಾಜರಾದ ಪ್ರೌಢ ದೇವರಾಯ ಮಲ್ಲಿಕಾರ್ಜುನರ ಕಾಲಕ್ಕೆ ವಿಶೇಷವಾದ ಔನ್ನತ್ಯವನ್ನು ಹೊಂದಿತು. ಈ ಕಾಲದ ಸಂಸ್ಕೃತ ಸಾಹಿತ್ಯದಂತೆ ಈ ಕಾಲದ ಕನ್ನಡ ಸಾಹಿತ್ಯವೂ ಮತಗ್ರಂಥಗಳಿಂದ ತುಂಬಿದೆ ಅವರಲ್ಲಿಯೂ ವೀರಶೈವ ಗ್ರಂಥಗಳೇ ಬಹಳ. ವಿಜಯನಗರ ಸಾಮ್ರಾಜ್ಯದ ಪ್ರಾರಂಭದೆಶೆಯಲ್ಲಿದ್ದ ಕನ್ನಡ ಗ್ರಂಥಕರ್ತರಲ್ಲಿ ಗುರುದೇವ, ಭೀಮಕವಿ, ಪದ್ಮಣಾಂಕ ಮತ್ತು ನೀಲಕಂಠ ಶಿವಾಚಾರ್ಯ ಈ ನಾಲ್ವರು ಮುಖ್ಯರು ಗುರುದೇವನು ವೀರಶೈವ ಪಂಚಸ್ತೋತ್ರ[illegible]ಟೀಕೆಗಳನ್ನು [illegible]ದಿದ್ದಾನೆ. ೨೦ ಒಬ್ಬ ಸಿದ್ಧದೇವನಿಗೋಸ್ಕರ ಸಂಸ್ಕೃತದಲ್ಲಿ ವೀರಶೈವಾಚಾರ ಪ್ರದೀಪಿಕೆ ಎಂಬ ಗ್ರಂಥವನ್ನು ಬರೆದಿರುವುದಾಗಿ ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ ಟೀಕೆಯ ಕೊನೆಯಲ್ಲಿ ತಾನ 'ಶ್ರೀಮದ್ವೇದಾಗಮೋಪನಿಷತ್ಪುರಾಣೋಕ್ತಮಾರ್ಗಪ್ರವರ್ತನಪ್ರವೀಣ' ಎಂಬದಾಗಿ ಹೇಳಿದ್ದಾನೆ ಕನ್ನಡಾಂಧ್ರಭಾಷಾ ಪಂಡಿತನಾದ ಭೀಮಕವಿಯು ಅಸಮಲಿಂಗೈಕ್ಯಾನು ಭಾವಪ್ರಸರಮತಿಯಾದ ಪಾಲ್ಕುರಿಕೆ ಸೋಮನು ತೆಲುಗಿನಲ್ಲಿ ರಚಿಸಿದ ಬಸವಪುರಾಣವನ್ನು ಕನ್ನಡದಲ್ಲಿ ಬರೆದಿದ್ದಾನೆ ೨೧. ಉಭಯಭಾಷಾಕವಿಯಾದ ಪದ್ಮಣಾಂಕನು ಕೆರೆಯ ಪದ್ಮರಸನ ಚರಿತ್ರವಾದ ಪದ್ಮರಾಜಪುರಾಣವನ್ನು ರಚಿಸಿದನು ೨೨ ನೀಲಕಂಠ ಶಿವಾಚಾರ್ಯನು ಬ್ರಹ್ಮಸೂತ್ರವ್ಯಾಖ್ಯಾನರೂಪವಾದ, 'ಕ್ರಿಯಾಸಾರ' ವೆಂಬ ಒಂದು ಸಂಸ್ಕೃತ ಗ್ರಂಥವನ್ನು, ಅದೇ ವಿಷಯವನ್ನು ಕುರಿತು ಒಂದು ಭಾಷಾಪ್ರಬಂಧವನ್ನೂ ರಚಿಸಿರುವಂತೆ ತೋರುತ್ತದೆ. ೨೩ ಶಿವಪಕ್ಷಪಾತಿಗಳಾದ ರಾಜರುಗಳ ಆಶ್ರಯದಲ್ಲಿ ವೀರಶೈವರೇ ವಿಶೇಷವಾಗಿ ಗ್ರಂಥರಚನೆಯನ್ನು ಮಾಡಿದರೂ ರಾಜರ ಕೈಕೆಳಗಿದ್ದ ಅನೇಕ ಅನ್ಯಮತೀಯ ಮಂತ್ರಿಗಳ ಮತ್ತು ದಂಡನಾಯಕರ ಆಶ್ರಯದಲ್ಲಿ ಇತರರೂ ಗ್ರಂಥರಚನೆಯನ್ನು ಮಾಡಿದರು. 'ಧರ್ಮನಾಥಪುರಾಣ' ಕರ್ತೃವಾದ ಮಧುರನು (ಜೈನ) ಬುಕ್ಕರಾಜಸುತ ಹರಿಹರರಾಯನ ಪ್ರಧಾನನಾದ ಮುದ್ದಣ್ಣದಂಡೇಶನ ಆಸ್ಥಾನಚೂಡಾಮಣಿಯಾಗಿದ್ದನು. ಇವನಿಗೆ 'ಮಧುರಮಾಧವ' 'ಸರಸಕವಿರಸಾಲವಸಂತ' 'ವಿಶ್ವವಿದ್ಯಾಸಮುದಯಸುಮನಸ್ಸಂಚರಚ್ಚಂಚರೀಕ' ಎಂಬ ಬಿರುದುಗಳಿದ್ದವು. ಇವನ ಕವಿತ್ವವು ಬಹು ಸರಸವಾಗಿಯೂ ಪ್ರೌಢವಾಗಿಯೂ ಇದೆ ೨೪ 'ಗೊಮ್ಮಟಸಾರ' ಕ್ಕೂ ಅಮಿತಗತಿಯ 'ಶ್ರಾವಕಾಚಾರ' ಕ್ಕೂ ವ್ಯಾಖ್ಯಾನವನ್ನು ಬರೆದ ಕೇಶವವರ್ಣಿಯೂ, 'ಖಗೇಂದ್ರಮಣಿದರ್ಪಣ' ಕಾರನಾದ ಮಂಗರಾಜನೂ, ಮಲ್ಲಿಸೇನನ 'ಚಿತ್ರವಲ್ಲಭ' ದ ವ್ಯಾಖ್ಯಾಕಾರನಾದ ಅಭಿನವ ಶ್ರುತಿಮುನಿಯೂ ಹರಿಹರರಾಯನ ಕಾಲದಲ್ಲಿ ಅವನಿಂದ ಪರೋಕ್ಷವಾದ ಸಹಾಯಗಳನ್ನು ಪಡೆದು ಗ್ರಂಥಗಳನ್ನು ರಚಿಸಿದರು ಕನ್ನಡ ಸಾಹಿತ್ಯದಲ್ಲಿ ಹರಿಹರರಾಯನು ಇಷ್ಟು ಅಭಿಮಾನವನ್ನು ತೋರಿಸುತ್ತಿದ್ದುದರಿಂದಲೇ ೧೩೮೭ನೆಯ ವರ್ಷದ ಒಂದು ಶಾಸನದಲ್ಲಿ ಅವನನ್ನು 'ಕರ್ಣಾಟಕ ವಿದ್ಯಾವಿಲಾಸ' ಎಂಬದಾಗಿ ಕರೆದಿದೆ, ೨೫

ಆದರೂ ಕನ್ನಡ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ದೊರೆತುದು ವಿಜಯನಗರದ ಪ್ರೌಢ ದೇವರಾಯನ ಕಾಲದಲ್ಲಿ. ಪ್ರೌಢ ದೇವರಾಯನೂ ಅವನ ಅಧಿಕಾರಿಗಳೂ ಅನೇಕ ಕನ್ನಡ ವೀರಶೈವ ಗ್ರಂಥಕರ್ತರಿಗೆ ಪ್ರೋತ್ಸಾಹವನ್ನಿತ್ತರು ಇವರ ಆಶ್ರಯದಲ್ಲಿದ್ದವರಲ್ಲಿ 'ಏಕೋತ್ತರ ಶತಸ್ಥಲ' 'ಷಟ್ಸ್ಥಲವಿವೇಕ' ಗಳ ಕರ್ತೃವೂ ವೀರಶೈವ ಗಣಾಚಾರ್ಯನೂ ಆದ ಮಹಾಲಿಂಗದೇವನು ಮುಖ್ಯವಾದವನು. ಇವನು ತನ್ನ ಶಿಷ್ಯನಾದ ಪ್ರೌಢದೇವರಾಯನ ದಂಡನಾಥನಾದ ಜಕ್ಕಣ್ಣನ ಉಪದೇಶಾರ್ಥವಾಗಿ ರಚಿಸಿದಂತೆ ಹೇಳಿ

೧೯ Ibid p. 53 ೨೦ ಕ. ಚ. II p. 34 ೨೧ Ibid p 36 ೨೨ ಕ. ಚ. I 433
೨೩ ಕ. ಚ. I p 444 ೨೪ Ibid p. 427 ೨೫ E. C. VI Kopp 34

ಕೊಂಡಿದ್ದಾನೆ.[೨೬] ‘ಶಿವತತ್ತ್ವ ಚಿಂತಾಮಣಿ’ಯ ಕರ್ತೃವಾದ ಲಕ್ಕಣ್ಣದಂಡೇಶನು ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಮತ್ತೊಬ್ಬ ಕವಿ [೨೭] ಇವನು ತನ್ನ ಗ್ರಂಥವನ್ನು “ವೀರಶೈವ ಸಿದ್ಧಾಂತ ತಂತ್ರದ ಸೂತ್ರವಿದು, ಸಕಲವೇದಾಗಮದ ಶಿಖಾಸೂತ್ರವಿಂತಿದು, ಪರಮನಿರ್ವಾಣ ಪರಿಪದವೆನಿಪ ಶಾಂಭವೀಯೋಗ ಸೂತ್ರವು” ಎಂದು ಹೊಗಳಿಕೊಂಡಿದ್ದಾನೆ. ಜಕ್ಕಣ್ಣ ದಂಡನಾಥನೂ ಅವನ ಗುರುವಾದ ಕುಮಾರ ಬಂಕನಾಥನೂ ಅನೇಕ ಗ್ರಂಥಗಳನ್ನು ಸ್ವತಃ ರಚಿಸಿದುದಲ್ಲದೆ ಅನೇಕ ಕವಿಗಳಿಗೆ ಪೋಷಕರಾಗಿದ್ದರು. ‘ಪ್ರಭುಲಿಂಗಲೀಲೆ’ಯನ್ನು ಬರೆದ ಚಾಮರಸನೂ ಭಾರತವನ್ನು ರಚಿಸಿದ ಕುಮಾರ ವ್ಯಾಸನೂ ಪ್ರೌಢದೇವರಾಯನ ಆಸ್ಥಾನದಲ್ಲಿದ್ದಂತೆಯೂ ಅವರಿಬ್ಬರಿಗೂ ಸ್ಪರ್ಧೆ ನಡೆದು ಚಾಮರಸನೇ ಜಯಶಾಲಿಯಾದಂತೆಯೂ ‘ಭೈರವೇಶ್ವರ ಕಥಾಸೂತ್ರರತ್ನಾಕರ’ದಲ್ಲಿಯೂ ಗುರುರಾಜ ಚಾರಿತ್ರ’ದಲ್ಲಿಯೂ ಹೇಳಿದೆ.[೨೮] ಆದರೆ ನವೀನ ಸಂಶೋಧನೆಯಿಂದ ಈ ಕಥೆಯು ಬಹುಮಟ್ಟಿಗೆ ನಂಬಲರ್ಹವಲ್ಲವೆಂಬುದಾಗಿ ತೋರಿಬಂದಿದೆ. ಚಾಮರಸನು ಮಾತ್ರ ಪ್ರೌಢದೇವರಾಯನ ಕಾಲದಲ್ಲಿ ಗ್ರಂಥರಚನೆಯನ್ನು ಮಾಡಿರಬಹುದು. ಮೇಲೆ ಹೇಳಿದವರಲ್ಲದೆ ‘ಲಿಂಗಲೀಲಾವಿಲಾಸ ಚಾರಿತ್ರ’ವನ್ನು ಬರೆದ ಕಲ್ಲುಮಠದ ಪ್ರಭುದೇವನೂ ಜಕ್ಕಣಾರ್ಯನ ‘ಏಕೋತ್ತರ ಶತಸ್ಥಲ’ಕ್ಕೆ ಟೀಕೆಯನ್ನು ರಚಿಸಿದ ಶ್ರೀಗಿರೀಂದ್ರನೂ ‘ಕರಸ್ಥಲದ ನಾಗಲಿಂಗತ್ರಿಪದಿ’ಯನ್ನು ಬರೆದ ನಾಗದೇವನೂ ‘ಶಿವಯೋಗಾಂಗಭೂಷಣ’ದ ಕರ್ತೃವಾದ ಗುರುಬಸವನೂ ‘ಅನುಭೂತಸೂತ್ರ’ಕಾರನಾದ ಮೊಗ್ಗೆಯ ಮಾಯಿದೇವನೂ ದೇವರಾಯನ ಕಾಲದಲ್ಲಿ ಗ್ರಂಥರಚನೆಯನ್ನು ಮಾಡಿ ಕನ್ನಡ ಸಾಹಿತ್ಯವನ್ನು ಸಮೃದ್ಧವನ್ನಾಗಿ ಮಾಡಿದರು.

ಪ್ರೌಢದೇವರಾಯನು ವಿದ್ಯಾಪಕ್ಷಪಾತಿಯೂ ಕವಿಜನಾಭಿಮಾನಿಯೂ ಆಗಿದ್ದುದರಿಂದ ನಾನಾದೇಶದ ಕವಿಗಳು ಅವನ ಆಸ್ಥಾನಕ್ಕೆ ಬಂದು ತಮ್ಮ ವೈದುಷ್ಯವನ್ನು ಪ್ರಕಟನೆಮಾಡಿ ಅವನಿಂದ ಸನ್ಮಾನಿತರಾಗುತ್ತಿದ್ದರು. ‘ಗಂಗಾದಾಸ ಪ್ರತಾಪವಿಲಾಸ’ವನ್ನು ರಚಿಸಿದ ಗಂಗಾಧರನು ತಾನು ಪ್ರೌಢದೇವರಾಯನ ಆಸ್ಥಾನ ಕವಿಯಾಗಿದ್ದಂತೆಯೂ ಅವನಿಂದ ವಿಶೇಷವಾದ ಸನ್ಮಾನಗಳನ್ನು ಪಡೆದಂತೆಯೂ ತನ್ನ ಗ್ರಂಥದಲ್ಲಿ ಹೇಳಿದ್ದಾನೆ [೨೯] ಆಂಧ್ರಸಾಹಿತ್ಯದಲ್ಲಿ ಸುಪ್ರಸಿದ್ಧನಾದ ಶ್ರೀನಾಥನು ಪ್ರೌಢದೇವರಾಯನ ಆಸ್ಥಾನಕ್ಕೆ ಹೋಗಿದ್ದ ವಿಷಯವನ್ನು ಕುರಿತು ಅನೇಕ ಚಾಟುಶ್ಲೋಕಗಳಿವೆ ಶ್ರೀನಾಥನು ವೇಲಮ ರಾಜನಾದ ಸರ್ವಜ್ಞಭೂಪಾಲನ ಆಸ್ಥಾನದಲ್ಲಿದ್ದಾಗ ಸರಸ್ವತೀಪ್ರಾರ್ಥನಾರೂಪವಾಗಿ ರಚಿಸಿರುವದೆಂದು ಪ್ರತೀತಿ ಇರುವ

ಸೀ॥ ದೀನಾರ ಟಂಕಾಲ ದೀರ್ಥಮಾಡಿಂಚಿತಿ
ದಕ್ಷಿಣಾಧೀಶು ಮುತ್ಯಾಲಶಾಲ
ಪಲುಕುಡೋಡ್ಡೆ ಕಾಂಧ್ರಭಾಷಾ ಮಹಾಕಾವ್ಯ
ನೈಷಧಗ್ರಂಥ ಸಂದರ್ಭಮುನುಕು
ಪಗಲು ‘ಗೊಟ್ಟಿಂಚಿ ತುದ್ಭಟವಿವಾದ ಪ್ರೌಢಿ
ಗೌಡಡಿಂಡಿಯ ಭಟ್ಟು ಕಂಚುಡಕ್ಕ
ಚಂದ್ರಭೂಷ ಕ್ರಿಯಾಶಕ್ತಿ ರಾಯುಲಯೊದ್ದ
ಬಾದುಕೊಲ್ಪಿತಿ ಸಾರ್ವಭೌಮ ಬಿರುದ
ಗೀ॥ ಮೆಟುಲಮೆಪ್ಪಿಂಚಿದೋ ನನ್ನು ನಿಂಕಮೀದ
ರಾವುಸಿಂಗ ಮಹೀಪಾಲು ಧೀವಿಶಾಲು
ಸಿಂಡುಕೊಲುವುನ ನೆಲಕೊನಿಯುಂಡಿ ನೀವು
ಸಕಲ ಸದ್ಗುಣ ನಿಕುರಂಬಶಾರದಾಂಬ.

ಎಂಬ ಪದ್ಯದಿಂದ ಶ್ರೀನಾಥನು ದಕ್ಷಿಣದೇಶದ ರಾಜನ [ವಿಜಯನಗರ] ಆಸ್ಥಾನದಲ್ಲಿ ಕನಕಾಭಿಷಿಕ್ತನಾದನೆಂಬುದೂ ಡಿಂಡಿಮ ಭಟ್ಟನನ್ನು ವಾದದಲ್ಲಿ ಸೋಲಿಸಿ ಅವನ ಕಂಚು ಢಕ್ಕವನ್ನು ಕಳಿಸಿದನೆಂಬುದೂ ಚಂದ್ರ ಭೂಷ ಕ್ರಿಯಾಶಕ್ತಿಯ ಸನ್ನಿಧಾನದಲ್ಲಿ ಕವಿಸಾರ್ವಭೌಮನೆಂಬ ಬಿರುದನ್ನು ಪಡೆದನೆಂಬುದೂ ಶ್ರುತಪಡುತ್ತದೆ ಇದೇ ವಿಷಯವು ಶ್ರೀನಾಥನಿಂದ ರಚಿತವಾದ ಕಾಶೀಖಂಡದ ಈ ಕೆಳಗಿನ ಶ್ಲೋಕದಿಂದ ಧೃಢೀಕೃತವಾಗಿದೆ

ಕರ್ಣಾಟಕ್ಷಿತಿ ಪಾಲಮೌಕ್ತಿಕ ಸಭಾಗಾರಾಂತರಾ
ಕಲ್ಪಿತ
ಸ್ವರ್ಣಸ್ನಾನ ಜಗತ್ಪ್ರಸಿದ್ಧ ಕವಿರಾಟ್ಸಂಸ್ತುತ್ಯ
ಚಾರಿತ್ರಧು
ಗ್ಗೀರ್ಣೋರುಶಿಗಭೀರ ಪ್ರಾಹ್ಣ ಮುಖ ಮಧ್ಯಾಹ್ನಾ
ಪರಾಹ್ಣಾರ್ಜಿತಾ

---

[೨೬] ಕ. ಚ. II P. 50 [೨೭] Ibid P. 53 [೨೮] ಕ. ಚ. II P. 59 [೨೯] Sources P. 65

ಪ್ರಪಂಚದಲ್ಲಿ ಕೆಲಸ ಮಾಡಿದರು ಸಾಳುವ ಅರಸರು ಸ್ವಲ್ಪ ಸ್ವಲ್ಪವಾಗಿ ವೈಷ್ಣವರಲ್ಲಿ ಹೆಚ್ಚು ವಿಶ್ವಾಸವನ್ನು ತೋರಿಸುತ್ತಾ ಬಂದುದರಿಂದ ಸಂಗಮವಂಶೀಯರ ಆಶ್ರಯದಲ್ಲಿದ್ದ ವೀರಶೈವರ ಪ್ರಾಬಲ್ಯವು ಇವರ ಕಾಲದಲ್ಲಿ ಕಡಿಮೆಯಾಗುತ್ತಾ ಬಂದಂತೆ ತೋರುತ್ತದೆ.

ಸಾಳುವ ನರಸಿಂಹನು ಉದಾರಿ 'ನವರತ್ನಮುಲು' ಎಂಬ ಒಂದು ಗ್ರಂಥದಲ್ಲಿ ಇವನು 'ಸಹಜದಾನ ಶಿಬೀಂದ್ರ' ಎಂಬದಾಗಿ ಸಂಬೋಧಿಸಲ್ಪಟ್ಟಿದ್ದಾನೆ ೩೮ ಸಾಲುವಾಭ್ಯುದಯದ ಹನ್ನೊಂದು ಮತ್ತು ಹನ್ನೆರಡನೆಯ ಸರ್ಗಗಳಲ್ಲಿ ಬರುವ

ಅಥವಾಯುಲಿಂಗಧರ ಸಂಸ್ಕೃತಾಖಿಲ ದ್ರವಿಣೋಪಿ
ಶಂಭು ನಿಶಿಧೀರ ಧೀರಸಾ ।
ವಿದುಷಾಂಚಿಕೀರ್ಷುರವನಂ ವಿಶಾಂಪತಿಃ ದ್ರವಿ
ಣೈರಭೂಜ್ಜಿತನೃಪೋಪಹಾರಕೈಃ ॥
ಸಚಿವಸ್ತದಿಂಗಿತ ... ... ... ತಾನೋತ್ತಸ್ಸ ಹಸಾ
ಸುವರ್ಣಮುಖರೀತಟಾಂತರೇ ।
ನಗರೀಂ ವಸಂತ ದಿನದಾನ ಹೇತವೇ ನವರತ್ನ
ಸಾಲಗೃಹ ಭಾಸುರಾಂ ನವಾಂ ॥
ಆದಾಯವರ್ಷವರವೇಷಮಶೇಷಭೂಷ್ಯೈಃ ಆಗ್ರೇಸ
ರದ್ಭಿರವಲೋಕನ ಮಾತ್ರಧನ್ಯೈಃ ।
ಆ ಸೇವಿತಸ್ತತ ಇತೋ ನಿರಗಾತ್ಕವೀನಾಮಾಕರ್ಷ
ಣಾಯ ಕುತುಕೇನರಸಿಂಹರಾಜಃ ॥
ಅಂಭೋಧರಂ ಧಿಗವಿಶೇಷವಿದಂ ಪ್ರದೇಶೇ ಯಸ್ಯೋ
ತ್ತರೇಪಸದೃಶವರ್ಷಣ ಮೂಷರೋಪಿ ।
ಸರ್ವಸ್ವದಸ್ಯ ಶಿವರಾತ್ರಿತಿಥೌ ಕವೇಶೋ .. ಮಚಲಂ
ವಿರಚಯ್ಯ ಹೈಮವರ್ ॥

. . . . .

ಆಕರ್ಣ್ಯವಾಚಮಿತಿಸಾಪರಮಂಚಿತಾರ್ಥಾಯಭ್ಯ
ರ್ಹಣಾಂ ವಿರಚಯನ್ನು ಚಿತಾಮಮುಷ್ಯೈ
ಅವ್ಯಾಜಬಂಧುರವತಿಸ್ಮ ಮಹೀಮಶೇಷಾಂ
ಆಶ್ಚರ್ಯ ಹೇತುಚರಿತೋನರಸಿಂಹರಾಜ. ॥

ಎಂಬ ಶ್ಲೋಕಗಳಿಂದ ಸಾಳುವ ನರಸಿಂಹನು ಶಿವರಾತ್ರಿಯ ಕಾಲದಲ್ಲಿ ಸುವರ್ಣಮೇರುದಾನವನ್ನು ಮಾಡುತ್ತಿದ್ದನೆಂಬದಾಗಿಯೂ ತನಗೆ ಸಾಮಂತರಾಜರುಗಳಿಂದ ಬರುತ್ತಿದ್ದ ಕಾಣುಕಾದ್ರವ್ಯವನ್ನೆಲ್ಲಾ ರಾಶಿರಾಶಿಸಿ ಅವಲೋಕನಮಾತ್ರದಿಂದ ಸಂತುಷ್ಟನಾಗಿ ಸುತ್ತಲೂ ಇದ್ದ ಕವಿಗಳಿಗೂ ವಿದ್ವಾಂಸರಿಗೂ ದಾನಮಾಡುತ್ತಿದ್ದನೆಂಬದಾಗಿಯೂ ಅವನ ಕವಿಜನಾಶ್ರಯವು ಅವನ ಕಾಲದಲ್ಲಿಯೇ ಆಶ್ಚರ್ಯಜನಕವಾಗಿದ್ದಿತೆಂಬದಾಗಿಯೂ ತಿಳಿದುಬರುತ್ತದೆ ೩೯ ಇಮ್ಮಡಿ ನರಸಿಂಹನೂ ತಂದೆಯಂತೆಯೇ ವಿದ್ವಾಂಸರಿಗೆ ಪ್ರತಿನಿತ್ಯವೂ ಷೋಡಶ ಮಹಾದಾನಗಳನ್ನು ಮಾಡುತ್ತಿದ್ದನೆಂಬುದು ಅನೇಕ ಶಾಸನಗಳಲ್ಲಿ ಹೇಳಿದೆ ಚಾಕನಹಳ್ಳಿ ತಾಮ್ರಶಾಸನದಲ್ಲಿ ಇಮ್ಮಡಿ ನರಸಿಂಹನ ದಂಡನಾಥನಾದ ನಾಗನಾಯಕನು ತನ್ನ ಯಜಮಾನನ ಆಜ್ಞೆಯಪ್ರಕಾರ ಮೀಮಾಂಸ, ನ್ಯಾಯ, ಋಗ್ಯಜುಸ್ಸಾಮವೇದ, ಪುರಾಣ, ಸ್ಮೃತಿ, ತಂತ್ರ, ಮಂತ್ರ ಮೊದಲಾದವುಗಳಲ್ಲಿ ಪಾಂಡಿತ್ಯವನ್ನು ಪಡೆದಿದ್ದ ೪೦ ಜನ ವಿದ್ವಾಂಸರನ್ನು ರಾಜಾಸ್ಥಾನಕ್ಕೆ ಕರೆದುಕೊಂಡು ಹೋಗಿ ಅವರೆಲ್ಲರೂ ರಾಜನಿಂದ ಸನ್ಮಾನ ಪಡೆಯಲು ಅರ್ಹರೆಂಬದಾಗಿ ತಿಳಿಸಲು ರಾಜನಾದ ಇಮ್ಮಡಿ ನರಸಿಂಹನು ಅವರೆಲ್ಲರನ್ನೂ ಪರೀಕ್ಷೆಮಾಡಿ ಅವರಿಗೆ ಅಗ್ರಹಾರವನ್ನು ದಾನ ಮಾಡಿದ ಹಾಗೆ ಹೇಳಿದೆ ಗುಂಡಲಪೇಟೆಯ ೬೭ನೆಯ ಶಾಸನದಿಂದ ಈತನು ಕಾವೇರಿಯ ಸಂಗಮದಲ್ಲಿ ಷಡ್ದರ್ಶನಾಚಾರ್ಯರಾದ ತನ್ನ ಆಚಾರ್ಯರಿಗೆ 'ಮಹಾಭೂತಘಟದಾನ' ವನ್ನು ಮಾಡಿದಂತೆ ತಿಳಿದುಬಂದಿದೆ

ಇಷ್ಟು ಪ್ರೋತ್ಸಾಹವಿದ್ದ ಕಾಲದಲ್ಲಿ ಸಾಹಿತ್ಯಾಭಿವೃದ್ಧಿಯಾಗುವುದೇನೂ ಆಶ್ಚರ್ಯವಲ್ಲ. ಸಾಳುವ ನರಸಿಂಹನು ಕವಿಗಳಗೋಷ್ಠಿಯಲ್ಲಿ ಕಾಲ ಕಳೆಯುತ್ತಿದ್ದಾಗ ಒಂದು ದಿನ ಅವರು ರಾಜನನ್ನು ತನ್ನ ಕವಿತಾಪ್ರೌಢಿಮೆಯನ್ನು ತೋರಿಸುವ ಒಂದು ಉತ್ತಮ ಕಾವ್ಯವನ್ನು ರಚಿಸಬೇಕೆಂದು ಕೇಳಿಕೊಂಡಹಾಗೂ ಅದಕ್ಕೆ ಉತ್ತರವಾಗಿ ನರಸಿಂಹನು 'ರಾಮಾಭ್ಯುದಯ' ವನ್ನು ರಚಿಸಿದಹಾಗೆಯೂ ರಾಮಾಭ್ಯುದಯದ ಈ ಕೆಳಗಿನ ಪೀಠಿಕಾ ಮತ್ತು ಗ್ರಂಥಾಂತ್ಯಶ್ಲೋಕಗಳಿಂದ ಊಹಿಸಬಹುದಾಗಿದೆ.

' ಕಾವ್ಯೇದರ್ಶಯ ಸಾಮರ್ಥ್ಯಮಿತ್ಯಸೌ
ಕಧಿತೋಬುಧೈಃ ।
ತದಿದಂ ರಾಮಚಂದ್ರಸ್ಯ ಚರಿತಂ ತತ್ವಸಾರತಃ ॥
ಉಚ್ಯತೇತೇನವಿದುಷಾ ನರಸಿಂಹಮಹೀಭುಜಾ ।

---

೩೮ W. VL X P. 156-7 ೩೯ Sources P. 100-101.

ಗ್ರಂಥಾಂತ್ಯದ ಶ್ಲೋಕ :—

ಇತ್ಯದ್ಬಾಮವರ ಪ್ರಸಾದ ಕವಿತಾಸಿಂಹಾ
ಸನಾಧ್ಯಾಸಿನಃ ।
ಕ್ಷೋಣೀಮೀಸರಗಂಡ ಗುಂಡಯುಪತೇಃ
ಪ್ರಾಕಂಟಕೋಚ್ಚಂಡಿನಃ ॥
ವಿಷ್ಣೋಶ್ರೀನರಸಿಂಹ ವಿಗ್ರಹಭೃತೋಭಾವೋ
ರ್ಮಿನೇತ್ರೌಕೃತೌ ।
ಶ್ರೀರಾಮಾಭ್ಯುದಯೇತ್ರಪೂರ್ತಿಮಗಮತ್ಸರ್ಗ
ಶ್ಚತುರ್ವಿಂಶತಃ ।

ಆದರೆ ಇದೇ ರಾಮಾಭ್ಯುದಯದ ೫ನೆಯ ಸರ್ಗದ
ಶೋಣಾದ್ರೀಂದ್ರಂ ಕವೀಂದ್ರಂ ಶ್ರವಣಕಟುರಟ
ಡ್ಡಿಂಡಿಮಂ ಸಾರ್ವಭೌಮಂ ।
ಪ್ರಾಸೂತಾಂಬಾಭಿರಾಮಾ ನವ ನವ ಕವಿತಾ
ಭಾಜನಂ ರಾಜನಾಥಾತ್ ।
ತಸ್ಮಿನ್ಕೃತಿನ್ಯಯಾತಿ ಕ್ರಮವಿಷಯ ಮಹಾ
ನಾಟಕಸ್ಯಾಗ್ರಜಾತೇ ।
ಕಾವ್ಯೇಸರ್ಗೇನಿಸರ್ಗೋಜ್ವಲ ರಸವಿಲಸತ್ಪಂಚ
ಮೋಯಂ ಜಗಾಮ ॥

ಇತಿ ಡಿಂಡಿಮ ಸಾರ್ವಭೌಮ ಕೃತೌ ರಾಮಾಭ್ಯು ದಯೇ ಪಂಚಮಸ್ಸರ್ಗಃ—

ಎಂಬ ಭಾಗದಿಂದ ರಾಮಾಭ್ಯುದಯವನ್ನು ರಾಜನಾಥ ಕವಿಯ ಮಗನಾದ ಡಿಂಡಿಮ ಸಾರ್ವಭೌಮ ಕವಿಯೇ ರಚಿಸಿರಬಹುದೆಂದು ತೋರುತ್ತದೆ. ೪೦ ಇದೇ ಸತ್ಯಾಂಶವಿದ್ದರೂ ಇರಬಹುದು. ಡಿಂಡಿಮ ಸಾರ್ವಭೌಮನು ಸಾಳುವ ನರಸಿಂಹನ ಆಸ್ಥಾನ ಕವಿಯಾಗಿದ್ದುದರಿಂದ ಅವನುರಾಮಾಭ್ಯುದಯವನ್ನು ರಚಿಸಿ ತನ್ನ ಪೋಷಕನ ಹೆಸರಿನಲ್ಲಿ ಪ್ರಕಟಪಡಿಸಿರಬಹುದು. ಇದು ಹೇಗಾದರೂ ನರಸಿಂಹನು ಕವಿತಾಶಕ್ತಿಯುಳ್ಳವನಾಗಿದ್ದನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇವನ ಆಸ್ಥಾನಕವಿಗಳಲ್ಲಿ ರಾಜನಾಥನು ಪ್ರಸಿದ್ಧನು. ಈತನು ತನ್ನ ಪೋಷಕನ ಸಾಹಸ ಕಾರ್ಯಗಳನ್ನು ವರ್ಣಿಸುವದಕ್ಕಾಗಿ 'ಸಾಲುವಾಭ್ಯುದಯ 'ವೆಂಬ ಉತ್ತಮವಾದ ಕಾವ್ಯವನ್ನು ರಚಿಸಿದನು.೪೧ ಸಾಹಿತ್ಯ ದೃಷ್ಟಿಯಿಂದಲೇ ಅಲ್ಲದೆ ಐತಿಹಾಸಿಕ ದೃಷ್ಟಿಯಿಂದಲೂ ಇದು ಬಹು ಉತ್ತಮವಾದ ಕಾವ್ಯ. ಪಿಲ್ಲಲಮಳುಪಿನ ವೀರಭದ್ರನೆಂಬ ಆಂಧ್ರ ಕವಿಯು ನರಸಿಂಹನ ಆಸ್ಥಾನದಲ್ಲಿ ಮತ್ತೊಬ್ಬನು. ಈತನು 'ಶೃಂಗಾರಶಾಕುಂತಲ' 'ಅವತಾರದರ್ಪಣ' 'ನಾರದೀಯ' 'ಮಾಘ ಮಾಹಾತ್ಮ್ಯ' 'ಪುರುಷಾರ್ಥ ಸುಧಾನಿಧಿ' 'ಮಾನ ಸೋಲ್ಲಾಸಸಾರ' ಮೊದಲಾದವುಗಳನ್ನು ರಚಿಸಿರುವಂತೆ ತೋರುತ್ತದೆ. ಈತನು 'ಜೈಮಿನೀಭಾರತವು' ಎಂಬ ಗ್ರಂಥವನ್ನೂ ರಚಿಸಿ ನರಸಿಂಹನಿಗೆ ಅರ್ಪಿಸಿದ್ದಾನೆ. 'ನವರತ್ನಮುಲು' 'ಸಪ್ತಾಂಗಮುಲು ಎಂಬ ಮತ್ತೆರಡು ತೆಲುಗು ಗ್ರಂಥಗಳು ಏತತ್ಕೃತವೇ ಇರಬಹುದು. 'ನವರತ್ನಮುಲು' ಎಂಬುದು ರಾಜನಿಗೆ ಅತ್ಯಾವಶ್ಯವಾಗಿರಬೇಕಾದ ಗುಣಗಳನ್ನು ಕುರಿತ ಉಪದೇಶಗ್ರಂಥ. 'ಸಪ್ತಾಂಗಪದ್ಧತಿಯು' ರಾಜ್ಯಾಂಗಗಳಾದ ರಾಷ್ಟ್ರಕೋಶ, ದುರ್ಗಬಲ, ಮೊದಲಾದವುಗಳನ್ನು ವರ್ಣಿಸುವುದು. ಈ ಗ್ರಂಥದ ಪ್ರತಿಪದ್ಯವೂ ಗುಂಡಭೂಪಾಲ ನರಸಿಂಹ ಮಂಡಲೇಂದ್ರ ಎಂಬದಾಗಿ ಮುಗಿಯುತ್ತದೆ. ೪೨ ಈ ಎರಡು ಗ್ರಂಥಗಳಿಂದ ಆ ಕಾಲದ ರಾಜ್ಯವ್ಯವಸ್ಥೆಯು ಸ್ವಲ್ಪಮಟ್ಟಿಗೆ ವಿಶದಪಡುತ್ತದೆ. ನಂದೀಮಲ್ಲಯ್ಯ, ಘಂಟಾಸಿಂಗಯ್ಯ ಎಂಬುವರು ಈ ಕಾಲದ ಮತ್ತಿಬ್ಬರು ಆಂಧ್ರಕವಿಗಳು. ಇವರು 'ಪ್ರಭೋಧಚಂದ್ರೋದಯ' 'ವರಾಹಪುರಾಣಮು' ಎಂಬ ಎರಡು ಗ್ರಂಥಗಳನ್ನು ರಚಿಸಿರುವರು. ಇವುಗಳಲ್ಲಿ 'ಪ್ರಭೋಧಚಂದ್ರೋದಯ'ವು ಗಂಗಯ್ಯ ಮಂತ್ರಿಗೂ 'ವರಾಹಪುರಾಣವು' ಸಾಳುವ ನರಸಿಂಹನ ದಂಡನಾಯಕನಾದ ನರಸನಾಯಕನಿಗೂ ಅಂಕಿತವಾಗಿ ಸಮರ್ಪಿತವಾಗಿವೆ. ಈ ವರಾಹಪುರಾಣದಲ್ಲಿ ನರಸನಾಯಕನು ವಿದ್ಯಾಪಕ್ಷಪಾತಿಯೆಂದೂ 'ವರಲಕ್ಷ್ಮಿಕಲ್ಯಾಣಂ' 'ನರಸಿಂಹಪುರಾಣಂ'ಎಂಬ ಎರಡು ಗ್ರಂಥಗಳನ್ನು ತನ್ನ ಅಂಕಿತದಲ್ಲಿ ಬರೆಸಿಕೊಂಡಿರುವನೆಂದೂ ಹೇಳಿದೆ.೪೩ ಕನ್ನಡದಲ್ಲಿ ಶೃಂಗಾರ ಪದಗಳನ್ನು ರಚಿಸಿರುವ ಕವಿಲಿಂಗನು ಸಾಲುವ ನರಸಿಂಹನ ಆಸ್ಥಾನದ ಕವಿಯಾಗಿದ್ದಂತೆ

ಇಂಗಿತವನರಿಯಲೆಂದನಾರಿಯರಿಗಿತ್ತ । ಮಂಗಳಾ
ಲಂಕಾರ ಸಮವಾಗಿರೆ ।
ಅಂಗಜಕಲಾನಿಪುಣ ಗಂಡಭೇರುಂಡ ಕವಿ । ಲಿಂಗ
ನಿಡಿಜಾಣ ಕವಿಸಾಳ್ವಗೆ॥

೪೦ Sources P. 85 ೪೧ Ibid. P. 190-1 ೪೨ W. VL. X P 156-7 ೪೩ Ibid P. 161-2

ಮಲೆವರಿಪುರಾಯಗಿರಿವಜ್ರವನದಾವಾ । ನಲವೈರಿ
ವಾರ್ಧಿವಡಬಸಾಳ್ವ ।
ಕುಲರತ್ನಗುಂಡಭೂವರ ನರಸಿಂಗಗೆ । ತಲೆಯೊಡ್ಡಿ
ಬಾಳ್ವಭೂಭುಜರುಂಟೆ ‖

ಎಂಬ ಅವನ ಪದಗಳಿಂದ ತಿಳಿಯಬಹುದಾಗಿದೆ.

೩

ಸಾಳುವ ವಂಶದ ಅರಸರು ವಿಜಯನಗರದಲ್ಲಿ ಬಹುಕಾಲ ರಾಜ್ಯಭಾರ ಮಾಡಲಿಲ್ಲ. ತಾವು ಹೇಗೆ ತಮ್ಮ ಒಡೆಯರಾದ ಸಂಗಮ ವಂಶೀಯರನ್ನು ಹಿಂದೊತ್ತಿ ರಾಜ್ಯಕ್ಕೆ ಬಂದರೋ ಹಾಗೆಯೇ ಇವರ ದಂಡನಾಥರು ಇವರನ್ನು ವಂಚಿಸಿ ಸ್ವತಃ ಪ್ರಬಲರಾಗಿ ಸಿಂಹಾಸನವನ್ನು ಸ್ವಾಧೀನಪಡಿಸಿ ಕೊಂಡರು. ರಾಜ್ಯದಲ್ಲಿ ವಿಪ್ಲವವುಂಟಾಯಿತು. ಸಾಳುವರ ಸ್ಥಾನವನ್ನು ತುಳುವರು ಆಕ್ರಮಿಸಿದರು ಆದರೆ ಸಾಹಿತ್ಯ ರಾಜ್ಯದಲ್ಲಿ ಮಾತ್ರ ಯಾವ ವಿಧವಾದ ತೊಂದರೆಯೂ ಉಂಟಾಗಲಿಲ್ಲ ಹಿಂದಿನಿಂದ ಅಭಿವೃದ್ಧಿಯಾಗುತ್ತ ಹರಿದು ಬಂದ ಸಾಹಿತ್ಯ ಪ್ರವಾಹವು ಈಗ ಮತ್ತಷ್ಟು ಪುಷ್ಟವಾಗಿ ದಡವನ್ನು ಮೀರಿ ಹರಿಯುವಂತಾಯಿತು. ಆದರೆ ಸಾಹಿತ್ಯಸ್ವಭಾವದಲ್ಲಿ ಸ್ವಲ್ಪ ಬದಲಾವಣೆಯು ತಲೆದೋರಿತು. ಸಾಳುವರ ಕಾಲದಲ್ಲಿಯೇ ಹರಡಲು ಪ್ರಾರಂಭವಾಗಿದ್ದ ಶ್ರೀ ವೈಷ್ಣವರ ಮತವು ಈ ಕಾಲದಲ್ಲಿ ಪ್ರಬಲವಾಗಿ ರಾಜಗುರುಗಳನ್ನೂ ತಮ್ಮ ಸ್ವಾಧೀನಪಡಿಸಿಕೊಂಡುದುದರಿಂದ ಈ ಕಾಲದ ಸಾಹಿತ್ಯ ಸಾಮ್ರಾಜ್ಯವು ವೈಷ್ಣವಗ್ರಂಥ ಭೂಯಿಷ್ಟವಾಗಿದೆ

ತುಳುವರ ಆಶ್ರಯದಲ್ಲಿ ಸಂಸ್ಕೃತ, ತೆಲಗು ಕನ್ನಡ ಭಾಷೆಗಳು ಸರ್ವತೋಮುಖವಾಗಿ ಅಭಿವೃದ್ಧಿಯಾದುವು. ಇವರಲ್ಲಿ ಪ್ರಸಿದ್ಧರಾದ ಕೃಷ್ಣದೇವ ಮತ್ತು ಅಚ್ಯುತರಾಯರೂ ಇವರ ತರುವಾಯ ಬಂದ ಸದಾಶಿವರಾಯ ಮತ್ತು ಅವನ ಪೋಷಕರಾದ ರಾಮರಾಯ ತಿರುಮಲರಾಯರೂ ಸಾಹಿತ್ಯಾಭಿವೃದ್ಧಿಗೆ ಮಾಡಿದ ಸಹಾಯವು ಸುವರ್ಣಾಕ್ಷರಗಳಲ್ಲಿ ಬರೆದಿಡಲು ಅರ್ಹವಾಗಿದೆ. ವಿದ್ವಾಂಸರಿಗೆ ದಾನಮಾಡುವದೂ ಕೃಷ್ಣದೇವರಾಯ ಮಹಾರಾಜನಿಗೆ ಒಂದು ಹೆಮ್ಮೆಯೆಂದು ಒಂದು ಶಾಸನದಲ್ಲಿ ಹೇಳಿದೆ. ಈತನು ಸ್ವತಃ ಸಂಸ್ಕೃತಾಂಧ್ರಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಕನ್ನಡಭಾಷೆಯಲ್ಲಿಯೂ ಈತನಿಗೆ ಯಥೋಚಿತವಾಗಿ ಪಾಂಡಿತ್ಯವಿತ್ತು. ಇವನ ಕಾಲದಲ್ಲಿ ಇವನಿಂದ ಸಹಾಯಪಡೆಯದ ವಿದ್ವಾಂಸರೇ ಅಪೂರ್ವವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶಿವಮೊಗ್ಗ ಡಿಸ್ಟ್ರಿಕ್ಕಿನ ಒಂದು ಶಾಸನದಲ್ಲಿ ಕೃಷ್ಣದೇವರಾಯನು ಕಂಚಿ, ಶ್ರೀಶೈಲ, ತಿರುವಣ್ಣಾಮಲೆ, ಚಿದಂಬರ, ವೆಂಕಟಾದ್ರಿ ಮೊದಲಾದ ಸ್ಥಳಗಳಲ್ಲಿದ್ದ ವಿದ್ವಾಂಸರಿಗೆ ಅನೇಕಸಲ 'ಬ್ರಹ್ಮಾಂಡದಾನ'ವನ್ನೂ ಸುವರ್ಣಮೇರುದಾನವನ್ನೂ ಮಾಡಿದಂತೆ ಹೇಳಿದೆ [೪೪] ಅದೇ ಶಾಸನದಲ್ಲಿ ಶ್ರೀರಂಗದ ನಿವಾಸಿಯಾದ ಶ್ರೌತಸ್ಮಾರ್ತ ಪಾರಂಗತನೂ ಆದ ವೀರಶೈವನೆಂಬ ವಿದ್ವಾಂಸನು ಇವನಿಂದ ಒಂದು ಅಗ್ರಹಾರವನ್ನು ಪಡೆದಂತೆ ಬರೆದಿದೆ ಶಿವಮೊಗ್ಗದ ೮೪ ಮತ್ತು ೮೫ ನೆಯ ಶಾಸನಗಳಿಂದ ಕೃಷ್ಣದೇವರಾಯನು ಕೂಡಲೀಮಠದ ನಾರಾಯಣಯತೀಂದ್ರನಿಗೂ ವ್ಯಾಸರಾಯಮಠದ ವ್ಯಾಸತೀರ್ಥನಿಗೂ ಅನೇಕ ದತ್ತಿಗಳನ್ನು ಬಿಟ್ಟಿರುವದನ್ನು ಕಾಣಬಹುದಾಗಿದೆ. [೪೫] ಗೋವಿಂದರಾಜನೆಂಬುವನು ಕೃಷ್ಣದೇವರಾಯನ ರಾಜಗುರು ಈತನಿಗೆ ೧೫೧೭ನೆಯ ವರ್ಷದಲ್ಲಿ ಒಂದು ಅಗ್ರಹಾರವು ಕೊಡಲ್ಪಟ್ಟಿದೆ. [೪೬] ಉದ್ದಾಮ ಶ್ರೀವೈಷ್ಣವ ಪಂಡಿತನಾದ ವೇಂಕಟತಾತಾಚಾರ್ಯನು ರಾಜನಿಂದ ವಿಶೇಷ ಸನ್ಮಾನಿತನಾಗಿ ವಿಜಯನಗರದ ಎಲ್ಲಾ ವಿದ್ವತ್ಸಭೆಯಲ್ಲಿಯೂ ಅಗ್ರಮರ್ಯಾದೆಯನ್ನು ಪಡೆಯುವ ಹಕ್ಕನ್ನೂ ಧರ್ಮಬಾಹಿರರಿಗೆ ಶಿಕ್ಷೆ ಮಾಡುವ ಅಧಿಕಾರವನ್ನೂ ಪಡೆದಿದ್ದನು. [೪೭].

ಕೃಷ್ಣದೇವರಾಯನ ಆಸ್ಥಾನದಲ್ಲಿ ಅನೇಕ ಜನ ಕವಿಗಳಿದ್ದರು, ಇವರಲ್ಲಿ ಅಲ್ಲಸಾನಿಪೆದ್ದನ್ನ ನಂದೀತಿಮ್ಮಣ್ಣ, ಅಯ್ಯಲುರಾಜು ರಾಮಭದ್ರಯ್ಯ, ಧೂರ್ಜಟಿ, ಮಾದಯ್ಯಗಾರಿಮಲ್ಲನ್ನ, ಪಿಂಗಲಗಾರಿ ಸೂರನ್ನ, ರಾಮರಾಜಭೂಷಣ, ತೆನ್ನಾಲಿರಾಮಕೃಷ್ಣ ಇವರು ಮುಖ್ಯರು. ಇವರೆಲ್ಲರೂ ಆಂಧ್ರಕವಿಗಳು. ಇವರಿಗೆ ಕೃಷ್ಣದೇವರಾಯನ ಆಸ್ಥಾನದ ಅಷ್ಟದಿಗ್ಗಜಗಳು ಎಂಬ ಬಿರುದು ಇರುವಂತೆ ತೋರುತ್ತದೆ. ಆದರೆ ಕೊನೆಯ ನಾಲ್ಕು ಜನರು ಕೃಷ್ಣರಾಯನ ಕಾಲದಲ್ಲಿದ್ದಿರಲಿಲ್ಲವೆಂದು ನವೀನ ಸಂಶೋಧನೆಯಿಂದ ವ್ಯಕ್ತಪಡುತ್ತದೆ, ಕೃಷ್ಣದೇವರಾಯನು ತನ್ನ ಆಸ್ಥಾನಕವಿಗಳ ಸಹಾಯದಿಂದ ಆಂಧ್ರಸಾಹಿತ್ಯದಲ್ಲಿ ಪ್ರಬಂಧಮಾರ್ಗವೆಂದು ಒಂದು ಹೊಸಮಾರ್ಗವನ್ನು

೪೪ Ec VII Shimoga 1 ೪೫ Ibid 84-5 ೪೬ Ec III Malvalli 15
೪೭ M. AR 1918 Para 110

ಸ್ಥಾಪಿಸಿದನು. ಹದಿನಾರನೆಯ ಶತಮಾನದವರೆಗಿನ ಆಂಧ್ರಸಾಹಿತ್ಯವೆಲ್ಲ ಸಂಸ್ಕೃತ ಪುರಾಣಗಳ ಭಾಷಾಂತರಗಳುಮಾತ್ರವಾಗಿದ್ದುವು. ಪುರಾಣವು ವಿಷಯ ಪ್ರಧಾನವಾಗಿದ್ದುದರಿಂದ ಕವಿಯ ಶಕ್ತಿಯನ್ನೂ ಸ್ವಾತಂತ್ರ್ಯವನ್ನೂ ಅವುಗಳಲ್ಲಿ ಉಪಯೋಗಿಸಲು ಅವಕಾಶವಿರಲಿಲ್ಲ. ಆದುದರಿಂದ ಕವಿಯ ವರ್ಣನಾ ಕೌಶಲ್ಯವನ್ನೂ ಪಾಂಡಿತ್ಯವನ್ನೂ ಶಬ್ದ ವೈಖರಿಯನ್ನೂ ತೋರಿಸುವುದಕ್ಕಾಗಿ ಕಲ್ಪನಾ ಪ್ರಧಾನವಾಗಿಯೂ ಅಲಂಕಾರಮಯವಾಗಿಯೂ ಇರುವ ಕಾವ್ಯ ಅಥವಾ ಪ್ರಬಂಧ ಮಾರ್ಗವು ಈ ಕಾಲದಲ್ಲಿ ಏರ್ಪಟ್ಟಿತು. ಈ ರೀತಿಯಲ್ಲಿ ಬರೆದ ಗ್ರಂಥಗಳಿಗೆ ಕೃಷ್ಣದೇವರಾಯ ಕೃತವಾದ 'ಆಮುಕ್ತಮಾಲ್ಯದವೂ' ಅಲ್ಲಸಾನಿಪೆದ್ದನ್ನ ಕೃತವಾದ ಮನುಚರಿತ್ರವೂ ಮಾರ್ಗದರ್ಶಿಗಳು.[೪೮]

ಕೃಷ್ಣದೇವರಾಯನು ಉದ್ದಾಮನಾದ ಸಂಸ್ಕೃತಾಂಧ್ರಕವಿ. ನಂದೀ ತಿಮ್ಮಯ್ಯನು ತನ್ನ 'ಪಾರಿಜಾತಾಪಹರಣ'ದಲ್ಲಿ ಇವನನ್ನು 'ಕವಿತಾಪ್ರಾವೀಣ್ಯ ಫಣೀಶ ಕೃಷ್ಣರಾಯ ಮಹೀಶ' ಎಂದು ಸಂಬೋಧಿಸಿದ್ದಾನೆ. ಇವನ ತೆಲುಗು ಕಾವ್ಯವಾದ 'ಆಮುಕ್ತಮಾಲ್ಯದ' ಎಂಬುದರ ಪೀಠಿಕೆಯಲ್ಲಿ ಸಿಕ್ಕುವ

ಸೀ|| ಪಲಿಕಿತಿ ಪ್ರೇಕ್ಷೋಪಮಲಜಾತಿ ಪೆಂಪಕ್ಕ ರಸಿಕ
ತಾನನ ಮದಾಲಸ ಚರಿತ್ರ
ಭಾವಧ್ವನಿವ್ಯಂಗ್ಯ ಸೇವಧಿಗಾಗ ಜೆಪ್ಪಿತಿವಿ
ಸತ್ಯಾವಧೂ ಪ್ರೀಣನಂಬು
ಶ್ರುತಿಪುರಾಣೋಪಸಂಹಿತ ಲೆರ್ಪ್ಪಿ ಕೂರ್ಚಿತಿ
ಸಕಲಕಥಾಸಾರ ಸಂಗ್ರಹಂಬು
ಶ್ರೋತ್ರಘಟ್ಟಲು ವಿಚ್ಛಗರ ಚಿಂಚಿತಿ ಸೂಕ್ತಿ
ನೈಪುಣೀಜ್ಞಾನ ಚಿಂತಾಮಣಿಕೃತಿ.
ಗೀ|| ಮಳುಯರಸ ಮಂಜರೀ ಮುಖ್ಯ ಮಧುರ ಕಾವ್ಯ
ರಚನಮೆಪ್ಪಿಂಚಿ ಕೊಂಟಿ ಗೀರ್ವಾಣಭಾಷ
ನಾಂಧ್ರಭಾಷಯು ಸಾಧ್ಯಂಬೆಯೊಂದು ನೊಕ್ಕ
ಕೃತಿವಿನಿರ್ಮಿಂಪು ಮಿಂಕಮಾಕುಬ್ರಿಯಮಗಾಗ

ಎಂಬ ಪದ್ಯಗಳಿಂದ ಈತನು ಸಂಸ್ಕೃತದಲ್ಲಿ 'ಮದಾಲಸಾಚರಿತ್ರಂ' 'ಸತ್ಯಾವಧೂ ಪ್ರೀಣನಂ' 'ಸಕಲ ಕಥಾಸಾರ ಸಂಗ್ರಹಂ' 'ಸೂಕ್ತಿನೈಪುಣೀಜ್ಞಾನ ಚಿಂತಾಮಣಿ' 'ರಸಮಂಜರಿ' ಮೊದಲಾದ ಗ್ರಂಥಗಳನ್ನು ರಚಿಸಿರುವಂತೆ ಊಹಿಸಬಹುದಾಗಿದೆ.[೪೯] ಇವುಗಳಲ್ಲಿ ಯಾವುದೂ ಲಭ್ಯವಾಗಿಲ್ಲ. ಜಾಂಬುವತೀ ಕಲ್ಯಾಣ' ವೆಂಬ ಸಂಸ್ಕೃತ ನಾಟಕದ ಸಮಾಪ್ತಿಯಿದಂ ರಾಜಾಧಿರಾಜ ರಾಜಪರಮೇಶ್ವರ ಸಕಲ ಕಲಾಭೋಜ ರಾಜ ವಿಭವ ಮೂರುರಾಯರಗಂಡ ಶ್ರೀಕೃಷ್ಣ ರಾಯವಿರಚಿತಂ ಜಾಂಬುವತೀ ಕಲ್ಯಾಣಂ ನಾಮ ನಾಟಕಂ' ಎಂಬ ನಾಟಕಾಂತ ಗದ್ಯದಿಂದ ಕೃಷ್ಣದೇವ ರಾಯನು ಆ ನಾಟಕವನ್ನು ರಚಿಸಿದಂತೆ ತೋರುತ್ತದೆ.[೫೦] ಆದರೆ ಇವನ ಸಂಸ್ಕೃತ ಗ್ರಂಥಗಳಿಗಿಂತ ಆಂಧ್ರ ಗ್ರಂಥವಾದ 'ಆಮುಕ್ತಮಾಲ್ಯದ' ಅಥವಾ ವಿಷ್ಣುಚಿತ್ತೀಯವೇ ಈತನ ಕವಿತಾ ಶಕ್ತಿಯನ್ನು ಶಾಶ್ವತಗೊಳಿಸಿರುವುದು. ಈ ಗ್ರಂಥವು ಆಗ ತಾನೆ ರೂಢಿಗೆ ಬರುತ್ತಿದ್ದ 'ಕಾವ್ಯಶೈಲಿ'ಯಲ್ಲಿ ಬರೆದಿದೆ. ವಿಷ್ಣುಭಕ್ತರಾದ ಶ್ರೀವಿಲ್ಲಿಪುತ್ತೂರಿನ ಪೆರಿಯಾಳ್ವಾರ್ರವರ ಚರಿತ್ರೆಯು ಇವರ ಕಥಾವಸ್ತು. ಆಳ್ವಾರ್ರವರ ಪುತ್ರಿಯಾದ ಆಂಡಾಳೀ ಎಂಬ ಭಕ್ತೆಗೂ ಶ್ರೀರಂಗ ನಾಥಸ್ವಾಮಿಗೂ ನಡೆದ ವಿವಾಹವೇ ಇದರ ಮುಖ್ಯ ಕಥಾಗರ್ಭ. ಕೃಷ್ಣರಾಯನು ಕಳಿಂಗ ದೇಶದ ವಿಜಯ ಯಾತ್ರೆಗೆ ಹೋಗುತ್ತಾ ದಾರಿಯಲ್ಲಿ ಶ್ರೀಕಾಕುಳದ ಆಂಧ್ರ ಮಧುಸೂದನ ಸ್ವಾಮಿಯನ್ನು ದರ್ಶನ ಮಾಡುವುದಕ್ಕಾಗಿ ಅಲ್ಲಿಗೆ ಹೋಗಿ ರಾತ್ರಿ ಅಲ್ಲಿ ತಂಗಿರಲು ದೇವರು ಸ್ವಪ್ನದಲ್ಲಿ ಬಂದು ಗೋದಾದೇವಿಯ ಚರಿತ್ರೆಯನ್ನು ದೇಶಭಾಷೆಯಲ್ಲೆಲ್ಲಾ ಉತ್ತಮವಾದ ತೆಲುಗು ಭಾಷೆಯಲ್ಲಿ ರಚಿಸೆಂದು ಆಜ್ಞೆಮಾಡಲು ತದನುಗುಣವಾಗಿ ತಾನು 'ಆಮುಕ್ತಮಾಲ್ಯದ' ವನ್ನು ರಚಿಸಿದಂತೆ ಕೃಷ್ಣರಾಯನೇ ತನ್ನ ಗ್ರಂಥದ ಪ್ರಾರಂಭದಲ್ಲಿ ಹೇಳಿಕೊಂಡಿದ್ದಾನೆ.[೫೧] ಸ್ವಪ್ನದಲ್ಲಿ ಕಾಣಿಸಿಕೊಂಡ ದೇವರೂ ಸಹ ತೆಲುಗೇ ದೇಶಭಾಷೆಯಲ್ಲೆಲ್ಲಾ ಉತ್ತಮವಾದುದೆಂದೆ ಹೇಳಿದರು ಎಂದು ಹೇಳುವುದರಿಂದ ಇವನಿಗೆ ಆ ಭಾಷೆಯಲ್ಲಿ ಎಷ್ಟು ಅಭಿಮಾನವಿತ್ತೆಂಬುದನ್ನು ಸುಲಭವಾಗಿ ಊಹಿಸಿಕೊಳ್ಳಬಹುದು.

ಆಂಧ್ರ ಕವಿತಾ ಪ್ರಪಂಚದಲ್ಲಿ ಅಲ್ಲಸಾನಿ ಪೆದ್ದನ್ನನು ಕೃಷ್ಣದೇವರಾಯನ ಪ್ರಿಯಮಿತ್ರ. ಈತನೂ ರಾಜನಂತೆಯೇ ಶ್ರೀವೈಷ್ಣವರ ಶಿಷ್ಯನಾದುದರಿಂದ,

೪೮ Tel Lit P. 70. ೪೯ Ref W. V. LX P. 176 ೫೦ Sources P. 42-48
೧೫ W. VL. X P. 180-1

ಇವರ ಪರಸ್ಪರ ಸಂಬಂಧವು ಬಲಪಟ್ಟಿರಬಹುದು. ಹಿಂದೆಯೇ ತಿಳಿಸಿದಂತೆ ಪೆದ್ದನ್ನನು ಕಾವ್ಯಮಾರ್ಗ ಸ್ಥಾಪಕ. ಆದುದರಿಂದಲೇ ಇವನಿಗೆ 'ಆಂಧ್ರಕವಿತಾ ಪಿತಾಮಹ' ಎಂಬ ಪ್ರೌಢಿಮೆಯು ಅಕ್ಷರಶಃ ಸಲ್ಲುತ್ತದೆ. ಇವನು ತಾನು ರಚಿಸಿದ ಮನುಚರಿತ್ರವನ್ನು ತನ್ನ ಪೋಷಕನಿಗೆ ಅಂಕಿತವಾಗಿ ಸಮರ್ಪಿಸಿದ್ದಾನೆ ಇದರ ವಿಷಯಕವಾದ ಚಾಟು ಪದ್ಯಗಳನ್ನು ನಂಬಬಹುದಾದರೆ ಕೃಷ್ಣದೇವರಾಯನು ಮನುಚರಿತ್ರವನ್ನು ತನಗೆ ಸಮರ್ಪಣೆ ಮಾಡಿಸಿಕೊಳ್ಳುವ ಕಾಲದಲ್ಲಿ ಆ ಗ್ರಂಥವನ್ನು ಪಲ್ಲಕ್ಕಿಯಲ್ಲಿಟ್ಟು ರಾಜಧಾನಿಯಲ್ಲಿ ಮೆರವಣಿಗೆ ಮಾಡಿಸಿ ಸ್ವತಃ ಆ ಪಲ್ಲಕ್ಕಿಯನ್ನು ಹೊತ್ತು ರಾಜಸಭೆಯಲ್ಲಿ ಅದರ ಕರ್ತೃವಾದ ಪೆದ್ದನ್ನನಿಗೆ 'ಆಂಧ್ರಕವಿತಾಪಿತಾಮಹ' ನೆಂಬ ಬಿರುದನ್ನು ಕೊಟ್ಟು ಅವನ ಕಾಲಿಗೆ ತನ್ನ ಕೈಯಿಂದ ಕಡಗವನ್ನು ತೊಡಿಸಿದನು. ಅಲ್ಲದೆ ಪೆದ್ದನ್ನನೇ ತನ್ನ ಮನುಚರಿತ್ರೆಯಲ್ಲಿ ಕೃಷ್ಣದೇವರಾಯನು ತಾನು ಕೇಳಿದ ಸ್ಥಳಗಳಲ್ಲಿ ಕೇಳಿದಾಗಲೆಲ್ಲ ಅಗ್ರಹಾರಗಳನ್ನೂ ವೃತ್ತಿಗಳನ್ನೂ ಕೊಡುತ್ತಿದ್ದನೆಂದು ಹೇಳಿಕೊಂಡಿರುವನು. ಈ ಅಂಶವನ್ನು ಉಪಪೋಷಿಸುವುದಕ್ಕೆ ಅನೇಕ ಶಾಸನಗಳು ಸಿಕ್ಕುವವು- ಮದ್ರಾಸ್ ಲಿಪ್ಯನ್ವೇಷಣ ಶಾಖೆಯ ೧೯೧೬, ೧೯೨೧, ೧೯೨೭ ನೆಯ ವರ್ಷಗಳ ವರದಿಗಳಿಂದ ಪೆದ್ದನ್ನನು ಕೃಷ್ಣರಾಯನಿಂದ ಅನೇಕ ಗ್ರಾಮಗಳನ್ನು ಪಡೆದು ದೇವಾಲಯಗಳಿಗೂ ಸರ್ವತಂತ್ರಸ್ವತಂತ್ರೋಭಯವೇದಾಂತಾಚಾರ್ಯರಾದ ಪರಾಂಕುಶ ಶ್ರೀಶಠಗೋಪಜೀಯರಿಗೂ ದಾನ ಮಾಡಿದಂತೆ ತಿಳಿಯ ಬಹುದಾಗಿದೆ,[೫೩] ಪೆದ್ದನ್ನನು ತನ್ನ ಮನುಚರಿತ್ರೆಯ ವಸ್ತುವನ್ನು 'ಮಾರ್ಕಂಡೇಯ' ಪುರಾಣದಿಂದ ತೆಗೆದುಕೊಂಡಿದ್ದರೂ ಮನೋಹರವಾದ ತನ್ನ ಸ್ವಂತ ಶೈಲಿಯಿಂದ ಅದನ್ನು ಹೊಸ ಗ್ರಂಥವನ್ನಾಗಿ ಮಾರ್ಪಡಿಸಿದ್ದಾನೆ. ಇದರಲ್ಲಿ ಉತ್ತಮವಾದ ವರ್ಣನೆಗಳೂ ಶ್ರೇಷ್ಠವಾದ ಉಪಮಾನಗಳೂ ಇಂಪಾದ ನಾದವೂ ತುಂಬಿದೆ. 'ಹರಿಕಥಾಸಾರ'ವೆಂಬ ಮತ್ತೊಂದು ಗ್ರಂಥವನ್ನೂ ಈತನು ರಚಿಸಿರುವಂತೆ ಕಾಣುತ್ತದೆ.

ಕೃಷ್ಣದೇವರಾಯನ ಇತರ ಆಸ್ಥಾನ ಕವಿಗಳಲ್ಲಿ ನಂದೀ ತಿಮ್ಮಯ್ಯನು ತನ್ನ ಪೋಷಕನ ಅಂಕಿತದಲ್ಲಿ ಅನೇಕ ಚಾರಿತ್ರಾಂಶಗಳಿಂದ ಕೂಡಿದ 'ಪಾರಿಜಾತಾಪಹರಣ'ವೆಂಬ ಗ್ರಂಥವನ್ನು ರಚಿಸಿದನು.[೫೪] ಕೃಷ್ಣದೇವನ ಪ್ರಧಾನನಾದ ಸಾಲುವ ತಿಮ್ಮನು ಅಗಸ್ತ್ಯನ 'ಚಂಪೂ ಭಾರತ'ಕ್ಕೆ 'ಬಾಲಭಾರತ ವ್ಯಾಖ್ಯಾ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಈತನು ಬಾಲಭಾರತದಲ್ಲಿ ತನ್ನನ್ನು ಸಕಲಾಗಮ ಪಾರಾವಾರಪಾರೀಣ' ಎಂದು ಹೇಳಿಕೊಂಡಿದ್ದಾನೆ.[೫೫] ಈತನ ಅಳಿಯಂದಿರಾದ ನಾದಿಂದಲ ಅಪ್ಪ ಮತ್ತು ನಾಂದಿದಲಗೋಪ ಎಂಬುವರು ಕವಿಗಳೂ ಕವಿಜನಾಶ್ರಯರೂ ಆಗಿದ್ದರು ಮಾದಯ್ಯಗಾರಿ ಮಲ್ಲನ್ನನು 'ರಾಜಶೇಖರ ಚರಿತಮು' ಎಂಬ ಗ್ರಂಥವನ್ನು ರಚಿಸಿ ಅಪ್ಪನಿಗೆ ಅಂಕಿತ ಮಾಡಿದ್ದಾನೆ. ಅಪ್ಪನ ತಮ್ಮನಾದ ಗೋಪನು ಕೃಷ್ಣಮಿಶ್ರನ ಪ್ರಬೋಧ ಚಂದ್ರೋದಯ'ಕ್ಕೆ 'ಚಂದ್ರಿಕೆ'ಯೆಂಬ ವ್ಯಾಖ್ಯಾನವನ್ನು ರಚಿಸಿದನು.[೫೬] ದ್ವಿಪದೀಛಂದಸ್ಸಿನಲ್ಲಿ ಬರೆದಿರುವ 'ಕೃಷ್ಣಾರ್ಜುನ ಸಂವಾದವು' ಎಂಬದು ಈತನಿಂದಲೇ ರಚಿತವಾದುದು. ಗೋಪನ ಶಿಷ್ಯನಾದ ದೇಶೀಯಾಮಾತ್ಯನು 'ಮಹಿಮ್ನಸ್ತವಕ್ಕೆ' 'ಪಂಚಿಕೆ'ಯೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಈತನು ಕೃಷ್ಣದೇವರಾಯನ ಖಾಸಾಮತ್ತು ಕೊಂಡುವೀಡು ಶಾಸನಗಳ ಕರ್ತೃವಾದ ಲೊಲ್ಲ ಲಕ್ಷ್ಮೀಧರನ[೫೭] ಶಿಷ್ಯನೂ ಹೌದು. ಲಕ್ಷ್ಮೀಧರನು ಜ್ಯೋತಿಷ್ಯ, ಮಂತ್ರಶಾಸ್ತ್ರ, ಷಡ್ದರ್ಶನಗಳ ವಿಷಯವಾಗಿ ಗ್ರಂಥಗಳನ್ನು ರಚಿಸಿರುವಂತೆ ದೇಶೀಯಾಮಾತ್ಯನು ತನ್ನ ಗ್ರಂಥದ ಪೀಠಿಕೆಯಲ್ಲಿ ಹೇಳಿದ್ದಾನೆ. ಲೊಲ್ಲರಚಿತವಾದ 'ಸೌಂದರ್ಯಲಹರೀವ್ಯಾಖ್ಯಾನ' ದ ಗ್ರಂಥಾಂತ್ಯಗದ್ಯದಿಂದ ಪ್ರತಾಪರುದ್ರಕೃತವೆಂದು ಪ್ರತೀತಿ ಇರುವ 'ಸರಸ್ವತೀ ವಿಲಾಸ' ವೆಂಬುದು ಏತತ್ಕೃತವೆಂದೇ ತೋರುತ್ತದೆ. 'ಜ್ಯೋತಿಷ್ಯದರ್ಪಣ'ದ ರಚನೆಯಲ್ಲಿ ಲಕ್ಷ್ಮೀಧರನ ಕೈವಾಡವು ಸೇರಿರುವುದು ನಿಸ್ಸಂದೇಹವಾದ ವಿಷಯ[೫೮]

---

೫೨ Ibid P. 189-90 ೫೩ MER 1916 Para 66 App B. No. 534, Ibid P. 1921 Para 50 App.C No 105, Ibid 1927 Para 82. B .Nos 715-16 ೫೪ WVIX P. 199 ೫೫ Sources P 143 ೫೬ Ibid p. 144-8 ೫೭ EP. Ind Vol VI p. 117 Sources P. 152

ಕೃಷ್ಣದೇವರಾಯನಿಂದ ರಚಿತವಾದ ಕನ್ನಡ ಗ್ರಂಥಗಳಾವುದೂ ಇಲ್ಲದಿದ್ದರೂ ಅವನು ಕನ್ನಡ ಭಾಷಾಭಿಮಾನಿಯೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ. ತಿಮ್ಮಣ್ಣ ಕವಿಯಿಂದ ರಚಿತವಾದ ಭಾರತದಲ್ಲಿ "ಕೃಷ್ಣರಾಯನು ಒಡ್ಡೋಲಗದೊಳಿರ್ದು ಭಾರತದ ಕಥೆಯಕೇಳಿ ಕವಿಜನರ ನೋಡಿ ತಿಮ್ಮಣ್ಣನ ಕರೆದು ವಸ್ತ್ರಭೂಷಣಪಾತ್ರವನು ಕೊಟ್ಟು ಮನ್ನಿಸಿ-ಲೇಸೆನಿಸಿ ಮೊದಲಾಕುಮಾರವ್ಯಾಸ ದಶಪರ್ವಗಳ ಹೇಳಿದ ಭಾರತದ ಉಳಿದ ಪರ್ವಗಳನೀಸಕಲಜನ ಮೆಚ್ಚುವಂತೆ ಪೇಳು...ಎನಲು ತಿಮ್ಮಣ್ಣನು ಹಸಾದವೆನುತ ಕೈಕೊಂಡು ಭಾರತ ಕಥೆಯ ಕಡಮೆಯ ಕೃಷ್ಣರಾಯಿನಿಗಂಕಿತ ಮಾಡಿದಂತೆ ಹೇಳಿದೆ ಈ ಗ್ರಂಥಾಂತ್ಯದಲ್ಲಿ 'ನರಸನೃಪಸುತ ಕೃಷ್ಣರಾಯಂಗೆ ವರಯುಶವು ನಿಲುವಂತೆ ಪೇಳ್ದ ಭಾರತವು' ಎಂದು ಕವಿಯು ಹೇಳುತ್ತಾನೆ. ಇದಕ್ಕೆ ಕೃಷ್ಣರಾಜ ಭಾರತ ಅಥವಾ ಕರ್ಣಾಟಕ ಕೃಷ್ಣರಾಜ ಭಾರತ ಮಂಜರಿ ಎಂಬ ಹೆಸರೂ ಉಂಟು.[೫೯] ಇವೆಲ್ಲವನ್ನೂ ನೋಡಿದರೆ ತಿಮ್ಮಣ್ಣನು ಕೃಷ್ಣರಾಯನ ಪ್ರತ್ಯಕ್ಷ ಸಹಾಯದಿಂದ ಗ್ರಂಥ ರಚನೆ ಮಾಡಿರ ಬಹುದೆಂದು ತೋರುತ್ತದೆ. 'ವೀರಶೈವಾಮೃತ ಪುರಾಣ' ಮತ್ತು 'ಭಾವಚಿಂತಾರತ್ನ' ಕರ್ತೃವಾದ ಗುಬ್ಬಿಯ ಮಲ್ಲಣ್ಣನೂ 'ತ್ರಿಭುವನತಿಲಕ' ಮತ್ತು ಗುರುಭಕ್ತ ಚಾರಿತ್ರವನ್ನು ರಚಿಸಿದ ವಿರುಪರಾಜ 'ಕುಮಾರ ರಾಮಕಥೆ' ಯನ್ನು ಬರೆದ ನಂಜುಂಡ ಇವರೆಲ್ಲರೂ ಕೃಷ್ಣದೇವರಾಯನ ಕಾಲದ ಕನ್ನಡ ಕವಿಗಳು. ಇವರುಗಳಲ್ಲದೆ ವ್ಯಾಸರಾಯ, ಓದುವಗಿರಿಯ, ಲಿಂಗಮಂತ್ರಿ, ಚೇರಮಾಂಕ ಪುರಿಗೆಯ ಶಾಂತವೀರ ಮೊದಲಾದವರೂ ಈ ಕಾಲದಲ್ಲಿಯೇ ಕನ್ನಡ ಗ್ರಂಥಗಳನ್ನು ರಚಿಸಿದವರು. ಇವರಲ್ಲಿ ವ್ಯಾಸರಾಯನು ವಿನಾ ಉಳಿದವರು ವೀರಶೈವರು. ಇವರಿಗೆ ಕೃಷ್ಣದೇವರಾಯನ ಪ್ರತ್ಯಕ್ಷ ಸಂಬಂಧವಿದ್ದಂತೆ ತೋರುವುದಿಲ್ಲ. ವೈಷ್ಣವನಾದ ವ್ಯಾಸರಾಯನು ಮಾತ್ರ ರಾಜನ ಸಂಪೂರ್ಣ ಸನ್ಮಾನಕ್ಕೆ ಪಾತ್ರನಾಗಿದ್ದನು. ಕೃಷ್ಣದೇವರಾಯನಿಗೆ ಈತನಲ್ಲಿ ಬಹಳ ಭಕ್ತಿಯಿತ್ತೆಂಬುದು ಅನೇಕ ಶಾಸನಗಳಿಂದ ವ್ಯಕ್ತಪಡುತ್ತದೆ. ಭಕ್ತಿಮತ ಸ್ಥಾಪಕನಾದ ವಲ್ಲಭಾಚಾರ್ಯನು ಕೃಷ್ಣರಾಯನ ಅಸ್ಥಾನ ವಿದ್ವಾಂಸರ ಮುಂದೆ ತನ್ನ ಮತತತ್ವಗಳನ್ನು ವಿವರಿಸುವ ಕಾಲದಲ್ಲಿ ಈತನು ಅಧ್ಯಕ್ಷನಾಗಿರಬೇಕೆಂದು ಕೃಷ್ಣರಾಯನು ಕೇಳಿಕೊಂಡನಂತೆ[೬೦] ಈತನು ಮಧ್ವಾಚಾರ್ಯರ ದ್ವೈತ ಗ್ರಂಥಗಳಿಗೆ 'ಚಂದ್ರಿಕೆ' 'ನ್ಯಾಯಾಮೃತ' 'ಭೇದೋಜ್ಜೀವಿನಿ' ಮೊದಲಾದ ಸಂಸ್ಕೃತ ವ್ಯಾಖ್ಯಾನಗಳನ್ನು ರಚಿಸಿದ್ದಾನೆ. ಕನ್ನಡದಲ್ಲಿ ಈತನಿಂದ ವಿರಚಿತವಾದ ಕೃಷ್ಣ ನಾಮಾಂಕಿತವಾದ ಅನೇಕ ಹಾಡುಗಳಿವೆ.

ವಿಜಯನಗರದ ರಾಜವಂಶೀಯರ ಶಾಸನಗಳನ್ನು ನೋಡಿದರೆ ರಾಜರ ಶಾಸನಗಳನ್ನು ರಚಿಸುವುದಕ್ಕಾಗಿಯೇ ರಾಜಾಸ್ಥಾನದಲ್ಲಿ ವಂಶಪಾರಂಪರ್ಯವಾಗಿ ಕೆಲವು ವಿದ್ವಾಂಸರಿದ್ದಂತೆ ತೋರುತ್ತದೆ. ಕೃಷ್ಣದೇವರಾಯನ ಶಾಸನವನ್ನು ಸಭಾಪತಿಯೆಂಬುವನು ರಚಿಸಿದನು ಎಂಬದಾಗಿ ಹೇಳುವ

ಕೃಷ್ಣದೇವಮಹಾರಾಯ ಶಾಸನೇನ ಸಭಾಪತಿಃ ।
ಅಭಾಣಿಮೃದು ಸಂಘರ್ಭಂ ತದಿದಂ ತಾಮ್ರಶಾಸನಂ॥

ಎಂಬ ಶ್ಲೋಕವು ಅನೇಕ ಶಾಸನಗಳಲ್ಲಿ ಸಿಕ್ಕುವುದು. ಈ ಸಭಾಪತಿಯು ಡಿಂಡಿಮ ವಂಶಕ್ಕೆ ಸೇರಿದವನು. ಇವನ ವಂಶಸ್ಥರಾದ ಸ್ವಯಂಭು, ಕಾಮಕೋಟಿ, ರಾಜನಾಥ, ರಾಮಕವಿ ಮೊದಲಾದವರು ತುಳುವ ಮತ್ತು ಆರುವೀಡುವಂಶಸ್ಥರ ಶಾಸನಗಳನ್ನು ರಚಿಸಿದ್ದಾರೆ. ಇವರೆಲ್ಲರೂ ಉದ್ದಾಮ ಕವಿಗಳು. ಶಾಸನದಲ್ಲಿ ಸಿಕ್ಕುವ ಇವರ ಕೆಲವು ಕವನಗಳು ಉತ್ತಮ ಕಾವ್ಯಗಳನ್ನು ಮೀರಿಸಿವೆ. ಸಭಾಪತಿಯ ಸಹೋದರಿಯ ಮಗನಾದ ಅರುಣಗಿರಿನಾಥನು 'ಸೋಮವಲ್ಲೀ ಯೋಗಾನಂದ ಪ್ರಹಸನ'ವೆಂಬ ಹಾಸ್ಯರಸ ಪ್ರಧಾನವಾದ ಗ್ರಂಥವನ್ನು ರಚಿಸಿದ್ದಾನೆ ಈತನಿಗೆ 'ಚೇರ ಚೋಳಪಾಂಡ್ಯ ಪ್ರಥಮಾರಾಧ್ಯ ಡಿಂಡಿಮಕವಿ' 'ದಶರೂಪನಾರಾಯಣಬಿರುದಮಂಡನಡಿಂಡಿಮ' 'ರಸಿಕ ಕವಿತಾ ಸಾಮ್ರಾಜ್ಯಲಕ್ಷ್ಮೀಪತಿ' 'ನವನಾಟಕ ಭರತಾಚಾರ್ಯ' 'ಪ್ರತಿಭಟಕವಿಕುಂಜರಪಂಚಾನನ' ಮೊದಲಾದ ಬಿರುದುಗಳಿದ್ದಂತೆ ತೋರುತ್ತದೆ.[೬೧]

ಕೃಷ್ಣದೇವರಾಯನ ಸಾಹಿತ್ಯ ಪ್ರೇಮವನ್ನು ಕೇಳಿ ಅನೇಕ ವಿದ್ವಾಂಸರು ಈತನ ಅಸ್ಥಾನಕ್ಕೆ ಬಂದು ಇವ

---

೫೯ ಕ. ಚ. II ಪು 189 ೬೦ Search for Sauskric mss daring 1896 by prof H. Sheshagireshas try, ೬೧ Ep Ind vol XII 3489.

ನಿಂದ ಸನ್ಮಾನಿತರಾದಂತೆ ಕೆಲ ಗ್ರಂಥಗಳಿಂದ ತಿಳಿದು ಬರುತ್ತದೆ. ಮುರಲೀದಾಸ ಕೃತವಾದ ವಲ್ಲಭರಾಯ ಚರಿತ್ರದಿಂದ ಘೂರ್ಜರ ದೇಶದ ವೈಷ್ಣವಾಚಾರ್ಯನಾದ ವಲ್ಲಭನು ಕೃಷ್ಣರಾಯನ ಆಸ್ಥಾನಕ್ಕೆ ಬಂದಿದ್ದಂತೆಯೂ ಅಲ್ಲಿ ವಾದಮಾಡಿ ವೈಷ್ಣವೇತರರನ್ನು ಜಯಿಸಿದುದರಿಂದ ರಾಜನಿಂದ ಕನಕಾಭಿಷಕ್ತನಾದಂತೆಯೂ ಊಹಿಸ ಬಹುದಾಗಿದೆ.[೬೨] ನಾರಾಯಣಕೃತವಾದ ರಾಘವೇಂದ್ರ ವಿಜಯದಲ್ಲಿ ಕವಿಯ ಮುತ್ತಜ್ಜನಾದ ಕೃಷ್ಣನು ಕೃಷ್ಣದೇವರಾಯನ ಆಸ್ಥಾನಕ್ಕೆ ಹೋಗಿ ಅವನಿಗೆ ವೀಣಾಗಾನವನ್ನು ಪಾರಹೇಳಿ ಅವನಿಂದ ಮುತ್ತಿನಹಾರಗಳನ್ನು ಬಹುಮಾನವಾಗಿ ಪಡೆದಂತೆ ಹೇಳಿದ.

ಅಚ್ಯುತರಾಯ ಮತ್ತು ಸದಾಶಿವರಾಯರು ಕೃಷ್ಣರಾಯನ ತರುವಾಯ ಕ್ರಮವಾಗಿ ವಿಜಯನಗರ ಸಿಂಹಾಸನಾರೂಢರಾದರು. ಸದಾಶಿವರಾಯನು ರಾಜ್ಯಾಧಿಪತ್ಯವನ್ನು ವಹಿಸುವಾಗ ಪ್ರಾಪ್ತ ವಯಸ್ಕನಾಗಿರಲಿಲ್ಲವಾಗಿ ಕೃಷ್ಣದೇವರಾಯನ ಅಳಿಯಂದಿರಾದ ಅರವೀಡುವಂಶದ ರಾಮರಾಯ ತಿರುಮಲಯರೆಂಬ ಸಹೋದರರು ಅವನ ಪೋಷಕರಾದರು ಇವರು ಸದಾಶಿವನ ಬಾಲ್ಯಾವಸ್ಥೆಯಲ್ಲಿ ಅವನ ಪೋಷಕರಾಗಿ ರಾಜ್ಯಾಧಿಪತ್ಯವನ್ನು ವಹಿಸಿ ಅವನು ಪ್ರಾಪ್ತ ವಯಸ್ಕನಾದ ಮೇಲೆಯೂ ಅವನಿಗೆ ರಾಜ್ಯಾಧಿಕಾರವನ್ನು ಕೊಡದೆ ಅವನನ್ನು ಸೆರೆಯಲ್ಲಿಡಿಸಿ ೧೫೬೫ನೆಯ ವರ್ಷದ ತಾಳೀಕೋಟೆಯ ಯುದ್ಧದಲ್ಲಿ ರಾಮರಾಯನು ಗತಜೀವನಾಗುವ ವರೆಗೆ ಅವನೂ ಅನಂತರ ಅವನ ತಮ್ಮನಾದ ತಿರುಮಲರಾಯನೂ ರಾಜ್ಯಭಾರ ಮಾಡಿದರು. ಹೆಸರಿಗೆ ಮಾತ್ರ ಸದಾಶಿವನು ರಾಜನಾಗಿದ್ದರೂ ರಾಜ್ಯಾಧಿಕಾರವೆಲ್ಲ ಇವರ ಕೈಯಲ್ಲಿಯೇ ಇದ್ದುದರಿಂದ ಈ ಕಾಲದ ಸಾಹಿತ್ಯ ಪ್ರಪಂಚವು ಇವರ ಪ್ರೋತ್ಸಾಹಕ್ಕೆ ಒಳಪಟ್ಟಿದ್ದಿತು.

ಅಚ್ಯುತನು ವಿದ್ವಾಂಸರಿಗೂ ವಿದ್ಯಾಸಂಸ್ಥೆಗಳಿಗೂ ದಾನ ಮಾಡುವುದರಲ್ಲಿ ಅಗ್ರಗಣ್ಯ. ಅನೇಕ ಶಾಸನಗಳಲ್ಲಿ ಇವನನ್ನು 'ನವಕೋಟಿ ನಾರಾಯಣ' ಎಂಬದಾಗಿ ಕರೆದಿದೆ.[೬೩] ಇವನಿಂದ ವಿಶೇಷ ಸಹಾಯ ಪಡೆದವನು ಇವನ ಆಸ್ಥಾನ ಕವಿಯಾದ ರಾಜನಾಥಕವಿ. ಈತನು ಅಚ್ಯುತರಾಯನ ಸಾಹಸ ಕಾರ್ಯಗಳನ್ನು ವರ್ಣಿಸುವ 'ಅಚ್ಯುತರಾಯಾಭ್ಯುದಯ' ಎಂಬ ಐತಿಹಾಸಿಕ ಕಾವ್ಯವನ್ನೂ 'ಭಾಗವತ ಚಂಪು' ವೆಂಬ ವೈಷ್ಣವ ಕಾವ್ಯವನ್ನೂ ರಚಿಸಿ ತನ್ನ ಪೋಷಕನಿಗೆ ಅಂಕಿತವಾಗಿ ಒಪ್ಪಿಸಿದ್ದಾನೆ.[೬೪] ವರದಾಂಬಿಕಾ ಪರಿಣಯವೆಂಬ ಸಂಸ್ಕೃತ ಚಂಪೂಗ್ರಂಥಕರ್ತಳಾದ ತಿರುಮಲಾಂಬಾ ಎಂಬುವಳು ಅಚ್ಯುತರಾಯನ ಆಶ್ರಯದಲ್ಲಿಯೇ ತನ್ನ ಗ್ರಂಥವನ್ನು ರಚಿಸಿರಬಹುದು. ಅಚ್ಯುತರಾಯನಿಗೂ ವರದಾಂಬಿಕೆಗೂ ನಡೆದ ವಿವಾಹವು ಇದರಲ್ಲಿ ವರ್ಣಿತವಾಗಿದೆ. ಆಶು ಸಾಂತ್ಯ ಪಟ್ಯದಿಂದ ತಿರುಮಲಾಂಬೆಯು ದೊಡ್ಡ ವಿದ್ವಾಂಸಳೂ ಅಚ್ಯುತರಾಯನ ಆಸ್ಥಾನದಲ್ಲಿ ವಿಶೇಷವಾಗಿ ಗೌರವಿಸಲ್ಪಟ್ಟವಳೂ ಆಗಿದ್ದಳೆಂದು ತಿಳಿದು ಬರುತ್ತದೆ[೬೫]

'ರಾಮರಾಜಭೂಷಣ'ನೆಂಬ ಬಿರುದನ್ನು ಹೊಂದಿದ್ದ ಭಟ್ಟುಮೂರ್ತಿಯು ಸದಾಶಿವರಾಯನ ಪೋಷಕರಾದ ಅರುವೀಡು ಸಹೋದರರ ಆಸ್ಥಾನದ ತೆಲಗುಕವಿ. 'ರಾಮರಾಜಭೂಷಣ' ಎಂಬುದು ರಾಮರಾಯನು ಕವಿಗೆ ಕೊಟ್ಟ ಬಿರುದು ರಾಮರಾಜಭೂಷಣನೂ ಭಟ್ಟುಮೂರ್ತಿಯೂ ಏಕವ್ಯಕ್ತಿಯೇ ಅಥವಾ ಭಿನ್ನ ವ್ಯಕ್ತಿಗಳೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟಾಗಿ ಏಕವ್ಯಕ್ತಿಯೆಂಬದಾಗಿಯೇ ಅಂಗೀಕೃತವಾಗಿರುವಂತೆ ತೋರುತ್ತದೆ.[೬೬] ಈತನು 'ವಸುಚರಿತ್ರಮು' 'ಹರಿಶ್ಚಂದ್ರ ನಳೋಪಾಖ್ಯಾನಮು' 'ನರಸಭೂಪಾಲೀಯಮು' ಎಂಬ ಮೂರುಗ್ರಂಥಗಳನ್ನು ರಚಿಸಿದ್ದಾನೆ. ಇವುಗಳಲ್ಲಿ 'ವಸುಚರಿತ್ರೆ'ಯು ಪ್ರಸ್ಥಾನದೇಶದ ರಾಜನಾದ ವಸುಮಹಾರಾಜನಿಗೂ ಕೋಲಾಹಲ ಪರ್ವತರಾಜಪುತ್ರಿಯಾದ ಗಿರಿಕನ್ಯೆಗೂ ನಡೆದ ವಿವಾಹವನ್ನು ವರ್ಣಿಸುವ ಕಾವ್ಯ. ಅಲ್ಲಸಾನಿಪೆದ್ದನ್ನನ 'ಮನುಚರಿತ್ರದ' ಮಾದರಿಯಲ್ಲಿ ಬರದ ಗ್ರಂಥವಿದು ಇದು ತಿರುಮಲರಾಯನಿಗೆ ಅಂಕಿತವಾಗಿ ಅರ್ಪಿಸಲ್ಪಟ್ಟಿದೆ. 'ಹರಿಶ್ಚಂದ್ರ ನಳೋಪಾಖ್ಯಾನ'ವು ಹರಿಶ್ಚಂದ್ರನಳಮಹಾರಾಜರ ಚರಿತ್ರೆಯನ್ನು ಏಕಾಕಾರವಾದ ಶಬ್ದಗಳಿಂದ ವರ್ಣಿಸುವ ದ್ವ್ಯರ್ಥಕಾವ್ಯ. ಈ ಗ್ರಂಥಕ್ಕೆ ಆಗಿನ

---

೬೨ Sources 155 ೬೩ M. ER. 1918 Para 73 ೬೪ Sources PP 160-165
೬೫ Ibid p 176 ೬೬ W VL. X· pp 251-53

ಕಾಲದಲ್ಲಿ ದೊರೆತ ಪ್ರಾಶಸ್ತ್ಯದಿಂದ ಇದು ಮುಂದಿನ ಆಂಧ್ರ ಕವಿಗಳಿಗೆ ಮಾದರಿಯಾಗಿ ಪರಿಣಮಿಸಿತು. 'ನರಸಭೂಪಾಲೀಯ'ವು ಅಲಂಕಾರಗ್ರಂಥ. ಕವಿಯು ಇದನ್ನು ತಿರುಮಲರಾಯನ ಅಳಿಯನಾದ ಪೋಚಿರಾಜ ನರಸರಾಜು ಎಂಬುವನಿಗೆ ಅಂಕಿತವಾಗಿ ಒಪ್ಪಿಸಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದಕ್ಕೆ 'ಕಾವ್ಯಾಲಂಕಾರ ಚೂಡಾಮಣಿ' ಎಂಬ ಹೆಸರೂ ಉಂಟು.

ರಾಮರಾಯನ ಮಂತ್ರಿಯೂ ಕೊಂಡುವೀಡು ರಾಜ್ಯದ ರಾಜಪ್ರತಿನಿಧಿಯೂ ಆದ ರಾಮಯಾಮಾತ್ಯ ಕೋದರಮಲ್ಲನು ಉದ್ದಾಮನಾದ ಸಂಗೀತ ಶಾಸ್ತ್ರಜ್ಞನೆಂದು ತೋರುತ್ತದೆ. ಈತನು ಒಂದು ದಿವಸ ರಾಮರಾಜನ ಆಸ್ಥಾನದಲ್ಲಿ ತನಗೆ ಸಂಗೀತ ಶಾಸ್ತ್ರದಲ್ಲಿದ್ದ ಪಾಂಡಿತ್ಯವನ್ನು ಪ್ರಕಟಿಸಲು ರಾಮರಾಯನು ತೃಪ್ತನಾಗಿ ತನ್ನ ತಮ್ಮನಾದ ವೆಂಕಟಾದ್ರಿಯ ಸೂಚನೆಯ ಮೇರೆ ಈತನನ್ನು ಒಂದು ಸಂಗೀತ ಶಾಸ್ತ್ರವಿಷಯಕವಾದ ಗ್ರಂಥವನ್ನು ರಚಿಸುವಂತೆ ಆಜ್ಞೆ ಮಾಡಿದನಂತೆ. ಅದೇ ಪ್ರಕಾರ ಈತನು 'ಸ್ವರಮೇಲಕಲಾನಿಧಿ' ಎಂಬ ಗ್ರಂಥವನ್ನು ರಚಿಸಿ ರಾಮರಾಯನಿಗೆ ಅಂಕಿತ ಮಾಡಿದನು. ಈ ಅಂಶವು 'ಸ್ವರಮೇಲಕಲಾನಿಧಿಯ ಪೀಠಿಕಾಶ್ಲೋಕಗಳಿಂದ ಶ್ರುತಪಡುವುದು.[೬೭]

ಕೃಷ್ಣದೇವರಾಯನಿಂದ ವಿಶೇಷವಾಗಿ ಪ್ರೋತ್ಸಾಹವನ್ನು ಹೊಂದಿದ ವ್ಯಾಸರಾಯನೂ ಈತನ ಶಿಷ್ಯರಾದ ಕನಕದಾಸ, ಪುರಂದರದಾಸ, ವಾದಿರಾಜತೀರ್ಥ ವಿಜಯೀಂದ್ರತೀರ್ಥ ಮೊದಲಾದವರೂ ಅರವೀಡು ಸಹೋದರರಿಂದ ಸಹಾಯಪಡೆದು ಗ್ರಂಥ ರಚನೆಯನ್ನು ಮಾಡಿರುವುದು ಅನೇಕ ಆಧಾರಗಳಿಂದ ಹೊರಪಡುತ್ತದೆ. ಕನಕದಾಸನು ವ್ಯಾಸರಾಯನ ಸೇವೆಯಿಂದ ಜ್ಞಾನಿಯಾದಂತೆ ಅನೇಕರು ಹೇಳುತ್ತಾರೆ. ಆದರೆ ಅವನ ಗ್ರಂಥಗಳಲ್ಲಿ ಎಲ್ಲಿಯೂ ಅವನು ವ್ಯಾಸರಾಯನ ಶಿಷ್ಯನೆಂಬದಾಗಿ ಹೇಳಿಲ್ಲ; ಶ್ರೀವೈಷ್ಣವನಾದ ತಾತಾಚಾರ್ಯನ ಶಿಷ್ಯನೆಂಬದಾಗಿ ಹೇಳಿಕೊಂಡಿದ್ದಾನೆ. ಇವನು ಮೋಹನತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಸಾರ, ನೃಸಿಂಹಸ್ತವ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ.[೬೮] ಪುರಂದರದಾಸನು ೧೫೩೮ರಲ್ಲಿ ವಿಜಯನಗರದಲ್ಲಿದ್ದಂತೆಯೂ ೧೫೬೪ರಲ್ಲಿ ಅಲ್ಲಿಯೆ ಸತ್ತಂತೆಯೂ ಅವನ ಕೆಲವು ಕೀರ್ತನೆಗಳಿಂದ ತಿಳಿಯಬಹುದೆಂಬದಾಗಿ ಮಿ॥ ಕಿಟ್ಟೆಲ್‌ರವರು ನಾಗವರ್ಮನ ಛಂದೋಂಬುಧಿಯ ಉಪೋದ್ಘಾತದಲ್ಲಿ ಹೇಳಿದ್ದಾರೆ.[೬೯] ಹಾಗಾದ ಪಕ್ಷದಲ್ಲಿ ಈತನು ೧೫೪೨ ರಿಂದ ೬೫ ರ ವರೆಗೆ ಆಳಿದ ರಾಮರಾಯನ ಕಾಲದಲ್ಲಿಯೂ ಇದ್ದಿರಬಹುದು. ಈತನು ವಿಷ್ಣುಸ್ತುತಿರೂಪವಾಗಿಯೂ ವೇದಾಂತ ಬೋಧಕವಾಗಿಯೂ ಇರುವ ಪುರಂದರವಿಠಲ ಎಂಬ ಅಂಕಿತದಿಂದ ಕೂಡಿದ ಅನೇಕ ಕೀರ್ತನೆಗಳನ್ನು ರಚಿಸಿದ್ದಾನೆ. ವಾದಿರಾಜನು ವ್ಯಾಸರಾಯನ ಸಾಕ್ಷಾತ್ ಶಿಷ್ಯನಾಗಿ ವ್ಯಾಸಂಗ ಮಾಡಿದಂತೆ ತಿಳಿದುಬರುವುದರಿಂದ ಈತನೂ ರಾಮರಾಜನ ಕಾಲದಲ್ಲಿಯೆ ಗ್ರಂಥರಚನೆಯನ್ನು ಮಾಡಿರಬೇಕು. ಇವನು ಸಂಸ್ಕೃತದಲ್ಲಿ 'ರುಕ್ಮಿಣೀಶವಿಜಯ' 'ತೀರ್ಥಪ್ರಬಂಧ' ಎಂಬ ಗ್ರಂಥಗಳನ್ನೂ ಕನ್ನಡದಲ್ಲಿ 'ವೈಕುಂಠವರ್ಣನೆ' 'ಸ್ವಪ್ನಗದ್ಯ' 'ಲಕ್ಷ್ಮಿಯ ಶೋಬಾನೆ' 'ಭಾರತತಾತ್ಪರ್ಯನಿರ್ಣಯಟೀಕೆ' ಮೊದಲಾದವುಗಳನ್ನೂ ರಚಿಸಿದ್ದಾನೆ. 'ಹಯವದನ ಎಂಬ ಅಂಕಿತವಿರುವ ಕೆಲವು ಕೀರ್ತನೆಗಳೂ ಏತತ್ಕೃತವೇ ಇರಬಹುದು[೭೦] ನಾರಾಯಣ ಕೃತನಾದ 'ರಾಘವೇಂದ್ರ ವಿಜಯದ' ಎರಡನೆಯ ಸರ್ಗದಲ್ಲಿ ಬರುವ :—

ವಿಗ್ವದ್ವರೋಸ್ಮಾದ್ವಿಜಯೀಂದ್ರಯೋಗಿ
ವಿದ್ಯಾಸುಕೃದ್ಯಾಸ್ವಕುಲಪ್ರಭಾವಃ ।
ರತ್ನಾಭಿಷೇಕಂ ಕಿಲ ರಾಮರಾಜಾತ್ ಪ್ರಾಪ್ಯಾಗ್ರ್ಯ
ಲಕ್ಷ್ಮೀಸಕೃತಾಗ್ರಹಾರಾನ್ ॥

ಎಂಬ ಶ್ಲೋಕದಿಂದ ವಿಜಯೀಂದ್ರತೀರ್ಥನು ರಾಮರಾಜನ ಆಸ್ಥಾನದಲ್ಲಿ ವಿದ್ವತ್ಪ್ರದರ್ಶನದಿಂದ ಕನಕಾಭಿಷಿಕ್ತನಾದಂತೆ ತೋರುತ್ತದೆ. ಈತನು ಮಾಧ್ವಸನ್ಯಾಸಿ. ನೀಲಕಂಠದೀಕ್ಷಿತವಿರಚಿತವಾದ 'ಶಿವಲೀಲಾರ್ಣವ' ವೆಂಬ ಕಾವ್ಯದಲ್ಲಿ ಇವನು ಪ್ರಸಿದ್ಧ ಶೈವವಿದ್ವಾಂಸನಾದ ಅಪ್ಪಯ್ಯ ದೀಕ್ಷಿತನ ಸಮಕಾಲೀನನೆಂದು ಹೇಳಿದೆ. ಅಪ್ಪಯ್ಯ ದೀಕ್ಷಿತನು ದ್ವೈತಮತವನ್ನು ಖಂಡಿಸಲು ಅವನ ಪ್ರತಿಖಂಡನಕ್ಕಾಗಿ ವಿಜಯೀಂದ್ರನು ಅನೇಕ ಗ್ರಂಥಗಳನ್ನು ರಚಿಸಿದನೆಂಬುದನ್ನು

[೬೭] Sources pp 191-3 [೬೮] ಕ ಚ II ಪು237-8 [೬೯] Nag Pro Introduction p. p 52-3
[೭೦] ಕ. ಚ. II. ಪು. 233-4

ದುರ್ವಾದ್ಯಪ್ಪಯ್ಯರಚಿತ ಗ್ರಂಥಾರಣ್ಯವಿನಷ್ಟಯೇ ।
ಚತುಸ್ಸಂಖ್ಯಾಧಿಕಶತಗ್ರಂಥಾಗ್ನೀ
ನಾಂಪ್ರಚೋದಕವ್ ॥
ಮಾದ್ಯದಪ್ಪಯಮಾತಂಗ ಗರ್ವನಿರ್ವಾಪಣ
ಕ್ಷಮ ।
ಶ್ರೀಜಯೀಂದ್ರೋವೃಗೇಂದ್ರೋಮೇಹೃದ್ಗುಹಾ
ವಸಥೋಭವೇತ್ ॥

ಎಂಬ ಶ್ಲೋಕದಿಂದ ತಿಳಿಯಬಹುದಾಗಿದೆ. ವಿಜಯೀಂದ್ರ ಸ್ತೋತ್ರದ

ಜಿತ್ವಾವಾದೇ ವೀರಶೈವಗುರುಂವಿಸ್ತೃತತನ್ಮರವ್।
ಅಪಹೃತ್ಯೇಹಸಂವಾಸಂ ಕೃತವಂತಂಸತಾಂ
ಹಿತವ್ ॥

ಎಂಬ ಶ್ಲೋಕದಿಂದ ವಿಜಯೀಂದ್ರನು ಒಬ್ಬ ವೀರಶೈವ ಗುರುವನ್ನು ವಾದದಲ್ಲಿ ಸೋಲಿಸಿ ಅವನನ್ನು ಅವನ ಮಠದಿಂದ ಓಡಿಸಿದಂತೆ ಕಾಣುತ್ತದೆ. ವಿಜಯನಗರದ ಜಂಬುನಾಥ ಪರ್ವತದಲ್ಲಿದ್ದ ಕುಂಭಕೋಣ ಮಠದ ಎಮ್ಮೆಯ ಬಸವನೇ ಈತಸಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ ವಿಜಯೀಂದ್ರನ ಗ್ರಂಥಗಳಲ್ಲಿ 'ಚಕ್ರಮೀಮಾಂಸ' 'ಚಂದ್ರಿಕೋದಾಹೃತನ್ಯಾಯವಿವರಣ' 'ನ್ಯಾಯಾಮೃತವ್ಯಾಖ್ಯಾ' 'ಅಪ್ಪಯ್ಯ ಕಪೋಲಚಪೇಟಿಕಾ' ಮೊದಲಾದುವು ಮುಖ್ಯವಾದುವು.[೭೧]

ಅಪ್ಪಯ್ಯದೀಕ್ಷಿತನು ದೊಡ್ಡ ಪಂಡಿತ. ಈತನ ಗ್ರಂಥಗಳು ಬಹುಮುಖವಾಗಿವೆ. ಈತನು ಆರವೀಡು ಸಹೋದರರಕಾಲದಲ್ಲಿಯೇ ಗ್ರಂಥ ರಚನೆ ಮಾಡಿದನೆಂದು ನಿಸ್ಸಂದೇಹವಾಗಿ ಹೇಳಬಹುದು. ಶ್ರೀವೈಷ್ಣವ ಗುರುವಾದ ವೇದಾಂತ ದೇಶಿಕರ ಯಾದವಾಭ್ಯುದಯಕ್ಕೆ ಈತನು ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ವ್ಯಾಖ್ಯಾನದ ಪೀಠಿಕೆಯಲ್ಲಿರುವ

ಶ್ರೀಚಿನ್ನತಿಮ್ಮರಾಜಃ ಪ್ರತಾಪನೀರಾಜಿತಕ್ಷಮಾ
ವಲಯಃ

.... .... .... .... ....

ಸಾಹಿತ್ಯಗೋಷ್ಠ್ಯಾಂ ಸರಸಾಮಾಶಿಷ್ಟನ್ನಯ
ಮೇಕದಾ ।
ಯಾದವಾಭ್ಯುದಯಂಕಾವ್ಯಮಶ್ರೌಷೀದ್ವಿದು
ಷಾಂಮುಖಾತ್ ॥
ಅವ್ಯಾಖ್ಯಾತತಯಾಪೂರ್ವೈರನಭಿವ್ಯಕ್ತ
ಭಾವಕವ್ ।
ಅಸ್ಪೃಷ್ಟಮಿವ ಶಿಲ್ಪಜ್ಞೈರಭಿಜಾತಂ
ಹರಿನ್ಮಣಿವ್ ॥
ತದಾಕರ್ಣನತಸ್ತಸ್ಯ ಸಮುದಂಚತ್ಕುತೂಹಲಃ ।
ವಿದುಷಾಂಪುರತಸ್ತಸ್ಯ ವಿವೃತಿಂವಾಂನ್ಯಯೋ
ಜಯತ್ ॥

ಎಂಬ ಶ್ಲೋಕಗಳಿಂದ ಅಪ್ಪಯ್ಯದೀಕ್ಷಿತನು ಚಿನ್ನತಿಮ್ಮರಾಜನ ಅಭಿಪ್ರಾಯದ ಮೇರೆ ಯಾದವಾಭ್ಯುದಯ ವ್ಯಾಖ್ಯಾನವನ್ನು ರಚಿಸಿದಂತೆ ತಿಳಿದು ಬರುತ್ತದೆ ಈ ಚಿನ್ನತಿಮ್ಮನು ರಾಮರಾಯನ ಜ್ಞಾತಿ. ಇವನು ರಾಮರಾಯನ ಅಧೀನದಲ್ಲಿ ಕೇರಳ ದೇಶವನ್ನು ಜಯಿಸಿ ತಾಮ್ರಪರ್ಣಿ ನದಿಯ ತೀರದಲ್ಲಿ ಜಯಸ್ತಂಭವನ್ನು ಸ್ಥಾಪಿಸಿದಂತೆ ಶಾಸನಗಳಲ್ಲಿ ಹೇಳಿದೆ. 'ಪ್ರಪನ್ನಾಮೃತ'ದ ೧೨೬ನೇಯ ಅಧ್ಯಾಯದಲ್ಲಿ ಅಪ್ಪಯ್ಯ ದೀಕ್ಷಿತನು ಚಿತ್ರಕೂಟದಲ್ಲಿದ್ದುಕೊಂಡು 'ಅದ್ವೈತದೀಪಿಕೆ' ಯೆಂಬ ಗ್ರಂಥವನ್ನು ರಚಿಸಿ ಶೈವಮತಪ್ರಚಾರ ಮಾಡುತ್ತಿದ್ದಂತೆಯೂ, ಅದಕ್ಕೆ ಪ್ರತಿಯಾಗಿ ಮಹಾಚಾರ್ಯನೆಂಬ ಶ್ರೀವೈಷ್ಣವಾಚಾರ್ಯನು 'ಚಂಡಮಾರುತ' ವೆಂಬ ಗ್ರಂಥವನ್ನು ರಚಿಸಿ ಅದ್ವೈತದೀಪಿಕೆಯನ್ನು ನಾಶಪಡಿಸಿದಂತೆಯೂ ಆ ಮಹಾಚಾರ್ಯನ ಸಹಾಯದಿಂದ ರಾಮರಾಯನೂ ಅವನ ಗುರುವಾದ ತಾತಾಚಾರ್ಯನೂ ಗೋವಿಂದರಾಜಸ್ವಾಮಿಯನ್ನು ಪ್ರತಿಷ್ಠೆ ಮಾಡಿದಂತೆಯೂ ಹೇಳಿದೆ. ಇವುಗಳ ಆಧಾರದಿಂದ ಅಪ್ಪಯ್ಯ ದೀಕ್ಷಿತನು ರಾಮರಾಯನಕಾಲದವನೆಂದು ಧೈರ್ಯವಾಗಿ ಹೇಳಬಹುದಾಗಿದೆ. ಅಪ್ಪಯ್ಯ ದೀಕ್ಷಿತನ ಗ್ರಂಥಗಳಲ್ಲಿ 'ಪರಿಮಳ'ವೇ ಮೊದಲಾದ ಆರು ಅದ್ವೈತವೇದಾಂತ ಗ್ರಂಥಗಳು. 'ಮಾನಸೋಲ್ಲಾಸ' 'ಶಿವಕರ್ಣಾಮೃತ' ಮೊದಲಾದ ಇಪ್ಪತ್ತಾರು ಶಿವೋತ್ಕರ್ಷಪರವಾದುವು; 'ಸವ್ಯಾಖ್ಯನ್ಯಾಯಮಯೂಖ ಮಾಲಿಕಾ' ಎಂಬುದು ವಿಶಿಷ್ಟಾದ್ವೈತ ವೇದಾಂತಕ್ಕೆ ಸಂಬಂಧಪಟ್ಟುದು; 'ಸವ್ಯಾಖ್ಯನ್ಯಾಯರತ್ನಮಾಲಾ' ಎಂಬುದು ದ್ವೈತವಿಷಯಿಕವಾದುದು; 'ನಕ್ಷತ್ರವಾದ ಪಾದಾವಳಿ' ಎಂಬುದು ವ್ಯಾಕರಣ ಗ್ರಂಥ; 'ಚಿತ್ರಮೀಮಾಂಸಾ', 'ಕುವಲಯಾನಂದ' ಇವೆರಡೂ ಅಲಂಕಾರ ಗ್ರಂಥ

೭೧ Ep. Ind Vol XIIpp 345 6

ಗಳು. 'ವಿಧಿರಸಾಯನವು' ಮೀಮಾಂಸಶಾಸ್ತ್ರಕ್ಕೆ ಸಂಬಂಧಪಟ್ಟುದು. 'ಯಾದವಾಭ್ಯುದಯವ್ಯಾಖ್ಯೆ' 'ಪಾದುಕಾಸಹಸ್ರವ್ಯಾಖ್ಯೆ,' ವರದರಾಜಸ್ತವವ್ಯಾಖ್ಯೆ ಇವು ವ್ಯಾಖ್ಯಾನಗಳು. ಸರ್ವತೋಮುಖವಾದ ಈ ಗ್ರಂಥರಾಶಿಯಿಂದ ಆ ಕಾಲದ ಸಾಹಿತ್ಯ ಪ್ರಪಂಚದಲ್ಲಿ ದೀಕ್ಷಿತನ ಸ್ಥಾನವನ್ನು ಸುಲಭವಾಗಿ ನಿಷ್ಕರ್ಷಿಸ ಬಹುದು [೭೨]

ರಾಮರಾಯನ ತಮ್ಮನಾದ ತಿರುಮಲರಾಯನು ಸ್ವತಃ ವಿದ್ವಾಂಸನಾಗಿದ್ದಂತೆ ತೋರುತ್ತದೆ. ಈತನು ಜಯದೇವನ ಗೀತಗೋವಿಂದಕ್ಕೆ 'ಶ್ರುತಿರಂಜನಿ' ಎಂಬ ವ್ಯಾಖ್ಯಾನವನ್ನು ರಚಿಸಿರುವಂತೆ ಕೆಲವು ಕೈ ಬರಹದ ಪ್ರತಿಗಳಲ್ಲಿ ಬರೆದಿದೆ. ಆದರೆ ಇನ್ನು ಕೆಲವಲ್ಲಿ ಆ ವ್ಯಾಖ್ಯಾನವು ಚರಕೂರಿ ಲಕ್ಷ್ಮೀಧರ[೭೩] ಕೃತವೆಂದು ಹೇಳಿದೆ. ಹೇಗಾದರೂ ತಿರುಮಲ ರಾಯನು ವಿದ್ವಾಂಸನೂ ವಿದ್ವಜ್ಜನ ಪೋಷಕನೂ ಆಗಿದ್ದನೆಂಬುದರಲ್ಲಿ ಸಂದೇಹವಿಲ್ಲ. ಮಳೂರು ತಾಮ್ರಶಾಸನವೊಂದರಲ್ಲಿ ಇವನು 'ವಿದ್ಯಾಭೋಜ' ನೆಂಬದಾಗಿ ಸಂಬೋಧಿಸಲ್ಪಟ್ಟಿದ್ದಾನೆ ಇವನ ಕಾಲದಲ್ಲಿ ರಾಮರಾಯನ ಆಸ್ಥಾನದಲ್ಲಿದ್ದ ಕವಿಗಳೇ ಅಲ್ಲದೆ ಇನ್ನೂ ಅನೇಕರು ಗ್ರಂಥ ರಚನೆಯನ್ನು ಮಾಡಿದರು. 'ಬಾಲಭಾಗವತ'ವನ್ನು ರಚಿಸಿದ ಕೋನೇರುನಾಥ ಕವಿಯು ತಿರುಮಲರಾಯನ ಅಳಿಯನಾದ ಚಿನ್ನತಿಮ್ಮನ ಆಶ್ರಯದಲ್ಲಿದ್ದವನು. ತಿರುಮಲರಾಯನ ಸೋದರ ಅಳಿಯನಾದ ಕೊಂಡವೀಡು ರಾಜನಾದ ಸಿದ್ಧರಾಜು ತಿಮ್ಮಭೂಪಾಲನು ಸ್ವತಃ ಕವಿಯೂ ಕವಿಜನಾಶ್ರಯನೂ ಆಗಿದ್ದನು. ತೆಲುಗಿನಲ್ಲಿರುವ 'ಪರಮಯೋಗಿವಿಲಾಸ' ವೆಂಬ ವೈಷ್ಣವಭಕ್ತರಚರಿತ್ರೆಯು ಈತನಿಂದ ರಚಿತವಾದುದು. ಇವನಕಾಲದಲ್ಲಿ ಏಕಾಮ್ರನಾಥನೆಂಬುವನು ಕೊಂಡವೀಡುರಾಜ್ಯದಿಂದ ಶ್ರೀರಂಗಪಟ್ಟಣಕ್ಕೆ ಹೋಗಿ 'ಜಾಂಬುವತೀಕಲ್ಯಾಣಂ' 'ಸತ್ಯಾಪರಿಣಯಂ' ಎಂಬ ಗ್ರಂಥಗಳನ್ನು ರಚಿಸಿ ತಿರುಮಲರಾಯನ ಮಗನಾದ ಮುಮ್ಮಡಿ ರಾಮರಾಯನ ಅಧಿಪತಿಯಾದ ಇಮ್ಮಡಿ ಅಂಕುಶರಾಯನಿಗೆ ಅಂಕಿತವಾಗಿ ಒಪ್ಪಿಸಿದ್ದಾನೆ. ಕೃಷ್ಣರಾಯನ ಆಸ್ಥಾನದ ಅಷ್ಟದಿಗ್ಗಜಗಳಲ್ಲಿ ಒಬ್ಬನೆಂಬದಾಗಿ ಪ್ರತೀತಿ ಇರುವ ಪಿಂಗಲಿ ಸೂರನ್ನನೂ ತಿರುಮಲರಾಯನ ಕಾಲದಲ್ಲಿದ್ದವನು. 'ಪ್ರಭಾವತಿಪ್ರದ್ಯುಮ್ನಮು' 'ಕಲಾಪೂರ್ಣೋದಯಮು' 'ರಾಘವ ಪಾಂಡವೀಯಮು' ಈ ಮೂರು ಈತನ ಗ್ರಂಥಗಳು. ಈತನು ಗಂಡೀಕೋಟೆಯ ನಂದ್ಯಾಲ ಕೃಷ್ಣರಾಜನ ಆಸ್ಥಾನ ಕವಿಯಾಗಿದ್ದನು.

ಸದಾಶಿವರಾಯನೂ ಇವನ ಪೋಷಕರಾದ ಆರುವೀಡು ಸಹೋದರರೂ ಶ್ರೀವೈಷ್ಣವರಶಿಷ್ಯರಾದುದರಿಂದ ಇವರ ಕಾಲದಲ್ಲಿ ಶ್ರೀವೈಷ್ಣವಮತವು ವಿಜಯನಗರದಲ್ಲೆಲ್ಲಾ ಹರಡಿತು. ಈ ಮತದ ಆಚಾರ್ಯರು ರಾಜರಿಂದ ಪ್ರೋತ್ಸಾಹಿತರಾಗಿ ತಮ್ಮ ಮತತತ್ವಗಳನ್ನು ಪ್ರತಿಪಾದಿಸುವ ಅನೇಕ ಗ್ರಂಥಗಳನ್ನು ರಚಿಸಿದರು. ತಿರುಮಲೈ ಅಕುತಾತಾಚಾರ್ಯ ಅಥವಾ ತಿರುಮಲೈ ತಾತಾಚಾರ್ಯನೆಂಬುವನು ಈ ಕಾಲದ ರಾಜಗುರು. ಈತನೇ ದೊಡ್ಡಯ್ಯಾಚಾರ್ಯನ ಸಹಾಯದಿಂದ ಚಿದಂಬರದಲ್ಲಿ ಗೋವಿಂದರಾಜನನ್ನು ಪ್ರತಿಷ್ಠೆ ಮಾಡಿಸಿದವನ. ಈತನು ಪಂಚಮತ ಭಂಜನವೆಂಬ ಗ್ರಂಥವನ್ನು ರಚಿಸಿರುವಂತೆ ಪ್ರಪನ್ನಾಮೃತದಲ್ಲಿ ಹೇಳಿದೆ. ಈತನ ಮಗನಾದ ಕೋಟಿಕನ್ಯಾದಾನಂ ಲಕ್ಷ್ಮೀಕುಮಾರ ತಾತಾಚಾರ್ಯನು ಪ್ರಸಿದ್ಧ ವಿದ್ವಾಂಸ ಇವರಿಬ್ಬರಿಗೂ ಸದಾಶಿವನು ಅನೇಕ ಅಗ್ರಹಾರಗಳನ್ನು ದಾನಮಾಡಿದ್ದಾನೆ. ಉಭಯ ವೇದಾಂತ ಪ್ರವರ್ತಕನಾದ ತಾಳ್ಳಪಾಕಂತಿರುಮಂಗಲನಾಥಯ್ಯನು ೧೫೪೫ ನೆಯ ವರ್ಷದಲ್ಲಿ ಸದಾಶಿವನಿಂದ ಎರಡು ಗ್ರಾಮಗಳನ್ನು ದಾನವಾಗಿ ಪಡೆದಿದ್ದಾನೆ.[೭೪] "ಈತನು ದೊಡ್ಡ ಪಂಡಿತನಾಗಿರಬೇಕು. ಸಿದ್ಧರಾಜು ತಿಮ್ಮರಾಜುವಿನ ಗ್ರಂಥದಿಂದ ಭಿನ್ನವಾದ 'ಪರಮಯೋಗಿ ವಿಲಾಸ' ವೆಂಬ ಆಳ್ವಾರ್ರವರ ಚರಿತ್ರೆಯು ಈತನಿಂದ ರಚಿತವಾಗಿರಬಹುದು. ತಾಳ್ಳಪಾಕಂ ಮನೆತನದವರು ಸಂಗೀತ ವಿದ್ವಾಂಸರು. ಈ ಮನೆತನದ ತಿರುಮಲಾಚಾರ್ಯ ಅನ್ನಮಾಚಾರ್ಯ ಎಂಬುವರಿಂದ ರಚಿತವಾದ ಕೃತಿಗಳು ಈಗಲೂ ತಿರುಪತಿಯ ದೇವಾಲಯದಲ್ಲಿ ಸಿಕ್ಕುವವು. ಇವರಿಬ್ಬರಿಗೂ ಸದಾಶಿವನು ಗ್ರಾಮ

---

೭೨ Kuvalayanand Introduction ೭೩ ಲಕ್ಷ್ಮೀಧರನು ಜಯದೇವನ ಪ್ರಸನ್ನ ರಾಘವಕ್ಕೆ ಅಭೀಷ್ಟಾರ್ಥದಾಯಿನಿ ಎಂಬ ವ್ಯಾಖ್ಯಾನವನ್ನು ರಚಿಸಿ ಸಿದ್ಧರಾಜು ತಿಮ್ಮರಾಜುವಿಗೆ ಅಂಕಿತವಾಗಿ ಒಪ್ಪಿಸಿದ್ದಾನೆ. ಪ್ರಾಕೃತವ್ಯಾಕರಣವಾದ ಷಡ್ಭಾಷಾ ಚಂದ್ರಿಕೆಯೂ ಏತತ್ಕೃತವಾದುದು. ೭೪ M. ER. 784 No 337

ಗಳನ್ನು ಕೊಟ್ಟಿದ್ದಾನೆ. ಸದಾಶಿವನಂತೆಯೇ ಇವನ ಮಂತ್ರಿಯಾದ ರಾಮರಾಯನೂ ಅನೇಕ ಶ್ರೀವೈಷ್ಣವ ವಿದ್ವಾಂಸರಿಗೆ ಸಹಾಯಮಾಡಿದನು ಆಳ್ವಾರ್ ತಿರುಮಲೈ ಪೆನುಗೊಂಡೆ ನರಸಿಂಹಾಚಾರ್ಯನೆಂಬುವನಿಗೆ ರಾಮರಾಯನು ಗ್ರಾಮಗಳನ್ನೂ ಕೊಟ್ಟಂತೆ ಗೋರಿಬಿದನೂರಿನ ೩೨ ನೆಯ ಶಾಸನದಲ್ಲಿ ಹೇಳಿದೆ ಆ ಕಾಲದ ಪ್ರಸಿದ್ಧ ವಿದ್ವಾಂಸನಾದ ಕಂಡಾಡೆ ಶ್ರೀರಂಗಾಚಾರ್ಯನಿಗೆ ಸದಾಶಿವರಾಯನು ಬಹುಮಾನ ಮಾಡುವದಕ್ಕೂ ರಾಮರಾಯನೇ ಕಾರಣ. ಶ್ರೀ ಪೆರಂಬೂದಿರಿನ ಆದಿಕೇಶವ ಸ್ವಾಮಿಯವರ ದೇವಸ್ಥಾನಕ್ಕೂ ಅಲ್ಲಿಯ ವಿದ್ವಾಂಸರಿಗೂ ಸದಾಶಿವರಾಯನಿಂದ ೩೨ ಗ್ರಾಮಗಳನ್ನು ಕೊಡಿಸಿದವನೂ ರಾಮರಾಯನೇ. [೬೪] ಇವರ ಈ ತೆರನಾದ ಪ್ರೋತ್ಸಾಹದಿಂದ ಅನೇಕ ಜನ ವಿದ್ವಾಂಸರು ಸಾಹಿತ್ಯಸೇವೆಯನ್ನು ಮಾಡಲು ಅನುಕೂಲವಾಯಿತು.

—:—೪—

ತಿರುಮಲರಾಯನು ಸದಾಶಿವನ ಕಾಲದಲ್ಲಿಯೇ ಪೂರ್ಣಾಧಿಕಾರವನ್ನು ಪಡೆದಿದ್ದರೂ ಅವನು ಜೀವಿಸಿರುವ ವರೆಗೆ ಸ್ವತಃ ಚಕ್ರವರ್ತಿಯೆಂದು ಕರೆಯಿಸಿಕೊಳ್ಳಲು ಸಾಧ್ಯವಾಗಲಿಲ್ಲ ಸುಮಾರು ೧೫೭೦ ರಲ್ಲಿ ಸದಾಶಿವರಾಯನು ಸ್ವರ್ಗಸ್ಥನಾಗಲು ತಿರುಮಲರಾಯನು ಪೆನುಗೊಂಡೆಯಲ್ಲಿ ಅಭಿಷಿಕ್ತನಾಗಿ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದನು. ಅಂದಿನಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಅರವೀಡು ವಂಶಸ್ಥರ ದೊರೆತನವು ಪ್ರಾರಂಭವಾಯಿತು. ತಿರುಮಲರಾಯನು ತಾನು ಸುಮಾರು ಎಂಟುವರ್ಷಗಳ ಕಾಲ ರಾಜನಾಗಿದ್ದು ತರುವಾಯ ತನ್ನ ಮಕ್ಕಳಾದ ಶ್ರೀರಂಗರಾಯ ರಾಮರಾಯ ಮತ್ತು ವೆಂಕಟಪತಿರಾಯರಿಗೆ ರಾಜ್ಯವನ್ನು ಹಂಚಿಕೊಟ್ಟಂತೆ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಮತ್ತೂ ಕೆಲವು ಶಾಸನಗಳಿಂದ ತಿರುಮಲರಾಯನ ಕಾಲದಲ್ಲಿಯೇ ಅವನ ಮಕ್ಕಳು ವಿಜಯನಗರ, ಶ್ರೀರಂಗಪಟ್ಟಣ ಮಧುರೆ ಪ್ರಾಂತಗಳಲ್ಲಿ ರಾಜಪ್ರತಿನಿಧಿಗಳಾಗಿದ್ದು ತಂದೆಯು ಸತ್ತು ಹೋದಮೇಲೆ ತಮ್ಮ ತಮ್ಮ ರಾಜ್ಯದಲ್ಲಿ ತಾವೇ ಸ್ವತಂತ್ರರಾದಂತೆ ಊಹಿಸಬಹುದಾಗಿದೆ. ಇವರಲ್ಲಿ ಶ್ರೀರಂಗರಾಜನು ಪೆನುಗೊಂಡೆಯಲ್ಲಿಯೂ ರಾಮರಾಯನು ಶ್ರೀರಂಗಪಟ್ಟಣದಲ್ಲಿಯೂ ವೆಂಕಟಪತಿಯು ಮಧುರೆಯಲ್ಲಿಯೂ ರಾಜ್ಯವಾಳಿದರು. ಇವರೂ ತಮ್ಮ ಹಿರಿಯರಂತೆ ತಮ್ಮ ಕಷ್ಟಪರಂಪರೆಗಳನ್ನೆಲ್ಲ ಸಹಿಸಿ ವಿದ್ಯಾಭಿವೃದ್ಧಿಗೂ ಗ್ರಂಥರಚನೆಗೂ ಬಹಳ ಸಹಾಯ ಮಾಡಿದರು.

ಇವರ ಕಾಲದಲ್ಲಿ ಶ್ರೀವೈಷ್ಣವ ಮತವು ಪ್ರಾಬಲ್ಯದ ಅತ್ಯುನ್ನತ ಶಿಖರಕ್ಕೆ ಹತ್ತಿತ್ತು. ಈ ಮತದವರಿಗೆ ಈ ಕಾಲದಲ್ಲಿ ಕೊಟ್ಟ ದತ್ತಿಗಳು ಅಸಂಖ್ಯಾತವಾಗಿವೆ. ತಾತಾಚಾರ್ಯರೇ ಅರವೀಡುವಂಶಸ್ಥರಿಗೂ ರಾಜಗುರು. ಏಟ್ಟೂರ್ ಕುಮಾರ ತಿರುಮಲೈ ತಾತಾಚಾರ್ಯನು ಶ್ರೀರಂಗರಾಜನ ಸಾಕ್ಷಾದ್ಗುರು. ಈತನ ಉಪದೇಶದ ಪ್ರಕಾರ ಶ್ರೀರಂಗರಾಜನು ಮೇಲುಕೋಟೆಯಲ್ಲಿ ಶ್ರೀರಾಮಾನುಜಾಚಾರ್ಯರ ವಿಷಯಕವಾದ ವೇದಾಂತದೇಶಿಕಕೃತಯತಿರಾಜಸಪ್ತತಿಯನ್ನು ಪ್ರತಿದಿನವು ಪಾರಾಯಣ ಮಾಡುವುದಕ್ಕಾಗಿ ಒಂದು ವಿದ್ವದ್ಗೋಷ್ಠಿಗೆ ದತ್ತಿಗಳನ್ನು ಬಿಟ್ಟಿದ್ದಾನೆ. ೧೫೮೫ನೆಯ ವರ್ಷದ ಎರಡು ಶಾಸನಗಳಲ್ಲಿ ಈ ಕುಮಾರ ತಾತಾಚಾರ್ಯನಿಗೆ ಮೇಲುಕೋಟೆಯ ದೇವಸ್ಥಾನದಲ್ಲಿ ಅಗ್ರಮರ್ಯಾದೆಯು ಕೊಡಲ್ಪಟ್ಟಿದೆ. [೬೫] ಕಂಚಿಯಲ್ಲಿರುವ ಯಥೋಕ್ತಕಾರಿ ದೇವಾಲಯದ ಶಾಸನಗಳಲ್ಲಿ ಇವನನ್ನು ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ಪೆರಿಮ ತಿರುಮಲೈಸ್ವಾಮಿ ಎಂಬದಾಗಿ ಸಂಬೋಧಿಸಿದೆ. ಈತನ ಪ್ರೇರಣೆಯಿಂದಲೇ ಶ್ರೀರಂಗನು ಅಹೋಬಲದಿಂದ ಮುಸಲ್ಮಾನರನ್ನು ಓಡಿಸಿ ಅಲ್ಲಿ ಸರಿಯಾಗಿ ಪೂಜೆಯು ನಡೆಯುವಂತೆ ಏರ್ಪಾಡು ಮಾಡಿದುದು. ವೆಂಕಟಪತಿರಾಜನಿಗೆ ಕಿರೀಟಧಾರಣೆಯನ್ನು ಮಾಡಿ ಆ ಕಾಲದ ವೈಷ್ಣವ ಸಂಸ್ಥೆಗಳಿಗೆಲ್ಲಾ ಯಜಮಾನನಾಗಿದ್ದವನು ಇವನೇ. ಇವನು ತನ್ನ ಶಿಷ್ಯರಂತೆ ತಾನೂ ಅನೇಕ ದೇವಾಲಯಗಳಿಗೆ ದತ್ತಿಗಳನ್ನು ಬಿಟ್ಟಿದ್ದಾನೆ ಕೆರೆಕೊಳಗಳನ್ನು ಕೊಡಿಸಿದ್ದಾನೆ. ಚಂಗಲ್ಪಟ್ಟು ತಾಲ್ಲೋಕಿನಲ್ಲಿರುವ 'ಕೆನ್ನೇರಿ' ಎಂಬ ಕೆರೆಯು ಈತನು ಸ್ವತಃ ತೋಡಿದುದೆಂದು ಈಗಲೂ ಪ್ರತೀತಿ ಇದೆ. ಈತನು 'ಸಾತ್ವಿಕ ಬ್ರಹ್ಮವಿದ್ಯಾವಿಲಾಸ'ವೆಂಬ ವೇದಾಂತಗ್ರಂಥವನ್ನು ರಚಿಸಿದ್ದಾನೆ. ಸಂಸ್ಕೃತದಲ್ಲಿರುವ 'ಪಾಂಡುರಂಗ ಮಹಾತ್ಮ್ಯವು' ಈತನಿಂದಲೇ ರಚಿತವಾಗಿರಬಹುದು. ವೆಂಕಟಪತಿರಾಯನು ಈ

---

೬೪ Ep. Ind IV P 1-33 ೬೫ M. AR 1906-7 Para 50

ವಿದ್ವಾಂಸನ ವಿಷಯದಲ್ಲಿ ತೋರಿಸಿದ ಅನನ್ಯ ಸಾಧಾರಣಭಕ್ತಿಯು ಅನ್ವಾದೃಶವಾದುದು.

ವೆಂಕಟಪತಿರಾಯನಿಂದ ಸಹಾಯಪಡೆದವನು ತಾತಾಚಾರ್ಯನೊಬ್ಬನೇ ಅಲ್ಲ. ಸರ್ಜಾಪುರದ ತಾಮ್ರಶಾಸನದಲ್ಲಿ ಅಲ್ಲಾರ್ಯನ ಮಗನಾದ ರಾಮಯ್ಯನೆಂಬ ವೇದವಿದ್ವಾಂಸನಿಗೆ ವೆಂಕಟಪತಿರಾಯನು ಒಂದು ಅಗ್ರಹಾರವನ್ನು ದಾನಮಾಡಿರುವುದು ಬರೆದಿದೆ. ೭೭ ಮಂಗಳಂಪಾಡು ಶಾಸನದಲ್ಲಿ ಪ್ರಖ್ಯಾತನೂ ಸರ್ವಶಾಸ್ತ್ರವಿದನೂ ಆದ ಶ್ರೀರಂಗರಾಜನೆಂಬವನಿಗೆ ಗ್ರಾಮಗಳನ್ನು ಕೊಟ್ಟಿದೆ ೭೮ ವಿಲ್ಲಿಪಾಕಂ ತಾಮ್ರಶಾಸನವು ವೇದವೇದಾಂಗ ಜ್ಯೋತಿಷ, ಶಬ್ದಶಾಸ್ತ್ರಗಳಲ್ಲಿ ಪ್ರವೀಣರಾದ ಬ್ರಾಹ್ಮಣರಿಗೆ ಕೊಟ್ಟದ್ದು, ೧೬೧೨ನೆಯ ವರ್ಷದಲ್ಲಿ. ತರ್ಕಸ್ಮೃತಿ, ಸೂರ್ಯಸಿದ್ಧಾಂತಗಳಲ್ಲಿ ಉತ್ಕೃಷ್ಟವಾದ ಪಾಂಡಿತ್ಯವನ್ನು ಹೊಂದಿದ್ದ ರಾಮಕೃಷ್ಣ ಜೋಯಿಸನು ವೆಂಕಟಪತಿರಾಯನಿಂದ ವೃತ್ತಿಗಳನ್ನು ಪಡೆದಿದ್ದಾನೆ. ೭೯ ಅಪ್ಪಯ್ಯದೀಕ್ಷಿತನು ವೆಂಕಟಪತಿರಾಯನ ಅಜ್ಞೆಯಮೇರೆ 'ಕುವಲಯಾನಂದ'ವೆಂಬ ಅಲಂಕಾರ ಗ್ರಂಥವನ್ನೂ ಬರೆದಂತೆಯೂ ವೆಲ್ಲೂರಿನ ರಾಜಪ್ರತಿನಿಧಿಯಾದ ಚಿನ್ನ ಬೊಮ್ಮನಾಯಕನಿಂದ ಕನಕಾಭಿಷಿಕ್ತನಾದಂತೆಯೂ ಈ ಕೆಳಗಿನ ಶ್ಲೋಕಗಳಿಂದ ತಿಳಿಯಬಹುದಾಗಿದೆ.೮೦

ಅಮುಂಕುವಲಯಾನಂದಮಕರೋದಪ್ಪದೀಕ್ಷಿತಃ ।
ನಿಯೋಗಾದ್ವೇಂಕಟಪತೇರ್ನಿರುಪಾಧಿ ಕೃಪಾನಿಧೇಃ॥

. . . . . . .

ಕರ್ಣಶ್ರೀಚಿನಬೊಮ್ಮಕ್ಷಿತಿಪತಿರಭಿತೋಲಂಭಯನ್ ಶಾತಕುಂಭ
ಸ್ತೋಮಂ ಹೇಮಾಭಿಷೇಕಪ್ರಣಯನ ಸಮಯೇ ಯಸ್ಯವ ಮೂರ್ತಿ ಪ್ರಶಾಸ್ಯಮ್
ರೇಜೇ ಶ್ರೀರಂಗರಾಜಾಧ್ವರಿವರ ಕಲಶ ಂಬೋಧಿಲಬ್ಧ ಪ್ರಸೂತೇ
ರ್ವಿದ್ಯಾಕಲ್ಪದ್ರುಮಸ್ಯ ಸ್ವಯಮಿವಕಲಯಂ ಜಾತರೂಪಾಲವಾಲಮ್

ಅರುವೀಡುರಾಜರ ಆಸ್ಥಾನದಲ್ಲಿ ದೇಶಭಾಷೆಗಳಿಗೆ ವಿಶೇಷ ಪ್ರೋತ್ಸಾಹ ದೊರೆತಿದೆ. ೧೬೦೪ನೆಯ ವರ್ಷದ ಒಂದು ಶಾಸನದ ೮೧

ಆತನ ಶಿಷ್ಯಂ ಸಕಲಕ । ಲಾತತನ್ವೈದುಷ್ಯನಖಿಲಗುಣಿ ಗಣಭೂಷ್ಯಂ
ಸಾತಿಶಯಚರಿತಪೋಷ್ಯ । ಖ್ಯಾತಂ ಭಟ್ಟಾಕಲಂಕ ನನುಪಮಭಾಷ್ಯಂ ||
ಶ್ರೀರಂಗರಾಜನೃಪತಿ । ಪ್ರೇರಣೆಯಿಂ ವಿಜಯಮುನಿ ಪನುಪದೇಶನದಿಂ ।
ಸಾರತ್ರಿತಯಮನಲಂ । ಕಾರತ್ರಿತಯಮನೋದಿ ಜಸಮಂ ಪಡೆದಂ ||

ಎಂಬ ಪದ್ಯಗಳಿಂದ 'ಕರ್ಣಾಟಕ ಶಬ್ದಾನುಶಾಸನ'ವನ್ನು ಬರೆದ ಭಟ್ಟಾಕಳಂಕನು ಶ್ರೀರಂಗರಾಜನ ಆಸ್ಥಾನದ ಕವಿಯಾಗಿದ್ದಂತೆ ತೋರುತ್ತದೆ. ಸುಪ್ರಸಿದ್ಧನಾದ ತೆನ್ನಾಲಿ ರಾಮಕೃಷ್ಣನು ವೆಂಕಟಪತಿರಾಯನ ಆಸ್ಥಾನಕವಿ. ಇವನು ಮೊದಲು ವೀರಶೈವನಾಗಿದ್ದು ತನ್ನ ಪೋಷಕನ ಇಷ್ಟಾನುಸಾರ ತನ್ನ ಅಪರ ವಯಸ್ಸಿನಲ್ಲಿ ವೈಷ್ಣವನಾದಂತೆ ತೋರುತ್ತದೆ. ತೆಲುಗಿನಲ್ಲಿರುವ 'ಪಾಂಡುರಂಗ ಮಹಾತ್ಮ್ಯವೂ' 'ಘಟಿಕಾಚಲ ಮಹಾತ್ಮ್ಯವೂ' ಈತನಿಂದ ರಚಿತವಾದುವು. ೮೨ ವೆಂಕಟಪತಿರಾಯನ ಜ್ಞಾತಿಯಾದ ಕೋನೇಟಿ ತಿಮ್ಮರಾಜನು ಸುದಕ್ಷಿಣಾಪರಿಣಯವನ್ನು ತನ್ನ ಅಂಕಿತದಲ್ಲಿ ಬರೆಸಿಕೊಂಡಿದ್ದಾನೆ. ವೆಂಕಟಪತಿರಾಯನ ದಂಡನಾಯಕನಾದ ಮಾಟ್ಲ ಅನಂತನೆಂಬುವನು 'ಕಾಕುತ್ಸ್ಥ ವಿಜಯ'ವೇ ಮೊದಲಾದ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ ೧೬೦೫ನೆಯ ವರ್ಷದ ಸಿದ್ಧಾಟಿಯ ಶಾಸನವನ್ನು ಈತನೇ ರಚಿಸಿರಬಹುದು. ೮೩ ವೆಂಕಟಪತಿರಾಯನ ಪ್ರಧಾನನಾದ ದತ್ತಮಂತ್ರಿಯು ಸಹೋದರನಾದ ಕರಿಗೂಪ್ಪುಲ ಮಲ್ಲನ್ನನು ಚಂದ್ರಭಾನು ಚರಿತ್ರವನ್ನು ಬರೆದಿದ್ದಾನೆ. ೮೪ ಮತ್ತೊಬ್ಬ ಮಂತ್ರಿಯಾದ ಸೆವ್ವಾಸಾನಿ ತಿಮ್ಮನ ಆಶ್ರಯದಲ್ಲಿ ಚಿನ್ನಮರಾಜು ಎಂಬ ಕವಿಯು ಅನೇಕ ಗ್ರಂಥಗಳನ್ನು ರಚಿಸಿದನು. ಇದೇ ಕಾಲದಲ್ಲಿ 'ಆಸ್ಥಾನ

---

೭೭ M. AR. 1918 Para 93 ೭೮ Nel'ore Inscriptions I 25 ೭೯ MER 1922-3 App A No 7 ೮೦ Sourcesp 25. ೮೧ ಕ.ಚ. II ಪು 349.೮೨ Tel Lit p 83. ೮೩ Sources p 248 & MER 1915- 16 Para 75 App B No 564 ಇದರಲ್ಲಿ ೨೦ ಪಾದಗಳುಳ್ಳ ಸಂಸ್ಕೃತ ಸೀಸಪದ್ಯವೂ ತೆಲುಗಿನ ಕೇಟ ಗೀತೆಯೂ ಇವೆ ೮೪ Sources 247.

ಜ್ಯೋತಿರ್ವಿದನಾದ ಭಾಸ್ಕರನು ಕನ್ನಡದಿಂದ ತೆಲುಗಿಗೆ ರಟ್ಟ ಮತವನ್ನು ಭಾಷಾಂತರ ಮಾಡಿದನು. ಕನ್ನಡ ವ್ಯಾಕರಣ ಕರ್ತೃವಾದ ಭಟ್ಟಾಕಳಂಕನ ಶಿಷ್ಯನಾದ ಶಿಷ್ಯಭಟ್ಟಾಕಳಂಕನೂ,[೮೫] ಎಳ್ಳಮಾಧವಾರ್ಯನೂ ವೆಂಕಟಪತಿರಾಯನ ಆಸ್ಥಾನದ ಪ್ರಸಿದ್ಧರು ವಿದ್ವಾಂಸರು, ಇವರಲ್ಲಿ ಶಿಷ್ಯಭಟ್ಟಾಕಳಂಕನು ೧೫೯೬ ನೆಯ ವರ್ಷದ ಒಂದು ಶಾಸನವನ್ನೂ ಎಳ್ಳಮಾಧವನು 'ತ್ರಿಪದಿದ್ಯೋತಿನಿ' ಎಂಬ ವ್ಯಾಕರಣವನ್ನೂ ರಚಿಸಿದ್ದಾರೆ.[೮೬]

ವೆಂಕಟಪತಿರಾಯನ ಸಾಹಿತ್ಯಪ್ರೇಮವನ್ನೂ ವಿದ್ವತ್ಪಕ್ಷಪಾತವನ್ನೂ ಅವನ ಅಧೀನರಾದ ನಾಯಕರನೇಕರು ಅನುಕರಿಸಿದರು ಇವರಲ್ಲಿ ತಂಜಾವೂರಿನ ರಘುನಾಥ ನಾಯಕನು ಬಹು ಪ್ರಸಿದ್ಧನು. ಈತನು ಸ್ವತಃ ಪಂಡಿತನೂ ಕವಿಯೂ ಆಗಿದ್ದನು. ಇವನು ಅನೇಕ ಸಂಸ್ಕೃತ-ಆಂಧ್ರ ಗ್ರಂಥಗಳನ್ನು ರಚಿಸಿದ್ದಾನೆ. ಇವನು ಉದ್ದಾಮನಾದ ಸಂಗೀತ ಶಾಸ್ತ್ರಜ್ಞನಾಗಿದ್ದಂತೆಯೂ ತೋರುತ್ತದೆ. ಸಂಗೀತ ಶಾಸ್ತ್ರ ವಿಷಯಕವಾದ 'ಸಂಗೀತಸುಧಾ'[೮೭] ಎಂಬ ಈತನ ಗ್ರಂಥದ ಪ್ರಾರಂಭದಲ್ಲಿ ಬರುವ

ಜಯಂತಸೇನಾದಿಮರಾಗ ರಾಮಾನಂದಾದಿ ತಾಳಾನ್
ರಚಯನ್ನವನಾನ್ ।
ಸಂಗೀತವಿದ್ಯಾಂ ಸಮುಪಾದಿಶಸ್ತ್ವಂ ವಿಲಂಬಿನಾದ
ವಿಚಕ್ಷಣಾನಾಂ ॥
ಕಿಂಚತ್ವಮಂಚದ್ಭವದೀಯನಾಮ ಮೇಳಾಂತರಂ
ಸಂಪ್ರತಿ ಕಲ್ಪಯಿತ್ವಾ ।
ಮೇಳಾಂತರೇ ತತ್ರಸಮಸ್ತರಾಗಾನ್ ಪ್ರಕಾಶಯೋ
ಗ್ಯಾನ್ಸುಲಭಾನ್ಕರೋಷಿ ॥

ಎಂಬ ಶ್ಲೋಕದಿಂದ ಈತನು ಸಂಗೀತಶಾಸ್ತ್ರದಲ್ಲಿ ಪ್ರವೀಣನಾಗಿದ್ದಂತೆಯೂ 'ಜಯಂತಸೇನ' ಮೊದಲಾದ ರಾಗಗಳನ್ನೂ ರಾಮಾನಂದ ಮೊದಲಾದ ತಾಳಗಳನ್ನೂ ಸ್ವನಾಮಾಂಕಿತವಾದ ಒಂದುಮೇಳವನ್ನೂ ಹೊಸದಾಗಿ ಕಂಡುಹಿಡಿದಂತೆಯೂ ಅನೇಕ ವಿದ್ವಾಂಸರಿಗೆ ವೀಣಾಗಾನವನ್ನು ಹೇಳಿ ಕೊಟ್ಟಿರುವಂತೆಯೂ ತಿಳಿದು ಬರುತ್ತದೆ. ಈ ವಿಷಯವು ಈತನ ಆಸ್ಥಾನದ ವಿದುಷೀಮಣಿಯಾದ ರಾಮಭದ್ರಾಂಬಾ ಎಂಬುವಳಿಂದ ರಚಿತವಾದ 'ರಘುನಾಥಾಭ್ಯುದಯ' ಈ ಕೆಳಗಣಶ್ಲೋಕದಿಂದ ಧೃಢಪಡುತ್ತದೆ.[೮೮]

ಚಂಚತ್ಪುಟಾದ್ಯೈರ್ನೃಪತೇಃ ಸಮೀಪೆ ಭವಾನ್ಯ
ಜಾತ್ಯೈರ್ನಟನಪ್ರಪಂಚಂ ।
ಪ್ರಪಂಚಯನ್ಪಂಚವಿಧೈಸ್ಸಲೀಲಂ ಮೃಗೇಕ್ಷಣಾ
ಕಾಚನಮಾರ್ಗತಾಲೈಃ ॥
ಜಯಮಂಗಲಸಿಂಹಲಲೀಲಾ ಜಯನಿಸ್ಸಾರುಣ
ಕಚಚ್ಚರಿತ್ರಭಿನ್ನೈಃ ।
ರತಿಲೀಲತುರಂಗ ಲೀಲರಂಗಾಭರಣಾನಂಗ
ಪರಿಕ್ರಮಾದಿತಾಲೈಃ ॥
ಅಭಿನಂದನ ನಂದನಂದನಾದ್ಯೈರಭಿಮಾಲಾದಿ
ಭಿರನ್ಯಕೈಶ್ಚತಾಲೈಃ ।
ರಘುನಾಥವಿಲಾಸ ಮುಖ್ಯಲಾಸ್ಯಾನ್ಯಚಲಾ
ಕಾಚಿದಕಲ್ಪಯತ್ಸಲೀಲಂ ॥

ಈ ಶ್ಲೋಕಗಳಿಂದ ರಘುನಾಥನಾಯಕನು ಸ್ವಕಲ್ಪಿತವಾದ ಜಯಮಂಗಲ, ಸಿಂಹಲಲೀಲಾ, ಜಯನಿಸ್ಸಾರಣ, ಕಚಚ್ಚಚರಿತ್ರ ಮೊದಲಾದ ರಾಗಗಳಿಂದಲೂ ರತಿಲೀಲ ತುರಂಗಲೀಲ, ರಂಗಾಭರಣ, ಅನಂಗಪರಿಕ್ರಮಣ, ಅಭಿನಂದನ, ನಂದನಂದನ, ಮೊದಲಾದ ತಾಳಗಳಿಂದಲೂ ಕೂಡಿದ ಸ್ವನಾಮಾಂಕಿತವಾದ ರಘುನಾಥ ವಿಲಾಸವೆಂಬ ನಾಟ್ಯವನ್ನು ಗಾಯಕಿಯರಿಂದ ಆಡಿಸಿ ಅವರಿಗೆ ಬಹುಮಾನ ಮಾಡಿದನೆಂಬುದು ಶ್ರುತಪಡುತ್ತದೆ. ಗ್ರಂಥಕರ್ತಳಾದ ರಾಮಭದ್ರಾಂಬೆಯು ರಘುನಾಥನಾಯಕನಿಂದ ತಾನು ಸಂಗೀತವನ್ನು ಕಲಿತಂತೆ ಇದೇ ಗ್ರಂಥದಲ್ಲಿ ಹೇಳಿಕೊಂಡಿದ್ದಾಳೆ. ರಘುನಾಥ ನಾಯಕನ ಮಗನಾದ ವಿಜಯರಾಘವನಾಯಕನೂ 'ರಘುನಾಥಾಭ್ಯುದಯ' ವೆಂಬ ಹೆಸರನ್ನೆ ಉಳ್ಳ ಒಂದು ನಾಟಕವನ್ನು ರಚಿಸಿದ್ದಾನೆ ಅದರಲ್ಲಿ ಅವನು ತನ್ನ ತಂದೆಯ ವಿಶೇಷವಾದ ವಿದ್ಯಾಪಕ್ಷಪಾತವನ್ನು ಬಹಳ ವಿಸ್ತೃತವಾಗಿ ವರ್ಣಿಸಿದ್ದಾನೆ. ರಘುನಾಥ ನಾಯಕನ ಮತ್ತು ಅವನ ತಂದೆಯಾದ ಅಚ್ಯುತ ನಾಯಕನ ಮಂತ್ರಿಯಾದ ಗೋವಿಂದದೀಕ್ಷಿತನು 'ಹರಿವಂಶಸಾರ ಚರಿತ್ರಂ' 'ಸಾಹಿತ್ಯಸುಧಾ' ಎಂಬ

೮೫ ಕ ಚ. II 349. ೮೬ Heras P. 521 ೮೭ Sources 269 ೮೮ Ibid 247

ಕಾವ್ಯಗಳನ್ನು ರಚಿಸಿದ್ದಾನೆ. 'ಸಾಹಿತ್ಯಸುಧೆ'[೮೯]ಯ ಈ ಕೆಳಗಣ ಶ್ಲೋಕಗಳಿಂದಲೂ ರಘುನಾಥ ನಾಯಕನು ಸಂಗೀತ ಸಾಹಿತ್ಯಕಲೆಗಳಲ್ಲಿ ಪ್ರವೀಣನೂ ಸಂಸ್ಕೃತಮತ್ತು ಭಾಷಾಪ್ರಬಂಧರಚನೆಯಲ್ಲಿನಿಪುಣನೂ ವಿದ್ವಾಂಸಪ್ರಿಯನೂ, 'ಪಾರಿಜಾತಾಪಹರಣಂ' 'ವಾಲ್ಮೀಕಿಚರಿತ್ರಂ' 'ಅಚ್ಯುತೇಂದ್ರಾಭ್ಯುದಯಂ' 'ಗಜೇಂದ್ರಮೋಕ್ಷಂ' 'ನಳಚರಿತ್ರಂ' 'ಶ್ರೀ ರುಕ್ಮಿಣೀಕೃಷ್ಣವಿವಾಹಯಕ್ಷಗಾನಂ' ಮೊದಲಾದ ಗ್ರಂಥಗಳ ಕರ್ತೃವೂ ಆಗಿದ್ದಂತೆ ತೋರುತ್ತದೆ.

ಆಸ್ತೆ ಧಿಭದ್ರಾಸನ ಮಚ್ಯುತೇಂದ್ರ ತನೂಭವ ಶ್ರೀ
ರಘುನಾಥ ಭೂಪಃ

.... ... .... .... ....

ಸಂಗೀತಸಾಹಿತ್ಯಕಲಾವಿಲಾಸೈಃ ಭಾಷಾಪ್ರಬಂ
ಧೇಷುಭೃಶಂಪಟಿಮ್ನಾ

. .... .... . ..

ಶ್ರೀಪಾರಿಜಾತಾಹರಣಪ್ರಬಂಧಂ ಚಿತ್ರಂಚ
ವಾಲ್ಮೀಕಿಚರಿತ್ರಕಾವ್ಯಂ
ಕಥಾಚ್ಯುತೇಂದ್ರಾಭ್ಯುದಯಂಗಜೇಂದ್ರ ಮೋಕ್ಷಂ
ಚರಿತ್ರಂಚನಳಸ್ಯಚಿತ್ರಂ

ಶ್ರೀರುಕ್ಮಿಣೀಕೃಷ್ಣವಿವಾಹಯಕ್ಷಗಾನಂ
ಪ್ರಬಂಧಾನಪಿನೈಕಭೇದಾನ್
ನಿರ್ಮಾಯವಾಗ್ಭಿರ್ನಿಪುಣಾರ್ಥ ಭಾಗ್ಭಿಃ ವಿದ್ವ
ತ್ಕವೀನಾಂವಿದಧಾಸಿ ಹರ್ಷಂ ॥

ಗೋವಿಂದ ದೀಕ್ಷಿತನ ಮಗನಾದ ಯಜ್ಞನಾರಾಯಣದೀಕ್ಷಿತನೂ ರಘುನಾಥನಾಯಕನ ಆಶ್ರಯದಲ್ಲಿದ್ದುದರಿಂದ ಅವನು ತನ್ನ ಪೋಷಕನ ಯಶಸ್ಸನ್ನು ಚಿರಸ್ಥಾಯಿಯನ್ನಾಗಿ ಮಾಡುವದಕ್ಕಾಗಿ ಸಾಹಿತ್ಯ ರತ್ನಾಕರವೆಂಬ[೯೦] ಒಂದು ಸಂಸ್ಕೃತಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ ರಘುನಾಥನಾಯಕನು ನೂರಕ್ಕಿಂತ ಹೆಚ್ಚಾದ ಗ್ರಂಥಗಳನ್ನು ರಚಿಸಿರುವಂತೆ ಹೇಳಿದೆ. ರಘುನಾಥ ನಾಯಕ ರಚಿತವಾದ ಆಂಧ್ರ 'ರಾಮಾಯಣ'ವು ಈಗಲೂ ಬಹಳ ಪ್ರಸಿದ್ಧಿಯನ್ನು ಹೊಂದಿದೆ. ಈ ಗ್ರಂಥವು ಅವನ ಕಾಲದಲ್ಲಿಯೇ ಅವನ ಆಸ್ಥಾನ ವಿದ್ವಾಂಸಳಾದ ಮಧುರವಾಣಿ ಎಂಬವಳಿಂದ ಸಂಸ್ಕೃತಭಾಷೆಗೆ ಪರಿವರ್ತಿತವಾಗಿದೆ. ಯಜ್ಞನಾರಾಯಣ ದೀಕ್ಷಿತನು ಶುಲ್ಬಸೂತ್ರಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಅಪ್ಪಯ್ಯದೀಕ್ಷಿತನಿಗೆ ಗ್ರಂಥ ರಚನೆಯಲ್ಲಿ ಈತನು ಸಹಾಯ ಮಾಡಿದಂತೆ ಪ್ರತೀತಿ ಇದೆ. ರಾಘವೇಂದ್ರ ವಿಜಯದಲ್ಲಿ ಇವನು ರಾಘವೇಂದ್ರ ತೀರ್ಥನೊಡನೆ ವಾದಮಾಡಿ ಪರಾಜಿತನಾಗಿ ಅವನಿಂದ ಮುದ್ರಾಂಕನವನ್ನು ಪಡೆದಂತೆ ಹೇಳಿದೆ

ವೆಂಕಟಪತಿರಾಯನ ಇತರ ಅಧೀನರಾಜರುಗಳಲ್ಲಿ ಜಿಂಜಿಯಸೂರಪ್ಪನಾಯಕನು ಶ್ರೀನಿವಾಸ ದೀಕ್ಷಿತನೆಂಬ ಕವಿಗೆ ಪೋಷಕನಾಗಿದ್ದು ಅವನ ಕವಿತಾ ಪ್ರೌಢಿಮೆಯ ಗುರುತಾಗಿ ಅವನಿಗೆ 'ರತ್ನಖೇಟ ದೀಕ್ಷಿತ'ನೆಂಬ ಬಿರುದನ್ನು ಕೊಟ್ಟನು ಶ್ರೀನಿವಾಸ ದೀಕ್ಷಿತನು 'ಭಾವನಾ ಪುರುಷೋತ್ತಮ'ವೇ ಮೊದಲಾದ ಹದಿನೆಂಟು ನಾಟಕಗಳನ್ನೂ 'ಶತಖಂಡವಿಜಯ'ವೇ ಮೊದಲಾದ ೬೦ ಪುರಾಣಗಳನ್ನೂ ಪ್ರಾಚೀನ ಗ್ರಂಥಗಳಿಗೆ ವ್ಯಾಖ್ಯಾನಗಳನ್ನೂ ಕೆಲವು ಅಲಂಕಾರ ಗ್ರಂಥಗಳನ್ನೂ ರಚಿಸಿದ್ದಾನೆ[೯೧]

ಈ ಕಾಲದಲ್ಲಿ ತಿರುಮಲರಾಯನು ಶ್ರೀರಂಗಪಟ್ಟಣಕ್ಕೆ ಅಧಿಪತಿಯಾಗಿದ್ದನು. ಇವನ ೧೬೧೦ನೆಯ ವರ್ಷದ ಶಾಸನವೊಂದರಿಂದ ವೇದಮಾರ್ಗ ಪ್ರತಿಷ್ಠಾಪನಾಚಾರ್ಯನಾದ ರಾಮಾನುಜಯ್ಯನೆಂಬುವನು ಈತನ ಕೈಕೆಳಗೆ ಅಧಿಕಾರಿಯಾಗಿದ್ದಂತೆ ಊಹಿಸಬಹುದಾಗಿದೆ.[೯೨] ೧೬೧೪ರಲ್ಲಿ ತಿರುಮಲರಾಯನು ವೇದಮಾರ್ಗ ಪ್ರತಿಷ್ಠಾಪನಾಚಾರ್ಯನಾದ ವೆಂಕಟಯ್ಯಭಟ್ಟನಿಗೆ ಒಂದು ಗ್ರಾಮವನ್ನು ಕೊಟ್ಟಿದ್ದಾನೆ ತಿರುಮಲರಾಯನ ಆಳ್ವಿಕೆಯಲ್ಲಿ ಅನೇಕ ಕವಿಗಳು ಕನ್ನಡ ಗ್ರಂಥಗಳನ್ನು ರಚಿಸಿದರು ಇವರಲ್ಲಿ ಚೆನ್ನಬಸವ ಪುರಾಣದ ಕರ್ತೃವಾದ ವಿರೂಪಾಕ್ಷಪಂಡಿತನೂ ಕೆಳದಿವೆಂಕಟಪ್ಪನಾಯಕನ ಆಶ್ರಯದಲ್ಲಿ 'ಶಿವಗೀತೆ'ಯನ್ನು ಬರೆದ ತಿರುಮಲಭಟ್ಟನೂ ರಾಜಒಡೆಯರ ಮಂತ್ರಿಯಾದ ಪ್ರಧಾನಿ ತಿರುಮಲಯ್ಯನೂ ಮುಖ್ಯರಾದವರು.

ವೆಂಕಟಪತಿರಾಯನ ತರುವಾಯ ಬಂದ ರಾಜರು ಚಕ್ರಾಧಿಪತ್ಯವನ್ನು ಮಾಡುವಷ್ಟು ಶಕ್ತರಾಗಿರಲಿಲ್ಲ. ಅವರ ದುರ್ಬಲತೆಯನ್ನು ನೋಡಿ ಅಧಿರಾಜರಲ್ಲನೇಕರು ದಂಗೆ ಎದ್ದು ಸ್ವತಂತ್ರರಾದರು. ಉತ್ತರದ ಕಡೆಯಿಂದ ಗೋಲ್ಕೊಂಡ ಮತ್ತು ಬಿಜಾಪುರದ

---

೮೯ Sources 267. ೯೦ Ibid 269. ೯೧ S. H. P 7-10 ೯೨ E C. IV ೧೧ 40

ಸುಲ್ತಾನರು ವಿಜಯನಗರ ಸಾಮ್ರಾಜ್ಯದ ಅನೇಕ ಭಾಗಗಳನ್ನು ಆಕ್ರಮಿಸಿದರು. ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿ ಶಿವಾಜಿಯ ತಂದೆಯಾದ ಷಾಜಿಯು ರಾಜ್ಯವನ್ನು ಸ್ವಲ್ಪಸ್ವಲ್ಪವಾಗಿ ಆಕ್ರಮಿಸಿ ಮಹಾರಾಷ್ಟ್ರ ಸಾಮ್ರಾಜ್ಯಕ್ಕೆ ಅಡಿಗಲ್ಲನ್ನು ಹಾಕಿದನು. ಮದುರೆಯ ನಾಯಕರು ಸ್ವತಂತ್ರರಾದರು. ರಾಜ ಒಡೆಯರ ಕಾಲದಲ್ಲಿಯೇ ಪ್ರಬಲವಾಗಲು ಪ್ರಾರಂಭವಾಗಿದ್ದ ಮೈಸೂರು ಸಂಸ್ಥಾನವು [ಶ್ರೀರಂಗಪಟ್ಟಣ] ಚಿಕ್ಕದೇವ ರಾಜಒಡೆಯರ ಕಾಲದಲ್ಲಿ ಪೂರ್ಣ ಬಲಿಷ್ಠವಾಗಿ ವಿಜಯನಗರದ ರಾಜರನ್ನು ಸೋಲಿಸಿ ಉಳಿದಿದ್ದ ಅಲ್ಪಸ್ವಲ್ಪ ರಾಜ್ಯವನ್ನೂ ಅವರಿಂದ ಕಸಿದುಕೊಂಡಿತು. ಇವುಗಳ ಫಲವಾಗಿ ವಿಜಯನಗರ ಸಾಮ್ರಾಜ್ಯವು ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ಪೂರ್ಣವಾಗಿ ಕೊನೆಗೊಂಡಿತು. ಆದುದರಿಂದ ವಿಜಯನಗರ ಸಾಮ್ರಾಜ್ಯದ ಸಾಹಿತ್ಯ ಚರಿತ್ರೆಯೂ ವೆಂಕಟಪತಿರಾಯನೊಂದಿಗೆ ಮುಗಿಯಿತೆಂದು ಹೇಳಿದರೆ ಅಷ್ಟೇನೂ ತಪ್ಪಾಗಲಾರದು.

ಕೊನೆಯಲ್ಲಿ ವಿಜಯನಗರದ ಸಾಮ್ರಾಜ್ಯದ ಮುನ್ನೂರು ವರ್ಷದ ಸಾಹಿತ್ಯ ಚರಿತ್ರೆಯನ್ನು ಸಿಂಹಾವಲೋಕನ ಕ್ರಮದಿಂದ ನೋಡಿದರೆ ದಕ್ಷಿಣಭಾರತದ ಸಾಹಿತ್ಯ ಚರಿತ್ರೆಯಲ್ಲಿ ವಿಜಯನಗರದ ಸ್ಥಾನವು ವಿಶದಪಡುವುದು. ವಿಜಯನಗರ ಸಾಮ್ರಾಜ್ಯವು ದಕ್ಷಿಣಭಾಗದಲ್ಲಿ ಹಿಂದಿನಿಂದ ನಡೆದುಕೊಂಡು ಬಂದು ಸುಮಾರು ಹದಿಮೂರು ಹದಿನಾಲ್ಕನೆಯ ಶತಮಾನಗಳಲ್ಲಿ ಮಹಮ್ಮದೀಯರೆಂಬ ಬಡಬಾಗ್ನಿಯಿಂದ ಒಣಗಿಹೋಗುತ್ತಿದ್ದ ಸಾಹಿತ್ಯ ಪ್ರವಾಹವನ್ನು ಪುನಃ ಸಮೃದ್ಧವನ್ನಾಗಿ ಮಾಡಿ ಪೂರ್ವಸ್ಥಿತಿಗೆ ತಂದಿತು. ರಾಜರ ಪೂರ್ಣವಾದ ಆಶ್ರಯದಿಂದ ಸಂಸ್ಕೃತ ಸಾಹಿತ್ಯವೂ ದೇಶಭಾಷಾ ಸಾಹಿತ್ಯಗಳೂ ನಾನಾಮುಖವಾಗಿ ಅಭಿವೃದ್ಧಿಯಾದವು. ಅನೇಕ ಸಂಸ್ಕೃತ ಗ್ರಂಥಗಳಿಗೆ ವ್ಯಾಖ್ಯಾನಗಳೂ ಭಾಷಾಂತರಗಳೂ ರಚಿತವಾದುವು. ದೇಶಭಾಷೆಗಳಲ್ಲಿ ಹೊಸಮಾರ್ಗಗಳು ಸ್ಥಾಪಿತವಾಗಿ ವೈವಿಧ್ಯಗಳುಂಟಾದವು. ವೀರರ ವಿಷಯಿಕವಾದ ಅನೇಕ ಗ್ರಂಥಗಳು ಚರಿತ್ರೆಗಳನ್ನು ಬರೆಯಲು ಅನುಕೂಲವನ್ನುಂಟುಮಾಡಿದುವು; ಹಿಂದಿನಿಂದ ಅನೂಚಾನವಾಗಿ ನಡೆದುಬಂದ ಸಂಗೀತ, ಶಿಲ್ಪ, ಚಿತ್ರಕಲೆ ಮೊದಲಾದುವುಗಳಲ್ಲಿ ಶೋಧನೆಗಳು ನಡೆದು ಆ ವಿಷಯವಾಗಿ ಅನೇಕ ಗ್ರಂಥಗಳು ರಚಿತವಾದುವು; ಒಂದು ಮಾತಿನಲ್ಲಿ ಹೇಳುವುದಾದರೆ ಭಾರತೀಯನ ಬಾಳಿಗಾಗಿ ಅವಶ್ಯಕವಾದ ಎಲ್ಲಾ ಜಾತಿಯ ಗ್ರಂಥಗಳೂ ವಿಜಯನಗರದ ಸಾಮ್ರಾಜ್ಯದಲ್ಲಿ ಅಭಿವೃದ್ಧಿಯಾದುವು ಒಂದುವೇಳೆ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಗದಿದ್ದರೆ ಸಾಹಿತ್ಯ ಸಾಮ್ರಾಜ್ಯಕ್ಕೆ ಬಹುಮಟ್ಟಿಗೆ ನಷ್ಟವಾಗುತ್ತಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ಈ ಲೇಖನದಲ್ಲಿ ಬರೆದಿರುವ ಸಾಹಿತ್ಯ ಸಾಮ್ರಾಜ್ಯದ ವಿಷಯವು ಸ್ಥೂಲವಾದುದು ಮಾತ್ರವಾಗಿರುತ್ತದೆ. ಈ ವಿಷಯವನ್ನು ಕೂಲಂಕಷವಾಗಿ ವಿಚಾರಮಾಡಿ ಹೊರಪಡಿಸಿದ ಪಕ್ಷದಲ್ಲಿ ವಿಜಯನಗರ ಸಾಮ್ರಾಜ್ಯದ ಕೀರ್ತಿಯೂ ವೈಭವವೂ ಇತೋಪ್ಯತಿಶಯವಾಗಿ ಪ್ರಸಿದ್ಧಿಗೆ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ

## ಈ ಲೇಖನದಲ್ಲಿ ಉಪಯೋಗಿಸಿರುವ ಕೆಲವು ಸಂಕೇತಗಳು.

ಕ. ಚ. ಕರ್ನಾಟಕ ಕವಿಚರಿತೆ, ರಾವ ಬಹಾದೂರ ಆರ್. ನರಸಿಂಹಾಚಾರ್ಯರು ರಚಿಸಿದುದು

B. B. R. A. S. Journal of the Bombay brauch of the Royal Asiatic Society.

E. C. Epigraphia Carnatica.

Ep. Ind Epigraphia Indica.

Heras. the Aravidu Dynasty of Vijayanagar by Rev Henry Heras.

Ind Ant. Indian Antiquary.

M. A. R. Mysore Archaeological Report

M. E R. Madras Epigraphical report.

Nag pro. Nagavarmas Prosody edited by Rev. F Kittel.

S H. A short history of the Tanjore Naik princes, by prof S. Kuppuswamy Shastry.

Sources. Sources of the Vijayanagar history by Rao Bahadur S. Krishnaswamy Ayangar.

Tel lit. Telugu Literature heritage of India Series- by p. chenchia & Raja Bhujang Rao.

W V. L Complete works of Veeresa Lingaun Pantulu.

# ವಿಜಯನಗರ ಕಾಲದ ಧಾರ್ಮಿಕ ಪರಿಸ್ಥಿತಿ.

[ ಲೇಖಕರು:— ಶ್ರೀ ಚೆನ್ನಬಸವ ಸ್ವಾಮಿ ಹಿರೇಮಠ, ಸಂಪಾದಕ— ಕರ್ನಾಟಕ ಬಂಧು, ಗದಗ ]

ಪ್ರಪಂಚದ ಪ್ರತಿಯೊಂದು ಭಾಗದಲ್ಲಿಯು ಪ್ರತಿಯೊಂದು ರಾಷ್ಟ್ರಗಳಲ್ಲಿಯು ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಮೊದಲಾದ ಪರಿಸ್ಥಿತಿಗಳಲ್ಲಿ ಕಾಲಕಾಲಕ್ಕೆ ಬದಲಾವಣೆ ಯಾಗುತ್ತಿರುವದು ಕಾರಣಾಂತರಗಳಿಂದ ಅನಿವಾರ್ಯವಾಗಿ ಬಿಟ್ಟಿದೆ. ಮೇಲ್ಕಾಣಿಸಿದ ವಿಷಯಗಳಲ್ಲಿ ಈ ಬದಲಾವಣೆಯು ಒಮ್ಮೆ ರಾಷ್ಟ್ರದೇಳ್ಗೆಗೆ ಅನುಕೂಲವಾಗದಿರಬಹುದು; ಒಮ್ಮೆ ಪ್ರತಿಕೂಲವಾದುದಿರಬಹುದು, ಆದರೆ ಬದಲಾವಣೆಯಾಗುತ್ತಿರುವದು ಮಾತ್ರ ಅನಿವಾರ್ಯ

ಹೀಗೆ ಕಾಲಕಾಲಕ್ಕೆ ಬದಲಾವಣೆ ಯಾಗುತ್ತಿರುವದಕ್ಕೆ ಅನೇಕ ಕಾರಣಗಳಿರುವವಾದರೂ, ಕಾಲಚಕ್ರ ಪರಿಭ್ರಮಣದ ಜೊತೆಗೆ ಆಗುತ್ತಿರುವ ಮಾನವರ ವಿಚಾರ ಕ್ರಾಂತಿಯೊಂದು ಪ್ರಧಾನ ಕಾರಣವಾಗಿರುವದು. ಅಸ್ತು ಈ ವಿಷಯವನ್ನು ಕುರಿತು ವಿವೇಚಿಸುವದು ನಮ್ಮ ಪ್ರಸ್ತುತ ಲೇಖನದ ಉದ್ದೇಶವಾಗಿರದೆ, ವಿಜಯನಗರ ಕಾಲದ ಧಾರ್ಮಿಕ ಪರಿಸ್ಥಿತಿಯೆಂತಿತ್ತೆಂಬುದನ್ನು ಕುರಿತು ನಾವೀಗ ವಿವೇಚಿಸಬೇಕಾಗಿರುವದರಿಂದ ಆ ವಿಷಯದ ಕಡೆಗೆ ಹೊರಳೋಣ.

ಧರ್ಮದ ವ್ಯಾಪ್ತಿಯು ಎಂದಿನಂತೆ ವಿಜಯನಗರ ಕಾಲದಲ್ಲಿಯೂ ವಿಶಾಲವಾದುದಿದ್ದರೂ, ವ್ಯಕ್ತಿವಿಚಾರ ಸ್ವಾತಂತ್ರ್ಯದ ಪೂರ್ಣ ಬೆಳವಣಿಗೆಯ ಕಾಲವಲ್ಲವಾದ್ದರಿಂದ ವ್ಯಾಖ್ಯೆಯು ಅಷ್ಟೊಂದು ಚರ್ಚಾಸ್ಪದವಾದುದಿರಲಿಲ್ಲವೆಂಬುದನ್ನು ನಾವು ಮೊದಲಾಗಿಯೇ ತಿಳಿದುಕೊಂಡು ಬಿಟ್ಟರೆ ಆಗಿನ ಧಾರ್ಮಿಕ ಪರಿಸ್ಥಿತಿಯೆಂತಿತ್ತೆಂಬುದರ ಸರ್ವ ಸಾಧಾರಣ ಕಲ್ಪನೆಯು ನಮಗೆ ತಟ್ಟನೇ ಹೊಳೆದು ಬಿಡಬಹುದಾಗಿದೆ ತಾತ್ಪರ್ಯವಿಷ್ಟೆ, ವಿಜಯನಗರದ ಪೂರ್ವಕಾಲದ ಧಾರ್ಮಿಕ ಪರಿಸ್ಥಿತಿಗೂ ವಿಜಯನಗರ ಕಾಲದ ಧಾರ್ಮಿಕ ಪರಿಸ್ಥಿತಿಗೂ ಅಷ್ಟೊಂದು ವ್ಯತ್ಯಾಸವಿರಲಿಲ್ಲ. ಆದರೆ ವಿಜಯನಗರಕಾಲದಲ್ಲಿ ರಾಷ್ಟ್ರಹಿತಪೋಷಕ ಧರ್ಮಕ್ಕೆ ಒಂದು ಮೂರ್ತಸ್ವರೂಪ ಪ್ರಾಪ್ತವಾದುದು ಅತ್ಯಂತ ಮನನೀಯವಾದ ವಿಚಾರವಾಗಿದೆ ಈ ಕುರಿತು ವಿವೇಚಿಸುವ ಮೊದಲು ಆ ಕಾಲದಲ್ಲಿ ಧರ್ಮದ ಇನ್ನುಳಿದ ಆಚಾರ ವಿಚಾರಗಳೆಂತಿದ್ದವೆಂಬುದನ್ನು ಕೊಂಚ ನೋಡೋಣ.

ಅನಾದಿ ಕಾಲದಿಂದಲೂ ಅಸ್ತಿತ್ವದಲ್ಲಿರುವದೆಂದು ಹೇಳಲ್ಪಡುತ್ತಿರುವ ಬ್ರಾಹ್ಮಣಾದಿವರ್ಣಾಶ್ರಮಧರ್ಮ ಪಾಲನವು ಆಗ ತುಂಬಾ ಬಳಕೆಯಲ್ಲಿತ್ತಲ್ಲದೆ, ಬ್ರಹ್ಮಚರ್ಯಾದಿ ಚತುರಾಶ್ರಮಗಳಾದರೂ ಚನ್ನಾಗಿ ಪಾಲಿಸಲ್ಪಡುತ್ತಿದ್ದವು ಈ ಮಾತಿನ ಸತ್ಯತೆಗೆ ನಮಗೆ ಬೇರೆ ಕೆಲವು ಆಧಾರಗಳು ಸಿಗುವಂತಿರುವವಾದರೂ ಆ ಕಾಲದ ಅತ್ಯಂತ ಮಹಿಮಾ ಪುರುಷರೂ, ವಿಜಯನಗರ ಸಾಮ್ರಾಜ್ಯ ಸ್ಥಾಪಕರೂ ಆದ ಶ್ರೀ. ವಿದ್ಯಾರಣ್ಯರ ವಿಷಯವನ್ನೇ ತೆಗೆದುಕೊಳ್ಳೋಣ. ಶ್ರೀವಿದ್ಯಾರಣ್ಯರು ಗ್ರಹಸ್ಥಾಶ್ರಮಿಗಳಾಗಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರೆಂದು ಒಂದು ಮತವದೆ; ಸನ್ಯಾಸಿಗಳಾಗಿ ರಾಜ್ಯಸ್ಥಾಪನೆ ಮಾಡಿದರೆಂದು ಇನ್ನೊಂದು ಮತವದೆ. ಇವೆರಡು ಮತಗಳಲ್ಲಿ ಮೊದಲನೆಯ ಮತಕ್ಕೆ ಹೆಚ್ಚು ಪ್ರಾಶಸ್ತ್ಯವಿರುವದು ಏಕೆಂದರೆ,

“ आचिनोतिच शास्त्रार्थं आचारे स्थापयत्यपि ।
स्वयमप्याचरे यस्तु स आचार्य इति स्मृतः ”

ಎಂದು ಆಚಾರ್ಯ ಶಬ್ದದ ನಿರ್ವಚನವಿರುವಾಗ ಶ್ರೀ ವಿದ್ಯಾರಣ್ಯರಂಥ ಮಹಿಮರು ನಿವೃತ್ತಿಮಾರ್ಗದ ಸನ್ಯಾಸ್ಯಾಶ್ರಮವನ್ನು ಕೈಕೊಂಡು ಪ್ರವೃತ್ತಿ ಮಾರ್ಗದ ಅದರಲ್ಲಿಯೂ ರಾಜಕಾರಣದಂಥ ಕಾರ್ಯವನ್ನು ನಡೆಯಿಸಿರಲಾರರೆಂಬ ಹಾಗೂ ತಾವು ಗೃಹಸ್ಥಾಶ್ರಮಿಗಳಾಗಿಯೇ ರಾಜಗುರು ಮತ್ತು ರಾಜ್ಯಮಂತ್ರಿಗಳಾಗಿದ್ದರೆಂಬ ಸಂಬಂಧದಲ್ಲಿ ಶ್ರೀ ವಿದ್ಯಾರಣ್ಯರದೇ ಸ್ಪಷ್ಟೋಕ್ತಿಯಿರುವದೆಂಬ ಮುಂತಾದ ಇನ್ನೂ ಅನೇಕ ಕಾರಣಗಳಿಂದ, ಶ್ರೀ ವಿದ್ಯಾರಣ್ಯರು ಗ್ರಹಸ್ಥಾಶ್ರಮಿಗಳಾಗಿಯೇ ರಾಜ್ಯಸ್ಥಾಪನೆ ಮಾಡಿದರೆಂಬ ಮತಕ್ಕೆ ಹೆಚ್ಚು ಪ್ರಾಶಸ್ತ್ಯವಿರುವದು ಶ್ರೀವಿದ್ಯಾರಣ್ಯರು

ರಾಜ್ಯಸ್ಥಾಪನೆಯಂಥ ಮಹತ್ವದ ಕಾರ್ಯ ಮಾಡು ವಾಗಲೂಸಹ ಆಶ್ರಮಗಳ ಪರಿಪಾಲನೆ ಮಾಡಿದ ರೆಂಬುದೂ ಮತ್ತು ಅವರು ಪ್ರವೃತ್ತಿ ಹಾಗೂ ನಿವೃತ್ತಿ ಪರಗ್ರಂಥಗಳೆರಡನ್ನೂ ಬರೆದಿದ್ದರೂ ಆಯಾ ಆಶ್ರಮದಲ್ಲಿದ್ದಾಗ ಆಯಾ ವೃತ್ತಿಪರ ಗ್ರಂಥಗಳನ್ನೇ ಬರೆದರೆಂಬುದೂ ಆಗಿನ ಕಾಲದಲ್ಲಿದ್ದ ಚತುರಾಶ್ರಮ ಪರಿಪಾಲನದ ಮಾತಿಗೆ ಆಧಾರ ಭೂತವಾಗುವದು

ವರ್ಣಾಶ್ರಮ ಧರ್ಮಗಳಲ್ಲಿ ಪ್ರಥಮದವರಾದ ಬ್ರಾಹ್ಮಣರನ್ನು ಹೊರ್ತುಪಡಿಸಿ ಇನ್ನುಳಿದವರಲ್ಲಿ ಧರ್ಮವಿಷಯವಾಗಿ ಕೊಂಚ ಜಿಗುಪ್ಸೆ ತಿರಸ್ಕಾರ ಗಳನ್ನು ಹುಟ್ಟಿಸಲು ಕಾರಣವಾಗುವದೆಂಬ ಬಾಯ್ಬಿಟ್ಟು ಹೇಳಲ್ಪಡುತ್ತಿರುವ ವರ್ಣಾಶ್ರಮ ಧರ್ಮಪಾಲನವೂ ರಾಷ್ಟ್ರದಲ್ಲಿ ಒಂದು ಪ್ರಕಾರದ ನಿಷ್ಕ್ರಿಯೆಯನ್ನು ಹುಟ್ಟಿಸಲು ಕಾರಣವಾಗುವದೆಂದು ಹೇಳಲ್ಪಡುತ್ತಿರುವ ಆಶ್ರಮಪರಿಪಾಲನವೂ ವಿಜಯನಗರಕಾಲದಲ್ಲಿ ಅಸ್ತಿತ್ವದಲ್ಲಿದ್ದವಾದರೂ ಬ್ರಾಹ್ಮಣ್ಯದ ಅಲ್ಲದ ಸಲ್ಲದ ಕರ್ಮರತನವಾಗಲಿ, ಹೇಡಿತನದ ನಿಷ್ಕರ್ಮವೃತ್ತಿಯಾಗಲಿ ಆಗಿದ್ದಿರಲಿಲ್ಲ. ಉಚ್ಚವರ್ಣದವರು ನಾವೆಂದು ಹೇಳಿಕೊಳ್ಳುವ ಜಾತಿ ಪಂಥದವರು ಹಿಂದುಗಳಲ್ಲಿಯ ಇನ್ನುಳಿದ ಪಂಥದವರನ್ನು ಅವೈದಿಕ ರೆಂದು ಮುಂತಾಗಿ ಭಾವಿಸುತ್ತಿರಲಿಲ್ಲ. ಸರ್ವಸಾಧಾರಣವಾಗಿ ಹಿಂದುಗಳಲ್ಲಿಯ ಎಲ್ಲ ಜಾತಿ ಪಂಥದವರು ವೇದವನ್ನೂ ಹಾಗೂ ಆ ವೇದವನ್ನು ಪ್ರತಿಪಾದಿಸುವ ಸ್ಮೃತ್ಯಾಗಮ ಪುರಾಣಗಳನ್ನೂ ಮನ್ನಿಸುತ್ತಿರುವದರಿಂದ ಹಿಂದುಗಳೆನಿಸುವ ನಾವೆಲ್ಲರೂ ವೈದಿಕಧರ್ಮದವರೇ ಎಂಬ ಭಾವನೆಯಿತ್ತು. ಶ್ರುತಿ ಸ್ಮೃತಿ ಪುರಾಣಗಳ ಆಧಾರಗಳಿಗೂ, ನಿರ್ಮಲಭಾವದ ವಿಶುದ್ಧಾಚರಣೆಗೂ ಮಾತ್ರ ಗೌರವವಿತ್ತಲ್ಲದೆ, ರುಕ್ಷವಾದ ಶಾಬ್ದಿಕ ಜ್ಞಾನಕ್ಕಾಗಲಿ, ಆಡಂಬರದ ಆಚರಣೆಗಾಗಲಿ ಗೌರವವಿರಲಿಲ್ಲ ಲೋಕಹಿತಕ್ಕಾಗಿ ಕಂಕಣಬದ್ಧವಾದ ಬ್ರಾಹ್ಮಣ್ಯಕ್ಕೆ ಮಾತ್ರ ಶ್ರೇಷ್ಠತೆಯಿತ್ತಲ್ಲದೆ ಜಾತಿಸೂಚಕ ಬ್ರಾಹ್ಮಣ್ಯಕ್ಕಿರಲಿಲ್ಲ. ಬ್ರಾಹ್ಮಣನೊಬ್ಬನ ಸ್ವಾರ್ಥಪರ ಕೃತಿಗಳು ಧರ್ಮಸಮ್ಮತವೆಂದು ತೋರಿದ ಮಾತ್ರದಿಂದ ಕ್ಷಮ್ಯವೆಂದೂ, ಶೂದ್ರನೊಬ್ಬನ ಪರಾರ್ಥದ ಕೃತಿಗಳು ಧರ್ಮವಿರುದ್ಧವಾಗಿ ತೋರಿದ ಮಾತ್ರದಿಂದ ಅಕ್ಷಮ್ಯವೆಂದೂ ಎಣಿಸಲ್ಪಡುತ್ತಿರಲಿಲ್ಲ. ಮನುಷ್ಯನ ಕಾರ್ಯಾಕಾರ್ಯಗಳ ಯೋಗ್ಯಾಯೋಗ್ಯತೆಯ ನಿರ್ಣಯವು ಕೇವಲ ಧಾರ್ಮಿಕ ದೃಷ್ಟಿಯಿಂದ ಮಾತ್ರ ನಿರ್ಣಯಿಸಲ್ಪಡದೆ ಆ ಕೃತಿಗಳಲ್ಲಿನ ಸ್ವಾರ್ಥ ಪರಾರ್ಥದ ಹೇತುವಿನ ಪುರಾಣದೃಷ್ಟಿಯಿಂದಲೂ ವಿವೇಚಿಸಲ್ಪಡುತ್ತಿತ್ತು. ಧರ್ಮದ ನಿರೂಪಣೆಯಂತೆ ಬ್ರಾಹ್ಮಣರಾದವರೆಲ್ಲ ಯಜನ ಯಾಜನಾದಿ ಷಟ್ಕರ್ಮಾಧಿಕಾರವುಳ್ಳವರಾಗಿಯೂ, ಕ್ಷತ್ರಿಯ ವೈಶ್ಯವರಾದವರೆಲ್ಲ ತ್ರಿಕರ್ಮಗಳ ಅಧಿಕಾರವುಳ್ಳವರಾಗಿಯೂ, ಶೂದ್ರರಾದವರು ಯಾವ ಅಧಿಕಾರವಿಲ್ಲದೆಯೂ ಆಶ್ರಮಧರ್ಮಗಳ ವಿಧಿನಿಯಮಗಳಂತೆ ಪೂರ್ಣಬಗ್ಗತೆಯಿಂದ ನಡೆಯುತ್ತಿದ್ದರೆಂದು ಹೇಳುವದು ಸಾಹಸದ ಮಾತಾಗುವದಾದರೂ ಬುದ್ಧಿಪುರಃಸರವಾಗಿ ಈ ನಿಯಮಗಳನ್ನು ಮುರಿಯುವ ಹವ್ಯಾಸಕ್ಕೆ ಯಾರೂ ಹೋಗುತ್ತಿರಲಿಲ್ಲವೆಂದಾದರೂ ಹೇಳಬಹುದು. ಒಟ್ಟಾರೆ ವಿಜಯನಗರದ ಕಾಲದಲ್ಲಿ ರಾಷ್ಟ್ರೀಯ ಧರ್ಮಕ್ಕೆ ಹೆಚ್ಚಾದ ಪ್ರಾಮುಖ್ಯತೆಯಿತ್ತೆಂದು ಧಾರಾಳವಾಗಿ ಹೇಳಬಹುದು

ವಿಜಯನಗರದ ಕಾಲದಲ್ಲಿ ರಾಷ್ಟ್ರೀಯಧರ್ಮಕ್ಕೆ ಹೆಚ್ಚಾದ ಪ್ರಾಶಸ್ತ್ಯವಿತ್ತೆಂಬದರ ವಿಷಯದ ಮಹತ್ವದ ಸಂಗತಿಯೊಂದನ್ನು ಉಲ್ಲೇಖಿಸಿ ಈ ವಿಷಯವನ್ನು ಮುಗಿಸುವೆನು. ಶ್ರೀ ವಿದ್ಯಾರಣ್ಯರು ಮಹಾಮಹಿಮರು; ತಪೋಧನರು, ಮುಮುಕ್ಷುಗಳು; ಅಹಿಂಸಾವೃತ್ತಿಯವರು, ಬ್ರಾಹ್ಮಣರು, ವರ್ಣಾಶ್ರಮ ಧರ್ಮವು ತಾರಕವೆಂದು ಪ್ರತಿಪಾದಿಸುವವರು. ಇಂಥವರು ಮಂತ್ರಿಗಳಾಗಿರುವಾಗ ಆಶ್ರಮ ಧರ್ಮದ ನಿಯಮ ನಿರ್ಬಂಧಗಳನ್ನು ಮೂಲೆಗೊತ್ತಿ ರಾಷ್ಟ್ರೀಯ ಧರ್ಮದಲ್ಲಿ ದೃಷ್ಟಿಯನ್ನಿಟ್ಟು ಗೋವಪ್ರಾಂತಕದ ಸೀಮೆಗೆ ದಂಡೆತ್ತಿ ಹೋಗಿ ಅದನ್ನಾಕ್ರಮಿಸಿದ ಮುಸಲ್ಮಾನರನ್ನೋಡಿಸಿ ಅಲ್ಲಿ ಪುನಃ ಪೂರ್ವದ ಸಪ್ತನಾಥಾಧಿಕರನ್ನು ಸ್ಥಾಪಿಸಿದುದನ್ನು ವಿಚಾರ ಮಾಡಿ ನೋಡಿದರೆ, ವಿಜಯನಗರ ಕಾಲದಲ್ಲಿಯ ಸ್ವಾತಂತ್ರ್ಯಪ್ರೇಮವು, ಅರ್ಥಾತ್ ರಾಷ್ಟ್ರೀಯಧರ್ಮ ಭಾವನೆಯು ಎಷ್ಟು ಉಜ್ವಲವಾಗಿತ್ತೆಂಬದು ಸಹಜವಾಗಿ ಒಡೆದು ಕಾಣುವಂತಿದೆ. ಇಂಥ ಇನ್ನೂ ಹಲವು ಉದಾಹರಣೆಗಳನ್ನು ವಿವರಿಸಬಹುದು. ಆದರೆ ಸ್ಥಳ ವಿಸ್ತಾರ ಭಯದಿಂದ ವಿಷಯವನ್ನು ಮುಂದರಿಸಲುಬಾರದಾಗಿದೆ. ಅಸ್ತು. ಒಟ್ಟಿನಲ್ಲಿ, ವಿಜಯನಗರ ಕಾಲದ ಧಾರ್ಮಿಕ ಪರಿಸ್ಥಿಯು ರಾಷ್ಟ್ರಹಿತ ಪೋಷಕವಾದುದೂ ಕರ್ಮವೃತ್ತಿ ಪ್ರಧಾನವಾದುದೂ ಇತ್ತೆಂದು ಹೇಳುವದಕ್ಕೆ ಯಾವ ಬಾಧೆಯೂ ಇಲ್ಲ.

# ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಕಾಲವೂ ಅದಕ್ಕೆ ಯೋಗಿಗಳ ಸಂಬಂಧವೂ.

( ಲೇಖಕರುಃ— ಶ್ರೀ. ವ್ಹಿ ಬಿ. ಹಾಲಭಾಂವಿ. ಬಿ. ಎ. ಎಲ್, ಎಲ್. ಬಿ. ೦. ಫ. ಸಬಜಜ್ಜ ಧಾರವಾಡ )

ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು 'ಮರೆತು ಹೋದ ಸಾಮ್ರಾಜ್ಯ ( A forgotten empire )'' ಎಂಬ ಹೆಸರಿನಿಂದ ಮೆ. ಸಿವೆಲ್ ಸಾಹೇಬರು ತಮಗೆ ದೊರಿತ ಸಾಧನಗಳ ಮಟ್ಟಿಗೆ ಸಾಧಾರವಾಗಿ ಮೊದಲು ಪ್ರಸಿದ್ಧಿಸಿದರು. ಈ ಸಾಮ್ರಾಜ್ಯವು ಕ್ರಿ. ಶ. ೧೩೩೬ ರಲ್ಲಿ ಸ್ಥಾಪಿತವಾಯಿತೆಂದೂ ಇದನ್ನು ಹುಕ್ಕ ಮತ್ತು ಅವನ ತಮ್ಮನಾದ ಬುಕ್ಕ ಎಂಬವರು ಮಾಧವಾಚಾರ್ಯ (ವಿದ್ಯಾರಣ್ಯ) ಎಂಬೊಬ್ಬ ಬ್ರಾಹ್ಮಣ ಸನ್ಯಾಸಿಯ ಪ್ರೇರಣೆಯಿಂದ ಸ್ಥಾಪಿಸಿದರೆಂದೂ ಅವರು ಅಭಿಪ್ರಾಯ ಪಟ್ಟಿರುವರು. ಇತ್ತಿತ್ತಲಾಗಿ ಈ ಕಾಲದ ವಿಷಯವಾಗಿಯೂ ಮತ್ತು ಈ ಸಾಮ್ರಾಜ್ಯ ಸ್ಥಾಪನೆಗೆ ವಿದ್ಯಾರಣ್ಯನ ಸಂಬಂಧವಿದ್ದುದರ ವಿಷಯವಾಗಿಯೂ ಭಿನ್ನಾಭಿಪ್ರಾಯಗಳುಂಟಾಗಹತ್ತಿರುವವು. ಈ ಭಿನ್ನಾಭಿಪ್ರಾಯಗಳಿಗೆ ಫಾದರ್ ಹೆರಾಸರವರೇ ಕಾರಣರಾಗಿರುವರೆಂದು ಕಂಡು ಬರುತ್ತದೆ. ಇತ್ತೀಚೆಗೆ ಕ್ರಿ. ಶ ೧೯೩೦ ರಲ್ಲಿ ಪ್ರಕಟವಾಗಿರುವ ಮೈಸೂರ ಗ್ಯಾಝೆಟಿಯರದ ೨ ನೆಯ ಪುಸ್ತಕದ ೩ ನೆಯ ಭಾಗದಲ್ಲಿ ಶ್ರೀಯುತ ಸಿ. ಹಯವದನರಾವ್. ಬಿ. ಎ, ಬಿ ಎಲ್. ಎಂಬವರು ವಿಜಯನಗರ ಸಾಮ್ರಾಜ್ಯದ ಸಂಪೂರ್ಣ ಇತಿಹಾಸವನ್ನು ಅಂದರೆ ಅದು ಸ್ಥಾಪಿತವಾದ ಕಾಲದಿಂದ ಕ್ರಿ. ಶ. ೧೭೭೬ ನೇ ಇಸವಿಯಲ್ಲಿ ವಿಜಯನಗರವನ್ನು ಟೀಪೂ ಸುಲ್ತಾನನು ನಾಶಪಡಿಸಿದ ಕಾಲದ ವರೆಗೆ ಬರೆದಿರುವರು. ಇದರಲ್ಲಿ ೧೪೫೬-೫೭ ನೆಯ ಪುಟಗಳಲ್ಲಿ ಹರಿಹರನ ಆಳಿಕೆಯಲ್ಲಿಯ ಮುಖ್ಯ ಸಂಗತಿಗಳ ಸಾರಾಂಶವನ್ನು ಕೊಟ್ಟು, ಅದರಲ್ಲಿ ಆವರು ಈ ಸಾಮ್ರಾಜ್ಯವು ಕ್ರಿ. ಶ. ೧೩೩೬ ರಲ್ಲಿ ಸ್ಥಾಪಿತವಾಯಿತೆಂದೂ ಇದಕ್ಕೆ ವಿದ್ಯಾರಣ್ಯನೇ ಪ್ರೇರಕನೆಂದೂ ಅಂದಿರುವರು. ಈ ಅಭಿಪ್ರಾಯವನ್ನು ಸಮರ್ಥಿಸುವ ಲೇಖವೊಂದು ತಮ್ಮ ಹಳೆ ಹೊತ್ತಿಗೆಯ ಗಂಟಿನೊಳಗೆ ದೊರೆಯಿತೆಂದು ಬೆಳಗಾವಿಯ ''ಸಂಯುಕ್ತ ಕರ್ನಾಟಕ''ದ ತಾ॥ ೧೫ ೪-೩೫ನೆಯ ಇಸವಿಯ ಸಂಚಿಕೆಯಲ್ಲಿ ಧಾರವಾಡದ ಕನ್ನಡಿಗರ ಕೂಟದ 'ಮುಲ್ಲಾರಿ' ಎಂಬವರು ಪ್ರಕಟಿಸಿರುವರು. ಇದೇ ಪತ್ರದ ೩೦-೭-೩೫ ನೆಯ ಇಸ್ವಿಯ ಸಂಚಿಕೆಯಲ್ಲಿ ಡಾ. ಸಾಲೆತ್ತೂರ ಎಮ್. ಎ. ಪಿ. ಎಚ್. ಡಿ., ಇವರು ಪುಣೆಯ ಕರ್ನಾಟಕ ಸಂಘದ ಉದ್ಘಾಟನೋಪನ್ಯಾಸವನ್ನು ಕೊಡುವ ಕಾಲಕ್ಕೆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ೧೩೩೬ನೆಯ ಇಸ್ವಿಯಲ್ಲಾಗಿರದೆ ೧೩೪೯ ನೆಯ ಇಸ್ವಿಯಲ್ಲಿ ಆಯಿತೆಂದು ನಿಶ್ಚಯವಾಗಿ ಹೇಳಿದರೆಂದು ಉಲ್ಲೇಖವದೆ. ಈ ಮಾತುಗಳ ವಿಷಯವಾಗಿ ಒಂದು ಸಣ್ಣ ಆಧಾರವು ನನ್ನ ಕಣ್ಣಿಗೆ ಬಿದ್ದದ್ದರಿಂದ ಈ ಲೇಖದ ಮೂಲಕ ಆದನ್ನು ನಾನು ಹೊರಗೆಡಬೇಕೆಂದಿರುವೆನು. ಅದನ್ನು ಈ ಮೊದಲೇ ಎಷ್ಟೋ ಜನರು ಓದಿರಬಹುದು. ಆದರೂ ಇಲ್ಲಿಯವರೆಗೆ ಅದನ್ನು ಯಾರೂ ಆಧಾರವಾಗಿ ತಕ್ಕೊಂಡಿಲ್ಲವಾದುದರಿಂದ ಅದನ್ನು ಈಗ ಹೊರಗೆಡಬೇಕಾಗಿದೆ.

ನಮ್ಮ ಪೂರ್ವದ ಕೆಲ ವಿದ್ವಾಂಸರು ''ಕಾಲಜ್ಞಾನ'' ವೆಂಬ ಹೆಸರಿನಿಂದ ಮುಂದಾಗುವ ಸಂಗತಿಗಳನ್ನು ಬರೆದಿಟ್ಟಿರುವರು. ವೀರಶೈವ ಶರಣರಲ್ಲನೇಕರು ಸಹ ಇವುಗಳನ್ನು ಬರೆದಿರುವರು. ನಮ್ಮ ಪೂರ್ವದ ಕವಿಗಳು ಸಹ ಇವುಗಳನ್ನು ಬರೆದಿರುವರು. ಅವರಲ್ಲಿ ವಿರೂಪಾಕ್ಷ ಪಂಡಿತನೊಬ್ಬನು. ಇವನು ತಾನು ರಚಿಸಿದ 'ಚೆನ್ನ ಬಸವಪುರಾಣದ' ೬೨ ಮತ್ತು ೬೩ ನೆಯ ಸಂಧಿಗಳಲ್ಲಿ 'ಕಾಲಜ್ಞಾನ' ಎಂಬ ಶಿರೋಲೇಖನದಿಂದ ಎಷ್ಟೋ ಸಂಗತಿಗಳನ್ನು ವಿವರಿಸಿದ್ದಾನೆ. ಆದರೆ ಇವು ನಿಜವಾಗಿ ಭವಿಷ್ಯಸಂಗತಿಗಳಲ್ಲಿ ತನಗೆ ಗೊತ್ತಿದ್ದ ಸಂಗತಿಗಳನ್ನು ಚೆನ್ನ ಬಸವನು ಸಿದ್ಧರಾಮೇಶ್ವರನಿಗೆ ಕಾಲಜ್ಞಾನರೂಪದಿಂದ ಹೇಳಿದಂತೆ ವರ್ಣಿಸಿದ್ದಾನೆ. ಪ್ರಸ್ತುತ ಸಂಗತಿಗಳ ವಿಷಯವಾಗಿ ಅವನು ಬರೆದಿರುವದೇನಂದರೆಃ—

**ಸಂಧಿ ೬೩**

ಆಲಿಸೈ ಶಾಲಿವಾಹನ ಶಕದ ಸಾವಿರದ ।
ಮೇಲದಿನ್ನೂರೈವತ್ತೆಂಟರಿಂದಂ ಮುಂದೆ ।
ಪೇಳಲೇಂಧಾತು ಸಂವತ್ಸರದ ವೈಶಾಖಶುದ್ಧ
ಸಪ್ತಮಿ ಸುದಿನದೆ ॥ ೧ ॥
ಲೀಲೆಯಿಂ ಹರಿಹರಗೆ ಪಟ್ಟಮಂ ಕಟ್ಟಲವ ।
ನಾಳುವಂ ಹದಿಮೂರು ಪಟ್ಟಪರಿಯಂತರಂ ।

ವೇಳಲೇಂ ತನ್ನ ಸಂತತಿಗೂಡಿ ಸೂನ್ಯೈವತ್ತೈದು
ಸಂವತ್ಸರವನು ॥ ೨ ॥
ಲಾಲಿಸಾನೆಯ ಗುಂದಿಯಲ್ಲಿರುತೆ ಹರಿಹರನ್ನ ।
ಪಾಲವಂಶೋದ್ಭವಂ ಪಂಪಾ ವಿರೂಪಾಕ್ಷ ।
ನಾಲಯ ಸಮೀಪದೊಳ್ ವಿದ್ಯಾನಗರಿಯೆಂಬ
ಪಟ್ಟಣವರಚಿಪನಿತ್ತ ॥ ೩ ॥

'ಸ್ವದೇಶೀ ಪ್ರಚಾರಕ' ಮಾಸಪತ್ರಿಕೆಯ ೨ನೆಯ ಸಂಪುಟದ ೪ ನೆಯ ಸಂಚಿಕೆಯಲ್ಲಿ 'ವಿಜಯನಗರದ ನಿರ್ಮಾಣವೂ ಶ್ರಿಂಗೇರಿಯ ಗುರುಪರಂಪರೆಯೂ' ಎಂಬ ಶಿರೋಲೇಖದಿಂದ ಶ್ರೀಯುತ ಗೋವಿಂದ ಪೈಯವರು ಕೊಟ್ಟ ಶ್ರಿಂಗೇರಿಯ ಗುರುಪಂಪರೆಯಲ್ಲಿ ಸಹ ವಿಜಯನಗರ ಸಾಮ್ರಾಜ್ಯದ ಕಾಲವು ಕೊಡಲ್ಪಟ್ಟಿರುತ್ತದೆ. ಅದುಹೇಗಂದರೆ:—

ಶಾಲಿವಾಹನಶಕ ೧೨೫೮ ನೆ ಧಾತು ಸಂವತ್ಸರ ।
ವೈಶಾಖ ಶುದ್ಧ ೭ ಆದಿತ್ಯವಾರ ಮಾ(ಮ)ಘಾ ।
ನಕ್ಷತ್ರದಲ್ಲು ನಿರ್ಮಾಣ ಮಾಡಿದರು ॥

ಈ ದಿವಸವು ಕ್ರಿ. ಶ ೧೩೩೬ ನೆಯ ಎಪ್ರಿಲ್ ೩೦ ನೆಯ ತಾರೀಕು ಆಗುತ್ತದೆಂದು ಶ್ರೀ ಗೋವಿಂದ ಪೈಯವರು ಅಭಿಪ್ರಾಯ ಪಟ್ಟಿರುತ್ತಾರೆ. ಸಂಶೋಧನವು ಹೆಚ್ಚಾಗುತ್ತ ನಡೆದ ಈಗಿನ ಕಾಲದಲ್ಲಿ ಅಭಿಪ್ರಾಯಗಳು ಬದಲಾಗುತ್ತ ನಡೆಯುವದು ಸಹಜವದೆ. ತನಗೆ ದೊರೆತ ಸಾಮಗ್ರಿಗಳನ್ನು ಜನತೆಯ ಮುಂದಿಡುವದು ಪ್ರತಿಯೊಬ್ಬನ ಕರ್ತವ್ಯವಾಗಿದೆ.

ಎರಡನೆಯ ಮಾತು. ವಿದ್ಯಾರಣ್ಯಯತಿಗಳಸಹಾಯದಿಂದ ಈ ಸಾಮ್ರಾಜ್ಯದ ಸ್ಥಾಪನೆಯಾಯಿತೆಂದು ಎಷ್ಟೋ ಆಧಾರಗಳಿದ್ದಂತೆ ಕಂಡುಬರುತ್ತದೆ. ಇವರು ಈ ಸಾಮ್ರಾಜ್ಯ ಸ್ಥಾಪನೆಗೆ ಬಹಿರಂಗ ಕಾರಣರಾದರು. ಮೇಲ್ಕಂಡ ಶ್ರಿಂಗೇರಿಯವರ ಪರಂಪರೆಯ ಆದಿ ಭಾಗದಲ್ಲಿ ಕೆಳಗೆ ಬರೆದ ಸಂಗತಿಯು ಕಾಣಬರುತ್ತದೆ. ಅದು ಏನಂದರೆ—

ಹರಿಹರ ಬುಕ್ಕರು ಬಲ್ಲಾಳರಿಂದಾ ಪರಾಜಿತರಾಗಿ ಬಳಲಿ ಒಂದು ವೃಕ್ಷಮೂಲದಲ್ಲಿ ಅಣ್ಣತಮ್ಮಂದಿರು ದಣಿದು ಮಲಿಗಿರಲಾಗಿ ನಿದ್ರಾಕಾಲದಲ್ಲಿ ರೆ ( ೯ ) ವಣಾ (ಣ) ಶಿದ್ದೆ (೯) ಶ್ವರ ರೆಂಬ ಯೋಗಿಗಳು ಸ್ವಪ್ನದಲ್ಲಿ ಬಂದು ಚಂದ್ರಮೌಳೀ (ಳೀ) ಶ್ವರ ಲಿಂಗವನ್ನು ಕೊಟ್ಟು ಸರ್ವಲೋಕೋಪಕಾರಿಗಳಾದ ಶ್ರಿವಿದ್ಯಾರಣ್ಯರೆಂಬ ಯೋಗಿಗಳ ದರ್ಶನವಾಗುತಾಯಿಧೆ । ಆವರ ದರ್ಶನಾನುಗ್ರಹದಿಂದಾ ನಿಮಗೆ ಸಿಂಹಾಸನಾಧಿಪತ್ಯ ಬಂದೀತು ಯೆಂದು ಹೀಳಿ ರೆ[೯]ವಣಾಶಿದ್ದರು ಅಂತರ್ಧಾನವಾದಮೇಲೆ

.... .... ....

ಈ ಅವತರಣಿಕೆಯಿಂದ ರೇವಣಶಿದ್ದೇಶ್ವರ ಯೋಗಿಗಳು ವಿಜಯನಗರ ಸಾಮ್ರಾಜ್ಯದ ಅಂತರ ಕಾರಣರಾಗಿದ್ದರೆಂಬದು ಸ್ಪಷ್ಟವದೆ. ಈ ಯೋಗಿಗಳು ವೀರಶೈವರ ಪಂಚಾಚಾರ್ಯರಲ್ಲಿ ಆದ್ಯಾಚಾರ್ಯರಾಗಿರಬಹುದು. ಈ ಮಾತಿನ ಬಗ್ಗೆ ಸಹ ಹೆಚ್ಚು ಶೋಧವಾಗುವದು ಅವಶ್ಯವದೆ.

---

# ಕೃಷ್ಣದೇವರಾಯನ ಬಿರುದಾವಳಿ.

**ಶ್ರೀಸಮಸ್ತಭುವನಾಶ್ರಯ, ಪೃಥ್ವೀವಲ್ಲಭ, ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ, ಭಕ್ತಪರಮ ಭಟ್ಟಾರಕ ಸತ್ಯಾಶ್ರಯ, ಪದವಾಕ್ಯಪ್ರಮಾಣಪಾರಾವಾರಪಾರೀಣ, ಶ್ರೀಮನ್ಮಹಾಮಂಡಲೇಶ್ವರ, ಪ್ರತ್ಯರ್ಥಿರಾಜವಿಭಾಡ, ಶ್ರೀವಿರುಪಾಕ್ಷಪಾದಪದ್ಮಾರಾಧಕ, ಶ್ರೀವೀರಪ್ರತಾಪ ದಕ್ಷಿಣಸಮುದ್ರಾದಿ ನರ್ಮದಾನದ್ಯಂತಭೂಮಂಡಲೈಕಚ್ಛತ್ರಾಧಿಪ, ಸಕಲವರ್ಣಾಶ್ರಮಾಚಾರಧರ್ಮಪ್ರತಿಪಾಲಕ, ಶ್ರೀವಿದ್ಯಾನಗರರಾಜಧಾನೀರತ್ನಸಿಂಹಾಸನಾಧೀಶ್ವರ, ಸಕಲಕಲಾಭೋಜ ಕನ್ನಡ ರಾಜ್ಯರಮಾರಮಣ ಕೃಷ್ಣದೇವಮಹಾರಾಯ.**

---

# ಸಿರಿ.

೧

ಸುಂದರ ನದ ನದೀವನಗಳ ನಾಡಿನಲಿ ಮೌನವಾಗಲಿದಲೆದು, ವಿವಿಧ ಜನಗಳ ಮತದ ಏಕಮೂಲತೆ ಕಂಡು, ಶಾಂತಿ ಗೀತವ ಹಾಡಿ ಚೇತನದ ಉಸಿರೂದಿ ಹಗಲಿರುಳು ಹಂಬಲಿಪ ರಸಕಪಿಯ ಬಯಕೆಯ ಸಲಿಸಿ, ಅಜ್ಞಾತವಾಸದೊಳಿಹ ನಗರಲಕ್ಷ್ಮಿ ಸಮ್ರಾಜ್ಞಿಗೆ ಜಯಮುಕುಟವನು ತೊಡಿಸಿ, ಜನಪದಕೆ ಹರುಷ ಬದುಕನು ದಯೆ ಗೈವುದು ಓ ತಾಯಿ ಭುವನೇಶ್ವರಿ!

ಚೆಲುವು ಕನ್ನಡ ನಾಡಿನ ವಿಜಯದಭ್ಯುದಯದಲಿ ಮನನೆಟ್ಟು ತುಮುಲ ಭೀಷಣಗಳು ತೊಳಲಿ ಬಳಲುತಿರುವ ಸೋದರಗೆ ವಿದ್ಯಾರಣ್ಯ ಗುರುವರನ ಕೆಚ್ಚಿದೆಯ ನೆಚ್ಚನ್ನು, ಕುಂದದುತ್ಸಾಹವನು ಪಾಲಿಸಮ್ಮ; ಹರಕೆಯ ಜ್ಯೋತಿ ನೊಂದದಂತೆಸಗು ಕರ್ಣಾಟ ಬನಶಂಕರೀ!

ಶ್ರೀ ಗಿರಿಜೆಯಾಸ್ಯ ಕಮಲದ ಸೊಂಪು ಪೊಳೆಯೆ ವಿರೂಪಾಕ್ಷ ಸೂರ್ಯಾನಂದ ಕುಣಿತದಲಿ ನಲಿದು ನುಲಿದ; ದಣಿದ. ಮಧುರ, ನರಹರಿ, ಲಕ್ಮಣ, ವ್ಯಾಸ ವಾಲ್ಮೀಕಿ ಕುವರರು ಚಾಮರಸ ಬೊಮ್ಮರಸ ಮಂಗರಸ ಕವಿಕೋಗಿಲೆಗಳು ಮರಳಿ ಮೂಡಿ ನಾಡಲಿ ಹಾಡಲಿ ಜಯದೇವಿ ವಾಗೀಶ್ವರೀ!

ಮಲೆ ಬೀಡುಗಳ ವಿಪಿನಗಳಲಿ ತೆರೆತೆರೆಯಾಗಿ ಸಾಗುತಿರುವ ತುಂಗೆಯ ಎದೆಯ ಮೇಲಿನ ಕುಸುಮ ಕಿಸಲಯ ದೋಣಿಯಲಿ ಮುಂಜಾವಿನ ಉದಯ ರಾಗವನ್ನೆಳೆವ ವಿಹಂಗಮದೊಲು ಗಂಗೆ ತಿರುಮಲಾಂಬೆಯ ರಂದದ ಕವನ ಮಣಿಗಳು ರಾಜಿಸಲಿ ಹೇ ನಭೋಮಂಡಿತೇ!

ಸರ್ವಸೂತ್ರಧಾರಿ! ದಿನಮಣಿಯಂತೆ ಮಹಾಮಹಿಮ ರಸಿಕರತ್ನ ಶ್ರೀಕೃಷ್ಣದೇವನ ವಿಲಸಿತ ಕೀರ್ತಿ ದಿಗಂತ ವ್ಯಾಪಿಸಲಿ ಧ್ರುವವಾಗಿ ಎಲೆತಾಯಿ ಪಂಪಾಂಬಿಕೆ!

೨.

ಕಳೆದಾರು ನೂರು ವರುಷದ ವಿಜಯನಗರ ವಿಭವವನು ನೆನೆದು ಕಂಬನಿ ಮಿಡಿದು ಕಾಣಿಕೆಯ ಸಲಿಸುತಲಿಹರು ನಿಮ್ಮಯ ಪದದೊಳಿಂದು ದೇವಿ!

ಕಂಬನಿಯ ಪಾದ್ಯಗಳು, ನೆನೆ ಬೆವರ ಅಭಿಷೇಕ, ಅಂದಿನಾ ಚಿತ್ರಕತೆ ತಿನಿಸುಗಳು, ನೈಪುಳಕವಾಗುವಾ ಕವನ ಮಾಲೆಗಳು, ಬಿಸಿಯುಸಿರ ಕರ್ಪೂರ ದಾರತಿಯು, ಐತಿಹಾಸಿಕ ಮಹಾಮಂತ್ರಪುಷ್ಪಗಳು, ತರತರದ ಅಲಂಕಾರ ತ್ರಿವೇಳೆಯರ್ಚನೆಯು ಓರಣವೆ ಅಂಬ!

ಮನಸಿನ ಮೊರೆಯನು ಅರಿತು ಇಂದಿನ ಕನಸ ನನಸಾಗಿಸುವೆಯಲ್ಲವೇನಮ್ಮ!

ಕಾವಳವು ಬಹುಭೀತಿ; ಉದಯ ನಗೆಯನು ಬೀರಿ ಹೃದಯ ಬೆಳಕನು ತೋರಿ ನಲಿಸಮ್ಮ ತಕ್ಕೈಸಿ!

೩.

ಈಗ ನೀನು ನನ್ನಲ್ಲಿ ಪ್ರಸನ್ನಳಾಗಿರುವೆ; ಅದು ನನಗೆ ಗೊತ್ತು

ಅಮ್ಮ! ಅಮ್ಮ! ಎಂದೆ ನಿನ್ನ ಕೂಗುವೆನು.

ಧ್ಯಾನ ಸ್ತೋತ್ರಗಳ ಕಾಣೆ ಎಲೆ ತಾಯೆ.

ನಮಗೆ ಬೇಕಾದುದೇನೆನ್ನುವೆಯ? ಹೇಳುವೆನು—

ಸತ್ಯಜೀವನ, ಹುರುಪಿನ ಬದುಕು, ಕೃಷಿವಾಣಿಜ್ಯ ಕುಶಲ ಕಲೆಗಳ ಕೇಂದ್ರವಾಗಿಸು—ನವಜೀವನವ ತುಂಬಿ — ಕರ್ಣಾಟ ಸಾಮ್ರಾಜ್ಯವನು ಸರ್ವದಾ ಬೆಳಗಿ ಹೇ ಭುವನೇಶ್ವರಿ!

೪.

ಅಂಬೆ ಕೊಡು ಎನಗೆ ಆ ಲೀಲಾಕಮಲ ಮೋಕ್ಷ ಖಡ್ಗವನು. ನಿನ್ನಯ ಕರುಣಕಟಾಕ್ಷದಲಿ ನೀನೆ ನಾನಾಗುವೆನು. ಸುಮ ಸುರಗಿಗಳ ಪಿಡಿದು

ಧೀರ ಮಹಮದೀಯರೊಡನೆ
ಕುಶಲ ಕ್ರೈಸ್ತರೊಡನೆ
ಶೂರ ಅಕ್ಕ ತಂಗಿಯರೊಡನೆ
ಕಲೆತು ಸರ್ವಮತ

ಧರ್ಮಸಮನ್ವಯ ಸೂತ್ರವನು ಸಾರಿ, ಶಾಂತಿ ಸೌಜನ್ಯಗಳ ಸುಧಾರಸವನ್ನು ಹೀರಿ ಜಯಸಿರಿಯನು ತೋರಿ ಆನಂದಿಸುವೆನು.

—ಜೈ. ಮೈಸೂರು.

# ತಾಳೀಕೋಟೆಯ ಕಾಳಗದಬ್ಬರ.

ತಾಳೀಕೋಟೆಯ ಕಾಳಗದಬ್ಬರ ರಣರಂಗಸ್ಥಲ
ವ್ಯಾಪಿಸಿತು ।
'ಏಳಿರಿ ಕನ್ನಡ ಕಲಿಗಳೆ' ಎನುತಲಿ ಎಬ್ಬಿಸಿತೆಚ್ಚರ
ಹುಟ್ಟಿಸಿತು ॥ ಪ ॥

ನಡೆಯಿರಿ, ತಡೆಯಿರಿ, ವೈರಿಯ ಜಡಿಯಿರಿ, ಮುಂದಡಿ
ಯಿಕ್ಕಿರಿ ಕೊಳಗುಳದಿ ॥
ಬಡಿಗೋಲ್ಬರ್ಚಿಗಳೆಸೆಯಿರಿ, ಯವನರ ಶಿರಗಳು
ಕಳಚಲಿ ಭೂತಲದಿ ॥
ಖಡುಗದ ತೃಷ್ಣೆಯ ಸಲಿಸಿರಿ ತುರುಕರ ತಂಡದ
ರಕ್ತದಿ ಸತ್ವರದಿ ॥
ತೋರೆಯಿರಿ ಜೀವದ ಭಾನವನು । ಮೋಣ್
ತೊರೆಯಿರಿ ಮನೆಮಾರಾಶೆಯನು ॥ ಸಂ
ಹರಿಸಿರಿ ಅರಿಗಳ ರಾಶಿಯನು ।
ನಾಡಿನ ಮೇಲ್ಮೆಯ ಗಳಿಸಲು ಸ್ವಾರ್ಥವ ಸೀಗಿರಿ
ಭೇದವ ದೂರಿಡಿರಿ ॥ ೧ ॥

ಮಕ್ಕಳ ಮಮತೆಯ ದೂಡಿರಿ, ಹೆಂಡತಿ ಚಿಕ್ಕವಳಿಹ
ಳೆಂದೆನಬೇಡಿ ॥
ಉಕ್ಕುವ ಧನಕಾನೊಬ್ಬನೆ ಒಡೆಯನು, ಒಬ್ಬನೆ
ಮಗನೆಂದೆನಬೇಡಿ ॥
ಚಿಕ್ಕವನಾನೊಕ್ಕಲಿಗನು ಮುಪ್ಪಿನ ಮುದುಕನು
ಯಾತಕೆ ಎನಬೇಡಿ ॥
ಇದೆನಾ ಶಾಲೆಗೆ ಹೋಗುವೆನು । ಮೇ
ಣಿದೆನಾ ಪದವಿಯ ಗಳಿಸಿಹೆನು । ಮ
ತ್ತಿದೆನಾ ಚಾಕರಿ ನಡಿಸಿಹೆನು ।
ಇನ್ನೂ ಹಣವನು ಗಳಿಸೇ ಇಲ್ಲವು ಕೀರ್ತಿಯ ಪಡೆ
ದಿಲ್ಲೆನಬೇಡಿ ॥ ೨ ॥

ಸತ್ತೆಯ ಹಂಬಲವೇತಕೆ ? ತಾಯಿಯ ಚಿತ್ತವೆ
ಶಾಂತಿಯೊಳಿರದಿರಲು ॥
ಎತ್ತಣ ಸೌಖ್ಯವದೆತ್ತಣ ಬಾಳ್ವೆಯು ಮಾತೆಯು
ಬಂಧನದಿರುತಿರಲು ॥
ಎತ್ತಣ ದೈಷಾರಾಮದಿ ಮೆರೆವುದು, ಮುತ್ತಿಗೆ
ಬೇಗೆಯು ಹತ್ತಿರಲು ॥
ಧೂಳಿಯ ಮೋಡನು ಹುಟ್ಟಿಸಿರಿ । ಖಡು
ಗಾಳಿಯ ಮಿಂಚನು ಹೊರಡಿಸಿರಿ । ಕೆ
ನ್ನೀರಿನ ಬಲ್ಸರಿ ಕರೆಯಿಸಿರಿ ।
ಬೇಗೆಯ ನೊಂದಿಸಿ ಸುಖ ಸಾಮ್ರಾಜ್ಯದಿ ಮೆರೆಯಲು
ರಣದಲಿಹೊಯ್ದಾಡಿ ॥ ೩ ॥

ತಾಳೀಕೋಟೆಯ ಸಮರವು-ಕನ್ನಡ ಕಲಿಗಳ ಕಲಿತನ
ದೊರೆಯಿಹುದು ॥
ತಾಳೀಕೋಟೆಯು-ಕನ್ನಡ ರಾಜ್ಯದ ಮೇಲಾಧಾರವು
ಆಗಿಹುದು ॥
ತಾಳೀಕೋಟೆಯು-ಕನ್ನಡದೇವಿಯ ಮಾಂಗಲ್ಯದ
ಮಣಿಬಂಧನವು ॥
ದೇವಿಯ ಭಾಗ್ಯವಕಾಯ್ದೊಳಿರಿ । ರಣ
ದೇವಿಯ ಕೃಪೆಯನು ಪಡಕೊಳಿರಿ । ಜಯ
ದೇವಿಯ ಮನವನು ಮೋದಿಸಿರಿ ।
ಕನ್ನಡವೀರರ ಶಿರಮಣಿಮಾಲೆಯನರ್ಪಿಸಲೇಳಿರಿ ।
ಹುರುಪಿನಲಿ ॥ ೪ ॥

ದೇಶದಸೇವೆಯೆ ದೇವರಸೇವೆಯು ಅದರೊಳೆ
ಪರಮಾನಂದಗತಿ ॥
ದೇಶದ ಬಾಳ್ವೆಯೇ ನಿಮ್ಮಯ ಬಾಳ್ವೆಯು ದೇಶವು
ಅಳಿದರೆ ಏನುಗತಿ?॥
ದೇಶದ ಹಿತಕೆಂದಾತ್ಮ ಸಮರ್ಪಿಸಿ ತೋರಿರಿ ದೇಶದ
ಕುದಾರಗತಿ ।
ಏಳಿರಿ ಸಮರದಿ ಕಾದಾಡಿ । ಬಹ
ದಾಳಿಯ ದೂಡಿರಿ ಹೆಣಗಾಡಿ । ಯಮ
ರಾಯಗೆ ಬೆದರದೆ ಹೋರಾಡಿ ।
ಸಾವಿನ ದಾರಿಯೆ ಸ್ವರ್ಗದ ದಾರಿಯು; ಸಾವನು
ಮೀರಲು ರಾಜಗತಿ ॥ ೫ ॥

ಕನ್ನಡ ಜನನಿಯ ಕೃಪೆಯಿಂದಲ್ಲೇ ? ಕರ್ನಾಟಕದಲಿ
ಜನಿಸಿದುದು ॥
ಕನ್ನಡ ದಮ್ಮನ ಮೊಲೆವಾಲಲ್ಲೇ? ನಿಮ್ಮನು ಪೋಷಿಸಿ
ಬೆಳಸಿದುದು ॥
ಕನ್ನಡ ತಾಯಿಯ ಬಲದಿಂದಲ್ಲೇ ? ಭುಜಬಲ
ಶೌರ್ಯವು ಬೆಳದಿಹುದು ॥
ತಾಯಿಯ ಋಣವನು ತೀರಿಸಿರಿ । ಭೂ
ದೇವಿಗೆ ಮುದುಪನು ಮುಟ್ಟಿಸಿರಿ । ತಾಯ್
ನಾಡಿನ ಹಿತವನು ಸಾಧಿಸಿರಿ ।
ತಾಯಿಯ ಮೋದಿಸಿ ತಾಯಿಯ ತೊಡೆಯಲಿ
ನಲಿನಲಿದಾಡುತ ಮಲಕೊಳಿರಿ ॥ ೬ ॥

—ಅಜ್ಞಾತಕವಿ.

# ಭರತಖಂಡದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾನವು.

ಬರೆದವರು:— ಶ್ರೀ. ನಂದಗಡ ಭೀಮರಾಯರು ಬೆಳಗಾವಿ,
ಕನ್ನಡ ಸೇವಾಸಮಿತಿಯ ಪರವಾಗಿ

ಭರತಖಂಡದ ಇತಿಹಾಸದಲ್ಲಿಯ ವಿಜಯನಗರದ ಸಾಮ್ರಾಜ್ಯದ ಸ್ಥಾನವನ್ನು ಅರಿತು ಕೊಳ್ಳಬೇಕಾದರೆ ನಾವು ಆ ಮೊದಲಿನ ಭರತಖಂಡದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಯನ್ನು ಪರ್ಯಾಲೋಚಿಸಲಿಕ್ಕೆ ಬೇಕು. ವಿಜಯನಗರದ ಸಾಮ್ರಾಜ್ಯವು ಕ್ರಿ ಶ. ೧೩೩೬ ರಲ್ಲಿ ಸ್ಥಾಪಿತವಾಯಿತು ಅಂದಿನ ವರೆಗೆ ಭರತ ಖಂಡದ ಸ್ವಾತಂತ್ರ್ಯದ ಮೇಲೂ, ಸಂಸ್ಕೃತಿಯ ಮೇಲೂ ಮತ್ತು ವೈದಿಕ ಧರ್ಮದ ಮೇಲೂ ಬಂದ ಸಂಕಟ ಪರಂಪರೆಗಳನ್ನು ತಿಳಿದ ಹೊರತು ಸಾಮ್ರಾಜ್ಯವು ಗೆಯ್ದ ಮಹತ್ಕಾರ್ಯದ ಕಲ್ಪನೆಯಾಗಲಾರದು.

ಕ್ರಿ ಶ ೧೨೯೫ ರ ವರೆಗೆ ಅಂದರೆ ಅಲ್ಲಾವುದ್ದೀನ ಖಿಲಜಿಯು ಗಾದಿಗೆ ಬರುವ ವರೆಗೆ ಒಹುತರ ಉತ್ತರ ಭರತ ಖಂಡವೆಲ್ಲವೂ ಮುಸಲ್ಮಾನರ ವಶವಾಗಿತ್ತು ಚಿತೋಡದ ರಜಪುತರ ಹೊರತು ಮುಸಲ್ಮಾನರ ರಾಜಕೀಯ ಪ್ರಭುತ್ವವನ್ನು ಧಿಕ್ಕರಿಸುವವರು ಯಾರೂ ಉಳಿದಿದ್ದಿಲ್ಲ. ಇದಲ್ಲದೆ ವಾಯುವ್ಯದಿಕ್ಕಿನಿಂದ ಮುಸಲ್ಮಾನರ ತಂಡಗಳು ಹಸಿದ ತೋಳಗಳಂತೆ ಒಳನುಗ್ಗಿ ದೇಶದಲ್ಲೆಲ್ಲ ಹರಡುತ್ತಲೇ ಇದ್ದವು

ಉತ್ತರ ಹಿಂದುಸ್ಥಾನವನ್ನು ಪಾದಾಕ್ರಾಂತ ಮಾಡಿದ ಬಳಿಕ ಮುಸಲ್ಮಾನರ ದೃಷ್ಟಿಯು ಖಿಲ್ಜಿ ಅರಸರ ಕಾಲದಲ್ಲಿ, ದಕ್ಷಿಣ ದೇಶದ ಕಡೆಗೆ ತಿರುಗಿತು ದಕ್ಷಿಣದಲ್ಲಿ ಆಗ್ಗೆ ದೇವಗಿರಿಯ ಯಾದವರು, ವರಂಗಲ್ಲಿನ ಕಾಕತೀಯರು, ದ್ವಾರ ಸಮುದ್ರದ ಹೊಯ್ಸಳರೂ, ಮಧುರೆಯ ಪಾಂಡ್ಯರೂ ಪ್ರಬಲರಾಗಿದ್ದರು. ಅಲ್ಲಾವುದ್ದೀನ ಖಿಲಜಿಯು ಕ್ರಿ. ಶ, ೧೨೯೪ ರಲ್ಲಿ ದೇವಗಿರಿಯ ಮೇಲೆ ದಾಳಿಯಿಟ್ಟು ಅದನ್ನು ಕೈವಶ ಪಡಿಸಿಕೊಂಡನು. ದೇವಗಿರಿಯು ಬಿದ್ದೊಡನೆ ಮುಸಲ್ಮಾನರಿಗೆ ದಕ್ಷಿಣದ ಮಾರ್ಗವು ಸುಲಭವಾದಂತಾಯಿತು. ದೇವಗಿರಿಯು ದುರ್ಗಮವಾದ ದುರ್ಗವಾಗಿತ್ತು. ದಕ್ಷಿಣದ ಹಾದಿಯಲ್ಲಿ ಇದ್ದದರಿಂದ ಮುಸಲ್ಮಾನರ ಪ್ರವೇಶಕ್ಕೆ ಅದು ತಡೆಯಾಗಿತ್ತು. ಆದರೆ ಅಲ್ಲಿಯ ಅರಸನಾದ ರಾಮದೇವನ ಮೂರ್ಖತನದಿಂದಲೋ, ಭರತಖಂಡದ ದುರ್ದೈವದಿಂದಲೋ ದೇವಗಿರಿಯು ಅಲ್ಲಾವುದ್ದೀನನಿಗೆ ಅನಾಯಾಸವಾಗಿ ತುತ್ತಾಯಿತು ೧೨೯೭ ರಲ್ಲಿ ಅಲ್ಲಾವುದ್ದೀನನು ಗುಜರಾಥದ ಕರ್ಣರಾಯನ ರಾಜ್ಯವನ್ನು ಮಣ್ಣುಗೂಡಿಸಿದನು. ಈ ಜಯಗಳಿಂದ ಹುರುಪುಗೊಂಡ ಅವನ ರಾಜ್ಯಬುಭುಕ್ಷೆಯು ದಕ್ಷಿಣವನ್ನು ತುತ್ತಿಡಲು ಸಂಕಲ್ಪಿಸಿತು ೧೩೦೩ ರಲ್ಲಿ ಅವನು ವರಂಗಲ್ಲನ್ನು ನುಂಗಲು ಪ್ರಯತ್ನಿಸಿದನು. ಅವನಬಳಿ ಕುಲಗೆಟ್ಟ ಮುಸಲ್ಮಾನನಾದ ಮಲಿಕ ಕಾಫರನೆಂಬ ಒಬ್ಬ ಹಿಂದು ಕುಲಾಂಗಾರನು ಸೇನಾಪತಿಯಾಗಿದ್ದನು ಈ ನರಾಧಮನು ಭಾರತೀಯರ ಸಂಸ್ಕೃತಿಗೂ, ವೈದಿಕ ಧರ್ಮಕ್ಕೂ ಮಾಡಿದ ಹಾನಿಯು ಇಷ್ಟಿಷ್ಟೆಂದು ಹೇಳಲಾಗದು. ದಕ್ಷಿಣ ದೇಶದ ಸ್ವಾತಂತ್ರ್ಯದ ಮೇಲೆ ಬೆಂಕೆಯಿಟ್ಟ ಮೊದಲನೇ ರಾಷ್ಟ್ರಂಗಾರನು ಇವನೇ

ತೆಲಗು ದೇಶದ ವರಂಗಲ್ಲಿನಲ್ಲಿ ಕಾಕತೀಯರು ಆಳುತ್ತಿದ್ದರು. ಅವರನ್ನು ಬಗ್ಗು ಬಡಿಯಲು ಅಲ್ಲಾಉದ್ದೀನನು ಮಲಿಕಕಾಫರನನ್ನು ದಕ್ಷಿಣದಲ್ಲಿ ಕಳಿಸಿದನು. ಕಾಕತೀಯರ ಮೇಲಿನ ಈ ಅಭಿಯೋಗದಲ್ಲಿ ದೇವಗಿರಿಯ ರಾಮದೇವನು ಮಲಿಕ ಕಾಫರನಿಗೆ ಸಾಹಾಯ್ಯ ಮಾಡುವ ಪುಣ್ಯಕರ್ಮವನ್ನು [?] ಮಾಡಿದನು.

೧೩೧೦ ರಲ್ಲಿ ಮಲಿಕ ಕಾಫರನು ದ್ವಾರ ಸಮುದ್ರವನ್ನು ಕೈವಶ ಪಡಿಸಿಕೊಂಡು ಹೊಯ್ಸಳರ ರಾಜ್ಯವನ್ನು ಮುಳುಗಿಸಿದನು. ಮಧುರೆಯ ಸುಂದರ ಪಾಂಡ್ಯನು ತನ್ನ ಅಣ್ಣನಿಗೆ ಮಣ್ಣು ತಿನ್ನಿಸಬೇಕೆಂದು ಮುಸಲ್ಮಾನರಿಗೆ ಔತಣವಿತ್ತನು ಮಲಿಕಕಾಫರನಿಗೆ ಇದೇ ಬೇಕಾಗಿತ್ತು. ಅವನು ಮಧುರೆಯನ್ನು ಕೈವಶ ಪಡಿಸಿಕೊಂಡು ಸೇತುಬಂಧ ರಾಮೇಶ್ವರದ ವರೆಗೂ ಹೋಗಿ ಅಲ್ಲಿ ಯೊಂದು ಮಸೀದೆಯನ್ನು ಕಟ್ಟಿಸಿದನು.

೧೩೧೮ ರಲ್ಲಿ ಮುಬಾರಕ ಖಿಲಜಿಯು ದೇವಗಿರಿಯ ಹರಪಾಲನನ್ನು ಮೈದೊಗಲು ಸುಲಿಸಿ ಕೊಂದನು.

೧೩೨೩ ರಲ್ಲಿ ವರಂಗಲ್ಲು ಸಂಪೂರ್ಣವಾಗಿ ಮಣ್ಣು ಪಾಲಾಯಿತು. ಮುಸಲ್ಮಾನರು ಸಂಪೂರ್ಣವಾಗಿ ವಿಜಯಿಯಾದರು. ವಿರೋಧಕರು ಯಾರೂ ಉಳಿಯಲಿಲ್ಲ. ಈ ಸುಮಾರಕ್ಕೆ ಭರತಖಂಡದಲ್ಲಿ ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಯಾರೂ ಸುರಕ್ಷಿತ ಇದ್ದಿದ್ದಿಲ್ಲ. ಮುಸಲ್ಮಾನರ ಹೆಸರು ಕೇಳಿದೊಡನೆ ಜನರ ಮೈಮೇಲೆ ಮುಳ್ಳು ಬರುತ್ತಿದ್ದವು ಪ್ರತೀಕಾರ ಮಾಡಬಲ್ಲವರು ಹೋರಾಡಿ ಸತ್ತು ಹೋಗುತ್ತಿದ್ದರು ಮುಂದೆ ದುರ್ಬಲರ ಮೊರೆ ಕೇಳುವವರಾರು ? ಹೆಂಗಸರು ಪಾತಿವ್ರತ್ಯದ ರಕ್ಷಣೆಗಾಗಿ ಅಗ್ನಿಕಾಷ್ಠಗಳನ್ನು ಭಕ್ಷಿಸುತ್ತಿದ್ದರು. ಚಿಕ್ಕ ಮಕ್ಕಳನ್ನು ನೋಡುವವರೇ ಯಾರಿಲ್ಲದಂತಾಗುತ್ತಿತ್ತು. ಇದ್ದಬಿದ್ದ ವಸ್ತು ಒಡವೆಗಳನ್ನು ಜನರು ಹುಗಿದು ಇಲ್ಲವೆ ಆಳವಾದ ಬಾವಿಗಳಲ್ಲಿ ಚಲ್ಲಿಕೊಟ್ಟು ಆತ್ಮರಕ್ಷಣೆಗಾಗಿ ಅಡವಿಗಳನ್ನು ಸೇರುತ್ತಿದ್ದರು. ಪಟ್ಟಣಗಳೂ ಹಳ್ಳಿಗಳೂ ನಿರ್ಮಾನುಷವಾದವು. ಭೂಮಿಗಳು ಬೀಜವನ್ನು ಕಾಣದಾದವು. ಎಲ್ಲೆಲ್ಲಿಯೂ ದಾರಿದ್ರ್ಯವು, ಅನ್ನಾನ್ನದಶೆಯು ಪ್ರಸ್ತವಾದಂತಾಯಿತು. ಯಾರಿಗೂ ಯಾತರದೂ ಸುರಕ್ಷಿತತೆಯೆನಿಸದೆ ಜನರಿಗೆ ಎಲ್ಲವೂ ಅಸ್ಥಿರವೂ ಕ್ಷಣಭಂಗುರವೂ ತೋರಹತ್ತಿತು ವ್ಯಾಪಾರೋದ್ಯೋಗಗಳು ನಿಂತು ಹೋದವು ಬೇಸಾಯವು ನಿಂತು ಬೆಳೆಯುವ ಭೂಮಿಗಳು ಅರಣ್ಯಗಳಾದವು. ಹೊಲಗಳನ್ನು ಬೀಜಗಾಣಿಸಿದರೆ, ಬೆಳೆಯು ಕೈಗೆ ಹತ್ತೀತೆಂಬ ಭರವಸೆಯುಳಿಯಲಿಲ್ಲ. ಪ್ರವಾಸವು ನಿಂತು ಹೋಯಿತು. ಪ್ರತಿಯೊಬ್ಬನು ತನ್ನಷ್ಟಕ್ಕೆ ತಾನೇ ಎಂಬಸ್ಥಿತಿಯುಂಟಾಗಿ ಸಮಾಜದ ಬಂಧನಗಳೆಲ್ಲ ಸಡಿಲಿಸಿ ಹೋದವು. ಲಗ್ನಾದಿ ಸಂಸ್ಕಾರಗಳಾಗುವದೂ ಕಠಿಣವಾಯಿತು ಹಿಂದೂ ಜನರ ಮೂರ್ತಿಗಳ ಮೇಲೂ, ಗುಡಿಗಳ ಮೇಲೂ ಮುಸಲ್ಮಾನರ ಕಟಾಕ್ಷವು ಬಹಳ. ಶಿಲ್ಪಕಲೆಯ ತವರ್ಮನೆಯೆನಿಸುವ ಸುಂದರ ಮಂದಿರಗಳನ್ನು ನೆಲಸಮ ಮಾಡಿ ಮುಸಲ್ಮಾನರು ಅವುಗಳ ಕಲ್ಲುಗಳಿಂದ ಮಸೀದೆಗಳನ್ನು ಕಟ್ಟಿಸಿದರು ಸುಂದರ ಮೂರ್ತಿಗಳನ್ನು ಛಿನ್ನ ವಿಚ್ಛಿನ್ನವಾಗಿ ಮಾಡಿ ಈಡಾಡಿದರು. ಹಿಂದೂ ಜನರಿಗೆ ತಮ್ಮ ಧರ್ಮವನ್ನಾಚರಿಸುವದು ತುಡುಗಾಯಿತು. ಫಿರೋಜ ತುಘಲಖನ ಆಳಿಕೆಯಲ್ಲಿ ಘಟಿಸಿದ ಒಂದು ಸಂಗತಿಯನ್ನು ಇಲ್ಲಿ ವರ್ಣಿಸಿದರೆ ಅಪ್ರಸ್ತುತವಾಗಲಾರದು. ಅದರಿಂದ ಆ ಕಾಲದಲ್ಲಿ ಭಾರತೀಯರ ಸ್ಥಿತಿಯು ಹೇಗೆ ಅಸಹಾಯವಾಗಿತ್ತೆಂಬದರ ಕಲ್ಪನೆಯಾಗುವದು. ಫಿರೋಜನಕಾಲದಲ್ಲಿ ದಿಲ್ಲಿಯಲ್ಲಿ ಒಬ್ಬ ವಿದ್ವಾಂಸ ಬ್ರಾಹ್ಮಣನಿದ್ದನು. ಅವನು ಒಳ್ಳೇ ಧರ್ಮನಿಷ್ಠನೂ, ಸಾತ್ವಿಕನು, ಸಾಧುವೂ ಆಗಿದ್ದನು. ಹಿಂದು ಜನರು ಮೂರ್ತಿ ಪೂಜೆಯನ್ನು ಮಾಡಬಾರದೆಂದು ಫಿರೋಜನ ಕಟ್ಟಪ್ಪಣೆಯಿತ್ತು ಇದಕ್ಕೆ ವಿರೋಧವಾಗಿ ಬ್ರಾಹ್ಮಣನು ಮೂರ್ತಿಪೂಜೆಯನ್ನು ಮಾಡುತ್ತಲಿದ್ದನು. ಬ್ರಾಹ್ಮಣನು ನಿಃಸೀಮ ಈಶಭಕ್ತನೂ, ಸಾತ್ವಿಕನೂ ಆದುದರಿಂದ ಎಷ್ಟೋ ಮುಸಲ್ಮಾನ ಅಧಿಕಾರಿಗಳೂ, ಸ್ತ್ರೀಪುರುಷರೂ ಅವನ ಭಕ್ತರಾದರು. ಬರಬರುತ್ತ ಈ ಮಾತು ಬಾದಶಹನ ಕಿವಿಗೆ ತಲಪಿತು ಕೂಡಲೆ ಬಾದಶಹನು ಅವನನ್ನು ಹಿಡಿದು ತರಿಸಿ, ದೊಡ್ಡದೊಂದು ಕಟ್ಟಿಗೆಯ ರಾಶಿ ಹಾಕಿಸಿ, ಅದರ ಮೇಲೆ ಅವನನ್ನು ಕೈಕಾಲು ಕಟ್ಟಿ ಚಲ್ಲಿಸಿ ಬೆಂಕೀ ಹಚ್ಚಿಸಿದನು. ಕ್ಷಣಾರ್ಧದಲ್ಲಿ ಆ ದಾರುಣದಳ್ಳುರಿಯ ಜ್ವಾಲೆಗಳು ಆ ಬಡ ಬ್ರಾಹ್ಮಣನನ್ನು ಸ್ವಾಹಾಕರಿಸಿದವು. ಫಿರೋಜತಘಲಖನು ದಯಾಳುವೂ ಪ್ರಜಾವತ್ಸಲನೂ ಎಂದು ಇತಿಹಾಸದಲ್ಲಿ ಪ್ರಸಿದ್ಧಿಯುಂಟು. ಇಂಥವನೇ ಹೀಗೆ ಮಾಡುತ್ತಿದ್ದನೆಂದಮೇಲೆ ಮಹಮ್ಮದ ತಘಲಖನಂಥ ರಾಕ್ಷಸಾಧಮನ ಕಾಲದಲ್ಲಿ ಭಾರತೀಯರ ಅವಸ್ಥೆಯು ಏನಾಗಿದ್ದಿತೆಂಬದನ್ನು ಕಲ್ಪಿಸಬಹುದು. ಮಹಮ್ಮದನಂಥ ಮೂರ್ಖನೂ, ನೀಚನೂ, ಕ್ರೂರನೂ ಆದ ಸುಲ್ತಾನನು ಇನ್ನೊಬ್ಬನಾಗಲಿಲ್ಲ. ಅವನ ಆಳಿಕೆಯು ಆರಂಭಿಸಿದೊಡನೆ ಭಾರತೀಯರಿಗೆ ಆಕಾಶವೇ ಹರಿದು ಬಿದ್ದಂತಾಯಿತು. ತನ್ನ ಅಂಣನ ಮಗನಾದ ಬಹಾಉದ್ದೀನನ ಹೆಂಡರು ಮಕ್ಕಳನ್ನು ಕೊಂದು ಅವರ ಮಾಂಸವನ್ನು ಅವನಿಗೆ ತಿನ್ನಲಿಕ್ಕೆ ಹಚ್ಚಿದ ರಾಕ್ಷಸನಿವನು.

ಮೊದಲೇ ದಾರುಣವಾದ ಭಾರತೀಯರ ಅವಸ್ಥೆಯು ಇನ್ನೂ ಹೆಚ್ಚಿಗೆ ಭಯಂಕರವಾಗಿ ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಭಾರತೀಯರ ಸಂಸ್ಕೃತಿಯೂ ಧರ್ಮವೂ, ಸ್ವಾತಂತ್ರ್ಯವೂ ಗತಕಾಲದ ಸಂಗತಿಗಳೋ ಎನ್ನೋ ಎಂಬುವ ಪರಿಸ್ಥಿತಿಯು ಬಂದೊದಗಿತು. ಆದರೆ ದೇವರು ದೊಡ್ಡವನು. ಅವನ ಲೀಲೆಯು ಅಗಾಧವಾದದ್ದು. ಇಂಥ ಸಂಕಟಮಯ ಪರಿಸ್ಥಿತಿಯಲ್ಲಿಯೇ ಭರತಖಂಡದ ಸ್ವಾತಂತ್ರ್ಯದ ಬೀಜವು ಮೊಳೆಯಿತು. ಉತ್ತರದೇಶವು ಮುಸಲ್ಮಾನರೊಡನೆ

ಹೋರಾಡಿ ದಣಿದು ನಿಃಪೌರುಷವಾದಂತಾಗಿದ್ದರೂ, ದಕ್ಷಿಣದೇಶವು ಆ ಅವಸ್ಥೆಗೆ ಮುಟ್ಟಿದ್ದಿಲ್ಲ. ದಕ್ಷಿಣ ದೇಶವು ಮುಸಲ್ಮಾನರ ಕೈವಶವಾಗಿದ್ದರೂ ಅದರ ಪ್ರತೀಕಾರಶಕ್ತಿಯು ನಷ್ಟವಾಗಿದ್ದಿಲ್ಲ. ಮುಸಲ್ಮಾನರ ಜುಲುಮೆಯಿಂದ ಸಂತ್ರಸ್ತರಾದ ಜನರಿಗೆ ನಾಯಕನು ಮಾತ್ರ ಬೇಕಾಗಿದ್ದನು. ಈ ಕಾಲಕ್ಕುಚಿತವಾದ ನಾಯಕರೂ ದೊರೆತರು ವಿದ್ಯಾರಣ್ಯನೂ, ಹುಕ್ಕನೂ ಬುಕ್ಕನೂ ಮುಂದುವರಿದು ಕನ್ನಡಿಗರನ್ನು ಸಂಘಟಿಸಿ, ಕಾಲಗಕ್ಕೆ ಅನುಗೊಳಿಸಿ ವೈದಿಕ ಸಾಮ್ರಾಜ್ಯದ ಕಟ್ಟಡದ ಅಸ್ತಿವಾರವನ್ನು ಹಾಕಿದರು.

ಮುಸಲ್ಮಾನರ ಉಪಟಳಕ್ಕೆ ಜನರೆಲ್ಲರು ರೋಚ್ಚಿಗೆದ್ದರೂ ಅಸಹಾಯರಾಗಿದ್ದಾರೆ, ಕಿಂಕರ್ತವ್ಯಮೂಢರಾಗಿದ್ದಾರೆ. ಪರಿಸ್ಥಿತಿಯು ಅತ್ಯಂತ ನಿರಾಶಮಯವಾಗಿದೆ ದೇಶವು ಇಂಥ ದಾರುಣ ಸಂಕಟಕ್ಕೊಳಗಾದ ವೇಳೆಯಲ್ಲಿ ಜನರಿಗೊಂದು ಆಶೆಯ ಕಿರಣವು ಆನೇಗುಂದಿಯ ಹತ್ತರ ದೃಗ್ಗೋಚರವಾಯಿತು ವರ್ಷಾನುವರ್ಷಗಳಿಂದ ಅವರ್ಷಣವಾಗಿ ಜನರೆಲ್ಲರೂ ಅನ್ನನ್ನಗತಿಕರಾಗಿ ಮೃತಪ್ರಾಯರಾದ ವೇಳೆಯಲ್ಲಿ ಅವರಿಗೊಂದು ಶುಭ್ರವಾದ ಆಗಸದಲ್ಲಿ ಸಜಲ ಮೇಘ ಶಕಲವು ಕಂಡು, ಅವರ ಬದಕುವ ಆಶೆಯನ್ನು ಬಲಪಡಿಸುವಂತೆ, ಮೃತಪ್ರಾಯರಾದ ಭಾರತೀಯರಿಗೆ ನಿರಾಶಾಮಯವಾದ ಆಗಸದಲ್ಲಿ ಆಶೆಯ ಮೇಘಶಕಲವೊಂದು ಕಂಡು ಅವರನ್ನು ಬಲಪಡಿಸಿತು. ಜನರ ದೃಷ್ಟಿಗಳೆಲ್ಲ ಅದರಕಡೆಗೆ ನೆಟ್ಟವು. ಭಾರತೀಯರು ಇನ್ನು ಬದಕುವ ಆಶೆಯುಂಟೆಂದು ಆನಂದಭರಿತರಾದರು. ಆ ಆಶೆಯ ಮೇಘಶಕಲವು ಕರಿ ಮಾಯುಗವಾಗದೆ, ಜಲಪ್ರಪೂರ್ಣವಾಗಿ ದೊಡ್ಡದಾಗಿ ಬೆಳೆಯುತ್ತ ಬೆಳೆಯುತ್ತ ಇಡೀ ದಕ್ಷಿಣಾಪಥದಷ್ಟು ಬೆಳೆದು, ಮಾನದಣಿವಂತೆ ಅಮೃತವನ್ನು ವರ್ಷಿಸಿ, ಭಾರತೀಯರಲ್ಲಿ ಜೀವನಕಳೆಯನ್ನು ತುಂಬಿ, ಅವರಿಗೆ ಮತ್ತೆ ಭಾರತೀಯತ್ವವನ್ನು ದೊರಕಿಸಿ ಕೊಟ್ಟಿತು.

೧೩೩೬ರ ಸುಮಾರಕ್ಕೂ ಮತ್ತು ಆ ಮೊದಲು ಭರತಖಂಡದ ಸ್ಥಿತಿಯು ಹೇಗಿತ್ತೆಂಬದನ್ನು ನಾವು ವರ್ಣಿಸಿದ್ದೇವೆ. ಆದರ ಮೇಲಿಂದ ವಿದ್ಯಾರಣ್ಯನೂ, ಹರಿಹರನೂ ಮತ್ತು ಅವರ ತಮ್ಮಂದಿರು ಸ್ಥಾಪಿಸಿದ ವಿಜಯನಗರದ ಸಾಮ್ರಾಜದ ಸ್ಥಾನವು ಭರತಖಂಡದ ಇತಿಹಾಸದಲ್ಲಿ ಏನೆಂಬುಂದು ತಿಳಿಯುವಂತಿದೆ. ದಕ್ಷಿಣದೇಶದ ಮೇಲಿನ ಮುಸಲ್ಮಾನರ ಅಭಿಯೋಗಗಳನ್ನೂ, ಆಘಾತಗಳನ್ನೂ ತಡೆಯಲು ೩೫೦ ವರ್ಷಗಳ ವರೆಗೆ ಸಾಮ್ರಾಜ್ಯವು ಒಂದು ಅಭೇದ್ಯವಾದ ಗೋಡೆಯಂತಿತ್ತು. ಇದರಾಶ್ರಯದಲ್ಲಿ ವೈದಿಕ ಸಂಸ್ಕೃತಿಯು, ವೈದಿಕಧರ್ಮವೂ ಸುರಕ್ಷಿತವಾಗಿ ಬೆಳೆದವು. ಸ್ವಾತಂತ್ರ್ಯಸಂಗ್ರಾಮವನ್ನು ವಿಜಯನಗರದವರು ೩೫೦ ವರುಷ ಅವ್ಯಾಹತವಾಗಿ ಸಾಗಿಸಿದರು. ಭರತಖಂಡದ ಸ್ವಾತಂತ್ರ್ಯದ ಮೇಲೆ ಆಘಾತಗಳಾಗಹತ್ತಿ ಆಗಲೇ ೩೦೦—೪೦೦ ವರುಷಗಳಾಗಿದ್ದವು. ೧೯ನೇ ಶತಮಾನದ ಅಂತ್ಯದ ವರೆಗೂ ಉತ್ತರ ಹಿಂದುಸ್ಥಾನವು ಮುಸಲ್ಮಾನರ ಆಘಾತಗಳನ್ನು ಸಹಿಸಿತು. ಅದು ಹೋರಾಡಿ ದಣಿದು ಸ್ವಾತಂತ್ರ್ಯ ಪತಾಕೆಯನ್ನು ಕೆಳಗೆ ಇಟ್ಟೊಡನೆ ಕನ್ನಡಿಗರಿಗಳು ಅದನ್ನವಚಿ ಸಂಗ್ರಾಮವನ್ನು ಮುಂದೆ ಹಾಗೇ ಸಾಗಿಸದಿದ್ದರೆ, ಭರತಖಂಡದ ಅವಸ್ಥೆಯು ಈಗ್ಯೆ ಏನಾಗುತ್ತಿತ್ತು? ರಾಷ್ಟ್ರದ ಮೇಲೆ ಒಂದೊದಗಿದ ಮಹತ್ಸಂಕಟದ ಪ್ರಸಂಗವನ್ನರಿತು, ವಿದ್ಯಾರಣ್ಯರೂ, ಹರಿಹರರೂ ಮತ್ತು ಅವರ ತಮ್ಮಂದಿರು ಮುಂದಾಗಿ, ಮುಸಲ್ಮಾನರು ಭಾರತೀಯರಿಗೆ ಒಗೆದ ಆಹ್ವಾನವನ್ನು ಸ್ವೀಕರಿಸಿ, ಸ್ವಾತಂತ್ರ್ಯ ರಣದಲ್ಲಿ ಎದೆತಟ್ಟಿ ನಿಲ್ಲುವಂತೆ ಕನ್ನಡಿಗರಲ್ಲಿ ಚೈತನ್ಯವನ್ನು ಹುಟ್ಟಿಸಿ ಅವರ ಗಂಡುಗಲಿತನವನ್ನು ಒರೆಗೆ ಹಚ್ಚಿ ಭಾರತೀಯರ ಮರ್ಯಾದೆಯನ್ನು ಕಾಯ್ದರು. ಕನ್ನಡಿಗರಾದರೂ ಮೈಯ್ದೆಗೆಯದೆ, ತಮ್ಮ ಚೊಕ್ಕಾದ ಶೌರ್ಯ ಧೈರ್ಯಾದಿಗಳೊಡನೆ ಸತತವಾಗಿ ೩೫೦ ವರುಷ ಆರ್ಯವೀರರಿಗೆ ಶೋಭಿಸುವಂತೆ ಹೋರಾಡಿ ಭಾರತೀಯರ ಜೀವನಶಕ್ತಿಯು ದುರ್ದಮನೀಯವೆಂದು, ಕಿಂಬಹುನಾ, ಅಮರವೆಂದು ಜಗತ್ತಿಗೆ ಸಾರಿದರು. ಮರಾಟರ ಸಾಮ್ರಾಜ್ಯವನ್ನು ಸ್ಥಾಪಿಸಿದ ಶಿವಛತ್ರಪತಿಗೂ ಸ್ಫೂರ್ತಿಯು ವಿಜಯನಗರದಸಾಮ್ರಾಜ್ಯದ ಇತಿಹಾಸದಿಂದಲೇ, ದೊರೆಯಿತು. ಕನ್ನಡಿಗರ ಹೋರಾಟದ ಗುಟ್ಟನ್ನರಿತು ಅವರು ದಣಿದು ಕೆಳಗಿಟ್ಟ ಸ್ವಾತಂತ್ರ್ಯ ಪತಾಕೆಯನ್ನು ಮೇಲಕ್ಕೆತ್ತಿ ಭರತಖಂಡದ ಸ್ವಾತಂತ್ರ್ಯ ಸಂಗ್ರಾಮದ ರಣಭೇರಿಯನ್ನು ನವಶಕ್ತಿಯಿಂದ ಬಾರಿಸಿ, ಆ ಸಂಗ್ರಾಮವನ್ನು ೧೮೧೮ರ ವರೆಗೂ ಸಾಗಿಸುವಂತೆ ಮರಾಟರಲ್ಲಿ ಸಾಮರ್ಥ್ಯವನ್ನು ತುಂಬಿದನು. ಮರಾಟರು ದಣಿದೊಡನೆ ಉತ್ತರ ದೇಶೀಯರು ತಮ್ಮ ಉತ್ತರ

ದಾಯಿತ್ವವನ್ನು ತಿಳಿದು, ೧೫೬೫ರ ಸಮಾರಕ್ಕೆ ರಣದಲ್ಲಿ ಳಿದರು. ಆದರೆ ದುರ್ದೈವದಿಂದ ಅವರ ಪ್ರಯತ್ನಕ್ಕೆ ಯಶದೊರೆಯಲಿಲ್ಲ. ಇಡೀ ದೇಶವು ಶೃಂಖಲಾಬದ್ಧವಾಯಿತು. ೧೮೮೫ರಲ್ಲಿ ರಾಷ್ಟ್ರೀಯ ಸಭೆಯು ಸ್ಥಾಪನವಾಗಿ ಕೆಳಗಿಟ್ಟ ಪತಾಕೆಯು ಪುನರಪಿ ಮೇಲಕ್ಕೆತ್ತಲ್ಪಟ್ಟು ರಾಷ್ಟ್ರವು ಪುತ್ತೆ ಹೋರಾಟಕ್ಕೆ ಅಣಿಯಾಯಿತು.

ಹೀಗೆ ೧೦೦೧ರಲ್ಲಿ ಘಿಜನೀ ಮಹಮ್ಮದನ ಅಭಿಯೋಗದಿಂದ ಆರಂಭವಾಗಿ ಇದುವರೆಗೂ ಅವ್ಯಾಹತವಾಗಿ ನಡೆದ ಭರತಖಂಡದ ಸ್ವಾತಂತ್ರ್ಯದ ಮಹಾಯುದ್ಧವಿದು. ಈ ಸುದೀರ್ಘವಾದ ಹೋರಾಟಗಲ್ಲಿ ವಿಜಯನಗರದ ಕನ್ನಡ ಸಾಮ್ರಾಜ್ಯವು ೨೫೦ ವರ್ಷ ಅವಿರತವಾಗಿ ಹೋರಾಡಿ ಭಾರತೀಯರ ಭಾರತೀಯತ್ವವನ್ನು ಸಂರಕ್ಷಿಸಿತು. ಇದರ ಮೇಲಿಂದ ವಿಜಯನಗರದ ಸಾಮ್ರಾಜ್ಯಕ್ಕೆ ಭರತಖಂಡದ ಇತಿಹಾಸದಲ್ಲಿ ಎಂಥ ಮಹತ್ವದ ಸ್ಥಾನವಿದೆಂಬುದು ಸ್ಪಷ್ಟವಾಗುವದು. ವೈದಿಕ ಧರ್ಮವನ್ನುಳಿಸಿದವರು ವಿಜಯನಗರದವರು. ಭರತಖಂಡದ ಸ್ವಾತಂತ್ರ್ಯವನ್ನು ರಕ್ಷಿಸಿದವರು ವಿಜಯನಗರದವರು. ಅಂತೆಯೇ ಭರತಖಂಡದ ಇತಿಹಾಸದಲ್ಲಿ ಅವರ ಸ್ಥಾನವು ನಿಃಸಂದಿಗ್ಧವಾಗಿದೆ.

ವಿಜಯನಗರದ ಸಾಮ್ರಾಜ್ಯವು ಸ್ಥಾಪನವಾದಂದಿನಿಂದ ಭರತಖಂಡದಲ್ಲಿ ಹೊಸಮನ್ವಂತರವೇ ಆರಂಭವಾಯಿತೆನ್ನಬಹುದು. ಸಮಯೋಚಿತವಾಗಿ, ಸ್ವತ್ವವನ್ನು ಕಾಯ್ದುಕೊಂಡು, ಸಂಸ್ಕೃತಿಯಲ್ಲಿಯೂ ನೀತಿಯಲ್ಲಿಯೂ, ಸಮಾಜವ್ಯವಸ್ಥೆಯಲ್ಲಿಯೂ, ಧರ್ಮದಲ್ಲಿಯೂ, ರಾಜಕಾರಣದಲ್ಲಿಯೂ ಭರತಖಂಡವು ನವನವೀನವಾಗಿ ಪ್ರಾಪ್ತವಾದ ನವತಾರುಣ್ಯದ ಹೊಸಹುರುಪಿನಿಂದ ಹೋರಾಡಲು ಅಣಿಯಾದುದರಿಂದಲೇ ಸ್ವಾತಂತ್ರ್ಯದ ಸಂಗ್ರಾಮವನ್ನು ೨೫೦ ವರ್ಷಗಳವರೆಗೆ ನಡೆಯಿಸಲು ಶಕ್ಯವಾಯಿತು. ಒಳಜಗಳಗಳನ್ನು ಬದಿಗಿಟ್ಟು, ಜಾತಿ ಜಾತಿಗಳೊಳಗಿನ ದುರಭಿಮಾನಗಳನ್ನು ತ್ಯಜಿಸಿ, ಸ್ವಾರ್ಥವನ್ನು ಒದ್ದು, ಹಿಂದೂಸಮಾಜವೆಲ್ಲವೂ ರಾಷ್ಟ್ರ ರಕ್ಷಣೆಗಾಗಿ ಒಮ್ಮನಸಿನಿಂದ ಒಂದಾಗಿ ಸುಸಂಘಟಿತ ಪ್ರತೀಕಾರವನ್ನು ಮಾಡಿದ್ದು ಇದೇ ಮೊದಲು. ಪ್ರಸಂಗವು ಅತ್ಯಂತ ಗಂಭೀರವಾಗಿತ್ತು. ಹಿಂದು ಸಮಾಜದ ವಿವಿಧಾಂಗಗಳನ್ನು ಒಟ್ಟುಗೂಡಿಸಿ, ಒಮ್ಮೊಗದಿಂದ ಪ್ರತೀಕಾರವನ್ನು ಮಾಡಿದಾಗಲೇ ಬಂದೊದಗಿದ ಆಪತ್ತು ದೂರಾಗಬಹುದಾಗಿತ್ತು. ಸಂಘಶಕ್ತಿಯು ಬೇಕಾಗಿತ್ತು. ಅದಕ್ಕಾಗಿ ಒಂದು ಬಲಾಢ್ಯವಾದ ಮಧ್ಯವರ್ತಿ ಸತ್ತೆಯು ನಿರ್ಮಿಸಲ್ಪಡಬೇಕಾಗಿತ್ತು. ವಿದ್ಯಾರಣ್ಯನು, ಹುಕ್ಕನು, ಬುಕ್ಕನು ಈ ಕಠಿಣವಾದ ಕಾರ್ಯವನ್ನು ಮಾಡಿತೋರಿಸಿದರು. ವಿಜಯನಗರ ಸಾಮ್ರಾಜ್ಯವು ಹಿಂದೀ ರಾಷ್ಟ್ರಕ್ಕೆ ಬಿಟ್ಟು ಹೋದ ದಾಯವಿದು. ವಿಜಯನಗರದವರ ಕಾಲದಲ್ಲಿ ರಾಷ್ಟ್ರವು ನಖಶಿಖಾಂತ ಚೈತನ್ಯದಿಂದಲೂ, ಜೀವನಸಾಮರ್ಥ್ಯದಿಂದಲೂ, ತುಂಬಿತುಳುಕುತ್ತಲಿತ್ತು. ಈ ಕಾಲದಲ್ಲಿ ಮಹಾಯೋದ್ಧರು ನಿರ್ಮಾಣರಾದರಷ್ಟೇ ಅಲ್ಲ; ಮಹ ತತ್ವಜ್ಞಾನಿಗಳೂ, ರಾಜಕಾರಣಿಗಳೂ, ಕವಿಗಳೂ ಕಲಾಕೋವಿದರನೇಕರೂ ಇದೇ ಕಾಲದಲ್ಲಿ ಆಗಿಹೋದರು.

ಏವಂಚ ವಿಜಯನಗರದ ಸಾಮ್ರಾಜ್ಯದ ಇತಿಹಾಸವು ಭರತಖಂಡದ ಇತಿಹಾಸಕ್ಕೆ ನಿಗಡಿತವಾಗಿ ಅದರ ಒಂದು ಅತ್ಯಂತ ಮಹತ್ವದ ಅಂಗವಾಗಿದೆ. ಅದನ್ನುಳಿದರೆ ಭರತಖಂಡದ ಇತಿಹಾಸಕ್ಕೆ ಪೂರ್ಣತೆಯಿಲ್ಲ.

“ ಜಯ ಭುವನೇಶ್ವರಿ ”

---




ಕರ್ನಾಟಕ ಶಿಲ್ಪಕಲೆಯ ಮಾದರಿಗಳು.

# ವಿಜಯನಗರದ ದೇವಸ್ಥಾನಗಳ ಶಿಲ್ಪಕಲೆಯ ವೈಶಿಷ್ಟ್ಯ.

[ ಲೇಖಕರು:—ಶ್ರೀ. ಆರ್. ಎಸ್, ಸಾಲೆತೊರ, ಎಂ. ಎ. ಮುಂಬಯಿ. ]

ಹಿಂದುಸ್ಥಾನದ ಕಲಾಕೌಶಲ್ಯವನ್ನು ಕುರಿತು ಬರೆದ ಲೇಖಕರು ವಿಜಯನಗರದಸಾಮ್ರಾಜ್ಯ ಕಾಲದ ಶಿಲ್ಪಕಲೆಯನ್ನು ಕುರಿತು ಸರಿಯಾದ ರೀತಿಯಲ್ಲಿ ಅರಿತುಕೊಂಡು ಬರೆದಿರುವದಿಲ್ಲ. ಡಾ. ಎ. ಕೆ. ಕುಮಾರಸ್ವಾಮಿ, ಮಿ. ಈ. ಬ. ಹಾವೆಲ್ಲ ಮುಂತಾದ ಕಲಾಚಿಕಿತ್ಸಕರು ತಮ್ಮ ತಮ್ಮ ಪುಸ್ತಕಗಳಲ್ಲಿ ಮಧ್ಯಯುಗದ ಆ ವಿಶಿಷ್ಟ ಪದ್ಧತಿಯ ಶಿಲ್ಪಕಲೆಗೆ ಸರಿಯಾದ ಮಹತ್ವವನ್ನು ಕೊಟ್ಟಿಲ್ಲ. ಆ ಶಿಲ್ಪಕಲೆಯ ವಿಶಿಷ್ಟಪದ್ಧತಿಯ ಅರ್ಥವೇ ಅವರಿಗೆ ಆಗಿಲ್ಲವೆಂದು ಹೇಳಬಹುದು. ಡಾ. ಫ್ಹಿನ್ಸೆಂಟಸ್ಮಿಥ್‌ರು ಅದು ತೀರ ಪ್ರಾದೇಶಿಕವಾಗಿರುವದೆಂದು ಹೇಳಿದರೆ ಅನಂತಾಳ್ವಾರ್ ಮತ್ತು ರೀ ಎಂಬವರು ವಿಜಯನಗರದ ಶಿಲ್ಪಕಲೆಯು ಬೊಟ್ಟುಮಾಡಿ ತೋರಿಸುವಷ್ಟು ವೈಶಿಷ್ಟ್ಯವುಳ್ಳದ್ದಿಲ್ಲವೆಂದು ಹೇಳುವ ಸಾಹಸ ಮಾಡಿದ್ದಾರೆ. (1) ಈ ಅವರ ಅಭಿಪ್ರಾಯಗಳಿಗೆ ಯಾವತರದ ಆಧಾರಗಳೂ ದೊರೆಯಲಾರವು.

ವಿಜಯನಗರದ ಅರಸರು ಪೋಷಿಸಿ ಅಭಿವೃದ್ಧಿಸಿದ ಆ ಪದ್ಧತಿಯ ಅವಶೇಷಗಳನ್ನು ಇನ್ನೂ ದಕ್ಷಿಣ ಹಿಂದುಸ್ಥಾನದಲ್ಲಿ ಅಲ್ಲಲ್ಲಿ ಕಾಣಬಹುದು. ಆದರ ವೈಶಿಷ್ಟ್ಯವು ಒಡೆದು ಕಾಣುವಂತಹದು ಅದರ ಅಭ್ಯಾಸ ಮಾಡುವವನಿಗೆ ಅದು ಚೋಳ, ಚಾಲುಕ್ಯ, ಪಲ್ಲವ, ಪಾಂಡ್ಯ, ಕದಂಬ ಮತ್ತು ಹೊಯ್ಸಳರ ಪದ್ಧತಿಗೆ ಯಾವ ರೀತಿಯಿಂದ ಭಿನ್ನವಾಗಿರುವದೆಂಬುದು ಸಹಜವಾಗಿ ತಿಳಿದುಬರುವಂತಿದೆ.

ಇನ್ನು ಆ ಪದ್ಧತಿಯು ಆದಕ್ಕೂ ಪೂರ್ವದಲ್ಲಿ ಪ್ರಚಲಿತವಿರುವ ಯಾವ ಪದ್ಧತಿಯನ್ನು, ವಿಶೇಷತಃ ಹೊಯ್ಸಳ ಪದ್ಧತಿಯನ್ನು ಎಷ್ಟರ ಮಟ್ಟಿಗೆ ಹೋಲುತ್ತದೆಂಬುದೂ ಒಂದು ಪ್ರಶ್ನೆ. ಯಾಕೆಂದರೆ ವಿಜಯನಗರದ ಸಂಸ್ಥಾಪಕರು ಹೊಯ್ಸಳ ನಾಡಿನಲ್ಲಿ ವಾಸಿಸುವ ಕರ್ನಾಟಕಕುಲವೊಂದರಿಂದ ಬಂದವರೆಂದು ಐತಿಹಾಸಿಕ ಸಂಗತಿಗಳಿಂದ ಸಿದ್ಧವಾಗುತ್ತದೆ. ಅವರು ಹೊಯ್ಸಳರ ಪರಂಪರೆಗಳನ್ನು ಕಾದುಕೊಂಡು ಬಂದರು; ಹೊಯ್ಸಳರ ಅಧಿಕಾರಿಗಳನ್ನೇ ಉಳಿಯಗೊಟ್ಟರು; ಹೊಯ್ಸಳರ ಜನ್ಮಸ್ಥಳವಾದ ಸೊಸೆವೂರನ್ನು ಬಿಟ್ಟುಕೊಡಲಿಕ್ಕೆ ಮನಸ್ಸುಳ್ಳವರಾಗಿರಲಿಲ್ಲವೆಂದೂ ತಿಳಿದು ಬರುತ್ತದೆ. (2) ಆದರೂ ವಿಜಯನಗರದರಾಯರು ದೇವಸ್ಥಾನಗಳನ್ನು ಕಟ್ಟುವ ಪದ್ಧತಿಯನ್ನು ಹೊಯ್ಸಳರಿಂದ ಎತ್ತಲಿಲ್ಲ. ದಕ್ಷಿಣದೊಳಗಿನ ಮತ್ತಾವ ಮನೆತನದವರಿಂದಂತೂ ಇಲ್ಲವೇಇಲ್ಲ.

ಇಷ್ಟೊಂದು ಮಾತು ಲಕ್ಷದಲ್ಲಿಟ್ಟರೆ ವಿಜಯನಗರದ ಸಾಮ್ರಾಜ್ಯಕಾಲದ ಶಿಲ್ಪಕಲೆಯು ಒಂದು ಹೊಸ ಪದ್ಧತಿಯುದೇ ಆಗಿತ್ತೆಂದು ತಿಳಿಯಬಹುದು. ಆದರೆ ಅದು ಸಂಗ್ರಾಹಕವೂ ಆಗಿತ್ತು. ಹಳೆಯ ಯಾವುದೇ ಪದ್ಧತಿಗಿಂತ ಭಿನ್ನವಾಗಿತ್ತೆಂದು ಅದು ಹೊಸತು. ಮತ್ತು ಆಗ ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಲಿತವಿರುವ ಪ್ರಸಿದ್ಧ ಪದ್ಧತಿಗಳೊಳಗಿನ ಮಹತ್ವದ ಭಾಗಗಳನ್ನು ಒಳಗೊಂಡಿತ್ತೆಂದು ಅದು ಸಂಗ್ರಾಹಕವಾಗಿತ್ತೆಂದೂ ಹೇಳಬಹುದು.

ವಿಜಯನಗರದ ರಾಯರು ಪ್ರಸಿದ್ಧವಾದ ರಾಜಧಾನಿಯನ್ನು ನಿರ್ಮಿಸಿ, ಅಲ್ಲಿ ಅನೇಕ ಕಲಾಕೋವಿದರಿಗೆ ಆಶ್ರಯವಿತ್ತುದರಿಂದ ಒಂದು ನವೀನವಾದ ಹೊಸ ಪದ್ಧತಿಯ ನಿರ್ಮಿತಿಯು ತಿಳಿಯದಲೇ ಆಗಿರಬಹುದು. ಅವರ ಆಶ್ರಯದಲ್ಲಿ ದಕ್ಷಿಣ ಹಿಂದುಸ್ಥಾನದೊಳಗಿನ ಬೇರೆ ಬೇರೆ ದೂರವಿರುವ ದೇಶಗಳಿಂದ ನಿಷ್ಣಾತ ಶಿಲ್ಪಜ್ಞರು ಬಂದು ನೆಲಿಸಿದ್ದರಿಂದ ಒಂದು ಹೊಸತರದ ಕಟ್ಟಡ ನಿರ್ಮಾಣದ ಪದ್ಧತಿಗ ಅವಕಾಶವು ದೊರೆಯಿತು. ಯಾವ ಯಾವ ದೇಶದಿಂದ ನಿಷ್ಣಾತ ಶಿಲ್ಪಜ್ಞರು ಬಂದಿದ್ದರೆಂಬುದು ಹೇಳಲಿಕ್ಕೆ ಸದ್ಯಕ್ಕೆ ಬಾರದಂತಿದ್ದರೂ, ವಿಜಯನಗರದ ರಾಯರು ಕಲಾಕೋವಿದರಿಗೆ ಉದಾರ ಆಶ್ರಯವನ್ನೀಯುತ್ತಿದ್ದರೆಂಬುದು ನಿರ್ವಿವಾದ ವಿಷಯ. ಹೀಗಾಗಿ ರಾಜ

---

( 1 ) Anantalwar Rea- Indian Architecture III, Part II, P. 240.

( 2 ) Cf Saletore, social and political life in the Vijayanagar Empere I pp.33 39.

ಧಾನಿಯಾದ ಮುಖ್ಯ ಪಟ್ಟಣದಲ್ಲಿ ಯಾವ ತರದ ಕಟ್ಟಡಗಳು ದೊರೆಗಳಿಂದ ಕಟ್ಟಿಸಲ್ಪಡುತ್ತಿದ್ದುವೋ ಅಂಥವೇ ಕಟ್ಟಡಗಳು ಅವರ ಮಾಂಡಲೀಕರಿಂದ, ಸರದಾರರಿಂದ ಸಾಮಾನ್ಯ ಪ್ರಜಗಳಿಂದಲೂ ಕೂಡ ಅಲ್ಲಲ್ಲಿ ಕಟ್ಟಲ್ಪಡುತ್ತಿದ್ದಲ್ಲಿ ಆಶ್ಚರ್ಯವೇನು? ವಿಜಯನಗರದ ಅರಸರು ದಕ್ಷಿಣದಲ್ಲಿ ಒಂದು ಹೊಸ ನಮೂನೆಯ ಶಿಲ್ಪವನ್ನು ನಿರ್ಮಿಸಲಿಕ್ಕೆ ಹವಣಿಸಿದರೆಂದು ಹೇಳಬಹುದು. ಹೊಯ್ಸಳರಂತೆ ಅವರು ನಕ್ಷತ್ರಾಕಾರದ ದೇವಸ್ಥಾನಗಳನ್ನು ಕಟ್ಟಿಸಲಿಲ್ಲ. ಅದರಂತೆಗುಂಪುಗುಂಪಾಗಿ ಒತ್ತಟ್ಟಿಗೆ ದೇವಸ್ಥಾನಗಳನ್ನು ಕಟ್ಟಿಸವ ಹೊಯ್ಸಳರ ಪದ್ಧತಿಯನ್ನೂ ಅವರು ಅನುಕರಿಸಲಿಲ್ಲ. [3]

ವಿಜಯನಗರದೊಳಗಿನ ಸಂಣದಾದ ವಿಷ್ಣುವಾದ ದೇವಸ್ಥಾನವನ್ನೂ ನೋಡಬಹುದು ವಿಜಯನಗರದವರು ಮೊದಲು ಮೊದಲು ಕಟ್ಟಿಸಿದ ದೇವಸ್ಥಾನಗಳಲ್ಲಿ ಅದೊಂದು ಅದನ್ನವಲೋಕಿಸಿದರೆ ಮೇಲಿನ ಅಭಿಪ್ರಾಯಕ್ಕೆ ಪುಷ್ಟಿಯು ದೊರೆಯುತ್ತದೆ.

ರಾಜಧಾನಿಯಲ್ಲಿರುವ ಝೆನಾನಾ (ರಾಣಿವಾಸ) ದ ದಕ್ಷಿಣಕ್ಕಿರುವ ರಂಗನಾಥ ದೇವಸ್ಥಾನದಂತೆ ಅದು ಚಚ್ಚೌಕಾಗಿರುವದು,ಅದರಲ್ಲಿ ಮಾತಂಗ ಪರ್ವತದಲ್ಲಿರುವ ದೇವಸ್ಥಾನಗಳಲ್ಲಿದ್ದಂತೆ ಚಚ್ಚೌಕಾದ ಮಂಟಪಗಳಿರುವವು. ೧ನೆಯ ಬುಕ್ಕರಾಯನ ಕಾಲದಿಂದೀಚೆಗೆ ಮಾತಂಗ ಪರ್ವತವು ಪುಣ್ಯಕ್ಷೇತ್ರವಾಗಿ ಪರಿಗಣಿಸಲ್ಪಡಹತ್ತಿತು. ಅಂತೆಯೇ ಅಲ್ಲಿ ದೇವಸ್ಥಾನಗಳು ಮಂಟಪಗಳು ಕಟ್ಟಲಾದುವು. [4]

ಸಾಸಿವೆ ಕಾಳುಮಂಡಪದಂತೆ ಈ ಚಿಕ್ಕಮಂಡಪವು ಸದ್ದು ಮುದ್ದಾಗಿ, ಕೆಲಸು ಬರಕಾಗಿ ತೋರಿದರೂ ವಿಜಯನಗರದ ಕಾಲದ ದೇವಸ್ಥಾನ ಕಟ್ಟಡದ ಮೊದಲಿನ ಮಾದರಿಯುಂದೇ ಹೇಳಬಹುದು. ಅದರಿಂದ ಮುಂದೆ ದೇವಸ್ಥಾನದ ಕಟ್ಟಡದ ಕಲ್ಪನೆಯು ಹಬ್ಬಿತು. ಈ ಚಚ್ಚೌಕಾದ ಕಟ್ಟಡದ ಸುತ್ತಲೂ ಪ್ರದಕ್ಷಿಣೆಯ ಭಾಗವು ಜೋಡಿಸಲ್ಪಟ್ಟಿತು. ಪ್ರಸನ್ನ ವಿರೂಪಾಕ್ಷನ ದೇವಸ್ಥಾನದಲ್ಲಿ, ಅದರಂತೆ ಸುಪ್ರಸಿದ್ಧ ವಿಟ್ಠಲಸ್ವಾಮಿ ದೇವಾಲಯದಲ್ಲಿ ಅದನ್ನು ಚೆನ್ನಾಗಿ ಕಾಣಬಹುದು. ಹೀಗೆ ಪ್ರದಕ್ಷಿಣೆಗಾಗಿ ಪ್ರಾಕಾರವನ್ನು ಕಾಯುವದನ್ನು ಪಲ್ಲವ ಮತ್ತು ಚಾಲುಕ್ಯರ ದೇವಸ್ಥಾನಗಳಲ್ಲಿ ಕಾಣಬಹುದು. ಆದರೆ ಹೊಯ್ಸಳ ಪದ್ಧತಿಯ ದೇವಾಲಯಗಳಲ್ಲಿ ಅದು ಕಂಡುಬರುವದಿಲ್ಲ.

ಪ್ರದಕ್ಷಿಣೆಯನ್ನು ಕಾಯುವಲ್ಲಿಯೂ ಬರಬರುತ್ತ ಬದಲಾವಣೆಗಳಾದವು ವಿಟ್ಠಲ ಸ್ವಾಮಿಯ ಗುಡಿಯಲ್ಲಿ ಕಂಡುಬರುವಂತೆ ಶುಕನಾಸಿ ಮತ್ತು ಗರ್ಭಗುಡಿಯಕಿಂತಲೂ ಸ್ವಲ್ಪ ಕೆಳಗಿನ ಥರದಲ್ಲಿಯೇ ಪ್ರದಕ್ಷಿಣೆಯು ಇರಿಸಲ್ಪಟ್ಟಿತು. ಅಂದರೆ ಪ್ರದಕ್ಷಣೆಯ ಭಾಗದಕಿಂತಲೂ ಸ್ವಲ್ಪ ಎತ್ತರದಮೇಲೆ ಶುಕನಾಶಿ ಹಾಗು ಗರ್ಭಗುಡಿಯ ಭಾಗಗಳಿದ್ದವು. ಕೆಲವೊಂದುಕಡೆ ಪ್ರದಕ್ಷಿಣೆಯ ಭಾಗವು, ಬೇರೆ ದೇವತೆಗಳ ಗುಡಿಗಳೂ ಅದರಲ್ಲಿ ಸಮಾವಿಷ್ಟವಾಗುವಂತೆ ವಿಸ್ತಾರವುಳ್ಳದ್ದಾಗಿರುವದು ವಿಟ್ಠಲ ಸ್ವಾಮಿಯ ಗುಡಿಯ ಪ್ರದಕ್ಷಿಣಾ ಪ್ರಾಕಾರದಲ್ಲಿರುವ ಸುಂದರವಾದ ಕಲ್ಲಿನ ರಥವನ್ನು ನೋಡಬಹುದು. ಅದು ಬೇರೊಂದು ಗುಡಿಯೇ ಆಗಿದೆ ಇದೇ ಪದ್ಧತಿಯನ್ನು ವಿಜಯನಗರದ ಅರಸರ ಮಾಂಡಲೀಕರಾದರೂ ತಮ್ಮ ತಮ್ಮ ಪ್ರಾಂತದಲ್ಲಿ ಅನುಸರಿಸಿದರು ಮಧುರೆಯಲ್ಲಿ ತಿರುಮಲ ನಾಯಕನಿಂದಕಟ್ಟಲ್ಪಟ್ಟ ಶ್ರೀ ಸುಂದರೇಶ್ವರ ದೇವಾಲಯದಲ್ಲಿ ಎರಡು ಸಣ್ಣ ಗುಡಿಗಳುಂಟು. ಒಂದು,ದೊಡ್ಡ ದೇವಾಲಯದ ಎದುರಿಗೆ,ಮತ್ತೊಂದು,ಅದರ ಎಡಕ್ಕೆ. [5] ಈ ದೇವಸ್ಥಾನದ ಪ್ರದಕ್ಷಿಣೆಯ ಭಾಗವು ಆಚ್ಛಾದಿಸಲ್ಪಟ್ಟಂತೆಯೂ ಕಂಡುಬರುವದು. ಕೊನೆಯ ರಾಜಧಾನಿಗಳಲ್ಲೊಂದಾದ ಪೆನಗೊಂಡೆಯ ರಾಮಸ್ವಾಮಿ ದೇವಾಲಯದಲ್ಲೂ ಇದರಂತೆಯೇ ಇದೆ. ಬರಬರುತ್ತ ಪ್ರದಕ್ಷಿಣೆಯ ಸುತ್ತಲೂ, ಪ್ರಾಕಾರಗಳು, ಶುಕನಾಸಿ ಹಾಗೂ ನವರಂಗಗಳೂ ನಿರ್ಮಿಸಲಾದವು ಕೆಲವು ಕಡೆಗೆ ವಿಜಯನಗರದ ಕೃಷ್ಣನ ಗುಡಿಗಿದ್ದಂತೆ, ಗರ್ಭಗೃಹ, ಶುಕನಾಸಿ ಮತ್ತು ನವರಂಗಗಳಷ್ಟೇ ಇರುವವು. ಆದರೆ ಅಚ್ಯುತರಾಯನ ದೇವಸ್ಥಾನದ ಕಟ್ಟಡವನ್ನು ನೋಡಿದರೆ, ಅದರಲ್ಲಿ ಕೆಲವು ಹೊಸಮಾರ್ಪಾಟುಗಳನ್ನು ಮಾಡಿದಂತೆ ಕಂಡುಬರುತ್ತದೆ. ವಿಜಯನಗರದೊಳಗಿನ ಈ ಗುಡಿಗೆ ಎರಡು ಪ್ರಾಕಾರಗಳಿರುವವು.

---

(3) Narasiuhacharya, Architecture Sculpture in Mysore I plate 1.

(4) E. C. 5 P. P. 256 (5) Fergusson and Burgess, History of Indian and Eastern Architecture I, P. 391 Fig 229.

ಮೊದಲನೆಯ ಪ್ರಾಕಾರಕ್ಕೆ ಹೋಗಬೇಕಾದರೆಒಂದು ಮಹಾದ್ವಾರವು ಹತ್ತುವದು. ಆ ದ್ವಾರದ ಮೇಲೆ ಒಂದು ಭವ್ಯವಾದ ಗೋಪುರವಿರುವದು. ಆ ಗೋಪುರವು ಗರ್ಭಗೃಹದ ಮೇಲಿನ ವಿಮಾನಕ್ಕಿಂತಲೂ ಬಲು ಎತ್ತರವೂ ಭವ್ಯವೂ ಆಗಿರುವದು. ದಕ್ಷಿಣ ದ್ವಾರದ ಮೇಲಿರುವ ಗೋಪುರವು ಸ್ವಲ್ಪ ಸಂಣದಾಗಿರುವದು. ವಿಜಯನಗರದ ದೇವಸ್ಥಾನಗಳಿಗೆ ನಾಲ್ಕು ನಿಟ್ಟಿನಿಂದ ಪ್ರವೇಶ ದಾರಿಗಳಿರುವವು. ಎರಡನೆಯ ಪ್ರಾಕಾರದೊಳಗೆ ಹೋಗಬೇಕಾದರೆ ಗರ್ಭಗೃಹದ ಹಿಂಬದಿಯ ನಿಟ್ಟನ್ನು ಬಿಟ್ಟು ಉಳಿದ ನಿಟ್ಟುಗಳಿಂದ ಪ್ರವೇಶದ್ವಾರಗಳಿರುವವು. ಒಟ್ಟಾರೆ ವಿಜಯನಗರದ ದೇವಸ್ಥಾನವೆಂದರೆ, ಮೊದಲಿನ ಮಹಾದ್ವಾರದ ಮೇಲೆ ಭವ್ಯ ಹಾಗೂ ಎತ್ತರವಾದ ಗೋಪುರ, ಗರ್ಭಗೃಹ, ಶುಕನಾಸಿ, ನವರಂಗ ಮತ್ತುಅರ್ಧಮಂಡಪ. ಎಲ್ಲವುಗಳ ಮೆಲೂ ಆಚ್ಛಾದನ. ಚೋಳಪದ್ಧತಿಗೂ ವಿಜಯನಗರದ ಪದ್ಧತಿಗೂ ಇರುವ ವೈಶಿಷ್ಟ ವೆಂದರೆ ವಿಜಯನಗರದ ದೇವಸ್ಥಾನಗಳಲ್ಲಿ ಗರ್ಭಗೃಹದ ವಿಮಾನವು ಸಣ್ಣದಾಗಿದ್ದು ಮಹಾದ್ವಾರದ ಮೇಲೆ ಭವ್ಯವಾದ ಗೋಪುರ ವಿರುವುವು.

ಈ ರೀತಿ ನೆಲಗಟ್ಟು ಸಿದ್ಧವಾದಮೇಲೆ ಕಟ್ಟಡವು ಮೆಟ್ಟು ಮೆಟ್ಟಲಾಗಿ ಏರಿಸಲ್ಪಟ್ಟಿತು. ಎಲ್ಲಕ್ಕೂ ಕೆಳಗೆ ಪೋರ್ತುಗೀಜರು ತಮ್ಮ ಕುದುರೆಗಳನ್ನು ಮಾರಲಿಕ್ಕೆತಂದವರಂತೆದೃಶ್ಯಗಳನ್ನುಚಿತ್ರಿಸಲಾಗಿತ್ತು. ಈ ಕೆತ್ತಿಗೆಯಿಂದ ದಕ್ಷಿಣ ಹಿಂದುಸ್ಥಾನದ ಕೆತ್ತಿಗೆಯಲ್ಲಿ ಬಂದು ಹೊಸಪದ್ಧತಿಯೇ ಬಂದು ಬಿಟ್ಟಿತು. ಇದರಿಂದ ವಿಜಯನಗರದವರ ಸಹಿಷ್ಣುತೆಯೂ ವ್ಯಕ್ತವಾಗುತ್ತದೆ. ಅದರ ಮೇಲ್ಭಾಗದಲ್ಲಿ ದ್ರಾಕ್ಷದ ಬಳ್ಳಿ ಇಲ್ಲವೆ ಗಿಳಿಗಳ ಸಾಲು ಕೆತ್ತಲ್ಪಡುತ್ತಿದ್ದವು ಹಳೇಬೀಡಿನಲ್ಲಿ ಕಂಡುಬರುವ ಹೊಯ್ಸಳ ಪದ್ಧತಿಯಲ್ಲಿ ಕುದುರೆಗಳನ್ನೇರಿದ ರಾವುತರ ಚಿತ್ರಗಳು ತೆಗೆಯಲ್ಪಡುತ್ತಿದ್ದವು. ಇದಷ್ಟು ವ್ಯತ್ಯಾಸ. ಚೈತನ್ಯದ ದ್ಯೋತಕವಾದ ಕಮಲದ ಕೆತ್ತಿಗೆಯು ಅದರ ಮೇಲ್ಭಾಗದಲ್ಲಿ; ಅದಕ್ಕೂ ಮೇಲೆ ಸ್ವಲ್ಪ ಸ್ಥಳ ಬಿಟ್ಟು ಬುಡ ಮೇಲಾದ ಕಮಲದ ಕೆತ್ತಿಗೆಯು. ಅದಕ್ಕೆ ವೇದಿಗಾಯಿ ಎಂತಲೂ ಅನ್ನುವರು.

ಈ ರೀತಿಯಾಗಿ ಕೆತ್ತಿಗೆಗಳನ್ನೊಳಗೊಂಡ ಎತ್ತರದ ಗದ್ದುಗೆಯ ಮೇಲೆ ಕಂಬಗಳನ್ನು ನಿಲ್ಲಿಸ ವರು. ಮಾತಂಗ ಪರ್ವತದಲ್ಲಿ ದೊರೆಯುವ, ಮೊದಲು ಮೊದಲಿನ ದೇವಸ್ಥಾನದೊಳಗಿನ ಕಂಬಗಳನ್ನು ನೋಡಿದರೆ ಅವು ತೀರ ಸಾದಾ ಮತ್ತು ಚಚ್ಚೌಕಾಗಿರುವವು. ಆದರೆ ಬರ ಬರುತ್ತ ಕೆತ್ತಿಗೆಯ ಕೆಲಸವು ಕುಸುರಿನದಾಗಹತ್ತಿ ಹೆಚ್ಚಿಗೆ ಸೌಂದರ್ಯ ಯುಕ್ತವಾಗಹತ್ತಿತು. ವಿಜಯನಗರದಲ್ಲಿರುವ ಸಾಸಿವೆಕಾಳು ಗಣೇಶಮಂಡಪದ ಹತ್ತರವಿರುವ ಸಣ್ಣ ವಿಷ್ಣುವಿನ ಗುಡಿಯಲ್ಲಿಯ ಕಂಬಗಳು ಮಧ್ಯದಲ್ಲಿಯೇ ಚಚ್ಚೌಕಾಗಿ ಕಟೆದಂತೆ ತೋರುತ್ತನೆ. ಮುಂದೆ ಬರ ಬರುತ್ತ ಕಡಲೆಕಾಳು ಗಣೇಶನ ಗುಡಿಯಲ್ಲಿಯಂತೆ ಆ ಕಂಬಗಳಮೇಲೆ ಹಾವಿನ ಹೆಡೆಯ ಆಕಾರದ ಕೆತ್ತಿಗೆಗಳೂ ಪ್ರಚಾರದಲ್ಲಿ ಬರಹತ್ತಿದವು. ಅದಕ್ಕೂ ಮುಂದೆ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ವಿಜಯನಗರದ ಸಾಮ್ರಾಜ್ಯವು ಅತ್ಯುನ್ನತ ಶಿಖರವನ್ನು ಮುಟ್ಟಿದಾಗ, ಹಜಾರರಾಮನ ಗುಡಿಯಲ್ಲಿ ಕಾಣಬರುವಂತೆ,ಕಂಬಗಳಿಗೆಸುಂದರವಾದ ಅಶ್ವಪಾದ ಇಲ್ಲವೆ ಗದ್ದುಗೆಗಳೂ ನಿರ್ಮಿಸಲ್ಪಟ್ಟವು. ಕಂಬಗ ತಲೆಯಮೇಲೆ ವಿಸ್ತಾರವಾದ ಅರಳಿದ ಕಮಲಗಳು ಕೆತ್ತಲ್ಪಟ್ಟವು. ವಿಜಯನಗರದ ಶಿಲ್ಪಕಲೆಯ ವೈಶಿಷ್ಟ್ಯದಂತಿರುವ ಈ ಕಮಲವೆಂದರೆ ಅಮರವಾದ ಆತ್ಮಕಮಲದ ಪ್ರತೀಕವೆಂದೇ ಹೇಳಬಹುದು. ಇದರ ಸೊಬಗನ್ನು ಸಂಪೂರ್ಣವಾಗಿ ವೆಲ್ಲೂರದಲ್ಲಿ ಕಲ್ಯಾಣ ಮಂಡಪದಲ್ಲಿ ಕಾಣಬಹುದು.

ಮುಂದೆ ಕೃಷ್ಣದೇವರಾಯ, ಅಚ್ಯುತರಾಯರ ಕಾಲದಲ್ಲಿ ಈ ಕಂಬಗಳ ಆಕಾರವು ಇಮ್ಮಡಿಯಾಯಿತು.ಅದಕ್ಕೂ ಮೊದಲಿನ ಕಾಲದ ಈ ಆಕಾರದ ಕಂಬಗಳು ಸಿಗುವದಿಲ್ಲ ಮೊದಲು ಕಂಬಗಳಮೇಲೆ ಕುದುರೆಗಳ ಮೇಲೆ ಸಾಗಿರುವ ರಾವುತರು, ಇಲ್ಲವೆ ಡೊಳ್ಳು ಬಾರಿಸುವ ಇಲ್ಲವೆ ನರ್ತಕಿಯರ ಆಕೃತಿಗಳು ಇರುತ್ತಿದ್ದವು. ಈ ತರದ ಕಂಬಗಳು ಸುದೈವದಿಂದ ಇನ್ನೂ ವಿಜಯನಗರದಲ್ಲಿ ಅಚ್ಯುತರಾಯನ ಗುಡಿಯಲ್ಲಿ ಉಳಿದಿವೆ. ಮೇಲೆ ಹೇಳಿದ ಅರಳಿದ ಕಮಲದ ಮೇಲೆ ಇಲ್ಲವೆ ಆ ಕಂಬಗಳ ತಲೆಯಮೇಲೆ ಗಚ್ಚಿನ ಛಪ್ಪರವು ನಿಂತಿರುವದು. ಇದಾದರೂ ಬರ ಬರುತ್ತ ಸೌಂದರ್ಯದಲ್ಲಿ ರಾಷ್ಟ್ರಕೂಟರ ಕಾಲದ ಎಲ್ಲೋರಲ್ಲಿಯ ಚಪ್ಪರವನ್ನೂ ಸ್ಪರ್ಧಿಸುವಂತಹದಾಗಿತ್ತು. ತುಟಿಯ ಆಕಾರದಂತಿರುವ ಚಪ್ಪರದ ಮುಂಭಾಗವು ಪರಿಪೂರ್ಣತೆಯನ್ನುಹೊಂದಿದ್ದು ಅದು

ವಿಟ್ಠಲಸ್ವಾಮಿ ದೇವಸ್ಥಾನದಲ್ಲಿ ನೋಡಲು ಸಿಗುವಂತಿದೆ. ವಿಜಯನಗರದ ಶಿಲ್ಪಕಲೆಯ ಪರಮಾವಧಿಯು ಇಲ್ಲಿಗೆ ಆಯಿತು. ಮೇಲ್ಗಚ್ಚಿನ ಛಪ್ಪರದ ಮಧ್ಯದಲ್ಲಿ ಒಳಭಾಗದೊಳಗೆ ಚಿತ್ರವಿಚಿತ್ರವಾದ ಹಂಸ ಮೊದಲಾದವುಗಳ ಕೆತ್ತಿಗೆಗಳಿರುವವು. ಕೆಲ ಕೆಲವು ಕಡೆ ವಿಜಯನಗರದ ಶಿಲ್ಪದಲ್ಲಿ ಪಾಂಡ್ಯಕಾಲದ ನಕ್ಷತ್ರಾಕಾರದ ಕೆತ್ತಿಗೆಗಳೂ ಕಾಣಬರುತ್ತವೆ. ಚಪ್ಪರದ ಇಬ್ಬದಿಗೂ ಮೂರು ರೆಕ್ಕೆಗಳುಳ್ಳ ಒಂದಕ್ಕಿಂತಲೂ ಒಂದು ದೊಡ್ಡದಾದ ಕೆತ್ತಿಗೆಗಳಿದ್ದು ಅವುಗಳಿಗೆ ಉಂಗುರಗಳಂತೆ ಕಲ್ಲಿನ ಬಳೆಗಳು ತೂಗಹಾಕಲ್ಪಟ್ಟಿವೆ. ದೀಪಗಳನ್ನು ಇಳಿಬಿಡುವದಕ್ಕಾಗಿಯೇ ಈ ಏರ್ಪಾಡು ಇದ್ದಿರಬಹುದು. ಬುದ್ಧರ ಚೈತ್ಯಾಲಯಗಳಲ್ಲಿರುವಂತೆ ವಿಜಯನಗರದ ದೇವಸ್ಥಾನಗಳ ಚಪ್ಪರದ ಮೇಲೆ ಕುಡುಗಳು ಇಲ್ಲವೆ ಮಾಡುಗಳು ರಚಿತವಾಗಿದ್ದವು. ಇವುಗಳಲ್ಲಿ ಸಣ್ಣ ಸಣ್ಣ ದೇವತಾ ವಿಗ್ರಹಗಳಿದ್ದವು. ನಮ್ಮ ದುರ್ದೈವದಿಂದ ಅವು ನಾಶ ಮಾಡಲ್ಪಟ್ಟಿವೆ. ವಿಟ್ಠಲಸ್ವಾಮಿಗುಡಿಯಲ್ಲಿ ಅವುಗಳ ಗುರುತು ಸಿಗಬಹುದು ಇದು ಚೋಳರಪದ್ಧತಿ. ತಂಜಾವರದೊಳಗಿನ ದೊಡ್ಡ ದೇವಸ್ಥಾನವನ್ನು ನೋಡಿದರೆ ತಿಳಿದು ಬರುವದು. (6) ಇದೇ ಪದ್ಧತಿಯನ್ನು ಮುಂದೆ ಹಳೇಬಿಡು ಮತ್ತು ದ್ವಾರಸಮುದ್ರದ ಹೊಯ್ಸಳರು ಅನುಸರಿಸಿದರು. ಮಹಾಮಲ್ಲಾಪುರಮ್‌ದೊಳಗಿನ ಭೀಮರಥದಲ್ಲಿ ಇಂಥ ಕುಡು ಇಲ್ಲವೆ ಮಾಡುಗಳಲ್ಲಿ ಎಲ್ಲರಿಗೂ ಪರಿಚಿತವಿರುವ ಮೂರ್ತಿಗಳೇ ಕಾಣುತ್ತಿವೆ.

ಈ ರೀತಿಯಾಗಿ ವಿಜಯನಗರದ ಶಿಲ್ಪಕಲೆಯ ಬೆಳವಣಿಗೆಯ ಇತಿಹಾಸವದೆ. ಭವ್ಯ ಮತ್ತು ಎತ್ತರವಾದ ಗೋಪುರವು. ಮೇಲಣ ವರೆಗೂ ಅಲ್ಲಲ್ಲಿ ನಡುನಡುವೆ ಬಾಗಿಲಗಳಿದ್ದು, ಕೆಲವೆಡೆ ಪಟ್ಟಾಭಿರಾಮನ ಗುಡಿಗಿದ್ದಂತೆ ತೀರ ಕೊನೆಗೆ ಶಿಖರದಲ್ಲಿ ಕೋಡೆಗಳುಳ್ಳ ಸ್ತೂಪವು ಕಲಶದಿಂದ ಶೋಭಿಸುತ್ತಿರುವದು. ಅದು ಗರ್ಭಗ್ರಹದ ಮೇಲಿನ ಸುಂದರ ವಿಮಾನಕ್ಕಿಂತಲೂ ವಿಸ್ತಾರವಾಗಿಯೂ ಅದನ್ನು ಮರೆಸುವಂತಹದೂ ಇರುವದು, ಇಂತಹ ಗೋಪುರಗಳೊಳಗೆ ಹಲವು ನಾಶವಂತವಾದ ಮಣ್ಣುಗಚ್ಚಿನಿಂದ ಕಟ್ಟಲ್ಪಟ್ಟವಾದುದರಿಂದ ಬಿದ್ದು ಹೋಗಿರಬಹುದು. ಆದರೆ ಉಳಿದ ಹಲ ಕೆಲವು ಗೋಪುರಗಳು, ಯಾವ ಶಿಲ್ಪಶಾಸ್ತ್ರದ ಅಭ್ಯಾಸುಕನೂ ಮರೆಯುಕೂಡದಂತೆ ಒಂದು ವಿಶಿಷ್ಟ ಶಿಲ್ಪಕಲೆಯ ಹೆಗ್ಗುರುತಾಗಿ ಅದರ ಹೆಚ್ಚಳದ ಸಾಕ್ಷಿಯಾಗಿ ಇನ್ನೂ ನಿಂತಿವೆ.

---

(6) Dubreuil, Archaelogie D'Sud L'Inde. fig. 45 & plate XXXVI.



# ವಿಜಯನಗರ ಸಾಮ್ರಾಜ್ಯ ಮತ್ತು ಜೈನಧರ್ಮ

( ನ್ಯಾಯಾಚಾರ್ಯ ಕೆ. ಭುಜಬಲಿ ಶಾಸ್ತ್ರಿಗಳು, ಸಂ. " ಜೈನ-ಸಿದ್ಧಾಂತ-ಭಾಸ್ಕರ ", )
ಆರಾ.

ಸನ್ ೧೩೨೭ ರಲ್ಲಿ ಮಹಮ್ಮದ ತಗಲಕನು ಹೊಯ್ಸಳ ರಾಜ್ಯವನ್ನು ಸಮೂಲ ನಾಶಮಾಡಿ ಅದನ್ನು ತನ್ನ ಸಾಮ್ರಾಜ್ಯದಲ್ಲಿ ಸೇರಿಸಿಕೊಂಡನು. ಈ ಘಟನೆಯಿಂದ ದಕ್ಷಿಣ ಭಾರತೀಯ ಬೇರೆ ಬೇರೆ ರಾಜ್ಯಗಳು ಎಚ್ಚತ್ತು ಅವು ಈರ್ವರು ವೀರ ಯೋಧರ ನೇತೃತ್ವದಲ್ಲಿ ಒಂದಾದುವು. ಈ ವೀರ ಯೋಧರು ಕೆಲವು ವರ್ಷಗಳಲ್ಲಿ ಒಂದು ಹೊಸ ರಾಜ್ಯವನ್ನು ಸ್ಥಾಪಿಸಿರುದ. ವಿಜಯನಗರವೇ ಇದರ ರಾಜಧಾನಿಯಾಗಿತ್ತು. ಉಕ್ತ ವೀರರ ಹೆಸರು ಕ್ರಮವಾಗಿ ಹರಿಹರ ಮತ್ತು ಬುಕ್ಕ. ಇವರಿಬ್ಬರೂ ಸಹೋದರರು. ಈ ಸಹೋದರರು ದಕ್ಷಿಣ ಭಾರತದಲ್ಲಿ ಮುಂದರಿಯುತ್ತಿದ್ದ ಮಹಮ್ಮದೀಯ ಪ್ರವಾಹವನ್ನು ತಡೆದರು. ಇದೇ ಸಮಯದಲ್ಲಿ ದಕ್ಷಿಣದಲ್ಲಿ ಮಹಮ್ಮದೀಯರು ಬಹಮನಿ ರಾಜ್ಯವನ್ನು ಸ್ಥಾಪಿಸಿ ಗುಲಬರ್ಗವನ್ನು ಅವರ ರಾಜಧಾನಿಯನ್ನಾಗಿ ಮಾಡಿಕೊಂಡರು. ಆ ಕಾಲದಲ್ಲಿ ದಕ್ಷಿಣದಲ್ಲಿ ಈ ಎರಡೇ ರಾಜ್ಯಗಳು ಪ್ರಧಾನವಾಗಿದ್ದು ಇವು ಸದಾ ಪರಸ್ಪರ ಕಾದಾಡುತ್ತಿದ್ದವು. ಸುಮಾರು ಸನ್ನ ೧೪೮೧ ರಲ್ಲಿ ಬಹಮನಿ ರಾಜ್ಯವು ಬರಾರ, ಗೋಲಕುಂಡ, ಬಿಜಾಪುರ ಮೊದಲಾದ ಐದು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿತು. ವಿಜಯನಗರ ರಾಜರ ಕಲಹವು ಬಿಜಾಪುರದ ಆದಿಲ್‌ಶಾಹಾರೊಡನೆ ನಡಿಯುತ್ತಿತ್ತು. ಪೂರ್ವೋಕ್ತ ಐದೂ ಮಹಮ್ಮದಿ ರಾಜ್ಯಗಳಲ್ಲಿ ಪರಸ್ಪರ ದ್ವೇಷವಿದ್ದುದರಿಂದ ಪ್ರಾಯ: ವಿಜಯನಗರವೇ ಈ ಯುದ್ಧದಲ್ಲಿ ವಿಜಯಿಯಾಗುತ್ತಿತ್ತು. ಕೊನೆಗೆ ಮಹಮ್ಮದೀಯ ರಾಜರು ತಮ್ಮ ತಪ್ಪನ್ನು ತಿಳಕೊಂಡರು. ಅವರು ಒಂದಾಗಿ ಸನ್ ೧೫೬೫ ರಲ್ಲಿ ತಾಳೀಕೋಟೆಯ ಮೈದಾನದಲ್ಲಿ ಒಟ್ಟಾಗಿ ದಕ್ಷಿಣ ಭಾರತದಲ್ಲಿ ಹಿಂದೂ ಸಾಮ್ರಾಜ್ಯದ ಬೇರನ್ನೇ ಕಿತ್ತೊಗೆದರು. ಮಹಮ್ಮದೀಯರು ವಿಜಯನಗರದ ಶಾಸಕನಾದ ರಾಮರಾಯನನ್ನು ಕೊಂದು ಅದರ ಸುಂದರ ರಾಜಧಾನಿಯಾದ ವಿಜಯನಗರವನ್ನೇ ವಿಧ್ವಂಸ ಮಾಡಿಬಿಟ್ಟರು. ಇದು ವಿಜಯನಗರ ಸಾಮ್ರಾಜ್ಯದ ಸಂಕ್ಷಿಪ್ತೇತಿಹಾಸವಾಯಿತು. ಇನ್ನು ಪ್ರಕೃತ ವಿಷಯವನ್ನು ತೆಗೆದುಕೊಳ್ಳೋಣ.

ವಿಜಯನಗರ ರಾಜವಂಶದಲ್ಲಿ ಬುಕ್ಕರಾಯ ಪ್ರಥಮನಿಗೆ ಜೈನಧರ್ಮವು ವಿಶೇಷ ಋಣಿಯಾಗಿದೆ. ಅದು ಅವನ ನಿಃಸೀಮ ಉಪಕಾರವನ್ನು ಎಂದೂ ಮರೆಯಲಾರದು. ಬುಕ್ಕರಾಯ ಪ್ರಥಮನು ತನ್ನ ಶಾಸನ ಕಾಲದಲ್ಲಿ ಜೈನ ವೈಷ್ಣವ ಸಂಪ್ರದಾಯಗಳಲ್ಲುಂಟಾದ ಒಂದು ದೊಡ್ಡ ಅಶಾಂತಿಯನ್ನು ದೂರ ಮಾಡಿ ಶಾಂತಿ ಸ್ಥಾಪಿಸಿ ತನ್ನ ಅಚಲವಾದ ಧಾರ್ಮಿಕ ಪ್ರೇಮವನ್ನು ಪ್ರಪಂಚಕ್ಕೆ ಬಿಚ್ಚಿ ತೋರಿಸಿರುವನು. ಇವನು ಸರ್ವಧರ್ಮ ಸಮದರ್ಶಿಯಾಗಿದ್ದನೆಂಬುದಕ್ಕೆ ಇದೊಂದೇ ಉದಾಹರಣೆಯು ಪರ್ಯಾಪ್ತವಾಗಿದೆ. ಈ ಉಜ್ವಲ ಗುಣವು ಪ್ರತಿಯೊಬ್ಬ ಶಾಸಕನಲ್ಲಿರಬೇಕಾದುದು ಪರಮಾವಶ್ಯಕವಾದರೂ ಎಷ್ಟೋ ಮಂದಿ ಶಾಸಕರು ಅಂಧಭಕ್ತರಾಗಿ ಇದನ್ನು ಮರೆತು ಬಿಟ್ಟಿರುವುದುಂಟು. ಇರಲಿ. ಈ ಮಹತ್ವಪೂರ್ಣವಾದ ಸಂಧಿಯ ವಿವರವು ಈ ಪ್ರಕಾರವಾಗಿದೆ ವೈಷ್ಣವರು ಜೈನರ ಅಧಿಕಾರಗಳಲ್ಲಿ ಸ್ವಲ್ಪ ಹಸ್ತಕ್ಷೇಪ ಮಾಡಿದರು. ಇದಕ್ಕಾಗಿ ಜೈನರು ರಾಜ ( ಬುಕ್ಕ ) ನಲ್ಲಿ ಪ್ರಾರ್ಥಿಸಿಕೊಂಡರು.

ದೊರೆಯು ಜೈನರ ಕೈಯನ್ನು ವೈಷ್ಣವರ ಕೈಯಲ್ಲಿಟ್ಟು ಧಾರ್ಮಿಕ ವಿಷಯದಲ್ಲಿ ಜೈನ ಮತ್ತು ವೈಷ್ಣವರಲ್ಲಿ ಯಾವ ಭೇದವು ಇಲ್ಲವೆಂದೂ, ಜೈನರಿಗೆ ಪೂರ್ವದಂತೆ ಪಂಚಮಹಾವಾದ್ಯ ಮತ್ತು ಕಲಶದ ಅಧಿಕಾರವು ಇದೆಯೆಂದೂ, ಜೈನ ದರ್ಶನದ ವೃದ್ಧಿ ಹ್ರಾಸಗಳನ್ನು ವೈಷ್ಣವರು ತಮ್ಮ ವೃದ್ಧಿಹ್ರಾಸಗಳನ್ನಾಗಿಯೇ ಭಾವಿಸಬೇಕೆಂದೂ, ಶ್ರೀವೈಷ್ಣವರು ಏತತ್ಸಂಬಂಧಿ ಶಾಸನವನ್ನು ರಾಜ್ಯದ ಸಂಪೂರ್ಣ ಬಸ್ತಿಗಳಲ್ಲಿ ಸ್ಥಾಪಿಸಬೇಕೆಂದೂ ಸೂರ್ಯ ಚಂದ್ರರು ಇರುವವರೆಗೂ ವೈಷ್ಣವರು ಜೈನಧರ್ಮದ ರಕ್ಷಣವನ್ನು ಮಾಡುವರೆಂದೂ ಆದೇಶಮಾಡಿದನು. ಈ ವರ್ಣನೆಯು ಶ್ರವಣ ಬೆಳ್ಗೊಳದ ನಂ. ೧೩೬

(೩೪೪)ನೆಯ ಶಕ. ೧೨೯೦ ರ ಶಿಲಾಲೇಖದಲ್ಲಿ ಸ್ಪಷ್ಟವಾಗಿ ಸಿಗುತ್ತದೆ. ಇಷ್ಟೇ ಅಲ್ಲ. ಉಕ್ತಲೇಖದಲ್ಲಿ ಜೈನರ ಪ್ರತಿಯೊಂದು ಮನೆಯಿಂದ ಪ್ರತಿ ವರ್ಷ ಒಂದೊಂದು ಹಣ ಸಂಗ್ರಹಿಸಲ್ಪಟ್ಟು ಅದರಿಂದ ಶ್ರವಣ ಬೆಳ್ಗೊಳದ ದೇವ (ಮೂರ್ತಿ) ರ ರಕ್ಷಣೆ ಗೋಸ್ಕರ ವೈಷ್ಣವ ಅಂಗರಕ್ಷಕರು ಇಡಲ್ಪಡುವರೆಂದೂ ಶೇಷದ್ರವ್ಯವು ದೇವಸ್ಥಾನಗಳ ಜೀರ್ಣೋದ್ಧಾರಾದಿ ಕಾರ್ಯಗಳಲ್ಲಿ ಉಪಯೋಗಿಸಲ್ಪಡುವದೆಂದೂ, ಈ ಶಾಸನವನ್ನು ಉಲ್ಲಂಘಿಸುವವನು ರಾಜ್ಯ ಸಂಘ ಸಮುದಾಯಗಳ ದ್ರೋಹಿಯೆಂದೂ ಬರೆದಿದೆ. ಬುಕ್ಕರಾಯನ ನಿಷ್ಪಕ್ಷಪಾತವಾದ ಈ ಸಂಧಿಕಾರ್ಯದಿಂದ ಅವನು ವೈಷ್ಣವನಾಗಿದ್ದೂ ಸರ್ವಧರ್ಮ ಮತಾವಲಂಬಿಗಳಿಗೂ ಪ್ರಿಯನಾಗಿದ್ದನೆಂದು ನಾವು ಸುಲಭವಾಗಿ ಊಹಿಸ ಬಹುದಾಗಿದೆ. ನಿಜವಾಗಿಯೂ ಅವನೊಬ್ಬ ಆದರ್ಶ ರಾಜನು.

ಸುಮಾರು ಶಕ ೧೩೩೨ನೆಯ ಶ್ರವಣ ಬೆಳ್ಗೊಳಸ್ಥ ನಂ. ೪೨೮ (೩೩೭) ನೆಯ ಶಿಲಾಲೇಖದಿಂದ ದೇವರಾಯ ಮಹಾರಾಯನ ರಾಣಿ ಭೀಮಾದೇವಿಯು ಪಂಡಿತಾಚಾರ್ಯರ ಶಿಷ್ಯಳಾಗಿದ್ದಳೆಂದೂ ಆಕೆಯು ಮಂಗಾಯಿ ಬಸ್ತಿಯಲ್ಲಿ ಶ್ರೀ ಶಾಂತಿನಾಥ ತೀರ್ಥಂಕರರ ಬಿಂಬ ಪ್ರತಿಷ್ಠೆಯನ್ನು ಮಾಡಿಸಿದ್ದಳೆಂದೂ ತಿಳಿದುಬರುತ್ತದೆ ಈ ದೇವರಾಯನು ಪ್ರಾಯಃ ಪ್ರಥಮ ದೇವರಾಯನಾಗಿರಬೇಕು. ಉಕ್ತ ಭೀಮಾದೇವಿಯು ಜೈನ ಧರ್ಮಾವಲಂಬಿಯಾಗಿದ್ದಳೆಂದು ವಿದಿತವಾಗುವುದು. ಶ್ರವಣ ಬೆಳ್ಗೊಳದ ಶಕ. ೧೩೪೪ ನೆಯ ಲೇಖ ನಂ. ೮೨ (೨೫೩) ರಲ್ಲಿ ಹರಿಹರ (ದ್ವಿತೀಯ) ನ ಸೇನಾಪತಿಯಾದ ಇರುಗಪನಿಂದ ಶ್ರವಣ ಬೆಳ್ಗೊಳ ಕ್ಷೇತ್ರದಲ್ಲಿ ಮಾಡಲ್ಪಟ್ಟ ಭೂದಾನಾದಿಗಳು ಉಲ್ಲೇಖಿಸಲ್ಪಟ್ಟಿರುವುವು. ಇರುಗಪನು ದೇವರಾಯ ದ್ವಿತೀಯನ ಕಾಲದಲ್ಲಿಯೂ ಇದ್ದನು. ಇವನು ಸಂಸ್ಕೃತದಲ್ಲಿಯೂ ಪಂಡಿತನು. ಉಕ್ತ ಇರುಗಪನು "ನಾನಾರ್ಥ ರತ್ನಮಾಲಾ" ಎಂಬ ಒಂದು ಸಂಸ್ಕೃತ ಕೋಶವನ್ನು ರಚಿಸಿರುವನು ಮತ್ತು ವಿಜಯನಗರದಲ್ಲಿಯೂ ಕುಂಥುನಾಥ ತೀರ್ಥಂಕರರ ಒಂದು ದೇವಾಲಯವನ್ನು ನಿರ್ಮಾಣಮಾಡಿಸಿರುವನು.

ಹರಿಹರರಾಯ (ಸನ್ ೧೩೩೬–೧೩೫೦) ನು ತುಳು ಜೈನ ಅರಸರು ಸಂತಾನಪಾರಂಪರ್ಯವಾಗಿ ತಮ್ಮ ತಮ್ಮ ರಾಜ್ಯಗಳನ್ನು ಆಳಿಕೊಂಡು ಬರಬಹುದೆಂದು ಹೇಳಿ ಅವರ ಸ್ವಂತ ಆಸ್ತಿಗಳನ್ನು ಅವರಿಗೆ ಉಂಬಳಿಯಾಗಿ ಬಿಟ್ಟಿದ್ದನು. ಈ ಆಸ್ತಿಗಳಿಗೆ ಕಂದಾಯವಿರಲಿಲ್ಲ. ಇವರಿಗೆ ತಮ್ಮ ರಾಜ್ಯಗಳಲ್ಲಿ ಸಂಪೂರ್ಣ ಅಧಿಕಾರವಿತ್ತು. ಎರಡನೆಯ ಹರಿಹರ ರಾಯನು (೧೩೭೯–೧೪೦೪) ಕದರೆಮಂಜುನಾಥ ಕಾಂತಾವರ ಕಾಂತೇಶ್ವರ ಮೊದಲಾದ ಜಿನೇತರ ದೇವಸ್ಥಾನಗಳಿಗೆ ಉಂಬಳಿ ಬಿಟ್ಟಂತೆ ಮೂಡಬಿದರೆಯ ಗುರುಬಸದಿಗೂ ಉಂಬಳಿ ಬಿಟ್ಟಿರುತ್ತಾನೆ. ಶಕ ೧೩೭೯ ರ ಮೂಡಬಿದರೆಯ ಗುರು ಬಸದಿಯ ಒಂದು ಶಿಲಾಲೇಖದಿಂದ ದ್ವಿತೀಯ ಬುಕ್ಕರಾಯನು ಈ ಬಸದಿಗೆ ಭೂದಾನ ಬಿಟ್ಟಿರುವಂತೆ ತಿಳಿದು ಬರುತ್ತದೆ. + ಸುಪ್ರಸಿದ್ಧ ದೇವರಾಯ ದ್ವಿತೀಯ (ಸನ್ ೧೪೨೯—೧೪೫೧) ನು ಹಟ್ಟಂಗಡಿ ಚಂದ್ರನಾಥ ಬಸದಿ, ಮೂಡಬಿದರೆ ಹೊಸ ಬಸದಿ, ವಾರಂಗ ನೇಮಿನಾಥ ಬಸದಿ ಮೊದಲಾದ ದಕ್ಷಿಣ ಕನ್ನಡ ಜಿಲ್ಲೆಯ ಹಲವು ದೇವಾಲಯಗಳಿಗೆ ಉಂಬಳಿ ಬಿಟ್ಟ ವಿಷಯ ಆ ಜಿಲ್ಲೆಯ ಶಿಲಾಲೇಖಗಳಿಂದ ತಿಳಿದು ಬರುತ್ತದೆ. ಸನ್ ೧೪೩೧—೩೨ ರಲ್ಲಿ ಕಾರ್ಕಳದಲ್ಲಿ ಆಳುತ್ತಿದ್ದ ಭೈರವರಾಯನ ಮಗ ವೀರ ಪಾಂಡ್ಯನ ಕಾರ್ಕಳ ಗೊಮ್ಮಟೇಶ್ವರ ವಿಗ್ರಹವನ್ನು ಪ್ರತಿಷ್ಠಿಸಿದನು. ಇದರ ಪ್ರತಿಷ್ಠೆಯ ಸಮಯ ೨ನೆಯ ದೇವರಾಯನು ಕಾರ್ಕಳಕ್ಕೆ ಬಂದಿದ್ದನು. ಆಗ ವೀರ ಪಾಂಡ್ಯನು ದೇವರಾಯನನ್ನು ರಾಜವೈಭವದಿಂದ ತನ್ನ ಗುರುಗಳ ಸಹಿತ ಎಲ್ಲಾ ಬಿರುದಾವಳಿಗಳೊಡನೆ ಕರೆದುಕೊಂಡು ಗೊಮ್ಮಟೇಶ್ವರ ಬಸದಿಬೆಟ್ಟಕ್ಕೆ ಬಂದಿದ್ದನು. ವಿಜಯನಗರದ ಒಂದು ಶಾಸನದಿಂದ ದೇವರಾಯನು ಅಲ್ಲಿಯೂ ಒಂದು ಪಾರ್ಶ್ವನಾಥ ಸ್ವಾಮಿಯ ಬಸದಿಯನ್ನು ನಿರ್ಮಾಣಮಾಡಿಸಿದಂತೆ ತಿಳಿದುಬರುತ್ತದೆ. § ೨ನೆಯ ದೇವರಾಯನ ಕಾಲದಲ್ಲಿ ವಿಜಯನಗರದ ರಾಜ್ಯವು ಬಹಳ ಉನ್ನತಸ್ಥಿತಿಯಲ್ಲಿತ್ತು. ಇಟಲಿದೇಶದ ಪ್ರಯಾಣಿಕನಾದ ನಿಕೋಲೋ ಕೊಂಟಿ ಮತ್ತು

+ Insciiptions of the Madras Presidency Rangacharya Vol. II, S. K. p. 116

§ Hultzch, South Indian Inscription Vol. I p. 166.

ಪರಸಿಯಾದೇಶದ ಅರಸ ಶಕ್ಕಲಿಯನ್ ಎಂಬವನ ರಾಯ ಭಾರಿಯಾದ ಅಬ್ದುಲ್ ರಜಾಕನೂ ೨ನೆಯ ದೇವರಾಯನ ರಾಜವೈಭವವನ್ನು ಬಹಳ ಸುಂದರವಾಗಿ ವರ್ಣಿಸಿರುತ್ತಾರೆ. ಆ ಕಾಲದಲ್ಲಿ ವಿಜಯನಗರವು ೬೦ ಮೈಲ ಸುರಳಿಕೆಯುಳ್ಳ ದೊಡ್ಡ ಪಟ್ಟಣವಾಗಿತ್ತು. ದೇವರಾಯನ ರಾಜ್ಯವು ಕೃಷ್ಣಾನದಿಯಿಂದ ಕನ್ಯಾಕುಮಾರಿಯ ವರೆಗೆ ಹಬ್ಬಿತ್ತು. ಆ ಕಾಲದಲ್ಲಿ ವಿಜಯನಗರದ ಅರಸರು ಹಿಂದೂಸ್ಥಾನದ ಎಲ್ಲಾ ಅರಸರಿಂದ ವಿಶೇಷ ಬಲಾಢ್ಯರಾಗಿದ್ದರು. ಇರಲಿ. ಇದೇ ವಂಶದ ೭ನೆಯ ವಿರೂಪಾಕ್ಷರಾಯ (ಸನ್ ೧೪೬೫—೧೪೭೯) ನು ಮೂಡಬಿದರೆಯ ಹೊಸ ಬಸದಿಗೆ ಉಂಬಳಿ ಬಿಟ್ಟಿರುತ್ತಾನೆ. ಚಿಟ್ಟಿಪಾಡಿ ಬಲ್ಲಾಳರ ತಮ್ಮನ ಮನೆಯಲ್ಲಿರುವ ಶಾಸನದಿಂದ ಸಲುವ ವಂಶದ ನರಸಿಂಹನ ತಮ್ಮನಾದ ಇಮ್ಮಡಿ ನರಸಿಂಹನು ಸನ್ ೧೪೯೦ ರಲ್ಲಿ ಚಿಟ್ಟಿಪಾಡಿ ಹಲರ ಬಸದಿಗೆ ಉಂಬಳಿ ಬಿಟ್ಟಿರುತ್ತಾನೆಂದು ತಿಳಿದು ಬರುತ್ತದೆ.

ಪ್ರಸಿದ್ಧದಾನಿ ಕೃಷ್ಣದೇವರಾಯ (ಸನ್ ೧೫೦೯-೧೫೩೦) ನು ಮೂಡಬಿದರಿಯ ಗುರುಬಸದಿಗೂ ಚಂಗಲಪಟ್ಟದ ತ್ರೈಲೋಕ್ಯನಾಥ ಜಿನಾಲಯಕ್ಕೂ ಉಂಬಳಿ ಬಿಟ್ಟಿರುತ್ತಾನೆ. + ವಿಜಯನಗರಾಜ್ಯವು ಸ್ಥಾಪಿತವಾದಂದಿನಿಂದ ದಕ್ಷಿಣಭಾರತದಲ್ಲಿ ಹಿಂದೂ ನಾಗರಿಕತೆಯು ಕ್ರಮವಾಗಿ ವೃದ್ಧಿಹೊಂದುತ್ತಿತ್ತು. ಆದರೆ ಈ ಕೃಷ್ಣದೇವರಾಯನ ಕಾಲದಲ್ಲಂತು ದಕ್ಷಿಣಭಾರತವು ಎಲ್ಲಾ ವಿಧದಲ್ಲಿಯೂ ಹೆಚ್ಚು ಉನ್ನತಿಯನ್ನು ಹೊಂದಿತು. ಉತ್ತರಭಾರತದಲ್ಲಿ ಹೇಗೆ ವಿಕ್ರಮಾದಿತ್ಯನ ಹೆಸರು ಅಮರವಾಗಿರುವದೋ ಹಾಗೆಯೇ ದಕ್ಷಿಣಭಾರತದಲ್ಲಿ ಕೃಷ್ಣದೇವರಾಯನ ಹೆಸರು ಅಮರವಾಗಿರುವುದು.

ವಿಜಯನಗರದ ವಂಶದ ಬೇರೆ ಬೇರೆ ಸಣ್ಣ ಸಣ್ಣ ರಾಜರೂ ಜೈನ ದೇವಾಲಯಗಳಿಗೆ ಹಲವು ಉಂಬಳಿಗಳನ್ನು ಬಿಟ್ಟಿರುವರು. * ಅಂತು ವಿಜಯನಗರದ ಸಾಮ್ರಾಜ್ಯ ಕಾಲದಲ್ಲಿ ಜೈನರು ವಿಶೇಷ ಸುಖಿಗಳಾಗಿದ್ದರೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಈ ವಂಶದ ರಾಜರು ಜೈನ ಕವಿಗಳಿಗೂ ಪ್ರೋತ್ಸಾಹವನ್ನು ಕೊಟ್ಟಿದ್ದರು. ಒಂದನೆಯ ಹರಿಹರನ (೧೩೩೬-೧೩೫೦) ಆಳಿಕೆಯಲ್ಲಿ ಮುಗಳಿಯ ಪುರದ ಮಂಗರಸು "ಖಗೇಂದ್ರಮಣಿದರ್ಪಣ" ವನ್ನು ಬರೆದನು. "ಧರ್ಮನಾಥಪುರಾಣ"ವನ್ನು ಬರೆದ ಮಧುರನು ೨ನೆಯ ಹರಿಹರ (೧೩೭೭-೧೪೦೪) ನ ಆಸ್ಥಾನ ಕವಿಯಾಗಿದ್ದನು. ಬೀಳಗಿ ತಾಲೂಕಿನಲ್ಲಿರುವ ಒಂದು ಶಾಸನದಿಂದ 'ಶಬ್ದಾನುಶಾಸನ" ವನ್ನು ಬರೆದ ಭಟ್ಟಾಕಳಂಕನ ಗುರುವಾದ ಭಟ್ಟಾಕಳಂಕನು ೧ನೆಯ ಶ್ರೀ ರಂಗರಾಯನ (೧೫೭೩—೧೫೮೪) ಆಸ್ಥಾನದಲ್ಲಿ ಆತನ ಪ್ರೇರಣೆಯಿಂದ ಸಾರತ್ರಯವನ್ನೂ ಅಲಂಕಾರತ್ರಯವನ್ನೂ ಓದಿ ಕೀರ್ತಿ ಪಡೆದಂತೆಯೂ ಶಬ್ದಾನುಶಾಸನದ ಕರ್ತನಾದ ಭಟ್ಟಾಕಲಂಕನು ೧ನೆಯ ವೆಂಕಟಪತಿ ರಾಯನ [೧೫೮೬—೧೬೧೭] ಆಳಿಕೆಯಲ್ಲಿ ಬಾಳಿದಂತೆಯೂ ತಿಳಿದು ಬರುತ್ತದೆ. ×

---

+ Inscriptions of the Madras presidency Vol 1 p 375 also see Madras Epigraphic report by Rangacharya, year 1901 p. 188

* Madras Epigraphic report by Rangacharya, year 1904 p 63.

× "ಕರ್ನಾಟಕ ಕವಿ ಚರಿತೆ" ದ್ವಿತಿಯ ಸಂಪುಟ.

# ಗೆಲವಿನ ಹೊಳಲು.

(ಲೇಖಕ — ಆನಂದಕವಿ ಕುರಗುಂದ)

ತ್ರಿಪುಡೆ.

ವೀರಕನ್ನಡ ಗಂಡುಗಲಿಗಳ **ವಿಜಯನಗರದ**
ತಾಣವಂ ।
ಭೂರಿಸುಂದರ ಶಿಲ್ಪ-ಕಲೆಯಿಂ ಮೆರೆವ ಗುಡಿಗೋಪುರ
ಗಳಂ ॥೧॥

ಧಾರುಣಿಗೆಮಿಗಿಲಾದ **ತುಂಗಾತೀರ ಪಂಪಾನಾಥನಂ**।
ಆರುನೋಡುವವರೆ ಧನ್ಯರು! ಪುಟ್ಟಿ ಬಂದುದು
ಸಾರ್ಥಕಂ ॥೨॥

**ಹೇಮಕೂಟನ ಮಾಲ್ಯವಂತನ** ಹೆಸರು ಪೊಂದಿದ
ಶಿಖರವಂ ।
ರಾಮಲಕ್ಷ್ಮಣ ವಾಯುಸುತರಿಂ ಪೂಜ್ಯವಾಗಿಹ
ಕ್ಷೇತ್ರವಂ ॥೩॥

ಆ ಮಹಾತ್ಮರು ವರವಸಿಷ್ಠರು ತಪವಗೈದಿಹ
ತಾಣವಂ ।
ಪ್ರೇಮದಿಂಗಡ ನೋಡಿದಾತನ ಜನ್ಮ ಜಗದೊಳು
ಸಾರ್ಥಕಂ ॥೪॥

ಅಕ್ಕತಂಗಿಯರೆಂಬ ಹೆಸರಿನ ಬೆಟ್ಟದಂತಿಹ ಕಲ್ಗಳಂ ।
ದಿಕ್ಕು ಇಲ್ಲದ ಬಾಲವರ್ಗಕೆ ಹಾಲುಣಿಸುವ
ದ್ರೋಣಿಯಂ ॥೫॥

ಸೊಕ್ಕಿದಾನೆಯ ಸಾಲು ಕುದುರೆಯ ಸಾಲು ಕಟ್ಟುವ
ಮನೆಗಳಂ ।
**ಹುಕ್ಕ-ಬುಕ್ಕರು** ರಚಿಸಿದಂತಹ ಚಲುವ **ಗೆಲವಿನ
ಹೊಳಲವಂ** ॥೬॥

**ಕಡಲಿ ಗಣಪತಿ ಸಾಸ್ವಿ ಗಣಪತಿ ಬಡವಿಲಿಂಗನ**
ಸೊಬಗನಂ ।
ಬೆಡಗು ಬೀರುವ ನೋಡಲಸದಳವಾದ ಗುಡಿಗಳ
ಗಡಣವಂ ॥೭॥

ಬಿಡದೆ ಎಲ್ಲೆಡೆ ಬೆರಗುಗೊಳಿಸುವ ರಾಜಬೀದಿಯ
ರೀವಿಯಂ ।
ಸಹಗರದೆ ಸಲೆಕೀರ್ತಿ ಪೊಂದಿದ ಚಲುವ ಗೆಲುವಿನ
ಹೊಳಲವಂ ॥೮॥

ರಾಜ-ರಾಣಿಯ ರೀಜುಕಲೆಯುವ ಸ್ವಚ್ಛ ನೀರಿನ
ಕೊಳಗಳಂ ।
ಮೋಜಿನಿಂ ಸಲೆ ಯುದ್ಧವಾಡುವ ದಂಡಿನಾಟವ
ಬೈಲವಂ ॥೯॥

ಓಜೆಯಿಂ ಮಾನೋಮಿ ಹಬ್ಬದ ಗೈವ ದಿಬ್ಬದ
ತಾಣವಂ ।
ನೈಜ ಸುಂದರವಾದ ಪೂರ್ವದ ರಾಜವೈಭವ
ನಗರವಂ ॥೧೦॥

ಅಗಸಗಿತ್ತಿಯ ಮಹಲು ಬೆಡಗಿನ ಗಾಣಗಿತಿಯ
ಮಹಲವಂ ।
ನಗುತನಲಿಯುವ ನೃತ್ಯವಾಡುವ ಗಾನಲೋಲರ
ಗೃಹಗಳಂ ॥೧೧॥

ಗಗನ ಚುಂಬಿತ **ಋಷ್ಯಮೂಕನ ವರಮತಂಗನ**
ಗಿರಿಗಳಂ ।
ಬಗೆದು ಭಾವಿಸಿ ನೋಡುವಾತನ ಜನ್ಮ ಜಗದೊಳು
ಸಾರ್ಥಕಂ ॥೧೨॥

ಸರಸ-ನಾಟಕ ಕಾವ್ಯ ಶಾಸ್ತ್ರಪುರಾಣ ನಡೆಸುವ
ಮರಗಳಂ ।
**ಹರಿ-ಹರೇಶ್ವರ ರಾಘವಾಂಕರು** ಕೃತಿಯ ಗೈದಿಹ
ತಾಣವಂ ॥೧೩॥

ವರಕುಮಾರನು ರಾಮರಚಿಸಿದ ಗರಡಿಯಾಡುವ
ಮನೆಗಳಂ ।
ಹಿರಿಯ ಬಂಟರ ಕಿರಿಯ ಬಂಟರ ಮಲ್ಲ ಯುದ್ಧದ
ಕಣಗಳಂ ॥೧೪॥

ಪರಮ **ವಿದ್ಯಾರಣ್ಯ** ಗುರುಗಳು ತಪವಗೈದಿಹ
ತಾಣವಂ ।
ವರದ **ಭುವನೇಶ್ವರಿಯು** ಹೊನ್ನಿನ ಮಳೆಯ ಸುರಿ
ಸಿವ ಕ್ಷೇತ್ರವಂ ॥೧೫॥

ಅರಸರೊಳು ಬಲುಕೀರ್ತಿ ಪೊಂದಿದ ಕೃಷ್ಣರಾಜನ
ಕುರುಹವಂ ।
ಕಿರಿಯ ಹರೆಯದೆ ಕಂಡ ಮನುಜನ ಜನ್ಮ ಜಗದೊಳು
ಸಾರ್ಥಕಂ ॥೧೬॥

ಸುತ್ತು ಮುತ್ತು ಮುಗಿಲ ಮುದ್ದಿಪ ಏಳುಕೋಟೆಯ
ಗೋಡೆಯಂ ।
ಕತ್ತಿ ಬರ್ಚಿಯ ಹಿರಿತುಬಾಕಿಯ ಡಾಲು ಪಾರುವ
ತಾಣವಂ ॥೧೭॥

ಒತ್ತಿ ಹರಿಯುವ ಸೊಗಸು ಕಾಲುವೆ ಅನ್ನಛತ್ರದ
ಮನೆಗಳಂ ।
ಮುತ್ತು ಮಾಣಿಕ ವಜ್ರದಂಗಡಿ ಅಂದ ಚಂದದ
ಸಾಲ್ಗಳಂ ॥೧೮॥

ದಂಗುಬಡಿಸುವ ವಿಜಯನಗರದ ಕೋಟೆ ಕೊತ್ತಳ
ಸೊಬಗವಂ ।
ರಂಗನಾಥನ ವಿಜಯ ವಿಠಲನ ರಮ್ಯವಾಗಿಹ
ಗುಡಿಗಳಂ ॥೧೯॥

ತುಂಗಭದ್ರಾ ನದಿಯ ತೀರದ ಚಲುವ
ಪಂಪಾನಾಥನಂ ।
ಮಂಗಲಂ ಜಯ! ನೋಡಿದಾಗಳೆ ಪ್ರಾಣಿಮಾತ್ರಕೆ
ನಿಶ್ಚಯಂ ॥೨೦॥

---

# ವಿದ್ಯಾರಣ್ಯ ಮುನಿಗೆ.

( ಕವಿ—ಯಶೋದಾಕುಮಾರ ಹಾವೇರಿ. )

**ವಿಜಯನಗರ ಸಾಮ್ರಾಜ್ಯ ಸಂಸ್ಥಾಪನೆಯ ಪೂರ್ವದಲ್ಲಿ, ಯೋಗಾರೂಢರಾದ ವಿದ್ಯಾರಣ್ಯ ಮುನಿದೇವನನ್ನು ಸಂಬೋಧಿಸಿ, ನುಡಿದುದು.**

ವಿದ್ಯಾರಣ್ಯ! ತುರುಕರುಪಟಳದಿಂದ ಕಡುನೊಂದ
ಕರ್ನಾಟಕದಲಿ ಕಟ್ಟಿರುಳು ಕಟ್ಟಿಹುದು. ಧೀರವರ
ರಾಜ-ರಾಜಾಧಿರಾಜರಲಿ ಕಟುತರದ ಮಚ್ಚರ-
ವು ಬೇಗೆಯಂದದಿ ಒಳೆವು, ನಾಡಿನಲಿ ಬಲಿತಿಹುದು,

ಕಂಗೊಳಿಪ ಸಿರಿ-ಸೊಬಗು, ಕಮನೀಯ ವನಬೆಡಗು-
ಗಳ ಕಣ್ಣೀರಧಾರೆಯಲಿ, ಮಿಂದು ಮಲಗಿಹವು;
ಬಡತನದಿ ಬಳಲುತಿಹ, ಭಾಗ್ಯದಲಿ ತೊಳಲುತಿಹ
ಕರುಳುಗಳು ಕಂಬನಿಯ ಕಾಲುವೆಯ ಕರೆತಹವು,

ಅಯ್ಯೊ, ಆ ಧವಲ ಕೀರ್ತಿಯುತ ಧರ್ಮಧ್ವಜ ಮಿಂದು
ಕೊಂಕಿಹುದು! ಇದುವೆ ಕರ್ನಾಟಕೀರ್ತಿಲತೆಯೋ!

ಮುನಿದೇವ! ಗಂಭೀರ ಮೌನತೆಯನೆ ತಳೆದು,
ನೀನಾವ ತಪವಾಚರಿಪೆ? ಇದು ಯೋಗಸಾಧನೆ-
ಯೆ? ಮೇಣ್, ಮಾತೆಯನುದ್ಧರಿಪ ನಿವೃತಿಯ
ಸಿದ್ಧಿಯೆ?

ಅವುದದು? ಮುನಿವರ್ಯ! ಸಾಧನೆಯೋ?
ಮೋಚನೆಯೋ?

# ಸಾಮ್ರಾಜ್ಯಕಾಲದ ಕರ್ನಾಟಕವು.

( ಲೇಖಕ:— ಕಾಶಿನಾಥ ಗ. ವರ್ಟಿ, ಎಂ ಏ. ಬೀ. ಟೀ ಹೆಡ್‌ಮಾಸ್ತರ ಹಾಯಸ್ಕೂಲ ಗೋಕಾಕ. )

ಆರು ಶತಕಗಳಹಿಂದೆ ನಮ್ಮ ಈ ದೇಶದಲ್ಲಿ ಕುರುಬ ಅರಸರು ರಾಜ್ಯ ಸ್ಥಾಪನೆಯನ್ನು ಮಾಡಿದರಷ್ಟೇ. ಮುಂದೆ ೨೫೦ ವರುಷಗಳವರೆಗೆ ಇದೊಂದು ದೊಡ್ಡ ಸಾಮ್ರಾಜ್ಯ ಪದವಿಯನ್ನು ಹೊಂದಿ ನಾವು ಕೇಳಿರುವದು. ಈ ವಿಸ್ತೃತವಾದ ಸಾಮ್ರಾಜ್ಯವು ಈಗ ಮರೆತುಹೋದ ಮಾತು ನಿಜವಾದರೂ ಕನ್ನಡಿಗರಿಗೆ ಅದೊಂದು ಅಭಿಮಾನಾಸ್ಪದ ಸಂಗತಿಯಾಗಿರುವದು. ಯಾಕಂದರೆ ಈ ಸಾಮ್ರಾಜ್ಯದ ಇತಿಹಾಸವನ್ನು ಪ್ರಾರಂಭದಿಂದ ಕಡೆತನಕ ಪರಿಶೀಲಿಸಲಾಗಿ ಜಗತ್ತಿನಲ್ಲಿ ಆಗಿಹೋದ ಯಾವ ಸಾಮ್ರಾಜ್ಯಕ್ಕಿಂತಲೂ ಅದು ಯಾವದೇ ರೀತಿಯಿಂದ ಕಡಿಮೆ ಯೋಗ್ಯತೆಯುಳ್ಳದ್ದಾಗಿದ್ದಿಲ್ಲವೆಂದು ಹೇಳಬಹುದು. ಈ ಸಾಮ್ರಾಜ್ಯದ ವಿಷಯವಾಗಿ ಐತಿಹಾಸಿಕದೃಷ್ಟಿಯಿಂದ ಸಾಕಷ್ಟು ಸಂಶೋಧನವಾಗಿಲ್ಲ ಇತ್ತೀಚಿಗೆ ಕೆಲವು ಮಹನೀಯರು ಆ ದೃಷ್ಟಿಯಿಂದ ಪರಿಶ್ರಮಪಡುತ್ತಿರುವರೆಂಬದು ಶ್ರೇಯಸ್ಕರವು. ಸದ್ಯದಲ್ಲಿ ಐತಿಹಾಸಿಕ ಸಂಗತಿಯನ್ನು ಬದಿಗಿಟ್ಟು ಸಾಮ್ರಾಜ್ಯದೊಳಗಿನ ಜಾನಪದದ ಸ್ಥಿತಿಗತಿಯನ್ನು ವರ್ಣಿಸುವದೇ ಈ ಲೇಖನದ ಮುಖ್ಯ ಉದ್ದೇಶವು

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವ ಮೊದಲು ಸಹ ಈ ಕನ್ನಡದೇಶವು ಬಹಳೇ ಪ್ರಸಿದ್ಧಿಯನ್ನು ಹೊಂದಿತ್ತು. ಆರುನೂರು ಇಸ್ವಿಯ ಸುಮಾರಕ್ಕೆ ಉಜ್ಜನಿಯಿಂದ ಭದ್ರಬಾಹು ಎಂಬವನು ಈ ದಕ್ಷಿಣದೇಶಕ್ಕೆ ಬಂದ ಸಂಗತಿಯೂ ಮತ್ತು ಇಲ್ಲಿಯ ಜನಸಮೃದ್ಧಿಯ ವರ್ಣನೆಯೂ ಶಿಲಾಲೇಖದಲ್ಲಿ ಕೊಡಲ್ಪಟ್ಟಿರುವದು. ಅವರ ಋಷಿಗಳ ಸಂಘವು ನೂರಾರು ಹಳ್ಳಿಗಳಿದ್ದ ಧನಧಾನ್ಯ, ದನಕರ, ಆಡುಕುರಿ ಮುಂತಾದವುಗಳಿಂದ ವಿಪುಲವಾದ ದಕ್ಷಿಣ ದೇಶದ ಆಶ್ರಯವನ್ನು ಪಡೆದಿದ್ದಿತೆಂದು ಹೇಳುವರು. ಈ ಶಿಲಾಲೇಖದಲ್ಲಿ ಕೊಟ್ಟ ವರ್ಣನೆಯಪ್ರಕಾರ ಈ ದೇಶದಲ್ಲಿ ಉತ್ತಮವಾದ ಹೂಗಳೂ ಸುಂದರವಾದ ಮರಗಳೂ ಕರೇ ಮೋಡಗಳಂತೆ ಕಾಣುವ ದೊಡ್ಡ ದೊಡ್ಡ ಬಂಡೆಗಳೂ ಅಲ್ಲಲ್ಲಿ ತೋರುತ್ತಿದ್ದವು. ಹಾಗೂ ಈ ದೇಶದಲ್ಲಿ ಕಾಡುಹಂದಿಗಳೂ ಚಿರ್ಚ, ಕಿರಬು, ಕರಡಿ, ಮೊದಲಾದ ವನ್ಯಪಶುಗಳೂ ಹಾವು ಮೊದಲಾದ ಹುಳಹುಪ್ಪಡಿಗಳೂ ಬಹಳವಾಗಿದ್ದವೆಂದು ಆ ಶಿಲಾಲೇಖದಲ್ಲಿ ವರ್ಣಿಸಿರುವರು ಇಂಥ ಸುಪ್ರಸಿದ್ಧದೇಶದ ಮಧ್ಯದಲ್ಲಿರುವ ಆನೇಗುಂದಿ ಎಂಬ ಒಂದು ಹಳ್ಳಿಯಲ್ಲಿ ಹರಿಹರರಾಯನು ವಿದ್ಯಾರಣ್ಯಸ್ವಾಮಿಗಳ ಸಹಾಯದಿಂದ ಸಾಮ್ರಾಜ್ಯಸ್ಥಾಪನೆಯನ್ನು ಪ್ರಾರಂಭಿಸಿದನು. ಈ ಸಾಮ್ರಾಜ್ಯದ ವ್ಯಾಪಕತೆಯು ಮುಂದೆ ಬೆಳೆಯುತ್ತಹೋಗಿ ಕೃಷ್ಣಾನದಿಯ ದಕ್ಷಿಣಕ್ಕಿದ್ದ ಇಡೀ ಹಿಂದೀ ದ್ವೀಪಕಲ್ಪವನ್ನೊಳಗೊಂಡಿತು. ಇ. ಸನ್ ೧೪೪೩ರಲ್ಲಿ ಶಹರುಕ್ ಸುಲ್ತಾನನಕಡೆಯ ವಕೀಲನಾದ ಅಬ್ದುಲ್ ರಜಾಕನು ವಿಜಯನಗರದ ಸಾಮ್ರಾಜ್ಯದ ಉಲ್ಲೇಖವನ್ನು ಮಾಡುವಾಗ ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಾಧಿಪತಿಯೆಂದೆನ್ನುವನು ಈ ಸಾಮ್ರಾಜ್ಯವು ಸಾಧಾರಣವಾಗಿ ೧೬ ಸಾವಿರ ಯೋಜನೆಗಳಷ್ಟು ವಿಸ್ತಾರವಾಗಿತ್ತೆಂದು ಹೇಳಲು ಅಡ್ಡಿಯಿಲ್ಲ. ಈ ಪ್ರದೇಶವು ವಿಜಯನಗರಸಾಮ್ರಾಜ್ಯ ಕಾಲದಲ್ಲಿಯೇ ಕರ್ನಾಟಕವೆಂಬ ಹೆಸರು ಪಡೆಯಿತೆಂದು ಹೇಳುತ್ತಾರೆ. ಸಾಮ್ರಾಜ್ಯಕಾಲದ ಕರ್ನಾಟಕವನ್ನು ನಮ್ಮ ಕನ್ನಡ ಕವಿ ಗ್ರಂಥಕಾರರೂ ಪರದೇಶದಿಂದ ಬಂದ ಪ್ರವಾಸಿಗಳೂ ತಮ್ಮ ತಮ್ಮ ಲೇಖನಗಳಲ್ಲಿಯೂ ಗ್ರಂಥಗಳಲ್ಲಿಯೂ ವರ್ಣಿಸಿರುವರು. ನಮಗೆ ವಿಶೇಷ ಪರಿಚಯವಿದ್ದ ಸರ್ವಜ್ಞ ಕವಿಗಳ ಕವಿತೆಗಳಂತೂ ಹುಡುಗರಲ್ಲಿ ಸಹ ಲೋಕಪ್ರಿಯವಾಗಿರುವವು. ಪೂರ್ವ ದಿಕ್ಕಿನಲ್ಲಿ ಎಲ್ಲಕಡೆಯಲ್ಲಿ ದಪ್ಪಾದ ಜಾಲಿಯ ಮುಳ್ಳುಗಳು ಹಬ್ಬಿರುವವೆಂದೂ ಜನರೆಲ್ಲರು ತೆರೆವಾಯಿಗಳೆಂದೂ ಸರ್ವಜ್ಞನು ಹೇಳಿರುವನು. ಅದರಂತೆಯೇ ಉತ್ತರ ಕರ್ನಾಟಕದಲ್ಲಿ ಊರುಗಳು ದೂರು ದೂರಾಗಿಯೂ ನೀರು ಸಮೀಪದಲ್ಲಿಲ್ಲದಂತೆಯೂ ವಿಶ್ರಾಂತಿಗೋಸ್ಕರ

ನೆರಳು ಸಹ ಸಿಗುತ್ತಿದ್ದಿಲ್ಲವೆಂದೂ ವರ್ಣಿಸಿರುವನು. ಪಶ್ಚಿಮಕ್ಕೆ ಅಡವಿ ಹಬ್ಬಿ ಅಲ್ಲಲ್ಲಿ ಗಿಡಗಳಿದ್ದು ರೋಗ ರಾಯಿಗಳು ಬಹಳ ವಿದ್ದುದರಿಂದ ಜನರು ಅಶಕ್ತರೂ ಬಡವರೂ ಆಗಿದ್ದರು. ದಕ್ಷಿಣ ಕರ್ನಾಟಕವು ಮಾತ್ರ ಬಹು ಸಡಗರವುಳ್ಳದ್ದಾಗಿದ್ದು ಜನರು ಶ್ರೀಮಂತ ರಾಗಿದ್ದರು. ಅವರು ಸಾಧಾರಣವಾಗಿ ಜೋಳದ ನುಚ್ಚಿನಸಂಗಡ ಬೇಳೆಯ ತೊವ್ವೆಯನ್ನೂ ಎಮ್ಮೆಯ ಹಾಲು ಹೈನವನ್ನೂ ವಿಪುಲವಾಗಿ ಉಪಯೋಗಿಸು ತ್ತಿದ್ದರು. ಕಡಲೆ, ಗೋಧಿ, ಮಡಕೆ, ಉದ್ದು ಮುಂತಾದ ಬೆಳೆಗಳು ಈ ಭಾಗದಲ್ಲಿ ಬೆಳೆಯುತ್ತಿದ್ದವು.

ರಾಗವೇ ಮೂಡಲು, ಯೋಗವೇ ಬಡವಲು
ರೋಗವೇ ಶುದ್ಧ ಪಡವಲು, ತೆಂಕಲು
ಭೋಗದಾ ಬೀಡು ಸರ್ವಜ್ಞ ॥
ಉಡಹೀನ ಮೂಡಲು, ನುಡಿಹೀನ ಬಡಗಲು
ಕಡು ಕೋಪದವರು ಪಡುವಲು, ತೆಂಕಲು
ಸಡಗರದವರು! ಸರ್ವಜ್ಞ ॥

ಸಾಮ್ರಾಜ್ಯಕಾಲದಲ್ಲಿಯ ಪ್ರಸಿದ್ಧ ಕವಿಯಾದ ನಂಜುಂಡನು ಕಾವೇರಿಯಿಂದ ಗೋದಾವರಿಯ ವರೆಗೆ ವ್ಯಾಪಿಸಿದ ಈ ಕರ್ನಾಟಕ ಭೂಪ್ರದೇಶವನ್ನು ಮನಮೆಚ್ಚಿ ವರ್ಣಿಸಿದನು. ಈ ದೇಶದಲ್ಲಿ ವೈಯಾರ ದಿಂದ ನಡೆಯುವ ಹಂಸಪಕ್ಷಿಗಳೂ ಮಾತಾಡುವ ಗಿಳಿಗಳೂ ಉಲ್ಲಾಸದಿಂದ ಕುಣಿಯುವ ನವಿಲುಗಳೂ ದಾರಿಕಾರರ ಕಿವಿಗಳಿಗೆ ಇಂಪಾದ ಸ್ವರವನ್ನು ಕೊಡುವ ಕೋಕಿಲೆಗಳೂ ಅಲ್ಲಲ್ಲಿಗೆ ಕಂಡುಬರುತ್ತಿದ್ದವೆಂದು ಈ ಕವಿಯು ಹೇಳಿರುವನ. ಪರದೇಶದ ಪ್ರವಾಸಿಗಳು ಸಹ ಇದರಂತೆಯೇ ಆ ಕಾಲದ ಕರ್ನಾಟಕದ ವರ್ಣನೆ ಯನ್ನು ಬಹು ಸರಸವಾಗಿ ಮಾಡಿದ್ದಾರೆ. ಡುಆರ್ಟೆಬಾರ್ಬೋಸಾ ಎಂಬ ಪ್ರವಾಸಿಕನು ಹದಿನಾರನೇ ಶತಮಾನದ ಪ್ರಾರಂಭದಲ್ಲಿ ವಿಜಯ ನಗರಕ್ಕೆ ಬಂದಾಗ ನರಸಿಂಗರಾಯನುಆಳುತ್ತಿದ್ದನು. ಆಗ ಜನರು ಶ್ರೀಮಂತರಾಗಿದ್ದರು. ಆಹಾರಸಾಮಗ್ರಿ ಯಾದರೂ ವಿಪುಲವಾಗಿತ್ತು ಅಲ್ಲಲ್ಲಿ ಸಣ್ಣದೊಡ್ಡ ಪಟ್ಟಣಗಳು ಬಹಳವಿದ್ದವು. ಒಟ್ಟಿನಮೇಲೆ ದೇಶವು ಸಮೃದ್ಧವಾಗಿಯೂ ಇತ್ತು. ಇ ಸ. ೧೫೨೦ ರ ಸುಮಾ ರಕ್ಕೆ ಈ ವಿಜಯನಗರಕ್ಕೆ ಹೋಗಿದ್ದ ಪೇಸ್‌ನೆಂಬ ಪ್ರವಾಸಿಯು ಬರೆದ 'ಕ್ರಾನಿಕಲ್' ಎಂಬ ಪುಸ್ತಕ ದಲ್ಲಿ ಆ ಕಾಲದ ಕರ್ನಾಟಕ ದೇಶದ ವರ್ಣನೆಯನ್ನು ಮಾಡುವಾಗ ಹೇಳುವದೇನಂದರೆ— ಈ ದೇಶದಲ್ಲಿ ಕಾಡು ಅಡವಿಯು ಬಹಳವಿದ್ದಾಗ್ಯೂ ಎರಡು ಮೂರು ಹರದಾರಿಗಳವರೆಗೆ ಮಾರ್ಗಗಳ ಎರಡೂ ಬದಿಗೆ ಗಿಡಗಳ ಸಾಲುಗಳಿದ್ದವು. ಹಳ್ಳಿಪಟ್ಟಣಗಳ ಸಮೀಪ ದಲ್ಲಿಯೇ ಮಾವು, ಹಲಸು, ಹುಣಸೆ ಮೊದಲಾದ ದೊಡ್ಡ ದೊಡ್ಡ ಮರಗಳ ತೋಟಗಳಿದ್ದವು. ಮತ್ತು ವ್ಯಾಪಾರಿಗಳ ಸಲುವಾಗಿ ಅಲ್ಲಲ್ಲಿ ವಿಶ್ರಾಂತಿ ಗ್ರಹಗಳು ಕಟ್ಟಲ್ಪಟ್ಟಿದ್ದವು. ಈಪ್ರದೇಶದ ಭೂಮಿಯು ಉತ್ತಮ ರೀತಿಯಿಂದ ಸಾಗು ಮಾಡಲ್ಪಟ್ಟಿದ್ದಲ್ಲದೆ ಆಕಳು, ಎಮ್ಮೆ, ಎತ್ತು, ಕುರಿ, ಆಡು ಮುಂತಾದ ದನಕರ ಗಳಿಂದ ಸಮೃದ್ಧವಾಗಿತ್ತು. ಪಕ್ಷಿಗಳು ಅಡವಿಯಲ್ಲಿ ರುತ್ತವಷ್ಟೇ; ಮೇಲಾಗಿ ಮನೆಯಲ್ಲಿ ಸಹ ಅವು ಜೋಪಾನ ಮಾಡಲ್ಪಡುತ್ತಿದ್ದವು. ಅಕ್ಕಿ, ಜೋಳ ಮೊದಲಾದ ಬೆಳೆಗಳು ಚನ್ನಾಗಿ ಬೆಳೆಯುತ್ತಿದ್ದವಲ್ಲದೆ ಹತ್ತಿಯು ಬೆಳೆಯು ಅತಿ ವಿಪುಲವಾಗಿ ಸಾಗುಮಾಡಲ್ಪ ಡುತ್ತಿತ್ತು. ವಿಜಯನಗರವನ್ನು ನೋಡಿ ತಮ್ಮ ತಮ್ಮ ಅನುಭವಗಳನ್ನು ಬರೆದ ನಿಕೋಲಸ್, ಅಬ್ದುಲ್ ರಜಾಕ ಮುಂತಾದ ಜನರು ಇದೇಪ್ರಕಾರ ಕರ್ನಾಟಕ ಭೂಮಿಯನ್ನು ವರ್ಣಿಸಿರುವರು.

ಈಗಿನ ಕರ್ನಾಟಕವೂ ತಮಿಳ ದೇಶವೂ ಕೂಡಿ ಆ ಕಾಲದ ವಿಜಯ ನಗರದ ಸಾಮ್ರಾಜ್ಯವಾಗಿತ್ತು. ಪುರಾತನ ಕಾಲದಿಂದ ತಮಿಳರು ನೌಕಾ ವಿದ್ಯೆಯಲ್ಲಿ ಪಾರಂಗತರಾಗಿದ್ದರೆಂದು ನಮ್ಮೆಲ್ಲರಿಗೆ ಗೊತ್ತಿದ್ದ ಮಾತು. ಸಾಮ್ರಾಜ್ಯಕಾಲದಲ್ಲಿ ಒರೆಯಲ್ಪಟ್ಟ ಲೇಖನಗಳ ಮೇಲಿಂದ ಈ ಜನರು ತಮ್ಮ ವ್ಯವ ಸಾಯದಲ್ಲಿ ಬಹಳೇ ಮುಂದೊರೆದಿದ್ದರೆಂದು ಕಂಡು ಬರುತ್ತದೆ. ಸಾಮ್ರಾಜ್ಯ ಸೀಮೆಯಮೇಲಿನ ಸಮುದ್ರ ದಂಡೆಯಲ್ಲಿ ಸುಮಾರು ಮುನ್ನೂರು ಬಂದರಗಳಿದ್ದು ವೆಂದು ಹೇಳುತ್ತಾರೆ ಮತ್ತು ಅಬ್ದುಲ್‌ರಜಾಕನ ಹೇಳಿಕೆಯಂತೆ ಪ್ರತಿಯೊಂದು ಬಂದರವು ಸಮೃ ದ್ಧವೂ ಹಡಗು ಪಡಗಳುಳ್ಳದ್ದಾಗಿಯೂ ಇತ್ತು. ಶೆಟ್ಟಿಯಗೌಡಾ ಲಕ್ಕಣ್ಣ ಧನನಾಯಕ ಒಡೆಯರ, ವೀರಶ್ರೀ ಸೋಮಣ್ಣಾ ಒಡೆಯರ ಮುಂತಾದ ಪ್ರಸಿದ್ಧ ನೌಕಾಧಿಪತಿಗಳಿಗೆ ನಾವಿಗರ ಪ್ರಭು, ಪೂರ್ವ ಸಮು ದ್ರಾಧಿಪತಿ ಪಶ್ಚಿಮ ಸಮುದ್ರಾಧಿಪತಿ ಮೊದಲಾದ ಬಿರುದುಗಳಿದ್ದವೆಂಬ ಕಥೆಗಳ ಮೇಲಿಂದ ಆ ಕಾಲದಲ್ಲಿ ನೌಕಾವಿದ್ಯೆಯು ಬಹಳೇ ಪುರಸ್ಕೃತವಾಗಿತ್ತೆಂದು ಹೇಳ ಬಹುದು. ಕಾರಣ ಆ ಕಾಲದ ಜನರು ಸಮುದ್ರದಾಚೆ

ಯಲ್ಲಿರುವ ಪರದೇಶಗಳ ಕೂಡ ವ್ಯಾಪಾರ ಮಾಡು ತ್ತಿದ್ದರೆಂದು ಹೇಳಲು ವ್ಯತ್ಯಾಸವಿಲ್ಲ. ಮಾಲದೀವ ನಡುಗಡ್ಡೆಗಳಲ್ಲಿ ದೊಡ್ಡ ದೊಡ್ಡ ಹಡಗಗಳು ಕಟ್ಟಿಸ ಲ್ಪಡುತ್ತಿದ್ದವಂತೆ. ಇದಲ್ಲದೆ ಸಮುದ್ರದಂಡೆಯ ಮೇಲಿದ್ದ ಅಂಕೋಲಾ, ಭಟಕಳ, ಮುಂತಾದ ಸ್ಥಳಗಳಲ್ಲಿ ಸಹ ಚಿಕ್ಕಪುಟ್ಟ ಹಡಗುಗಳು ಸಿದ್ಧ ಮಾಡಲ್ಪಡುತ್ತಿದ್ದವು. ಅಂದ ಮೇಲೆ ಪರದೇಶಗಳಿಂದ ಸಮುದ್ರಮಾರ್ಗವಾಗಿ ಬರುವ ಸರಕುಗಳನ್ನು ದೊಡ್ಡ ದೊಡ್ಡ ಪಟ್ಟಣಗಳಿಗೆ ಮುಟ್ಟಿಸುವಗೋಸ್ಕರ ರಾಜ ಮಾರ್ಗಗಳು ಸಹ ಉಪಯೋಗದಲ್ಲಿದ್ದವು. ದೇಶ ದಲ್ಲಿ ಊರಿಂದೂರಿಗೆ ಪ್ರಯಾಣಕ್ಕೋಸ್ಕರ ಮಾರ್ಗ ಗಳೂ ಕಾಲ್ದಾರಿಗಳೂ ಇದ್ದವೆಂದು ಪ್ರವಾಸಿಕರು ಹೇಳುವರು. ಈಗಿನಂತೆಯೇ ಆ ಕಾಲದಲ್ಲಿ ಕೆಲವು ರಾಜಮಾರ್ಗಗಳು ವಿಶಿಷ್ಟ ಹೆಸರಿನಿಂದ ಪ್ರಸಿದ್ಧ ವಾಗಿದ್ದವು- ವಾಹನ ಸಾಧನಗಳು ಮಾತ್ರ ವಿಶೇಷ ವಾಗಿದ್ದಿಲ್ಲ. ಆದರೂ ಆನೆ, ಒಂಟೆ, ಕುದುರೆ, ಎತ್ತು ಮೊದಲಾದ ಪಶು ಸಾಧನಗಳೂ ಮತ್ತು ಕೆಲವೆಡೆ ಯಲ್ಲಿ ಎತ್ತಿನ ಬಂಡಿಗಳೂ ಇದ್ದವು. ಆ ಕಾಲದಲ್ಲಿ ಆಕಳು, ಎತ್ತು, ಆನೆ, ಕುದುರೆ, ಮತ್ತು ಒಂಟೆ ಈ ಪಶುಗಳಿಗೆ ವಿಶೇಷ ಸನ್ಮಾನ ವಿತ್ತೆಂದು ತೋರುತ್ತದೆ. ಹಿಂದೂ ಜನರು ಆಕಳಿಗೆ ದೇವತೆಯೆಂದು ಮನ್ನಿಸುತ್ತಿದ್ದರು. ಆದರಿಂದ ತಮಗೆ ಬೇಕಾದ ಹಾಲು ಹೈನು ಸಿಗುತ್ತಿತ್ತು. ಮತ್ತು ಎತ್ತು ಗಳು ಕೃಷಿಕರ್ಮದಲ್ಲಿ ಉಪಯೋಗಿಸಲ್ಪಡುತ್ತಿದ್ದವ ಲ್ಲದೆ ಊರಿಂದೂರಿಗೆ ಪ್ರಯಾಣದ ಸಲುವಾಗಿ ಮತ್ತು ಸರಕುಗಳನ್ನು ಮುಟ್ಟಿಸುವದಕ್ಕಾಗಿ ಉಪಯೋಗ ಬೀಳುತ್ತಿದ್ದವು. ಆದ್ದರಿಂದ ಆಕಳು ಎತ್ತುಗಳಿಗೆ ಉಳಿದ ಎಲ್ಲ ಪಶುಗಳಿಗಿಂತ ಹೆಚ್ಚು ಮಾನ ಸಿಗು ತ್ತಿತ್ತು. ಆನೆ ಕುದುರೆಗಳಂತೂ ಈ ದೇಶದಲ್ಲಿ ವಿಶೇಷ ವಾಗಿ ಸಿಗುತ್ತಿದ್ದಿಲ್ಲ. ಆನೆಗಳು ಸಿಂಹಲದ್ವೀಪದಿಂದಲೂ ಕುದುರೆಗಳು ಆರ್ಮುಝು ಖಂಬಾಯತ ಆಖಾತಗ ಳಿಂದಲೂ ತರಲ್ಪಡುತ್ತಿದ್ದವೆಂದು ಬಾರ್ಬೊಸಾ ಇವನು ಹೇಳುತ್ತಾನೆ. ಈ ಪಶುಗಳು ಮುಖ್ಯವಾಗಿ ಯುದ್ಧದಲ್ಲಿ ಉಪಯೋಗಿ ಆಗಿದ್ದುದರಿಂದ ಅವುಗಳ ಜೋಪಾಸನೆಯ ಬಗ್ಗೆ ಅರಸರೂ ಸರದಾರರೂ ವಿಶೇಷ ಲಕ್ಷ್ಯ ಕೊಡುತ್ತಿದ್ದರು. ನರಸಿಂಗರಾಯನ ಕಾಲದಲ್ಲಿ ೪೦ ಸಾವಿರ ಕುದುರೆ ಸ್ವಾರರೂ ಸುಮಾರು ಒಂದು ಸಾವಿರ ಆನೆಗಳೂ ಇದ್ದವಂತೆ. ಯುದ್ಧದಲ್ಲಿ ಮತ್ತು ಪ್ರಯಾಣದಲ್ಲಿ ಈ ಪಶುಗಳ ಉಪಯೋಗವಾಗುತ್ತಿ ದ್ದದರಿಂದಲೂ ಇವು ಈ ದೇಶದಲ್ಲಿ ಸಿಗದ್ದರಿಂದಲೂ ಇವುಗಳ ಬೇಡಿಕೆಯು ಹೆಚ್ಚಾಗಿತ್ತು. ಯುದ್ಧ ಸಾಮಗ್ರಿ ಗಳನ್ನು ಒಯ್ಯುವದಕ್ಕೂ ಕಾಗದ ಪತ್ರ ಮತ್ತು ತೀವ್ರ ಕಳಿಸತಕ್ಕ ಸುದ್ದಿ ಸಂಗತಿಗಳನ್ನು ಮುಟ್ಟಿಸು ವದಕ್ಕೂ ಒಂಟೆಗಳು ಉಪಯೋಗಿಸಲ್ಪಡುತ್ತಿದ್ದವು.

ಮಾರ್ಗಗಳಲ್ಲಿ ಪ್ರವಾಸಿಗಳ ಅನುಕೂಲ ತೆಯ ಸಲುವಾಗಿ ದಾರಿಗುಂಟ ಗಿಡಗಳೂ ಅಲ್ಲಲ್ಲಿಗೆ ವಿಶ್ರಾಂತಿ ಗೃಹಗಳೂ ಇದ್ದವೆಂದು ಮೇಲೆ ಹೇಳಿದೆ ಯಷ್ಟೇ! ಆ ಕಾಲದಲ್ಲಿ ಈಗಿನ ಕಾಲದ ವಾಹನ ಸಾಧನಗಳಿಲ್ಲದಾಗ್ಯೂ ಪ್ರವಾಸವು ಪ್ರಯಾಣಸ್ಥರಿಗೆ ಸುಖಕರವಿತ್ತೆಂದು ಹೇಳಬಹುದು. ಆದರೆ ಪ್ರವಾಸ ಮಾಡಲಿಕ್ಕೆ ವೇಳೆಯು ಮಾತ್ರ ಬಹಳ ಹತ್ತುತ್ತಿತ್ತು. ರಾಜಧಾನಿಯಿಂದ ಮಂಗಳೂರ ಬಂದರಕ್ಕೆ ತಲು ಪುವದಕ್ಕೆ ಹದಿನೆಂಟು ದಿವಸಗಳು ಬೇಕಾಗುತ್ತಿದ್ದ ವೆಂದು ಹೇಳುವರು. ಮಾರ್ಗಗಳ ನಡುವೆ ಬಂದ ನದಿ ಹಳ್ಳಗಳನ್ನು ದಾಟುವದಕ್ಕೆ ಹರಗೋಲು ಮುಂತಾದ ಸಾಧನಗಳು ಸಹ ಇದ್ದವು. ಕೆಲಕೆಲವು ಕಡೆಯಲ್ಲಿ ಪೂಲು ಪರಸಿಗಳನ್ನು ಸಹ ಕಟ್ಟಿಸಿದ್ದರು. ಆದರೂ ವಿಶೇಷವಾಗಿ ಉಪಯೋಗದಲ್ಲಿದ್ದವುಗಳೆಂದರೆ ಹರಗೋಲು ತೆಪ್ಪ ಮುಂತಾದವುಗಳೇ. ಇವುಗಳನ್ನು ದಂಡೆಯಿಂದ ದಂಡೆಗೆ ಒಯ್ಯುವದಕ್ಕೆ ಅಂಬಿಗರು ನೇಮಿಸಲ್ಪಡುತ್ತಿದ್ದರು.

ಸಾಮಾನ್ಯ ಜನರು ಪ್ರವಾಸದಲ್ಲಿ ವಾಹನಗಳೆಂದು ಎತ್ತುಗಳನ್ನೇ ಉಪಯೋಗಿಸುತ್ತಿದ್ದರು. ತಮ್ಮ ಹೆಂಡರು ಮಕ್ಕಳುಗಳ ಸಹಿತವಾಗಿ ಪ್ರವಾಸ ಮಾಡು ವಾಗ ಎತ್ತಿನ ಬಂಡಿಗಳನ್ನು ಉಪಯೋಗದಲ್ಲಿ ತರು ತ್ತಿದ್ದರು. ಆದರೆ ಶ್ರೀಮಂತರು ಭೋಯಿಗಳಿಂದ ಒಯ್ಯಲ್ಪಡುವ ಪಲ್ಲಕ್ಕಿ ಮೇಣೆ ಮುಂತಾದ ವಾಹನ ಗಳಲ್ಲಿ ಪ್ರವಾಸ ಮಾಡುತ್ತಿದ್ದರು. ಈ ಭೋಯಿಗಳಿಗೆ ಮುಂಗಡವಾಗಿ ವೇತನವನ್ನು ಕೊಡಬೇಕಾಗಿದ್ದರೂ ಅವರು ನಂಬಿಗಸ್ಥರಿರುತ್ತಿದ್ದರು. ಈ ವಿಷಯದಲ್ಲಿ ಸೀಜರ್ ಫ್ರೆಡ್ರಿಕ್‌ನೆಂಬ ಪ್ರವಾಸಿಕನು ಹೇಳುವ ಕಥೆಯು ಬಹು ಮನೋರಂಜಕವಾಗಿರುವದು. ಒಮ್ಮೆ ಈ ಪ್ರವಾಸಿಕನು ಅನೇಗುಂದಿಯಿಂದ ಅಂಕೋಲಾ ಮಾರ್ಗವಾಗಿ ಗೋವೆ ಪ್ರಾಂತಕ್ಕೆ ಹೋಗುವಾಗ ಮಳೆಗಾಲವಿತ್ತಲ್ಲದೆ ದಾರಿಯು ಸುರಕ್ಷತವಿದ್ದಿಲ್ಲಾದ್ದ ರಿಂದ ಅಂಕೋಲೆಯಿಂದ ಗೋವೆಗೆ ಹೋಗುವ ಸಲು

ವಾಗಿಒಂದುಪಲ್ಲಕ್ಕಿಯ.ನ್ನುಗೊತ್ತುಮಾಡಿದನು ಅವನ ಸಂಗಡ ಮತ್ತಿಬ್ಬರು ಪ್ರವಾಸಿಕರಿದ್ದರು, ಆದರೂ ತನ್ನ ಹತ್ತರಿದ್ದ ವಜ್ರ ಮುಂತಾದ ಬೆಲೆಯುಳ್ಳ ಒಡವೆ ಗಳನ್ನು ಕೈಯೊಳಗಿನ ಬಡಿಗೆಯ ಹೊಟ್ಟೆಯಲ್ಲಿ ಹಾಕಿ ಕಳ್ಳಕಾಕರಿಗೆ ತಿಳಿಯದಂತೆ ವ್ಯವಸ್ಥೆ ಮಾಡಿಕೊಂಡು ಹೊರಟನು. ಮುಂದೆ ದಾರಿಯಲ್ಲಿ ದಟ್ಟವಾದ ಒಂದು ಅರಣ್ಯವನ್ನು ದಾಟುವಾಗ ಕಳ್ಳರದೊಂದು ತಂಡಿನ ಕೈಯಲ್ಲಿ. ಸಿಕ್ಕನು. ಆಗ ಆತನ ಕೂಡ ಇದ್ದ ಪ್ರವಾಸಿ ಗಳು ಸ್ವಲ್ಪ ಮುಂದೆ ಹೋಗಿದ್ದರು ಪಲ್ಲಕ್ಕಿಯನ್ನು ಹೊತ್ತಂಥ ಆತನ ಭೋಯಿಗಳು ಪಲ್ಲಕ್ಕಿಯನ್ನು ಒಗೆದು ದಿಕ್ಕಾಪಾಲಾದರು. ಮುಂದೆ ಕಳ್ಳರು ಹತ್ತ ರಿದ್ದ ಅಲ್ಪಸ್ವಲ್ಪ ಹಣವನ್ನು ಅಪಹರಿಸಿಕೊಂಡು ಹೋದನಂತರ ಭೋಯಿಗಳು ಸಮಿಪವಿಲ್ಲದ್ದನ್ನು ನೋಡಿ ಫ್ರೆಡರಿಕ್‌ನು ತನ್ನ ಬೆತ್ತವನ್ನು ತಕ್ಕೊಂಡು ನಡೆಯುತ್ತ ಹೋಗುವ ವಿಚಾರ ಮಾಡುವಷ್ಟರಲ್ಲಿ ಭೋಯಿಗಳು ತಿರುಗಿ ಬಂದು ಆತನನ್ನು ಪಲ್ಲಕ್ಕಿ ಯಲ್ಲಿ ಕುಳ್ಳಿರಿಸಿ ಗೋವೆಯ ಕಡೆಗೆ ಸಾಗಿದರು ಭೋಯಿಗಳು ತಿರುಗಿ ಬಂದುದನ್ನು ನೋಡಿ ಅವನು ಆಶ್ಚರ್ಯ ಚಕಿತನಾಗಿ ಅವರನ್ನು ಕೇಳಲು ತಮಗೆ ಗೋವೆಯವರೆಗೆ ಮುಟ್ಟಿಸುವ ವೇತನವು ಮುಂಗಡ ಸಿಕ್ಕದ್ದರಿಂದ ತಿರುಗಿ ಬಂದು ಆತನನ್ನು ಮುಟ್ಟಿಸು ವದು ತಮ್ಮ ಕರ್ತವ್ಯವೇ ಇತ್ತೆಂದು ಉತ್ತರಿಸಿದರು. ಈ ಸಣ್ಣ ಕಥೆಯು ಮೇಲಿಂದ ಆಗಿನ ಕರ್ನಾಟಕ ಜನರು ಕರ್ತವ್ಯದಕ್ಷರೂ ಪ್ರಾಮಾಣಿಕರೂ ಇದ್ದ ರೆಂದು ಕಂಡುಬರುತ್ತದೆ.

ಪೂರ್ವ ಪಶ್ಚಿಮ ದಕ್ಷಿಣದಲ್ಲಿಯೂ, ಪ್ರದೇಶದ ಮಧ್ಯ ಭಾಗದಲ್ಲಿಯೂ ದೊಡ್ಡ ದೊಡ್ಡ ಪಟ್ಟಣಗಳು ಇದ್ದವು. ಆ ಕಾಲದ ಪಟ್ಟಣಗಳಲ್ಲಿ ಮಿರ್ಜಾನ, ಹೊನ್ನಾವರ, ಭಟಕಳ, ಬೈಂದೂರ, ಬಸರೂರ, ಕುಂಬಳಾ ಮೊದಲಾದ ಪಟ್ಟಣಗಳು ವ್ಯಾಪಾರ ದೃಷ್ಟಿಯಿಂದಲ್ಲದೆ ಬೌದ್ಧಿಕ ಕ್ಷೇತ್ರದಲ್ಲಿ ಸಹ ಮುಂದೊರೆದಿದ್ದವು ಒಳನಾಡಿನಲ್ಲಿ ಇದೇ ಪ್ರಕಾರ ದೊಡ್ಡ ದೊಡ್ಡ ಶಹರುಗಳೂ ಊರುಗಳೂ ಸ್ಥಾಪಿಸ ಲ್ಪಟ್ಟಿದ್ದವೆಂದು ಆ ಕಾಲದ ಪ್ರವಾಸಿಕರು ಹೇಳುವರು. ಒಟ್ಟಿನ ಮೇಲೆ ವಿಜಯನಗರ ಸಾಮ್ರಾಜ್ಯ ಕಾಲದ ಜನರ ಸ್ಥಿತಿಗತಿಯನ್ನು ನೋಡಲಾಗಿ ಈ ದೇಶವು ವ್ಯಾಪಾರೋದ್ಯೋಗಗಳಿಂದ ಬೆಳೆದದ್ದಾಗಿಯೂ ಸುಖ ಸಂಪತ್ತುಗಳಿಂದ ಸಮೃದ್ಧವಾಗಿಯೂ ಬೌದ್ಧಿಕ ದೃಷ್ಟಿ ಯಿಂದ ಮುಂದೊರೆದದ್ದಾಗಿಯೂ ಇತ್ತೆಂದು ಊಹಿಸ ಲಿಕ್ಕೆ ಅಡ್ಡಿಯಿಲ್ಲ.

---

# ಹಾಳು ಹಂಪೆ.

( **ಕವಿ – ಭಾರತೀಸುತ,** ಮಂಗಳೂರು )

ಹರಿಯ ಮುರಲಿಯ ಮಾಯೆಯಲ್ಲಿ-
ಕನ್ನಡಮ್ಮನ ಅಂಕದಲ್ಲಿ-
ಮೆರೆದ ಹಿಂದಿನ ಖ್ಯಾತ ಹಂಪೆ ?
ಈಗ ನಿನಗೇನಿಹುದು—ಜಂಪೆ ?
ಓ **ಹಾಳು ಹಂಪೆ !** ೧

ಗರುವ ದೇವನ ಗದೆಯ ಗರ್ವದಿ
ವೀರ ನರಸುಂಗವರ ಧೈರ್ಯದಿ,
ಮಾಯೆಯೆಸಗಿದ ಖ್ಯಾತ ಹಂಪೆ !
ಈಗ ನಿನಗೇನಿಹುದು—ಜಂಪೆ
ಓ **ಹಾಳು ಹಂಪೆ !** ೨

ಎಲ್ಲಿ ಮುಗಿಲನ್ನೇರ್ವ ಖ್ಯಾತಿ ?
ಎಲ್ಲಿ ಧೈರ್ಯದ ವಜ್ರಛಾತಿ ?
ದ್ವೇಷ ಕಲಹದ ಸುಳಿಗೆ ಸಿಲುಕಿ
ಬಾದ ಶಹರಾ ಕರವ ಕುಲುಕಿ
ಸೊಗದಿ ಹಿಗ್ಗಿದ ಖ್ಯಾತಹಂಪೆ !
ಈಗ ನಿನಗೇನಿಹುದು—ಜಂಪೆ ?
ಓ **ಹಾಳು ಹಂಪೆ !** ೩

**ಹುಕ್ಕ ಬುಕ್ಕರ** ಜಲವಿಸಿಂಚನ
ಆಯ್ತು ನಿನಗಸು ಬರಲು ಕಾರಣ
**ದೇವರಾಯನ** ಗರುವಹಂಪೆ !
ಈಗ ನಿನಗೇನಿಹುದು—ಜಂಪೆ ?
ಓ **ಹಾಳು ಹಂಪೆ !** ೪

**ಕೃಷ್ಣದೇವನ ಹಿಗ್ಗು** ಸಾರಿದೆ,
ರಾಮರಾಜನ ತಗ್ಗು ತೋರಿದೆ,
ಜನತೆಯುಸುರಿತು 'ಖ್ಯಾತ ಹಂಪೆ'!
ಈಗ ನಿನಗೇನಿಹುದು—ಜಂಪೆ ?
ಓ **ಹಾಳು ಹಂಪೆ !** ೫

ವಿಜಯ ಗುಡಿ ತೋರಣವದೆಲ್ಲಿ ?
ದ್ವಿಜರ ಮಂತ್ರದ ಘೋಷವೆಲ್ಲಿ ?
ಮರೆಯಲಾಗದ ರಾಜ್ಯ ಹಂಪೆ !
ಮರೆತು ಹೋಗಿಹೆಯಲ್ಲ ಹಂಪೆ?
ಓ **ಹಾಳು ಹಂಪೆ !** ೬

# ವಿಜಯನಗರದ ಧ್ವಜವು ಯಾವುದು ?

ಲೇಖಕರು :—ಶ್ರೀ ದೇಸಾಯಿ ಪಾಂಡುರಂಗರಾಯರು ಬಿ ಎ. [ಆನರ್ಸ] ಧಾರವಾಡ.

ವಿಜಯನಗರದ ಧ್ವಜವು ಹೇಗೆ ಇದ್ದಿತು ಎಂಬುದನ್ನು ಕುರಿತು ವಿಚಾರಿಸುವ ಮೊದಲು ಈ ಧ್ವಜ ಮುಂತಾದ ಸಂಕೇತಗಳ ಬಗೆಗೆ ನಮ್ಮ ಅರಸರ ಪೂರ್ವ ಪರಂಪರೆ ಏನು ಇದ್ದಿತು ಎಂಬುದನ್ನು ಪರಿಶೀಲಿಸುವ ಕರ್ನಾಟಕದಲ್ಲಿಯೂ ಬೇರೆ ನಾಡಿನಲ್ಲಿಯೂ ಆಳಿದ ಅರಸುಮನೆತನಗಳಿಗೆ ಸಾಮಾನ್ಯವಾಗಿ ಎರಡು ವಿಧದ ಗೌರವ ರಾಜಚಿನ್ಹೆಗಳು ಇರುತ್ತಿದ್ದವು.

[೧] ರಾಜಮುದ್ರೆ, ನಾಣ್ಯ, ಶಾಸನ ಮುಂತಾದವುಗಳಲ್ಲಿ ಒಡೆದು ಕಾಣುವ ಬಿರುದಿನ ಚಿನ್ಹೆ. ಇದಕ್ಕೆ **ಲಾಂಛನ (crest)** ವೆಂದು ಹೆಸರು.

[೨] ಯುದ್ಧ, ವಿಜಯಯಾತ್ರೆ ಮೊದಲಾದ ಪ್ರಸಂಗಗಳಲ್ಲಿ ಉನ್ನತವಾದ ಧ್ವಜಸ್ತಂಭದ ಮೇಲೆ ಕುಣಿದಾಡುವ ಧ್ವಜ ಚಿನ್ಹೆ [banner]

ಉದಾಹರಣಾರ್ಥವಾಗಿ ಕೆಲವು ಅರಸುಮನೆತನಗಳ ಧ್ವಜ, ಲಾಂಛನ ಸಂಕೇತಗಳನ್ನು ಇಲ್ಲಿ ಕಾಣಿಸುವೆವು.

| | ಮನೆತನ | ಲಾಂಛನ | ಧ್ವಜ |
|---|---|---|---|
| [೧] | ಗಂಗ. | ಮದಗಜ. | ಪಿಂಛ (ಗರಿ) |
| [೨] | ಚಾಲುಕ್ಯ(ಬಾದಾಮಿ) | ವರಾಹ. | ಪಾಲಿಧ್ವಜ. |

ಪಾಲಿಧ್ವಜ ವೆಂದರೆ ಸಾಲಾಗಿ ರಚಿಸಿದ ಸಣ್ಣ ಸಣ್ಣ ಬಾವುಟಗಂದ ರೂಪುಗೊಟ್ಟ ವಿಶಿಷ್ಟ ಆಕೃತಿ

| | | | |
|---|---|---|---|
| [೩] | ರಾಷ್ಟ್ರಕೂಟ | ಇತರ ಪಾಲಿಧ್ವಜ; | ಗರುಡ |
| (೪) | ಸವದತ್ತಿಯ ರಟ್ಟರು. | ಗಜ. | ಗರುಡ. |
| (೫) | ಕದಂಬ | ಸಿಂಹ | ವಾನರ. |

ಕೆಲವು ಅರಸುಮನೆತನಗಳ ಲಾಂಛನ-ಧ್ವಜಗಳು ಇವು ಎರಡೂ ಒಂದೆ ಇದ್ದುವಾಗಿ ತಿಳಿಯಬರುತ್ತದೆ.

ಉದಾಹರಣಾರ್ಥವಾಗಿ,

| | | | |
|---|---|---|---|
| (೧) | ಕಲಚೂರ್ಯ | ವೃಷಭ | ವೃಷಭ |
| (೨) | ಯಾದವ | ಗರುಡ | ಗರುಡ |
| [೩] | ಹೊಯ್ಸಳ (ಯಾದವ) | ಹುಲಿ | ಹುಲಿ |

ಈ ಎರಡು ಸಾಂಪ್ರದಾಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಲ್ಲಿ ಕೆಲವು ಸಾಮಾನ್ಯ ನಿಯಮ ಪ್ರವೃತ್ತಿಗಳು ಹೊಳೆದು ತೋರುವವು ಅದು ಹೀಗೆ,

(೧) ಲಾಂಛನ ಧ್ವಜಗಳನ್ನು ಬೇರೆ ಬೇರೆಯಾಗಿ ಇಟ್ಟುಕೊಳ್ಳುವ ಪ್ರವೃತ್ತಿ ಮೊದ ಮೊದಲಿನ ಅರಸರಲ್ಲಿ ಹೆಚ್ಚಾಗಿ ಕಾಣುಬರುತ್ತದೆ.

[೨] ಮುಂದು ಮುಂದಿನ ಅರಸರು ಈ ವಿಭೇದವನ್ನು ಪಾಲಿಸುವುದರತ್ತ ಹೆಚ್ಚು ಆಸಕ್ತಿಯನ್ನು ತೋರಲಿಲ್ಲ

(೩) ಯಾದವ ಮನೆತನದಲ್ಲಿ ಒಂದೇ ಚಿನ್ಹೆಯನ್ನು ಎರಡಕ್ಕೂ ಉಪಯೋಗಿಸುವ ರೂಢಿ ಪ್ರಬಲವಾಗಿ ಇದ್ದಂತೆ ಕಾಣುತ್ತದೆ.

ಈ ನಿಷ್ಕರ್ಷಗಳ ಪೂರ್ವಸಾಮಗ್ರಿಯನ್ನು ಎತ್ತಿಕೊಂಡು ವಿಜಯನಗರದತ್ತ ತಿರಳುವ. ವಿಜಯನಗರದ ಧ್ವಜವನ್ನು ಕುರಿತು ಸಂಶೋಧನ ಮಾಡುವಾಗ ಕೆಲವು ಸೋಜಿಗದ ಸಂಗತಿಗಳು ಅನುಭವಕ್ಕೆ ಬಂದುವು. ಅದೇನೆಂದರೆ,

(೧) ವಿಜಯನಗರದ ಅರಸರ ಧ್ವಜಚಿನ್ಹೆಯ ಸವಿಸ್ತರ ವರ್ಣನೆ ಗ್ರಂಥ, ಶಾಸನ, ಪರಕೀಯ ಪ್ರವಾಸಿಗಳ ವರ್ಣನೆ ಮುಂತಾದ ಪ್ರಬಂಧ ಸಾಮಗ್ರಿಯಲ್ಲಿ ಎಲ್ಲಿಯೂ ಸ್ಪಷ್ಟವಾಗಿ ಉಪಲಬ್ಧವಾಗಿಲ್ಲ ಈಗ ತಿಳಿದ ಮಟ್ಟಿಗೆ ವಿಜಯನಗರಕಾಲದ ಗುಡಿಗೋಪುರಗಳ ಶಿಲ್ಪದಲ್ಲಿಯೂ ಧ್ವಜಾಕೃತಿ ಒಡಮೂಲ್ಲ ಆದರೂ ವಿಜಯನಗರದವರಿಗೆ ತಮ್ಮ ಧ್ವಜದ ವಿಷಯದಲ್ಲಿ ಅತ್ಯಂತ ಅಭಿಮಾನವಿದ್ದಿತೆಂದೂ ಅದನ್ನು ಅವರು ತಮ್ಮ ರಾಷ್ಟ್ರೀಯ ಹಬ್ಬವಾದ ಮಾನವಮಿ ಉತ್ಸವದಲ್ಲಿ ಬಹು ಆಸ್ಥೆಯಿಂದ ಮೆರೆಸುತ್ತಿದ್ದರೆಂದೂ ಮಾನವಮಿ ಉತ್ಸವವನ್ನು ವರ್ಣಿಸುವಾಗ ಪೇಜನು ಹೇಳುವನು.

(೨) ಮಧುರಾವಿಜಯಂ ಮೊದಲಾದ ಗ್ರಂಥಗಳಲ್ಲಿಯೂ ಕೆಲವೆಡೆಯ ವೀರಗಲ್ಲು ಮೊದಲಾದ ಶಿಲ್ಪಚಿತ್ರದಲ್ಲಿಯೂ ಧ್ವಜದ ನಿರ್ದೇಶವೂ ಕುರುಹೂ ದೊರೆವುವು. ಆದರೆ ಅದರಿಂದ ಅದರ ವಿಶಿಷ್ಟ ಸಂಕೇತ ಇಲ್ಲವೆ ಆಕೃತಿಯ ಕಲ್ಪನೆ ಬರುವಂತಿಲ್ಲ

ಹೀಗಿದ್ದರೆ ವಿಜಯನಗರದರಸರು ಧ್ವಜ ಚಿನ್ಹೆಯನ್ನೇ ಉಪಯೋಗಿಸುತ್ತಿದ್ದಿಲ್ಲವೆಂದು ಏಕೆ ತಿಳಿಯಬಾರದು ಎಂದು ಯಾರಾದರೂ ಕೇಳಬಹುದು. ಹೀಗೆ

ಕೇಳಬಹುದಾದರೂ ಹೀಗೆ ತೀರ್ಪುದು ಪೂರ್ತ್ರ ಸಯುಕ್ತಿಕವಾಗಿಲ್ಲ. ಧ್ವಜಚಿನ್ಹೆಯನ್ನು ಉಪಯೋಗಿಸುವುದು ಪ್ರಾಚೀನಕಾಲದಿಂದ ನಡೆದುಬಂದ ನಮ್ಮ ಅರಸರ ಸಾಂಪ್ರದಾಯ. ಇದನ್ನು ಯಾರೂ ಉಲ್ಲಂಘಿಸಿದಂತೆ ತೋರುವುದಿಲ್ಲ ಉಲ್ಲಂಘಿಸುವುದು ಶಕ್ಯವೂ ಇಲ್ಲ. ಆದರಲ್ಲಿ ವಿಜಯನಗರದಂತಹ ವಿಜಯಶಾಲಿ ಸಮ್ರಾಟರು ಧ್ವಜದ ಮಹತ್ವವನ್ನು ಅರಿತಿದ್ದಿಲ್ಲವೆಂದು ಕಲ್ಪಿಸುವುದು ಕೂಡ ಅಸಮಂಜಸವಾಗಿದೆ ಅಂತೂ ವಿಜಯನಗರಕ್ಕೆ ಧ್ವಜವು ಇದ್ದಿರಬೇಕು ಅಂದಮೇಲೆ ಆ ಧ್ವಜವು ಯಾವುದು ?

ಇಲ್ಲಿ ಪ್ರತ್ಯಕ್ಷ ಪ್ರಮಾಣದ ಅಭಾವಮೂಲಕ ಸಯುಕ್ತಿಕವಾದ ಅನುಮಾನ ಬಲವನ್ನೆ ಅಂಗೀಕರಿಸಿ ಮುಂದೆ ಸಾಗಬೇಕಾಗಿದೆ

(೧) ಯಾದವ ಹಾಗೂ ಹೊಯ್ಸಳ ಮನೆತನಗಳೊಡನೆ ವಿಜಯನಗರದ ಸಂಗಮಮನೆತನದ ರಕ್ತ ಸಂಬಂಧಗಳಿದ್ದವೆ

(೨) ವಿಜಯನಗರದವರೂ ಸ್ವತಃ ಯಾದವ ವಂಶದವರು.

(೩) ಯಾದವ ಮನೆತನದಲ್ಲಿ ಹಿಂದೆ ನೋಡಿದಂತೆ ಧ್ವಜ ಲಾಂಛನಗಳನ್ನು ಒಂದನ್ನಾಗಿ ಇಟ್ಟುಕೊಳ್ಳುವ ಸಾಂಪ್ರದಾಯವು ಕಾಣಬರುತ್ತದೆ

(೪) ವಿಜಯನಗರದವರು ಹೊಯ್ಸಳರ ಅನೇಕ ಸಾಂಪ್ರದಾಯಗಳನ್ನು ಅನುಸರಿಸಿದಂತೆ ಈ ಧ್ವಜ ಸಾಂಪ್ರದಾಯವನ್ನೂ ಅನುಸರಿಸಿರುವುದು ಸಂಭವನೀಯವೂ ಸಯುಕ್ತಿಕವೂ ಆಗಿದೆ.

ಆದುದರಿಂದ ವಿಜಯನಗರದ ಧ್ವಜಲಾಂಛನಗಳು ಒಂದೇ ಆಗಿರಬೇಕು. ಈಗ ವಿಜಯನಗರದ ಲಾಂಛನ [crest] ಯಾವುದಿದ್ದಿತು ಎಂಬುದನ್ನು ನೋಡಿದರೆ ಧ್ವಜವೇನಿದ್ದಿತು ಎಂಬುದೂ ನಿರ್ಣಯವಾದಂತೆ ಆಗುವುದು

(೧) ವಿಜಯನಗರ ಅರಸರ ತಾಮ್ರಶಾಸನಗಳ ಮೇಲೆ ವರಾಹ ಮುದ್ರೆ ಹೆರಿಯುತ್ತಿದ್ದರವುದು.

(೨) ವಿಜಯನಗರದ ನಾಣ್ಯಗಳ ಮೇಲೆ ಎತ್ತು, ಆನೆ, ಗಂಡಭೇರುಂಡ, ಶಿವ, ಪಾರ್ವತೀ, ವಿಷ್ಣು-ಲಕ್ಷ್ಮೀ, ವೆಂಕಟೇಶ ಮುಂತಾದ ಚಿನ್ಹಗಳು ದೊರೆಯುತ್ತವೆ. ಕೆಲವು ನಾಣ್ಯಗಳ ಮೇಲೆ ವರಾಹವು ದೊರೆಯುತ್ತದೆ ಉದಾಹರಣಾರ್ಥವಾಗಿ ಕೃಷ್ಣದೇವರಾಯನ ನಾಣ್ಯ [ Mysore Gazetteer Vol II part I, p 89 ) ವಿಜಯನಗರ ಅರಸರ ವರಾಹಪ್ರೇಮದ ಇನ್ನೊಂದು ಕುರುಹೆಂದರೆ ವಿಜಯನಗರದ ಅರಸರೂ ಕೆಲ ಮಾಂಡಲಿಕರೂ ವರಾಹದ ಬಿರುದನ್ನು ಧರಿಸಿರುವದು. ಉದಾಹರಣಾರ್ಥವಾಗಿ ಆರವೀಡು ತಿರುಮಲರಾಯನಿಗೆ ಧರಣೀ ವರಾಹ ಎಂಬ ಬಿರುದು ಇತ್ತು. ಇಷ್ಟು ಕೊನೆಯಕಾಲದಲ್ಲಿ ವಿಜಯನಗರದ ನಾಲ್ಕನೆಯ ಮನೆತನದಲ್ಲಿ ಈ ವರಾಹಭಕ್ತಿ ನಡೆದು ನಿಂತಿರಬೇಕಾದರೆ ಅದು ಮೊದಲಿನಿಂದಲೆ ಅವರಲ್ಲಿ ದೃಢವಾಗಿದ್ದಿರಬೇಕು ಎಂದು ಸ್ಪಷ್ಟವಾಗುತ್ತದೆ.

ವಿಜಯನಗರ ಅರಸರ ವರಾಹಭಕ್ತಿಯ ಮೀಮಾಂಸೆಯನ್ನು ಇಲ್ಲಿ ಸಂಕ್ಷೇಪವಾಗಿ ಮಾಡುವುದು ಯುಕ್ತವಾಗಿದೆ ಕರ್ನಾಟಕದ ಅರಸರು ಉನ್ನತ ರಾಜಧರ್ಮ ಉದಾರ ರಾಜನೀತಿ, ಇವುಗಳಿಂದ ಪ್ರೇರಿತರಾಗಿ ರಾಜ್ಯಗಳನ್ನು ಸ್ಥಾಪಿಸಿ ಆಳಿದರು. ರಾಜ್ಯವೆಂದರೆ ರಾಷ್ಟ್ರವು. ರಾಷ್ಟ್ರದ, ಜನಾಂಗದ, ಪ್ರಜಾವರ್ಗದ, ಹಿತಕ್ಕಾಗಿಯೇ ರಾಜ್ಯದ ಅಸ್ತಿತ್ವ ಎಂಬ ತತ್ವವನ್ನು ಅವರು ಚೆನ್ನಾಗಿ ಅರಿತಿದ್ದು ಅದರಂತೆ ಆಚರಿಸಲು ಯಥಾಶಕ್ತಿ ಹೆಣಗಿದರು ರಾಜ್ಯವನ್ನು ಸ್ಥಾಪಿಸಿ ರಾಷ್ಟ್ರವನ್ನು ಕಟ್ಟುವುದೆಂದರೆ ಸಮುದ್ರದಲ್ಲಿ ಮುಳುಗಿದ ಭೂಮಿಯನ್ನು ವರಾಹನು ಎತ್ತಿ ಉದ್ಧಾರ ಮಾಡಿದಂತೆ ಅರಾಜಕದ, ಕುರಾಜಕದ ಪ್ರಲಯದಿಂದ ದೇಶವನ್ನೂ ಜನಾಂಗವನ್ನೂ ಕಾಪಾಡುವುದು ಎಂದು ಅವರು ಬಗೆದಿದ್ದರು. ಅಂತೆಯೇ ಈ ಘಟನೆಯ ಸೂಚಕವಾದ ವರಾಹ ಸಂಕೇತವನ್ನು ಮೊದಲು ಬಾದಾಮಿಯ ಚಾಲುಕ್ಯರು ತಮ್ಮ ರಾಜಶಾಸನಗಳ ಮೇಲೆ ಪ್ರಾಮುಖ್ಯವಾಗಿ ಧರಿಸಿದರು. ಅವರ ಶಾಸನಗಳ ಆರಂಭದಲ್ಲಿ ವಿಷ್ಣುವಿನ ವರಾಹಾವತಾರ ಸ್ತುತಿ ಇರುತ್ತದೆ ಅದು ಹೀಗೆ,

ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ
ಕ್ಷೋಭಿತಾರ್ಣವಂ
ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತಭುವನಂ ವಪುಃ ॥

ಬಾದಾಮಿಯಿಂದ ವಿಜಯನಗರಕ್ಕೆ ಇಳಿಯುವ ವಿಜಯನಗರ ಸ್ಥಾಪನೆಯ ಆರಂಭದಲ್ಲಿ ದಕ್ಷಿಣ ಭಾರತವು ಎಂತಹ ಅರಾಜಕಕ್ಕೆ ಈಡಾಗಿತ್ತು; ಹಿಂದು ಜನಾಂಗ, ಹಿಂದು ಧರ್ಮ, ಹಿಂದು ಸಂಸ್ಕೃತಿ ಇವುಗಳ ಮೇಲೆ ಎಂತಹ ಭೀಷಣ ಗಂಡಾಂತರವು ಒದಗಿತ್ತು ಎಂಬುದನ್ನು ಆಲೋ

ಚಿಸಿದರೆ, ಇಂತಹ ಘೋರ ಪ್ರಲಯದಿಂದ ದೇಶವನ್ನು ಉದ್ಧಾರಮಾಡಿ ಹಿಂದು ಸಾಮ್ರಾಜ್ಯವನ್ನು ಸ್ಥಾಪಿಸಿದ ವಿಜಯನಗರದ ಅರಸರು ವರಾಹವನ್ನು ತಮ್ಮ ರಾಜಚಿನ್ಹೆಯನ್ನು ಮಾಡಿಕೊಂಡುದು ಎಷ್ಟು ಸಯುಕ್ತಿಕವಾಗಿದೆ ಎಂಬುದು ಇನ್ನಷ್ಟು ಮನದಟ್ಟಾಗುತ್ತದೆ. ನಿಜವಾಗಿ ವಿಜಯನಗರದ ಅರಸರಿಗೆ ವರಾಹ ಲಾಂಛನವು ಒಪ್ಪಿದಷ್ಟು ಇನ್ಯಾವ ಅರಸರಿಗೂ ಒಪ್ಪುವದಿಲ್ಲ. ವಿಜಯನಗರದ ಶಾಸನಗಳಲ್ಲಿಯೂ ವರಾಹ ಸ್ತುತಿ ಪ್ರಾಮುಖ್ಯವಾಗಿ ಬರುತ್ತದೆ.

ವಿಜಯನಗರದ ನಾಲ್ಕನೆಯ ಮನೆತನದ ತಿರುಮಲರಾಯನು ಧರಣೀವರಾಹ ಎಂಬ ಬಿರುದನ್ನು ಧರಿಸುವಲ್ಲಿಯೂ ಇದೇರೀತಿಯ ಔಚಿತ್ಯವಿದೆ. ರಕ್ಕಸತಂಗಡಗಿಯ ಪ್ರಚಂಡ ಪ್ರಲಯದಿಂದ ವಿಜಯನಗರ ಸಾಮ್ರಾಜ್ಯವನ್ನು ಉಳುಹಲು ಈ ರಾಯನು ಹೆಣಗಿದನು. ಅದರಲ್ಲಿ ಆತನಿಗೆ ಕೆಲಮಟ್ಟಿಗೆ ಯಶವೂ ದೊರೆತಿತು. ಆತನ ಈ ಸಾರ್ಥವಾದ ಬಿರುದು ಇದನ್ನೆ ಸೂಚಿಸುತ್ತದೆ.

ಈ ರೀತಿಯಾಗಿ ವಿಚಾರಮಾಡಿ ನೋಡಿದಲ್ಲಿ, ವಿಜಯನಗರದ ಅರಸರಿಗೆ ಪ್ರಿಯವಾಗಿ ವಿಜಯನಗರ ಸಾಮ್ರಾಜ್ಯದ ಜೀವಾಳದ ಕುರುಹಾದ ವರಾಹ ಲಾಂಛನವನ್ನೇ ವಿಜಯನಗರದ ಅರಸರು ತಮ್ಮ ಧ್ವಜ ಚಿನ್ಹೆಯಾಗಿ ಮಾಡಿಕೊಂಡಿದ್ದರೆಂದು ಸ್ಪಷ್ಟವಾಗುತ್ತದೆ.

ಆದುದರಿಂದ ವಿಜಯನಗರದ ಧ್ವಜವು ವರಾಹವೇ ಆಗಿರಬೇಕು.

ಇನ್ನು ಈ ವರಾಹ ಧ್ವಜದ ನಿಶ್ಚಿತ ಸ್ವರೂಪವು ಹೇಗಿದ್ದಿತು ಎಂಬದನ್ನು ಇಷ್ಟು ಪರಾಮರ್ಶಿಸಿ ಈ ಧ್ವಜ ಪರೀಕ್ಷಣವನ್ನು ಮುಗಿಸುವ. ಈ ವಿಶ್ವದ ಕಾಲ ನಿಯಾಮಕವಾಗಿದ್ದು ಅಂತರಾಳದಲ್ಲಿ ದೇವಲೋಕದ ಪ್ರತಿನಿಧಿಗಳೂ ಇಹಲೋಕದ ಸಾಕ್ಷಿಗಳೂ ಆಗಿನಿಂತ ಸೂರ್ಯಚಂದ್ರರ ಅನುಗ್ರಹವನ್ನು ಕೋರುವ, ತಮ್ಮ ರಾಜ್ಯಕ್ಕೆ ಸೂರ್ಯಚಂದ್ರವಿರುವವರೆಗೆ ಸ್ಥೈರ್ಯವುಂಟಾಗಲಿ ಎಂದು ಹಾರಯಿಸುವ ಉದ್ದೇಶದಿಂದ ಸೂರ್ಯಚಂದ್ರರ ಆಕೃತಿಗಳು ಈ ಚಿನ್ಹೆಯ ಮೇಲ್ಭಾಗದಲ್ಲಿ ಇರುತ್ತಿದ್ದವು. ಅದರ ಕೆಳಗೆ ಎಡಗಡೆಗೆ ಮುಖವಾಗಿ ಕೋರೆದಾಡೆಯ ಮೋರೆಯನ್ನು ಮೇಲಕ್ಕೆತ್ತಿ ನಿಂತ ಭವ್ಯ ವರಾಹ ಮೂರ್ತಿ. ಈ ವರಾಹದ ಮುಂದೆ ನಮ್ಮ ಎಡಕ್ಕೆ ಅಲಗಿನ ತುದಿ ಕೆಳಗೆ, ಹಿಡಿಕೆ ಮೇಲೆ ಮಾಡಿ ನೀಟಾಗಿ ನಿಂತ ಖಡ್ಗ. ಈ ಖಡ್ಗವು ಪ್ರಚಂಡ ರಾಜಶಕ್ತಿಯನ್ನೂ ಕಠೋರ ರಾಜಶಾಸನವನ್ನೂ ಸೂಚಿಸುವ ಸಂಕೇತ.

ಇದು ಲಾಂಛನದ ವಿಶಿಷ್ಟ ಸ್ವರೂಪವಾಗಿದ್ದಿತು. ಇದಲ್ಲದೆ ಬೇರೆ ಹೆಚ್ಚಿನ ಆಕೃತಿಗಳು ಆ ಆ ಮನೆತನದ ಇಲ್ಲವೆ ರಾಜನ ಇಷ್ಟವಾದ ವೈಶಿಷ್ಟ್ಯದಂತೆ ಧ್ವಜದಮೇಲೆ ಇದ್ದಿರುವುದು ಶಕ್ಯವಿದೆ. ಆದರೆ ಧ್ವಜದ ಜೀವಾಳವಾದ ಮುಖ್ಯಭಾಗವು ಮಾತ್ರ ಇಷ್ಟೇ ಇರಲಿಕ್ಕೆ ಸಾಕು.






ಕರ್ನಾಟಕದ ಅರಸುಮನೆತನಗಳ ಲಾಂಛನಗಳು.

# ವಿಜಯನಗರದ ಅರಸರ ಕಾಲದ ಕನ್ನಡ ಸಾಹಿತ್ಯ.

( ಲೇಖಕರು:—**ಪ್ರೊ. ಕೆ. ಜಿ. ಕುಂದಣಗಾರ** ಎಂ. ಏ. ರಾಜಾರಾಮ ಕಾಲೇಜ ಕೊಲ್ಹಾಪೂರ. )

ವಿಜಯನಗರದ ರಾಜ್ಯವು ಕೃಷ್ಣಾನದಿಯಿಂದ ಕನ್ಯಾಮಾರಿ ಭೂಶಿರದವರೆಗೆ ಹಬ್ಬಿಕೊಂಡು ಬಹುಘನತೆಯಿಂದ ೧೩೩೬—೧೫೬೫ರ ವರೆಗೆ ಬಾಳಿತು. ಅರಸಲ್ಲರೂ ಸಾಹಿತ್ಯಭಕ್ತರಾದುದರಿಂದ ಮತ್ತು ಧರ್ಮಹಿಷ್ಣುಗಳಾದುದರಿಂದ ಕನ್ನಡ, ತೆಲಗು ಮತ್ತು ಸ್ಕೃತಗ್ರಂಥಕಾರರಿಗೆ ಜಾತಿಮತಗಳ ಭೇದವಿಲ್ಲದೆ ಜಾಶ್ರಯವು ದೊರೆಯುತ್ತಿತ್ತು. ಡಾ. ಎಸ್ ಕೃಷ್ಣಸ್ವಾಮಿ ಅಯ್ಯಂಗಾರರವರು ತಮ್ಮ Sources of Vijayanagar History ಎಂಬ ಪುಸ್ತಕದಲ್ಲಿ ತೆಲಗು ಮತ್ತು ಸಂಸ್ಕೃತ ಗ್ರಂಥಕಾರರ ಹೆಸರುಗಳನ್ನೂ ಮತ್ತು ಅವರ ಗ್ರಂಥಗಳನ್ನೂ ಹೇಳಿ ಅವುಗಳೊಳಗಿನ ಐತಿಹಾಸಿಕ ಸಂಗತಿಗಳನ್ನು ಕೊಟ್ಟಿದ್ದಾರೆ. ಅವರು ಹೇಳಿದ ಗ್ರಂಥಕಾರರಲ್ಲಿ ವಿಜಯನಗರದ ಅರಸರ ಮಾಂಡಲಿಕರ ಮತ್ತು ಮಂತ್ರಿಗಳ ಹೆಸರುಗಳೂ ಇವೆ.

| | — ಹೆಸರುಗಳು — | — ಬರೆದಗ್ರಂಥಗಳು — |
|---|---|---|
| ೧ | ಗಂಗಾದೇವಿ [ಬುಕ್ಕರಾಯನ ಸೊಸೆ. ಕಂಪಣರಾಯನ ಹೆಂಡತಿ] | ಕಂಪರಾಯ ಚರಿತಂ |
| ೨ | ಸಾಳುವ ನರಸಿಂಹ [ ವಿಜಯನಗರದ ಅರಸು ] | ರಾಮಾಭ್ಯುದಯ |
| ೩ | ವಿರೂಪಾಕ್ಷ ,, | ನಾರಾಯಣೀವಿಲಾಸಂ [ನಾಟಕ] |
| ೪ | ಇಮ್ಮಡಿ ದೇವರಾಯ ,, | ಮಹಾನಾಟಕ ಸುಧಾನಿಧಿ |
| ೫ | ಕೃಷ್ಣದೇವರಾಯ ,, | ಆಮುಕ್ತಮಾಲ್ಯದಾ |
| ೬ | ,, ,, | ಜಾಂಬುವತೀ ಕಲ್ಯಾಣಂ [ನಾಟಕ] |
| ೭ | ಕೆಳದಿ ಬಸವಭೂಪಾಲ ( ಮಾಂಡಲಿಕ ) | ಶಿವತತ್ವ ರತ್ನಾಕರ |
| ೮ | ಸಾಳುವ ತಿಮ್ಮ ( ಕೃಷ್ಣದೇವರಾಯನ ಮಂತ್ರಿ ) | ಅಗಸ್ತ್ಯಭಾರತ ಚಂಪೂ ವ್ಯಾಖ್ಯ |
| ೯ | ಲಕ್ಕಣ ದಂಡೇಶ [ ಪ್ರೌಢದೇವರಾಯನ ಮಹಾ ಪ್ರಧಾನ ] | ಶಿವತತ್ವ ಚಿಂತಾಮಣಿ (ಕನ್ನಡ) |

ಶ್ರೀ ವಿದ್ಯಾರಣ್ಯ ಮತ್ತು ಸಾಯಣಾಚಾರ್ಯರ ಹೆಸರುಗಳನ್ನು ಹೇಳಲೇ ಬೇಕೆಂಬ ನಿಯಮವಿಲ್ಲ. ರಾಜಮನೆತನದವರೂ ಮಾಂಡಲಿಕರೂ ಮಂತ್ರಿಗಳೂ ಹೀಗೆ ಸಾಹಿತಿಗಳಾಗಿರುವಾಗ ಕನ್ನಡಕ್ಕೆ ರಾಜಾಶ್ರಯವು ದೊರೆಯಿತೆಂದು ಹೇಳುವದು ದೊಡ್ಡಮಾತಲ್ಲ ಕನ್ನಡ ಕವಿಗಳಿಗೆ ಆಶ್ರಯ ಕೊಟ್ಟಅರಸರಲ್ಲಿ ಇಮ್ಮಡಿ ಹರಿಹರನ, ಪ್ರೌಢ ದೇವರಾಯನ, ಕೃಷ್ಣರಾಯನ, ಮತ್ತು ಅಚ್ಯುತರಾಯನ ಹೆಸರುಗಳು ಹೆಚ್ಚು ಮುಂದೆ ಬಂದಿವೆ. ಮತ್ತೆ ರಾಜ್ಯವು ಬಹಳ ವಿಸ್ತಾರವಾಗಿದ್ದ ಕಾರಣ ಆ ಕಾಲದ ಎಲ್ಲ ಕನ್ನಡ ಕವಿಗಳು ವಿಜಯನಗರದ ರಾಜ್ಯದಲ್ಲಿಯೇ ಇದ್ದರೆಂದು ಹೇಳಬೇಕಾಗುತ್ತದೆ. ಆದುದರಿಂದ ಸುಮಾರು ೨೩೦ ವರ್ಷಗಳ ಈ ಅವಧಿಯಲ್ಲಿ ಲೆಕ್ಕವಿಲ್ಲದಷ್ಟು ಕನ್ನಡ ಗ್ರಂಥಗಳು ಹೊರಟು ಅದು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಸುವರ್ಣಯುಗವಾಯಿತು. ಈ ಸಂದರ್ಭದಲ್ಲಿ ಇನ್ನೊಂದು ಸಂಗತಿಯನ್ನು ಮರೆಯಲಾಗದು. ತುಳುವಂಶವು ತುಳು ನಾಡಿನಿಂದ ಬಂದುದು. ಅಲ್ಲಿ ಮುಂಬಾರದಲ್ಲಿರುವಂತಹ ಕಥಕಲಿಯೆಂಬ ನೃತ್ಯಾಭಿನಯ ನಾಟಕಕ್ಕಿಂತಲೂ ತುಸು ಭಿನ್ನವಾದ ಯಕ್ಷಗಾನವು ರೂಢವಾಗಿತ್ತು. ಈಗಲೂ ಇದೆ. ಅದನ್ನು ಅವರು ವಿಜಯನಗರಕ್ಕೆತಂದರು. ಅದರ ಉಪಯೋಗಕ್ಕೆಂದು ಅರಮನೆಯಲ್ಲಿ ಒಂದು ಸ್ವತಂತ್ರ ರಂಗಮಂಟಪವು ವಿರಚಿತವಾಯಿತು. ಅಲ್ಲಿ ಆಡುವದಕ್ಕೆಂದು ಅನೇಕ ಯಕ್ಷಗಾನಗಳು ರಚಿತವಾಗಿರಬೇಕು. ಅವು ಉಪಲಬ್ಧವಿಲ್ಲದುದರಿಂದ ಕನ್ನಡ ಸಾಹಿತ್ಯಕ್ಕೆ ಒಂದು ಕುಂದು ಬಂದಿದೆ. ಶಬ್ದಾನುಶಾಸನಕಾರನು

' ಕಾವ್ಯನಾಟಕಾದೀನಾಂ ಬಹೂನಾಂ ಗ್ರಂಥಾನಾ ಮುಪಲಭ್ಯಮಾನತ್ವಾತ್ " ಎಂದು ಹೇಳಿರುವದು ಇದಕ್ಕೆ ಸಾಕ್ಷಿ. ಹೀಗೆ ನಾನಾ ರೀತಿಯಾಗಿ ಬೆಳೆದು ವಿಸ್ತಾರಗೊಂಡ ಕನ್ನಡ ಸಾಹಿತ್ಯದ ಇತಿಹಾಸವನ್ನು ಈ ಪುಟ್ಟ ಲೇಖನದಲ್ಲಿ ಬರೆಯುವದು ಅಸಾಧ್ಯ ವಾಗಿರುವದರಿಂದ ಅದನ್ನು ಪೃಥಕ್ಕರಿಸಿ ಅವರ ಒಲ ವನ್ನು ಮಾತ್ರ ಇಲ್ಲಿ ಹೇಳಲಾಗಿದೆ.

ಹಿಂದುಸ್ಥಾನದ ಬೇರೆ ಬೇರೆ ಭಾಗಗಳೊಳಗಿನ ಪ್ರಾಚೀನಸಾಹಿತ್ಯವು ಧರ್ಮವನ್ನು ಸುತ್ತಿಕೊಂಡಿದೆ. ಅದರಲ್ಲಿಯೂ ಕರ್ನಾಟಕವು ನಾಲ್ಕು ಧರ್ಮಗಳ ಉಗಮಸ್ಥಾನವೂ ಐದನೆಯದರ ಆಶ್ರಯಸ್ಥಾನವೂ ಆಗಿರುವುದರಿಂದ ಆ ಆ ಧರ್ಮಗಳನ್ನು ಕನ್ನಡ ಸಾಹಿತ್ಯವು ಸುತ್ತಿಕೊಂಡಿರುವುದು ಸ್ವಾಭಾವಿಕವು. ಆದರೂ ಜೈನ, ವೀರಶೈವ ಧರ್ಮಗಳಹೊರ್ತು ಉಳಿದ ವುಗಳು ಸಂಸ್ಕೃತಕ್ಕೆ ಪ್ರಾಧಾನ್ಯವಿತ್ತುದದಿಂದ ಆ ಧರ್ಮಗಳ ಪ್ರಭಾವವು ಕನ್ನಡಸಾಹಿತ್ಯದಲ್ಲಿ ಅಷ್ಟು ಒಡೆದು ಕಾಣುವದಿಲ್ಲ. ಶಂಕರಾಚಾರ್ಯರ ಅದ್ವೈತ ಮತ ತತ್ವಗಳನ್ನು ಪ್ರತಿಪಾದಿಸುವ ಗ್ರಂಥಗಳು ಕನ್ನಡದಲ್ಲಿಲ್ಲ; ರಾಮಾನುಜಾಚಾರ್ಯರ ಮಧ್ವಾ ಚಾರ್ಯರ ವಿಶಿಷ್ಟಾದ್ವೈತ ದ್ವೈತಮತತತ್ವಗಳನ್ನೊ ಳಗೂಂಡ ಗ್ರಂಥಗಳು ೧೩ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಕನ್ನಡದಲ್ಲಿಲ್ಲ. ಜೈನರು ಮತ್ತು ವೀರ ಶೈವರು ಮಾತ್ರ ಜನಸಾಮಾನ್ಯದ ಕಡೆಗೆ ದೃಷ್ಟಿಯಿಟ್ಟು ತಮ್ಮ ಮತಗ್ರಂಥಗಳನ್ನು ಕನ್ನಡದಲ್ಲಿ ಬರೆದರು

ಕನ್ನಡಸಾಹಿತ್ಯವು ಜೈನರಿಂದ ಆರಂಭವಾಗಿ ಬೆಳೆ ಯಿತು ಪುರಾಣಕಾವ್ಯಗಳೂ ಖಂಡಕಾವ್ಯಗಳೂ ಜೈನರಿಂದಲೇ ಪ್ರಚಲಿತವಾದುವು. ಅವರ ಪುರಾಣ ಗಳೆಲ್ಲ ಚಂಪೂ ಕಾವ್ಯಗಳು ಅವು ಕಾಂತಾಸಮ್ಮಿತ ಗ್ರಂಥಗಳಾಗಿ ಜನರಿಗೆ ಧಾರ್ಮಿಕ ಸಂಗತಿಗಳನ್ನು ಬೋಧಿಸುತ್ತಿದ್ದರೂ ಅವು ಪಂಡಿತರಿಗೆ ಮಾತ್ರ ತಿಳಿ ಯುವಂತಿವೆ. ಅವರ ಇಂತಹ ಪುರಾಣಸಾಹಿತ್ಯವು ೧೨ ನೆಯ ಶತಮಾನದ ಮಧ್ಯದವರಗೆ ಒಂದೇಸವನ ಬೆಳೆಯುತ್ತಾ ಬಂದರೂ ಧರ್ಮದ ಬಗ್ಗೆ ಶಿಥಿಲತೆಯು ಕಂಡು ಒರಹತ್ತಿರಬಹುದು. ಆದುದರಿಂದಲೇ ನಯ ಸೇನನು [ ಸು. ೧೧೧೨ ] **ಧರ್ಮಾಮೃತವನ್ನು** ಬರೆದು ಅದರಲ್ಲಿ ಜೈನ ಧರ್ಮದ ಶ್ರೇಷ್ಠತೆಯನ್ನು ತೋರಿಸಬೇಕಾಯಿತು. ಬ್ರಹ್ಮಶಿವನು ತನ್ನ **ಸಮಯ ಪರೀಕ್ಷೆ**ಯಲ್ಲಿ ಇತರ ಧರ್ಮಗಳನ್ನು ನಿಂದಿಸಬೇಕಾ ಯಿತು. ವೃತ್ತವಿಲಾಸನು [ ಸು. ೧೧೪೦ ] ತನ್ನ **ಧರ್ಮಪರೀಕ್ಷೆ**ಯಲ್ಲಿ ಇತರ ಮತಗಳನ್ನೂ ಪುರಾಣ ಗಳನ್ನೂ ಅಪಹಾಸ್ಯಗೊಳಿಸಬೇಕಾಯಿತು. ಈ ಉಪಾಯಗಳಿಂದ ಜೈನಧರ್ಮಿಯರಿಗೆ ಏನೂ ಲಾಭ ವಾಗಲಿಲ್ಲ. ಸು. ೧೧೬೦ ರ ಸುಮಾರಿನಲ್ಲಿ ಬಸವಣ್ಣ ನವರು ವೀರಶೈವ ಧರ್ಮವನ್ನು ಪ್ರಸಾರಗೊಳಿಸಿ ದಾಗ ಮತ್ತು ಬಿಟ್ಟಿದೇವನ ಕಾಲದಲ್ಲಿ (೧೧೧೦-೪೩) ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತವು ಸ್ಥಾಪಿತವಾದಾಗ ಅನೇಕ ಜೈನರು ಮತಾಂತರ ಮಾಡಿದರು. ಮತ್ತು ಮತಾಂತರ ಮಾಡಬೇಕಾ ಯಿತು. ಜೈನರ ಮೇಲೆ ರಾಮಾನುಜಾಚಾರ್ಯರ ಅನುಯಾಯಿಗಳ ಅತ್ಯಾಚಾರವೂ ಹೊಯ್ಸಳರ ದಬ್ಬಾಳಿಕೆಯೂ ನಡೆದು ಅನೇಕ ಜನರು ತಮ್ಮ ಪ್ರಾಣಕ್ಕೆ ಸಹ ಎರವಾದರೆಂದು ಸ್ವಾದಿ ಜೈನಮಠದ ಭಟ್ಟಾರಕರ ಪಟ್ಟಾವಳಿಯಿಂದಲೂ ಕೆಲವು ಗ್ರಂಥ ಗಳಿಂದಲೂ ತಿಳಿದು ಬರುತ್ತದೆ. ಏನೇ ಇರಲಿ ! ಈ ಸುಮಾರಿಗೆ ಜೈನರಿಗೆ ರಾಜಾಶ್ರಯವು ತಪ್ಪಿ ತೆಂಬದು ನಿಜವು ಅವರು ಮಠಗಳ ಆಶ್ರಯದಿಂದ ಮತ್ತು ಸ್ವತಂತ್ರವಾಗಿ ಕನ್ನಡ ಸಾಹಿತ್ಯಸೇವೆಯನ್ನು ಮಾಡಬೇಕಾಯಿತು. ಆದರೂ ಅವರು ಹಿಂಜರಿಯಲಿಲ್ಲ ಕನ್ನಡ ಸಾಹಿತ್ಯದಲ್ಲಿ ವಚನ ವಾಙ್ಮಯದಿಂದ ಕ್ರಾಂತಿಯಾದ ತರುವಾಯ ತುಸು ದಿನಗಳಲ್ಲಿಯೇ ಪ್ರತಿಕ್ರಾಂತಿಯಾಗಿ ನೇಮಿಚಂದ್ರ ಅಗ್ಗಳ, ಆಚಣ್ಣ, ಬಂಧುವರ್ಮ; ಪಾರ್ಶ್ವ, ಜನ್ನ, ಶಿಶುಮಾಯಣ, ಗುಣವರ್ಮ, ಕಮಲಭವ ಮುಂತಾದ ಉದ್ದಾಮ ಕನ್ನಡ ಜೈನಕವಿಗಳು ಪುರಾಣಗಳನ್ನು ಬರೆದರು. ಇಷ್ಟರಿಂದ ಕಾರ್ಯಸಿದ್ಧಿಯಾಗಲಿಲ್ಲವೆಂದು ತೋರಿಸಲು **ಆಂಡಯ್ಯನು** ತನ್ನ ಕಾವ್ಯದಲ್ಲಿ ಶಿವನನ್ನು ತೆಗಳಿ ಮುನಿಗಳನ್ನು ಹೊಗಳಿದನು. ನಾಗರಾಜನು ( ಸು. ೧೩೩೧ ) ತನ್ನ ಪುಣ್ಯಾಸ್ರವದಲ್ಲಿ ಇತರ ಧರ್ಮ ಗಳನ್ನು ನಿಂದಿಸಬೇಕಾಯಿತು. ಮಾಘಣಂದ್ಯಾ ಚಾರ್ಯರು ಶಾಸ್ತ್ರಸಾರ ಸಮುಚ್ಚಯವನ್ನು ಕನ್ನಡ ಟೀಕೆಯೊಡನೆ ಬರೆಯಬೇಕಾಯಿತು. ಬಾಳಚಂದ್ರ ಪಂಡಿತನು ( ಸು. ೧೨೭೩ ) ದ್ರವ್ಯಸಂಗ್ರಹಕ್ಕೆ ಕನ್ನಡ ಟೀಕೆಯನ್ನು ಬರೆಯಬೇಕಾಯಿತು ಕನಕಚಂದ್ರನು ( ಸು ೧೩೦೦ ) ಮೋಕ್ಷ ಪ್ರಾಭೃತಕ್ಕೆ ಕನ್ನಡ ಟೀಕೆಯನ್ನು ಬರೆಯಬೇಕಾಯಿತು ಇತ್ಯರ್ಥವೇ ನೆಂದರೆ ವಿಶಿಷ್ಟಾದ್ವೈತ, ದ್ವೈತ, ಶೈವ, ವೀರಶೈವ,

ಮತಾನುಯಾಯಿಗಳಿಂದ ನಾನಾ ವಿಪತ್ತುಗಳಿಗೊಳಗಾಗಿ ಹೇಗೆ ಹೇಗೋ ತಮ್ಮ ಧರ್ಮವನ್ನು ಜೈನರು ಕಾಪಾಡಿಕೊಳ್ಳಬೇಕಾಯಿತು.

ಇಂತಹ ಮುಚ್ಚಂಜೆಯ ಮುಸುಕಿನ ಕಾಲವು ವಿಜಯನಗರ ಸಾಮ್ರಾಜ್ಯ ಚಂದ್ರನು ಉದಯನಾಗಲು ಕಳೆದುಹೋಗಿ ಶಾಂತಿಮಯ ಕಾಲವು ಉಂಟಾಯಿತು. ಇದಕ್ಕೆ ಐತಿಹಾಸಿಕ ಆಧಾರವೂ ಉಂಟು.

“ಶಕವರ್ಷ ೧೨೯೦ ನೆಯ ಕೀಲಕ ಸಂವತ್ಸರದ ಭಾದ್ರಪದ ಶುದ್ಧ ೧೦ ಬೃಹಸ್ಪತಿವಾರದಂದು ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯವಿಭಾಡ, ಭಾಷೆಗೆ ತಪ್ಪುವ ರಾಯರ ಗಂಡ, ಶ್ರೀವೀರ ಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ........ ವೈಷ್ಣವ ದರ್ಶನಕ್ಕೆ ಊ ಜೈನ ದರ್ಶನಕ್ಕೆ ಊ ಭೇದವಿಲ್ಲೆಂದು ರಾಯನು ವೈಷ್ಣವರ ಕೈಯಲ್ಲಿ ಜೈನರಕೈವಿಡಿದು ಕೊಟ್ಟು ಈ ಜೈನದರ್ಶನಕ್ಕೆ ಪೂರ್ವಮರಿಯಾದೆಯಲು ಪಂಚ ಮಹಾವಾದ್ಯಂಗಳೂ ಕಳಶ ಊ ಸಲುವದು. ಜೈನದರ್ಶನಕ್ಕೆ ಭಕ್ತರ ದೆಶೆಯಿಂದ ಹಾನಿ ವೃದ್ಧಿಯಾದರೂ ವೈಷ್ಣವ ಹಾನಿ ವೃದ್ಧಿಯಾಗಿ ಪಾಲಿಸುವುದು........ .” ಶ್ರ ಬೆ. ೩೪೪.

ಜೈನರು ಹೀಗೆ ಸಂಕಟಕ್ಕೆ ಗುರಿಯಾದಾಗ ವಿಜಯನಗರದ ಎರಡನೆಯ ಅರಸನಾದ ಬುಕ್ಕರಾಯನು ಎರಡೂ ಧರ್ಮೀಯರಲ್ಲಿ ಶಾಂತತೆಯನ್ನು ನೆಲೆಗೊಳಿಸಿದನು. ಇದರ ಪರಿಣಾಮದಿಂದ ಮಧುರನು ( ಸು ೧೩೮೫ ) ಇಮ್ಮಡಿ ಹರಿಹರರಾಯನ ಆಸ್ಥಾನ ಕವಿಯಾಗಿ ಧರ್ಮನಾಥಪುರಾಣವನ್ನು ರಚಿಸಿದನು.

ಜೈನಕವಿಗಳು ೧೪ನೆಯ ಶತಮಾನದ ವರೆಗೆ ಪುರಾಣಗಳನ್ನು ಬರೆದರೆಂದು ಮೇಲೆ ಹೇಳಿದೆ ಆ ತರುವಾಯ ಪುರಾಣಗಳನ್ನು ಚಂಪೂರೂಪವಾಗಿ ರಚಿಸುವುದು ಉಪಯುಕ್ತವಲ್ಲವೆಂದು ಅವರು ಕಂಡುಕೊಂಡರು. ಏಕೆಂದರೆ ಕೆಲಮಟ್ಟಿಗೆ ರೂಢವಾದ ಷಟ್ಪದೀ ಕಾವ್ಯಗಳ ಬಗ್ಗೆ ಅವರ ಆದರವಿಲ್ಲದಿದ್ದರೂ ಸಾಂಗತ್ಯವೆಂಬ ಹೊಸ ಛಂದಸ್ಸನ್ನು ಅವರು ಕಂಡು ಹಿಡಿದು ಪುರಾಣಗಳನ್ನು ಆ ರೂಪದಿಂದ ರಚಿಸಹತ್ತಿದರು. ಅವರಲ್ಲಿ ಮೊದಲನೆಯವನು ಶಿಶುಮಾಯಣನು(ಸು. ೧೨೩೨)ಅವರು ಷಟ್ಪದಿಯನ್ನು ಸಂಪೂರ್ಣವಾಗಿ ನಿರಾಕರಿಸಲಿಲ್ಲ. ಏಕೆಂದರೆ ಜೈನ ಷಟ್ಪದೀ ಕಾರರಲ್ಲಿ ಕುಮುದೇಂದುವು ( ಸು ೧೨೭೫) ಮೊದಲನೆಯವನು. ಇವನ ರಾಮಾಯಣವು ನಾನಾ ಷಟ್ಪದಿಗಳಲ್ಲಿದೆ.

ವೀರಶೈವರು ವಚನಗಳನ್ನೂ ಷಟ್ಪದಿಗಳನ್ನೂ ಬರೆಯುತ್ತಿದ್ದರು. ಬ್ರಾಹ್ಮಣರು ಚಂಪೂಕಾವ್ಯಗಳನ್ನು ಬರೆಯುತ್ತಿದ್ದರೂ ವೈಷ್ಣವಮಾಧ್ವರಿಂದ ಭಕ್ತಿಮಾರ್ಗವು ಪ್ರಚಾರಗೊಂಡಹಾಗೆ ಅದು ಎಲ್ಲೆಲ್ಲಿಯೂ ಹಬ್ಬಿ ಭಕ್ತಿರಸಪ್ರಧಾನವಾನ ಭಾವಗೀತೆಗಳಿಗೆ (ದಾಸಕೂಟದ ಕೀರ್ತನೆಗಳಿಗೆ) ಉಗಮವಾಯಿತು. ಕೀರ್ತನೆಕಾರರಲ್ಲಿಮೊದಲನೆಯವನುನರಹರಿತೀರ್ಥನು ( ಸು. ೧೨೮೧ ) ಇಂತಹ ಸಾಹಿತ್ಯದ ತಳಹದಿಯ ಮೇಲೆ ವಿಜಯನಗರದ ಕಾಲದ ( ೧೩೩೬-೧೫೬೫ ) ಕನ್ನಡಸಾಹಿತ್ಯದ ಕಟ್ಟಡವು ಕಟ್ಟಲಾಯಿತು.

ಕನ್ನಡಸಾಹಿತ್ಯವನ್ನು ಜೈನ ವೀರಶೈವ ಬ್ರಾಹ್ಮಣವೆಂದು ವಿಭಾಗಿಸುವ ರೂಢಿಯಿದ್ದಂತೆ ಈ ಕಾಲದ ಸಾಹಿತ್ಯವನ್ನು ಮೂರು ಭಾಗವಾಗಿ ವಿಂಗಡಿಸುವುದು ಯೋಗ್ಯವಾಗಿದೆ ವಿಜಯನಗರದ ಕಾಲದ ಸು. ೨೦೦ ವರ್ಷಗಳ ಅವಧಿಯಲ್ಲಿ ಹೊರಬಿದ್ದ ಜೈನಸಾಹಿತ್ಯವನ್ನು ಪರಿಶೀಲಿಸಿ ನೋಡಿದರೆ ಆ ಕವಿಕಳಿಗೆ ರಾಜಾಶ್ರಯವು ದೊರೆತಿದ್ದರೂ ೧೦ನೆಯ ಶತಮಾನದಿಂದ ೧೪ನೆಯ ಶತಮಾನದ ವರೆಗೆ ಹೊರಟಂತಹ ಸಾಂಪ್ರದಾಯಿಕ ಚಂಪೂಕಾವ್ಯಗಳನ್ನು ಬರೆಯುವುದು ಯಾರಿಗೂ ಸಾಧ್ಯವಾಗಲಿಲ್ಲ ಇದಕ್ಕೆ ಎರಡು ಕಾರಣಗಳಿದ್ದುವೆಂದು ತೋರುತ್ತದೆ ಮೊದಲನೆಯ ಕಾರಣವೆಂದರೆ ಜೈನ ಪಂಡಿತರ ಮತ್ತು ಕವಿಗಳ ಮೇಲೆ ತಮ್ಮ ಧರ್ಮನ್ನು ಕಾಪಾಡಿಕೊಳ್ಳುವ ಭಾರವು ಬಿದ್ದುದರಿಂದ ಅವರು ಧಾರ್ಮಿಕ ಗ್ರಂಥಗಳನ್ನು ಮುಖ್ಯವಾಗಿ ಬರೆಯಬೇಕಾಯಿತು. ಉದಾ:— ಕಲ್ಯಾಣಕೀರ್ತಿಯ (ಸು ೧೪೩೯) ಅನುಪ್ರೇಕ್ಷೆ, ವಿಜಯಣ್ಣನ [ ಸು. ೧೪೪೮ ] ದ್ವಾದಶಾನುಪ್ರೇಕ್ಷೆ, ವಿದ್ಯಾನಂದನ [ ಸು. ೧೪೫೫ ] ತಾನೇ ರಚಿಸಿದ ಪ್ರಾಯಶ್ಚಿತ್ತಕ್ಕೆ ಕನ್ನಡ ವ್ಯಾಖ್ಯಾನ, ಯಶಃ ಕೀರ್ತಿಯ (ಸು ೧೫೦೦) ಧರ್ಮಶರ್ಮಾಭ್ಯುದಯಕ್ಕೆ ಸಂದೇಹಧ್ವಾಂತದೀಪಿಕೆಯೆಂಬ ಕನ್ನಡವ್ಯಾಖ್ಯಾನ, ನೇಮಣ್ಣನ [ಸು ೧೫೫೯] ಜ್ಞಾನಭಾಸ್ಕರ ಚರಿತೆ [ ಇದು ತಾತ್ವಿಕ ಗ್ರಂಥವು; ಚರಿತ್ರೆಯಲ್ಲ. ] ಎರಡನೆಯ ಕಾರಣವೆಂದರೆ ಧರ್ಮವನ್ನು ಕಾಪಾಡಿಕೊಳ್ಳಲು ಅವರಿಗೆ ರಾಜಾಸ್ಥಾನದಲ್ಲಿ ವಾದಮಾಡಬೇಕಾಗುತ್ತಿತ್ತು. ಉದಾ:-ನೇಮಿಚಂದ್ರನು ಪ್ರೌಢರಾಯನ (೧೪೧೯--೪೬)ಸಭೆಯಲ್ಲಿ ವಿದ್ವಾಂಸ

ರನ್ನು ವಾದದಲ್ಲಿ ಜಯಿಸಿ ಜಯಪತ್ರವನ್ನು ಪಡೆದಂತೆ ಕೆಳಗಿನ ಪದ್ಯದಲ್ಲಿ ಹೇಳಿದೆ.

ಮಂಡಲೇಶ್ವರ ಪ್ರೌಢರಾಯನ ॥
ಕಂಡು ತತ್ಸಭೆಯಲ್ಲಿ ರಂಜಿಪ ॥
ತಂಡತಂಡದ ವಾದಿವಿದ್ವಾಂಸಗಲ ಮುವವಳಿದು ॥
ಕೊಂಡು ಜಯಪತ್ರವನು ಭೂಗೆ ಪ್ರ !
ಚಂಡತಾರ್ಕಿಕರತ್ನ ಸದ್ಗುಣ ।
ಮಂಡನಾಂಗಗೆ ನೇಮಿಚಂದ್ರಗೆ ಶಿರವಬೊಗ್ಗಿಪೆನು ॥

**ಅಭಿನವವಾದಿವಿದ್ಯಾನಂದನು** [೧೫೩೩] ನಂಜಿದೇವರಾಜ, ಸಾಳ್ವಮಲ್ಲಿರಾಯ, ಸಾಳುವ ದೇವರಾಯ, ನರಸಿಂಹ ಕುಮಾರ ಕೃಷ್ಣರಾಜ ಮುಂತಾದ ರಾಜರ ಆಸ್ಥಾನಗಳಲ್ಲಿ ವಾದಿಗಳನ್ನು ಗೆದ್ದು ತನ್ನ ಮತವನ್ನು ಸ್ಥಾಪಿಸಿದನೆಂದು ನಗರ ತಾಲೂಕಿನ ೪೬ನೆಯ ಶಾಸನದಲ್ಲಿ (೧೫೪೦) ಹೇಳಿದೆ. ಜೈನಾಚಾರ್ಯರಿಗೆ ಮಹಾವಾದವಾದೀಶ್ವರ, ವಾದೀಭಕಂಠೀರವ, ಪರವಾದಿಗಿರಿವಜ್ರ ಮುಂತಾದ ಬಿರುದುಗಳಿದ್ದಂತೆ ಸಾಹಿತ್ಯದಲ್ಲಿಯೂ ಶಿಲಾಶಾಸನ ತಾಮ್ರಶಾಸನಗಳಲ್ಲಿಯೂ ಉಲ್ಲೇಖಗಳಿವೆ. ಆ ಆಚಾರ್ಯರು ಪ್ರತಿಪಕ್ಷಿಗಳನ್ನು ವಾದದಲ್ಲಿ ಗೆದ್ದುದರಿಂದ ಬಂದ ಬಿರುದುಗಳಿವು ಎಂದು ಬೇರೇ ಹೇಳುವ ಕಾರಣವಿಲ್ಲ.

ಆ ಕಾಲದ ಪರಿಸ್ಥಿತಿಯು ಹೀಗಿದ್ದರೂ ಜೈನಕವಿಗಳು ಪುರಾಣ**ಕಾವ್ಯಗಳನ್ನು** ಬರೆದಿರುವುದು ಅವರ ದೀರ್ಘೋದ್ಯೋಗ, ಕಾವ್ಯಪ್ರೀತಿ ಧಾರ್ಮಿಕ ಭಾವನೆ ಮುಂತಾದ ಗುಣಗಳ ಚಿನ್ಹವು. ಈ ಕಾವ್ಯಗಳು ಷಟ್ಪದಿ ಸಾಂಗತ್ಯರೂಪವಾಗಿವೆ. ಭಾಸ್ಕರನ [ಸು. ೧೪೨೪] ಜೀವಂಧರ ಷಟ್ಪದಿ, ತೆಂಕಣಾಂಬಿ ಬೊಮ್ಮರಸನ [೧೪೮೫ ಸು] ಸನತ್ಕುಮಾರಚರಿತೆ, ಜೀವಂಧರ ಸಾಂಗತ್ಯ, ಕಲ್ಯಾಣಕೀರ್ತಿಯು (೧೪೯೯ ಸು.) ಜ್ಞಾನಚಂದ್ರಾಭ್ಯುದಯ ಕಾಮನಕಥೆ, ಕೋಟೇಶ್ವರನ (ಸು ೧೫೦೦) ಜೀವಂಧರ ಷಟ್ಪದಿ, **ಮಂಗರಸನ** (೧೫೦೮ ಸು.) ಜಯನೃಪಕಾವ್ಯ, ಸಮ್ಯಕ್ತ್ವ ಕೌಮುದಿ, ನೇಮಿಜಿನೇಶ ಸಂಗತಿ, ಮುಂ ಶಾಂತಿಕೀರ್ತಿ (ಸು. ೧೫೧೯) ಯ ಶಾಂತಿನಾಥ ಚರಿತ್ರೆ, ಸಾಳ್ವನ (೧೫೫೦) ಭಾರತ, ರತ್ನಾಕರವರ್ಣಿಯ (೧೫೫೭) **ಭರತೇಶವೈಭವ** ಮುಂ. ಹದಿನಾರನೆಯ ಶತಮಾನದ ಮಧ್ಯದಲ್ಲಿ ಮಲ್ಲಿಕಾರ್ಜುನನು ಸೂಕ್ತಿ**ಸುಧಾರ್ಣವವನ್ನು** ರಚಿಸಿದಂತೆ ಅಭಿನವವಾದಿ ವಿದ್ಯಾನಂದನು ಬೇರೆ ಬೇರೆ ಚಂಪೂಗ್ರಂಥಗಳಿಂದ ಅಂದವಾದ ಪದ್ಯಗಳನ್ನು ಆಯ್ದುಕೊಂಡು **ಕಾವ್ಯಸಾರವೆಂಬ** ಗ್ರಂಥವನ್ನು ರಚಿಸಿದನು. ಜೈನರಲ್ಲದೆ ಇಂತಹ ಪ್ರಯತ್ನವನ್ನು ಅನ್ಯರಾರೂ ಮಾಡಿಲ್ಲ. ಸಾರಾಂಶವೆಂದರೆ ಜೈನಗ್ರಂಥಕಾರರ ಒಲವು ಧಾರ್ಮಿಕಗ್ರಂಥಗಳನ್ನು ಪುರಾಣಕಾವ್ಯಗಳನ್ನೂ ಬರೆಯುವುದರ ಕಡೆಗೆ ಇದ್ದಿತೇ ಹೊರ್ತು ಬೇರೆ ವಿಷಯಗಳ ಕಡೆಗೆ ಗಮನಕೊಡಲು ಅವರಿಗೆ ಅವಕಾಶವಿರಲಿಲ್ಲ. ಚಂಪೂಶೈಲಿಯನ್ನು ಬಿಟ್ಟು ಷಟ್ಪದಿ ಸಾಂಗತ್ಯ ಹಾಡುಗಳ ಛಂದಗಳನ್ನು ಮಾತ್ರ ಅವರು ಅನುಕರಿಸಿದರು. ಸಾಂಗತ್ಯವು ಹಾಡುಗಬ್ಬವಾದುದರಿಂದ ಜೈನರಲ್ಲಿ ಬಹಳ ಪ್ರಿಯವಾಗಿದ್ದಿತು. ನೇಮಿಜಿನೇಶಸಂಗತಿಯನ್ನು ಆರಂಭದಿಂದ ಅಂತ್ಯದವರೆಗೆ ಮುಖೋದ್ಗತ ಮಾಡಿಕೊಂಡ ಜನರು ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈಗಲೂ ದೊರೆಯುತ್ತಾರೆ. ಇದರಿಂದ ಸಾಂಗತ್ಯದ ಬಗ್ಗೆಯೂ ಪುರಾಣಗಳ ಬಗ್ಗೆಯೂ ಅವರ ಆದರವು ವ್ಯಕ್ತವಾಗುತ್ತಿದೆ.

ಇನ್ನು ಮೇಲೆ ಬ್ರಾಹ್ಮಣಗ್ರಂಥಕಾರರ ಕಡೆಗೆ ತಿರುಗುವ. ೧೪ನೆಯ ಶತಮಾನದ ವರೆಗೆ ಬ್ರಾಹ್ಮಣರಿಂದ ಕನ್ನಡಸಾಹಿತ್ಯಕ್ಕೆ ತೀರ ತುಸು ಲಾಭವಾಯಿತು ಈ ಮುಂದೆಯಾದರೂ ಅವರಿಂದ ಹೇಳಿಕೊಳ್ಳುವಷ್ಟು ಗ್ರಂಥಗಳು ರಚಿತವಾಗಲಿಲ್ಲವೆಂಬುದು ವಿಷಾದಕರವು. ಗ್ರಂಥರಚನೆಯ ದೃಷ್ಟಿಯಿಂದ ಜೈನ ವೀರಶೈವರಷ್ಟು ಇತರರಾರೂ ಕನ್ನಡಮ್ಮನ ಸೇವೆ ಮಾಡಲಿಲ್ಲ. ಇರಲಿ. ವಿಜಯನಗರದ ಕಾಲದಲ್ಲಿ ಕೈಬೆರಳುಗಳ ಮೇಲೆಣಿಸಬಹುದಾದಷ್ಟು ಬ್ರಾಹ್ಮಣ ಕವಿಗಳಿದ್ದಾರೆ. ಇವರ ಗ್ರಂಥಗಳ ವಿಷಯಗಳೆಂದರೆ ಭಾರತ, ಭಾಗವತ, ರಾಮಾಯಣಗಳು, ಕೀರ್ತನೆಗಳು ಮತ್ತು ಅಲಂಕಾರ ಛಂದಸ್ಸುಗಳು. ಬ್ರಾಹ್ಮಣಕವಿಗಳಲ್ಲಿ ಕವಿಮಲ್ಲನ (ಸು ೧೪೦೦) ಮನ್ಮಥ ವಿಜಯವು ಮಾತ್ರ ಚಂಪೂರೂಪವಾಗಿದೆ. ಈಶ್ವರ ಕವಿಯ (ಸು ೧೫೦೦) ಕವಿಜಿಹ್ವಾಬಂಧವೆಂಬ ಛಂದೋ ಗ್ರಂಥವೂ, ಮಾಧವನ (ಸು ೧೫೦೦) ಮಾಧವಾಲಂಕಾರವೂ ಕಂದವೃತ್ತರೂಪವಾಗಿವೆ. ಉಳಿದ ಗ್ರಂಥಗಳೆಲ್ಲ ಷಟ್ಪದೀ ಕಾವ್ಯಗಳು. ಗದುಗಿನ **ನಾರಾಯಣಪ್ಪನ** (ಸು ೧೪೩೦) ಕರ್ಣಾಟಕದ ಭಾರತವು ಆತನ ಕಾಲದಲ್ಲಿ ಲೋಕಪ್ರಿಯವಾಗಿರಬಹುದು. ಆದರೆ ರಾಜಕೀಯ ಕ್ರಾಂತಿಗಳ ಮೂಲಕವಾಗಿ ಎಷ್ಟೋ ಕಾಲದ ವರೆಗೆ ಆತನ ಹೆಸರೇ ಮರೆತು ಹೋಗಿದ್ದಿತು. ಇತ್ತಿತ್ತಲಾಗಿ ಅದು

ಮತ್ತೆ ಜನರ ಆದರಕ್ಕೆ ಪಾತ್ರವಾಗಿದೆ. ಪುರಾಣವಾದರೂ ಅದರಲ್ಲಿ ಕಾವ್ಯ ಸೌಂದರ್ಯವು ತುಂಬಾ ತುಂಬಿದೆ. ಅದೇ ನಮ್ಮ ಅಂತಃಕರಣವನ್ನು ಆಕರ್ಷಿಸುವದು. ಕವಿಯಾದರೂ ಭಾರತದ ಸೌಂದರ್ಯವನ್ನೂ ಉಪಯುಕ್ತತೆಯನ್ನೂ ಆತ್ಮ ವಿಶ್ವಾಸದಿಂದ ಹೀಗೆ ಹೇಳಿಕೊಂಡಿದ್ದಾನೆ

ಅರಸುಗಳಿಗಿದು ವೀರ ದ್ವಿಜರಿಗೆ ।
ಪರಮ ವೇದದ ಸಾರ ಯೋಗೀ ।
ಶ್ವರರ ತತ್ವವಿಚಾರ ಮಂತ್ರೀ ಜನಕೆ ಬುದ್ಧಿಗುಣ ॥
ವಿರಹಿಗಳ ಶೃಂಗಾರ ವಿದ್ಯಾ ।
ಪರಿಣತರಲಂಕಾರ ಕಾವ್ಯಕೆ ।
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ
॥ ಆದಿ ೧-೧೭ ॥

ಕೋವಿದರಿಗಿದು ಮೆಚ್ಚು ಜಾಣರ ।
ಜೀವವಿದು ಪರಿಣತರ ಹರಣವು ।
ಭಾವುಕರ ಕುಲದೈವ ಮನುಜರಿಗುಂ
ಮಹಾಮಮತೆ ॥

ಆ ವಿಮುಖ ಖಳಜನರ ಚಿತ್ತ ।
ದ್ರಾವಣವು ಮೂರ್ಖರಿಗೆ ಪೀಯೂ ।
ಷಾವಗಾಹನ ಮತ್ಯ್ಕತಿಯು ಸಕಳರ ಕುತೂಹಳಕೆ
॥ ಆದಿ ೧-೧೮ ॥

ತಾನು ಹೀಗೆ ಹೇಳಿದ ಸಂಗತಿಯನ್ನು ಭಾರತದಲ್ಲಿ ಸಿದ್ಧಪಡಿಸಿದುದು ಅಭಿಮಾನದ ಸಂಗತಿಯು. ಇದರ ಉತ್ಕೃಷ್ಟತೆಯನ್ನು ಕಂಡು ಹಿಡಿದು **ಚಂದ್ರಾತ್ಮಜ ರುದ್ರ**ನೆಂಬ ೧೭ನೆಯ ಶತಮಾನದ ಮರಾಠೀ ಭಾಷೆಯೊಳಗಿನ ಕವಿಯು ಇದನ್ನು **ಮರಾಠಿಗೆ ಪರಿವರ್ತಿಸಿದ್ದಾನೆ**. ಇದಾದರೂ ಕನ್ನಡಿಗರಿಗೆ ಅಭಿಮಾನದ ವಿಷಯ.

**ತೊರವೆಯ ರಾಮಾಯಣ ಭಾಗವತ**ಗಳು ಇತರ ಪುರಾಣ ಗ್ರಂಥಗಳು ಇವಾದರೂ ಭಾಮಿನೀ ಷಟ್ಪದಿಯಲ್ಲಿ ರಚಿತವಾದವುಗಳು.

ಬ್ರಾಹ್ಮಣ ಗ್ರಂಥಕಾರರ ಎರಡನೆಯ ಅಭಿಮಾನದ ಸಂಗತಿಯೆಂದರೆ **ದಾಸಕೂಟದ ಕೀರ್ತನೆಗಳು.** ನರಹರಿತೀರ್ಥರು (ಸು. ೧೨೮೧) ಮೊದಲು ಕೀರ್ತನೆಗಳನ್ನು ಬರೆದರು. ಇವುಗಳಲ್ಲಿ ಭಕ್ತಿರಸವು ಪ್ರಾಧಾನ್ಯವಾಗಿರುವದರಿಂದ ಎಲ್ಲ ಕಡೆಯಲ್ಲಿ ಬೇಗನೆ ಪ್ರಸಾರಗೊಂಡವು. ಶ್ರೀಪಾದರಾಯ (ಸು. ೧೫೦೦), ವ್ಯಾಸರಾಯ(ಸು. ೧೫೩೯) ಪುರಂದರದಾಸರು(ಸು.೧೫೪೦) ಕನಕದಾಸರು (ಸು. ೧೫೫೦), (ಕನಕದಾಸರು ಬ್ರಾಹ್ಮಣರಲ್ಲದಿದ್ದರೂ ಮಾಧ್ವಮತಾನುಯಾಯಿಗಳಾಗಿರುವದರಿಂದ ಅವರ ಹೆಸರು ದಾಸಕೂಟದಲ್ಲಿ ಬರುತ್ತದೆ.) ಇವರೆಲ್ಲರು ಕೀರ್ತನೆಗಳನ್ನು ಬರೆದರು. ಅವುಗಳಲ್ಲಿ ಪುರಂದರದಾಸರ ಮತ್ತು ಕನಕದಾಸರ ಕೀರ್ತನೆಗಳು ಬಹು ಹೃದಯಂಗಮವಾಗಿವೆ. ಆದುದರಿಂದ ಭಕ್ತಿ ಮಾರ್ಗವನ್ನು ಅನುಸರಿಸುವವರೆಲ್ಲರೂ ಅವುಗಳನ್ನು ಈಗಲೂ ಹಾಡುತ್ತಾರೆ. ಭಕ್ತಿರಸದಿಂದ ತುಂಬಿ ತುಳುಕುವ, ಮನಸ್ಸನ್ನು ತಲ್ಲೀನಗೊಳಿಸುವ ಇಂತಹ ಭಾವಗೀತೆಗಳು ಈ ವರೆಗೆ ಕನ್ನಡದಲ್ಲಿರಲಿಲ್ಲ. ಮಾಧ್ವರು ಅವುಗಳನ್ನು ವ್ಯವಹಾರದಲ್ಲಿ ತಂದುದರಿಂದ ಸಾಹಿತ್ಯ ಪ್ರಪಂಚದಲ್ಲಿ ಅವರಿಗೂ ಒಂದು ಉಚ್ಚಸ್ಥಾನವು ದೊರೆತಿದೆ ಆ ಕಾಲದ ನಿಜಗುಣಶಿವಯೋಗಿಯಂತಹ ವೀರಶೈವ ಕವಿಗಳೂ ಸಹ ಅನುಭವವನ್ನು ಹೇಳುವ ಮತ್ತು ಭಕ್ತಿರಸಪೂರ್ಣವಾಗಿರುವದರಿಂದ ಹೃದಯಸ್ಪರ್ಶಿಯಾಗಿರುವ ಭಾವಗೀತೆಗಳನ್ನು ಬರೆದಿದ್ದಾರೆ. ಇವಾದರೂ ಶೈವಾದ್ವೈತ ಮತಾನುಯಾಯಿಗಳ ಮುಖದಲ್ಲಿ ಈಗಲೂ ಇವೆ.

ವೀರಶೈವ ವಾಙ್ಮಯದೊಳಗಿನ ಭಾವಗೀತೆಗಳ ಉಲ್ಲೇಖವು ಮೇಲೆ ಬಂದಿದೆ. ಉಳಿದ ಭಾಗವು ಬಹಳ ವಿಸ್ತಾರವಾಗಿರುವದರಿಂದ ಅದನ್ನು ಕೆಳಗಿನಂತೆ ವಿಭಾಗಿಸಬಹುದು. ೧ ಟೀಕಾಗ್ರಂಥಗಳು, ೨ ಸಿದ್ಧಾಂತ ಗ್ರಂಥಗಳು, ೩ ವಚನಗ್ರಂಥಗಳು, ೪ ಪುರಾಣ ಗ್ರಂಥಗಳು, ೫ ಶತಕಗಳು, ೬ ವಿಶೇಷ ವಿಷಯಗಳು. ಇವುಗಳಲ್ಲಿ ಮೊದಲಿನವೆರಡಾದ ಟೀಕಾಗ್ರಂಥಗಳೂ ಸಿದ್ಧಾಂತ ಗ್ರಂಥಗಳೂ ಧಾರ್ಮಿಕ ಮತ್ತು ತಾತ್ವಿಕ ವಿಷಯಗಳನ್ನು ಪ್ರತಿಪಾದಿಸಿದವುಗಳಾದುದರಿಂದ ಮತಪ್ರಸಾರಕ್ಕೂ ವಾದವಿವಾದಕ್ಕೂ ಉಪಯುಕ್ತವಾಗಿದ್ದವು. ವೀರಶೈವ ಧರ್ಮವನ್ನು ರೂಢಮೂಲವಾದ ಜೈನಮತಾನುಯಾಯಿಗಳು ವಿರೋಧಿಸುವದು ಆ ಕಾಲದಲ್ಲಿ ಸ್ವಾಭಾವಿಕವಾಗಿದ್ದಿತು. ಆದುದರಿಂದ ಪರಮತತತ್ವಗಳನ್ನು ಖಂಡಿಸಿ ತಮ್ಮಮತಗಳನ್ನು ಪ್ರಸ್ಥಾಪಿಸಲು ಲಕ್ಕಣ್ಣದಂಡೇಶನಂತಹ ಮಂತ್ರಿಗೂ ಸಹ **ಶಿವತತ್ವ ಚಿಂತಾಮಣಿ**ಯಂತಹ ಗ್ರಂಥಗಳನ್ನು ಬರೆಯಬೇಕಾಯಿತು. ವೀರಶೈವ ಪಂಡಿತರೂ ಅಸಾಧಾರಣರಾಗಿದ್ದರು. ನೀಲಕಂಠಾರ್ಯನೆಂಬ ಪಂಡಿತನು " ಸಕಲಶಾಸ್ತ್ರೋಪನಿಷದರ್ಥಮಂ ಗಭೀರ

ಕರಿಸಿ ಜೈನಚಾರ್ವಾಕ ಮಾಯಾವಾದಿ ವೈಷ್ಣವರೆಂಬ ಮದಗಜಕ್ಕೆ ಅಂಕುಶ" ವಾದ ಪರವಾದಿಗಜಾಂಕುಶ ತಾರಾವಳಿಯೆಂಬ ಗ್ರಂಥವನ್ನು ಬರೆಯಬೇಕಾಯಿತು. ಈತನು ವಾದಿಶ್ರೇಷ್ಠನಾದುದರಿಂದ ಪರಮತ ವೇಶ್ಯಾ ಭುಜಂಗನೆಂಬ ಬಿರುದಿದ್ದಿತು.

೧೫ನೆಯ ಶತಮಾನದ ಅಂತ್ಯಭಾಗದಲ್ಲಿ ವಚನ ಗ್ರಂಥಗಳ ಪ್ರವಾಹವು ನಿಂತುಹೋಯಿತು. ಅದು ಪುನರುಜ್ಜೀವಿತವಾಗಿ ಈ ಅವಧಿಯಲ್ಲಿ ಧಾರಾಳವಾಗಿ ಹರಿಯಹತ್ತಿತು. ಅವುಗಳೊಳಗಿನ ಎಷ್ಟೋ ವಚನಗಳ ಅರ್ಥವು ಸಾಮಾನ್ಯರಿಗೆ ತಿಳಿಯುವದಿಲ್ಲ. ಅವುಗಳನ್ನು ಸುಲಭವಾಗಿ ತಿಳಿದುಕೊಳ್ಳಲಿಕ್ಕೆಂದು ಕೆಲವರು ಟೀಕೆಗಳನ್ನು ಬರೆದರು. ಅವರಲ್ಲಿ ಮೊದಲನೆಯವನು ಮಹಾಲಿಂಗದೇವನು ( ಸು. ೧೪೨೫ ) ಇವನು ಪ್ರಭುದೇವರ ಷಟ್ಸ್ಥಲಜ್ಞಾನಚಾರಿತ್ರವಚನದ ಟೀಕೆಯನ್ನು ಬರೆದಿದ್ದಾನೆ. ಇವನಂತೆಯೇ ಕುಮಾರಬಂಕನಾಥನು ( ೧೪೩೦ ) ಪ್ರಭುದೇವರ ಟೀಕಿನ ವಚನವನ್ನು ಬರೆದಿದ್ದಾನೆ. ಪ್ರಭುದೇವರ ಮಂತ್ರಗೋಪ್ಯದ ಟೀಕೆಯನ್ನು ಬರೆದವನು ಕಲ್ಲುಮಠದ ಪ್ರಭುದೇವನು. ( ಸುಮಾರು ೧೪೩೦ ) ಗುಬ್ಬಿಯ **ಮಲ್ಲಣ್ಣನು** ( ಸು. ೧೪೭೫ ) ವಾತುಲತಂತ್ರದ ಟೀಕೆಯನ್ನು ಬರೆದಿದ್ದಾನೆ. ಸಾನಂದ ಶಿವಯೋಗಿಯು ( ಸು. ೧೪೮೦ ) ವೀರಮಾಹೇಶ್ವರಾಚಾರಸಾರೋದ್ಧಾರ ಟೀಕೆಯನ್ನು ಬರೆದನು. ಹೀಗೆ ಟೀಕಾಗ್ರಂಥಗಳು ಹುಟ್ಟುತ್ತಿರುವಾಗ ಇನ್ನೊಂದು ಮಹತ್ವದ ಸಂಗತಿಯು ನಡೆದುಹೋಯಿತು. ಹರಭಕ್ತನು ( ಸು ೧೫೫೦ ) ವೇದ ಭಾಷ್ಯವನ್ನು ಬರೆದನೆಂದು ಚೆನ್ನಬಸವಪುರಾಣದಲ್ಲಿ ಹೇಳಿದೆ. **ಕನ್ನಡಿಗರಲ್ಲಿ ವೇದ ಭಾಷ್ಯವನ್ನು ಕನ್ನಡದಿಂದ ಬರೆದವರಲ್ಲಿ ಈತನೇ ಮೊದಲನೆಯವನು,** ಗುರುನಂಜನು [ ಸು. ೧೫೦೦ ] ಎರಡನೆಯವನು. ಈತನು ಭಟ್ಟಭಾಸ್ಕರಕೃತ ಯಜುರ್ವೇದ ಭಾಷೆಗೆ ಕನ್ನಡ ಟೀಕೆಯನ್ನು ಬರೆದನು. ಇದಕ್ಕೆ ರುದ್ರಭಾಷ್ಯವೆಂಬ ಹೆಸರಿದ್ದಂತೆ ತೋರುತ್ತದೆ.

೨ ಸಿದ್ಧಾಂತ ಗ್ರಂಥಗಳಲ್ಲಿ ಲಕ್ಕಣ್ಣದಂಡೇಶನ **ಶಿವತತ್ವ ಚಿಂತಾಮಣಿಯು** ( ಸು. ೧೪೨೮ ) ಮೊದಲನೆಯದು. ಜಕ್ಕಣಾರ್ಯನು ( ಸು. ೧೪೩೦ ) ನೂರೊಂದು ಸ್ಥಲದ ವ್ಯುತ್ಪತ್ತಿಯನ್ನು ಬರೆದನು. ಶ್ರೀ ಗಿರೀಂದ್ರನು [ ಸು. ೧೪೩೦ ] ಇದಕ್ಕೆ ಟೀಕೆಯನ್ನು ಬರೆದಿದ್ದಾನೆ. ಮಗ್ಗೆಯಮಾಯಿದೇವನು ( ಸು. ೦೪೩೦ ) ಅನುಭವಸೂತ್ರವೆಂಬ ಸಿದ್ಧಾಂತ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದನು. ಗುರುಬಸವನ (ಸು. ೧೪೩೦) ಶಿವಯೋಗಾಂಗಭೂಷಣ, ತೋಂಟದ ಸಿದ್ಧೇಶ್ವರನ ( ಸು. ೧೪೭೦ ) ಷಟ್ಸ್ಥಲಜ್ಞಾನಸಾರಾಮೃತ, ಗುಬ್ಬಿಯ ಮಲ್ಲಣ್ಣನ ( ಸು. ೧೪೭೫ ) ಗಣಭಾಷ್ಯ ರತ್ನಮಾಲೆ, **ನಿಜಗುಣಶಿವಯೋಗಿಯ ಪರಮಾರ್ಥಗೀತೆ,** ಪರಮಾನುಭವಬೋಧ, ವಿವೇಕ ಚಿಂತಾಮಣಿ, ಇವೇ ಮುಂತಾದ ಗ್ರಂಥಗಳು ಆ ಕಾಲದ ಧಾರ್ಮಿಕ ಭಾವನೆಯನ್ನು ಸೂಚಿಸುತ್ತವೆ

೩ ಬಸವಣ್ಣನವರ ಕಾಲದಲ್ಲಿ ಹುಟ್ಟಿದಂತೆ ಈ ಅವಧಿಯಲ್ಲಿ ವಚನಗ್ರಂಥಗಳು ಹೇರಳವಾಗಿರದಿದ್ದರೂ ಅನೇಕವಾಗಿದ್ದುವೆಂದು ಎದೆ ತಟ್ಟಿ ಹೇಳಬಹುದು. ಇವುಗಳಲ್ಲಿ ತೋಂಟದ ಸಿದ್ಧೇಶ್ವರನ ( ಸು ೧೪೭೦ ) ವಚನಗಳು, ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು ಗುಬ್ಬಿಯ ಮಲ್ಲಣ್ಣನ ವಚನಗಳು ಗುಮ್ಮಳಾಪುರದ ಸಿದ್ಧಲಿಂಗೇಶ್ವರನ ವಚನಗಳು, ಎಮ್ಮೆ ಬಸವನ ( ಸು. ೧೫೪೩ ) ಕಾಲಜ್ಞಾನದ ವಚನಗಳು ಮುಖ್ಯವಾದವುಗಳು

೪ ೧೫ ನೆಯ ಶತಮಾನವು ಸಿದ್ಧಾಂತ ಕಾಲವೇ ಹೊರ್ತು ಪುರಾಣ ಕಾಲವಲ್ಲ. ಈ ಶತಮಾನದಲ್ಲಿ ವೀರಶೈವ ಮತ ಪ್ರಸಾರವು ಸಾಕಷ್ಟು ಆದ ಮೇಲೆ ೧೬ ನೆಯ ಶತಮಾನದಲ್ಲಿ ಅನೇಕ ಪುರಾಣ ಕಾವ್ಯಗಳು ರಚಿತವಾದುವು. ಈ ಶತಮಾನದಲ್ಲಿ ಸಿದ್ಧಾಂತ ಗ್ರಂಥಗಳನ್ನು ಯಾರೂ ಬರೆಯಲಿಲ್ಲವೆಂದರೂ ಆಗಬಹುದು ೧೫ ನೆಯ ಶತಮಾನದಲ್ಲಿ ಮಾತ್ರ ಕೆಲವು ಕವಿಗಳು ಪುರಾಣ ಚರಿತ್ರೆಗಳನ್ನು ಬರೆದರು. ಅವರಲ್ಲಿ **ಚಾಮರಸನು** ಅಗ್ರಗಣ್ಯನು; ಉದ್ದಾಮ ಕವಿಯು. ಈತನ ಪ್ರಭುಲಿಂಗಲೀಲೆಯನ್ನು ಓದಿಸಿ ಕೇಳಿ, ಪ್ರೌಢದೇವರಾಯನು ಈತನಿಗೆ ತಕ್ಕ ಮರ್ಯಾದೆ ಮಾಡಿದನು. ಈತನಿಗೆ ವೀರಶೈವಾಚಾರ್ಯ ಸಾರೋದ್ಧಾರ, ಅನ್ಯಮತಕೋಳಾಹಳ ಎಂಬ ಬಿರುದುಗಳಿದ್ದುವು. **ಪ್ರಭುಲಿಂಗಲೀಲೆಯು** ಉತ್ಕೃಷ್ಟ ಕಾವ್ಯವಾಗಿರುವದರಿಂದ **ತೆಲುಗಿನಲ್ಲಿಯೂ, ಅರವಿನಲ್ಲಿಯೂ ಪದ್ಯ ರೂಪವಾಗಿ ಪರಿವರ್ತಿತವಾಗಿದೆ.** ಭೀಮಕವಿ ( ಸು. ೧೫೬೯ )

ಬಸವಪುರಾಣ, ತಿಮ್ಮರಸನ (ಸು. ೧೪೫೦) ಸೌಂದರ ಪುರಾಣ, ಮಲ್ಲಿಕಾರ್ಜುನನ [ಸು. ೧೪೭೫] ಶ್ವೇತನ ಸಾಂಗತ್ಯ, ಚತುರ್ಮುಖ ಬೊಮ್ಮರಸನ (ಸು. ೧೫೦೦) ರೇವಣಸಿದ್ಧೇಶ್ವರ ಪುರಾಣ, ಸಿಂಗಿರಾಜನ (ಸು. ೧೫೦೦) ಮಲಬಸವಚಾರಿತ್ರ, ಮುಂತಾದವು ೧೫ ನೆಯ ಶತಮಾನದ ಇತರ ಪುರಾಣಗಳು. ೧೬ ನೆಯ ಶತಮಾನದಲ್ಲಿ ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನ, ವೀರಶೈವಾಮೃತ ಪುರಾಣ, ಚೇರಮಾಂಕನ ಚೇರಮಕಾವ್ಯ, ವೀರಭದ್ರರಾಜನ ವೀರಭದ್ರವಿಜಯ, ಚೊಂಬೆಯಲಕ್ಕನ ಹರಿಶ್ಚಂದ್ರ ಸಾಂಗತ್ಯ, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಕಿಕ್ಕೇರಿಯಾರಾಧ್ಯನ ಭೈರವೇಶ್ವರ ಕಾವ್ಯ ಮುಂತಾದವುಗಳು ಪುರಾಣ ಕಾವ್ಯಗಳು.

೫ ಚಂಪೂಕಾವ್ಯ ಶತಕಗಳು ಉಳಿದ ಸಾಹಿತ್ಯದ ಮಾನದಿಂದ ಬಹಳ ಕಡಿಮೆಯಾಗಿ ರಚಿತವಾದುವು. ಇದಕ್ಕೆ ಕಾರಣವೆಂದರೆ ಷಟ್ಪದಿಗಳ ಸುಲಭತೆ ಮತ್ತು ಅವುಗಳ ಮೇಲಿನ ಜನರ ಪ್ರೀತಿ. ಆರಂಭದ ಚಂಪೂಕಾವ್ಯಗಳು ಕುಂದುತ್ತನೈತಿಕ ಮತ್ತು ಧಾರ್ಮಿಕ **ಶತಕಗಳ** ರೂಪಿನಲ್ಲಿ ನಿಂತವು. ಕೆಳಗಿನ ಕವಿಗಳ ಗ್ರಂಥಗಳನ್ನು ನೋಡಿದರೆ ಇದರ ಸತ್ಯವು ಹೊಳೆಯುವದು.

ಮಗ್ಗೆಯ ಮಾಯಿದೇವನ ಶಿವಾಧವ ಶತಕ, ಶಿವಾವಲ್ಲಭ ಶತಕ, ಐಪುರೀಶ್ವರ ಶತಕ, ಚಂದ್ರಕವಿಯ ವಿರೂಪಾಕ್ಷಾಸ್ಥಾನ, ಗುರುಮೂರ್ತಿ ಶಂಕರ ಶತಕ; ಗುಮ್ಮಟಾರ್ಯನ ಅರ್ಧೇಂದುಮೌಳಿ ಶತಕ; ವೀರಭದ್ರರಾಜನ ವೀರಭದ್ರ ವಿಜಯ [ಚಂಪೂ], ಪಾರ್ವತಿವಲ್ಲಭ ಶತಕ. ಉಮಾಮಹೇಶ್ವರ ಶತಕ, ಪ್ರಾಣನಾಥ ಶತಕ, ಶ್ರೀಕಂಠ ಸೋಮೇಶ್ವರ ಶತಕ ಮುಂತಾದವುಗಳು.

೬ ವಿಶೇಷ ವಿಷಯಗಳಲ್ಲಿ **ನಿಘಂಟು ಲಕ್ಷಣ ಗ್ರಂಥಗಳು** ಬರುತ್ತವೆ. ನಿಘಂಟುಗಳು ಮುಖ್ಯವಾಗಿ ಪದ್ಯರೂಪವಾಗಿವೆ. ಚತುರಾಸ್ಯ ಬೊಮ್ಮರಸನು (ಸು ೧೪೫೦) ಬರೆದ **ಚತುರಾಸ್ಯನಿಘಂಟು** ಕಂದರೂಪವಾಗಿದೆ. ದೇಸಿ ತತ್ಸಮ ತದ್ಭವ ಶಬ್ದಗಳು ಇದರಲ್ಲಿ ಬಂದಿರುವದರಿಂದ ಭಾಷಾಶಾಸ್ತ್ರದ ಅಭ್ಯಾಸಕ್ಕೆ ಇದು ಸಹಾಯವಾಗುವಂತಿದೆ. ಚೆನ್ನವೀರನು (ಸು ೧೫೦೦) ಸಾರಸ್ವತ ವ್ಯಾಕರಣಕ್ಕೆ ಶಬ್ದಮಣಿಯೆಂಬ ಹೆಸರಿನ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಲಿಂಗಮಂತ್ರಿಯು (೧೫೩೦) ಕಬ್ಬಿಗರ ಕೈಪಿಡಿಯೆಂಬ ಕೋಶವನ್ನು ಬರೆದಿದ್ದಾನೆ. ಇದರಲ್ಲಿ ಹಳೆಗನ್ನಡ ಶಬ್ದಗಳ ಅರ್ಥಗಳು ಹೇಳಲಾಗಿವೆ.

ಮೇಲಿನ ವಿಷಯಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಅವುಗಳನ್ನು ಚರ್ಚಿಸಿದ ಕವಿಗಳೆಲ್ಲರು ದೊಡ್ಡ ಪಂಡಿತರಾಗಿದ್ದರೆಂದು ತಿಳಿಯಬರುತ್ತದೆ. ಕೆಲ ಕೆಲವರ ವಿಷಯವಾಗಿ ಹಾಗೆ ಹೇಳಿಯೂ ಇದೆ. ಚಂದ್ರಕವಿಯು ಅಷ್ಟಭಾಷಾಪ್ರವೀಣನೆಂದು ಹೊಗಳಿಸಿಕೊಂಡಿದ್ದಾನೆ. ಭಟ್ಟಭಾಸ್ಕರನ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜನು ಸಾಮಾನ್ಯನಲ್ಲ; ಪರವಾದಿಗಜಾಂಕುಶ ತಾರಾವಳಿಯನ್ನು ಬರೆದ ನೀಲಕಂಠಾರಾಧ್ಯನು ಅಸಾಮಾನ್ಯ ಪಂಡಿತನು; ಗುಬ್ಬಿಯ ಮಲ್ಲಣಾರ್ಯನು ವೀರಶೈವಾಮೃತ ಮಹಾಪುರಾಣವನ್ನು ಬರೆದು ಪಂಡಿತನೆಂದು ಹೊಗಳಿಕೊಂಡನು. ಚೇರಮನು ಈತನನ್ನು ಹೀಗೆ ಹೊಗಳಿದ್ದಾನೆ. "ವೇದಾಂತ ಸಿದ್ಧಾಂತ ಲಕ್ಷಣ ವೈದ್ಯ ಭರತ ಸಾಮುದ್ರಿಕ ಜ್ಯೋತಿಷಾಲಂಕಾರ ಸರಸಗೀತಂ ॥ ವಾದ್ಯ ಶಕುನಸದ್ವ್ಯಾಕರಣ ಸೂಪರತಿಶಾಸ್ತ್ರದೊಳಗೆ ಪರಿಣತನು."

೧೪ ನೆಯ ಶತಮಾನವು ಯುದ್ಧಕಾಲವಾದುದರಿಂದ ಗ್ರಂಥಕಾರರಿಗೆ ಅನುಕೂಲವಾಗಿರಲಿಲ್ಲ. ಅರಸರಿಂದ ಕವಿಗಳಿಗೆ ದೊರೆಯಬಹುದಾದಷ್ಟು ಆಶ್ರಯವೂ ದೊರೆಯಲಿಲ್ಲ. ಇದರ ಪರಿಣಾಮದಿಂದ ಹೊಗಳಿಸಿಕೊಳ್ಳುವಂತೆ ಗ್ರಂಥಗಳನ್ನು ಕವಿಗಳು ಬರೆಯಲಿಲ್ಲ. **ಬಸವಪುರಾಣ ಧರ್ಮನಾಥಪುರಾಣ ಪದ್ಮರಾಜ ಪುರಾಣಗಳು** ಇದಕ್ಕೆ ಅಪವಾದಗಳು. ೧೫ ನೆಯ ಮತ್ತು ೧೬ ನೆಯ ಶತಮಾನಗಳಲ್ಲಿ ಶಾಂತಿಯು ನೆಲೆಗೊಂಡ ಮೇಲೆ ಕವಿಗಳಿಗೆ ಆಶ್ರಯವು ದೊರೆತು ಲೆಕ್ಕವಿಲ್ಲದಷ್ಟು ಉದ್ಗ್ರಂಥಗಳು ಬರೆಯಲಾದುವು. ಇವುಗಳಲ್ಲಿ ವೀರಶೈವ ಗ್ರಂಥಗಳು ವಿ.ಶಿಮಾರಿರುವುದರಿಂದ ಈ ಕಾಲವನ್ನು **ವೀರಶೈವ ಯುಗವೆಂದು** ಹೇಳಬಹುದು. ಜನರ ಒಲವನ್ನು ನೋಡಿದರೆ ಅದು ಧಾರ್ಮಿಕ ಗ್ರಂಥಗಳ ಮತ್ತು ಪುರಾಣಗಳ ಕಡೆಗೆ. ಗದ್ಯಗ್ರಂಥಗಳನ್ನು ಯಾರೂ ಬರೆಯಲಿಲ್ಲವೆಂದರೂ ಆಗಬಹುದು. ವಚನಗಳು ಆಧುನಿಕ ಗದ್ಯಶೈಲಿಗೆ ಮಾದರಿಗಳಾದರೂ ಅವುಗಳನ್ನೊಳಗೊಂಡ ಗ್ರಂಥಗಳು ಗದ್ಯಗ್ರಂಥಗಳಾದವು. ವೀರಶೈವರೂ

ಬ್ರಾಹ್ಮಣರೂ ಕೀರ್ತನೆಗಳಿಗೆ ಕೈಹಾಕಿದುದೊಂದು ಆನಂದದ ಸಂಗತಿ. ಇದೊಂದು ಸ್ವತಂತ್ರವಾದರಿಯ ಸಾಹಿತ್ಯ. ಭಾವ ಗೀತೆಗಳೆಂದು ಇವುಗಳನ್ನು ಸಂಭೋಧಿಸಬಹುದು.

ಶಾಶನಸಾಹಿತ್ಯವೂ ಈ ಕಾಲದಲ್ಲಿ ಬೆಳೆದು ಹೋಗಿದೆ ಆದರಿಂದ ಸಾಮಾಜಿಕ ಇತಿಹಾಸಕ್ಕೆ ಬಹಳ ಸಹಾಯವಾಗುತ್ತದೆ. ಆದರೆ ಸ್ಥಲಾಭಾವದಿಂದ ಅದನ್ನು ಬಿಡಬೇಕಾಯಿತು. ಅದರಂತೆ ಶಾಸ್ತ್ರೀಯ ವಿಷಯಗಳನ್ನೂ ಅನೇಕರು ಎತ್ತಿಕೊಂಡಿದ್ದಾರೆ. ಈ ವಿಷಯವನ್ನೂ ಅದೇ ಕಾರಣದಿಂದ ಬಿಡಬೇಕಾಯಿತು. ಅಲ್ಲದೆ ಅನೇಕ ಕವಿಗಳ ಹೆಸರುಗಳೂ ಅದೇ ಕಾರಣದಿಂದ ಬಿಟ್ಟುಹೋಗಿವೆ. ಈ ಬಗ್ಗೆ ಓದುಗರು ಅನ್ಯಥಾ ಬಗೆಯಬಾರದೆಂದು ಅವರಲ್ಲಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇನೆ.

ವಿ. ಸೂ.—ಈ ಪ್ರಬಂಧಕ್ಕೆ ಆಧಾರಗಳನ್ನು ಕರ್ಣಾಟಕ ಕವಿಚರಿತೆ ಭಾಗ ೧-೨ ರಿಂದಲೂ ಮಿಕ್ಕ ಪುರಾಣ ಗ್ರಂಥಗಳಿಂದಲೂ ತೆಗೆದುಕೊಳ್ಳಲಾಗಿದೆ.

---

# ರಾಮರಾಜನ ರಣಸಂದೇಶ.

( ಕೃಷ್ಣಾತೀರದ ರಾಕ್ಷಸತಂಗಡಗಿ ರಣ ಕ್ಷೇತ್ರದಲ್ಲಿ ವಿಜಯನಗರದ ಸೈನಿಕರಿಗೆ ವೃದ್ಧ ಶೂರನಾದ ರಾಮರಾಜನು ಕೊಟ್ಟ ಅಂತಿಮ ರಣಸಂದೇಶ )

ಕೂರಲಗುಗಳನು ಕರದೊಳು ಪಿಡಿಯಿರಿ ।
ಶೂರರೆ ನಡೆಯಿರಿ ಕಾಳಗಕೆ ॥
ತೋರಿರಿ ನಿಮ್ಮಯ ಸಾಹಸದಿರವನು ।
ತೂರಿರಿ ತುರುಕರ ಸೈನ್ಯವನು ॥ ೧ ॥
ಕಿಡಿ ಕಿಡಿ ಮಸಗುತ ಕಡುಗಲಿ ಬಂಟರೆ ।
ಪುಡಿ ಪುಡಿಗುಟ್ಟಿರಿ ಶತ್ರುಗಳ ॥
ಘುಡು ಘುಡಿಸುತ ನೀವ್ ಸಿಡಿಲಿನಂದದಿ ।
ನಡೆ ನಡೆಯಿರಿ ವೈರಿಗಳೆಡೆಗೆ ॥ ೨ ॥
ವಿದ್ಯಾನಗರಿಯ ಕಟ್ಟಿದ ಗುರುವರ ।
ವಿದ್ಯಾರಣ್ಯನ ಸ್ಮರಿಸುತಲಿ ॥
ಯುದ್ಧದಿ ಶತ್ರುಗಳನ್ನು ನಡುಗಿಸಿದ ।
ಹುಕ್ಕ ಬುಕ್ಕರನು ನೆನೆಯುತಲಿ ॥ ೩ ॥
ಹರಿಹರರಾಯನ ಅಥಟನು ಬಗೆಯಿರಿ ।
ಕಂಪಣರಾಯನ ಮರೆಯದಿರಿ ॥
ಪ್ರೌಢರಾಯನ ಕೆಚ್ಚೆದೆಯರಿಯಿರಿ ।
ಕೃಷ್ಣರಾಯನನು ವಂದಿಸಿರಿ ॥ ೪ ॥
ವೀರಭದ್ರನ ನಾಮವ ಭಜಿಸಿರಿ ॥
ವಿಜಯವಿಠಲನನು ಪೂಜಿಸಿರಿ ।
ನರಸಿಂಹನ ಪದ ಭಕ್ತರೆನಿಸಿರಿ ।
ಪಂಪಾಪತಿಯನು ಮರೆಯದಿರಿ ॥ ೫ ॥
ಉತ್ತರ ದಕ್ಷಿಣಭಾರತದಲ್ಲಿ ।
ತುರುಷ್ಕಗಜಗಳು ಮದಿಸಿಹವು ॥
ಹಿಂದೂರಾಜ್ಯಕೆ ಹಿಂದೂ ಧರ್ಮಕೆ!
ಘೋರ ವಿಪತ್ತನೆ ತಂದಿಹವು ॥ ೬ ॥
ಸತ್ತೊಡೆ ಸ್ವರ್ಗವು ಉಳಿದೊಡೆ ರಾಜ್ಯವು ।
ಎಂಬ ತತ್ವವನು ಗಮನಿಸುತ ॥
ಎತ್ತೆತ್ತಲು ಆಕ್ರಮಣ ಗೈಯುತಿಹ ।
ಮತ್ತ ತುರುಷ್ಕರ ಓಡಿಸಿರಿ ॥ ೭ ॥
ಹಿಂದೂ ದೇಶಕೆ ಹಿಂದೂ ಧರ್ಮಕೆ ॥
ಕಂಟಕರಾಗಿಹ ಯವನರನು ।
ಇಂದುವದನೆಯರನೆಳೆದೊಯ್ಯುತಿಹ ।
ಮಂದಮತಿಗಳ ತರಿದಿಡಿರಿ ॥ ೮ ॥
ಇಂದಿನ ಯುದ್ಧದ ಜಯಾಪಜಯಗಳು ।
ಎಂದೆಂದಿಗು ಫಲವೀಯುವುವು ॥
ಮುಂದಿನ ಪೀಳಿಗೆ ನಮ್ಮನು ಜರೆಯುತ ॥
ಪಂದೆಯನ್ನದಂತೆಸಗುವುದು ॥ ೯ ॥
ಭೀಷ್ಮದ್ರೋಣ ಭೀಮಾರ್ಜುನ ಕರ್ಣರು ।
ನಮ್ಮವರೆಂಬುದ ಮರೆಯದಿರಿ ॥
ಶತ್ರು ಸೈನ್ಯವನು ಸದೆಬಡೆದೋಡಿಸಿ ।
ಸಿಂಹಗಳಂದದೆ ಗರ್ಜಿಸಿರಿ ॥ ೧೦ ॥
ರಣೋತ್ಸಾಹವನು ತೋರಿಸಿರಿ ।
ಖಡ್ಗಗಳನು ಖಣಗುಟ್ಟಿಸಿರಿ ।
ಭುವನೇಶ್ವರಿಯನು ವಂದಿಸಿರಿ ।
ಭುವನದಿ ಕೀರ್ತಿಯ ಗಳಿಸಿರಿ ॥ ೧೧ ॥
ವಿಜಯನಗರದ ವಿಜಯದುಂದುಭಿಯ ।
ದಶದಿಕ್ಕುಗಳೊಳು ಮೊಳಗಿಸಿರಿ ॥
ದೇವಾಲಯಗಳ ರಕ್ಷಿಸಿರಿ ।
ಹಿಂದೂರಾಜ್ಯವ ಮೆರೆಯಿಸಿರಿ ॥ ೧೨ ॥

"ವೇದವ್ಯಾಸ"

**ಪ್ರೊ. ಕೆ. ಜಿ. ಕುಂದಣಗಾರ**
ಎಂ. ಎ. ರಾಜಾರಾಮ ಕಾಲೇಜ



**ಶ್ರೀ. ದೇಸಾಯಿ ಪಾಂಡುರಂಗರಾಯರು**
ಬಿ ಎ (ಆನರ್ಸ) ಧಾರವಾಡ.



**ಶ್ರೀ. ಕೇ ಟಿ ಪುರಾಣಿಕ**
ಧಾರವಾಡ.



**ಸೌ. ಸುಭದ್ರಾಬಾಯಿ ನಾರಾಯಣರಾವ**
ಲೊಖಂಡೆ ಬೆಳಗಾವಿ



# ರಾಯರ ಕಾಲದ ಸ್ತ್ರೀಸಮಾಜದ ಚಿತ್ರ.

[ಲೇ.— ಸೌ. ಸುಭದ್ರಾಬಾಯಿ ನಾರಾಯಣರಾವ ಲೋಖಂಡೆ, ಬೆಳಗಾವಿ ]

ವಿಜಯ ನಗರದ ಸಾಮ್ರಾಜ್ಯವು ಅನೇಕ ದೃಷ್ಟಿಯಿಂದ ಅಲೌಕಿಕವಾದದ್ದೆಂದು ಸುಪ್ರಸಿದ್ಧವಾದ ಮಾತು. ಪುರುಷರು ಪರಾಕ್ರಮಿಗಳೂ ಧರ್ಮಾಭಿಮಾನಿಗಳೂ ವ್ಯವಹಾರ ಚತುರರೂ ಇದ್ದದರಿಂದ ಅವರು ಇಂಥ ಜಗತ್ಪ್ರಸಿದ್ಧವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಮುಸಲ್ಮಾನರಿಂದ ಹಿಂದೂ ಧರ್ಮವನ್ನು ಉಳಿಸಿದರು, ಇಂಥ ವೀರರನ್ನು ಹೆತ್ತಂಥ ಮಾತೆಯರಾದರೂ ಅವರಿಗೆ ಒಪ್ಪುವಂತೆಯೇ ಇದ್ದರೆಂಬ ಸಂಗತಿಯನ್ನು ಹೇಳುವದೇ ಈ ಲೇಖದ ಉದ್ದೇಶವು

ಪ್ರಾಚೀನ ಕಾಲದಿಂದಲೂ ಕರ್ಣಾಟಕದೊಳಗಿನ ಮಹಿಳೆಯರು ವಿದ್ಯಾವಿನಯ ಸಂಪನ್ನರು, ರಾಜಕಾರಣ ಪಟುಗಳು, ಕವಯಿತ್ರಿಗಳು, ಕಲಾಕೌಶಲ್ಯ ನಿಪುಣರು, ರಾಷ್ಟ್ರಭಕ್ತರು ಮತ್ತು ರಾಜಭಕ್ತರು ಆಗಿದ್ದರೆಂದು ಇತಿಹಾಸದಿಂದ ಸಿದ್ಧವಾಗಿದೆ. ಹಿಂದುಸ್ಥಾನದ ಮಹಿಳೆಯರೆಂದರೆ ಒಂದುಬಗೆಯ ಗುಲಾಮರು ಎಂದು ಲೋಕಾಪವಾದ ವುಂಟು ಆದರೆ ನಮ್ಮ ಕರ್ನಾಟಕ ದೇಶದಲ್ಲಿ ಅಂಥ ಪರಿಸ್ಥಿತಿಯು ಎಂದಿಗೂ ಇದ್ದಂತೆ ತೋರುವದಿಲ್ಲ, ಈ ಬಗ್ಗೆ ಹೆಚ್ಚು ಚರ್ಚಿಸದೆ ರಾಯರ ಕಾಲದಲ್ಲಿ ಕರ್ನಾಟಕದೊಳಗಿನ ಸ್ತ್ರೀ ವರ್ಗದ ಪರಿಸ್ಥಿತಿಯು ಹೇಗಿತ್ತೆಂಬದನ್ನು ವಿಚಾರಿಸುವಾ.

ರಾಯರ ಕಾಲವೆಂದರೆ ೧೪ ರಿಂದಾ ೧೬ನೆಯ ಶತಮಾನದ ಕಾಲ. ೧೩೩೬ ರಲ್ಲಿ ವಿಜಯನಗರದ ಸ್ಥಾಪನೆ ಆಯಿತು. ಮುಂದೆ ಕ್ರಿ. ಶ. ೧೭೯೯ ರಲ್ಲಿ ತಿರುಮಲ ರಾಯನ ರಾಜ್ಯವನ್ನು ಕಂಪನೀ ಮತ್ತು ನಿಜಾಮ ಸರಕಾರದವರು ಹಂಚಿಕೊಂಡರು. ಈ ಸಂಗತಿಗಳನ್ನು ಪ್ರಾಧಾನ್ಯವಾಗಿ ಲಕ್ಷಿಸಿ ರಾಯರ ಕಾಲವು ೧೪ ರಿಂದ ೧೮ನೆಯ ಶತಮಾನದ ವರೆಗೆ ಎಂದು ಹೇಳಿತು. ಈ ಕಾಲದ ಅಂದರೆ ಸುಮಾರು ೫೦೦ ವರ್ಷಗಳ ಕಾಲದ ವಿಚಾರಣೆಯನ್ನು ಮಾಡಬೇಕಾಗಿದೆ

ಹೆಣ್ಣುಮಕ್ಕಳ ಕೆಲಸವು ಮುಖ್ಯವಾಗಿ ಮನೆಯೊಳಗಿಂದೆ. ಈ ಮಾತು ಇಪ್ಪನೆಯ ಶತಮಾನದಲ್ಲಿ ಯಾದರೂ ನಿಜವಾಗಿದೆ. ಆದರೆ ಮನೆಹೊರಗಿನ ಕೆಲಸಗಳನ್ನು ಮಾಡಲಿಕ್ಕೆ ಅಡ್ಡಿ ಮಾತ್ರ ಈಗಿನ ದಿವಸಗಳಲ್ಲಿ. ವಿಜಯನಗರದ ಕಾಲದಲ್ಲಿ ಉಳಿದ ಹಿಂದುಸ್ಥಾನದೊಳಗಿನ ಇತರ ಪ್ರಾಂತಗಳಗಿಂತಲೂ ವಿಜಯನಗರದ ಸಾಮ್ರಾಜ್ಯದೊಳಗಿನ ಮಹಿಳೆಯರು ಬಹಳವಾಗಿ ಸ್ವತಂತ್ರರಿದ್ದರೆಂದು ಕಂಡುಬರುತ್ತದೆ. ಉತ್ತರದೇಶ ಮತ್ತು ಮಹಾರಾಷ್ಟ್ರದೊಳಗೆ ಪಡದಾ ಪದ್ಧತಿಯು ವಿಶೇಷ ಪ್ರಚಾರಕ್ಕೆ ಬಂತು. ಆದ್ದರಿಂದ ತೀರ ಕೆಳಗಿನ ವರ್ಗದೊಳಗಿನ ಸ್ತ್ರೀಸಮಾಜವನ್ನು ಬಿಟ್ಟರೆ ಉಳಿದ ಯಾವತ್ತೂ ಸಮಾಜಗಳೊಳಗೆ ಪಡದಾ ಪದ್ಧತಿಯು ಹೆಚ್ಚುಕಡಿಮೆಯಾಗಿ ಹಬ್ಬಿತ್ತು. ಆದಕಾರಣ ಹಿಂದೂ ಮಹಿಳೆಯರಿಗೆ ಮನೆಯ ಹೊರಗೆ ಬೀಳುವದೇ ಕಠಿಣವಾಗಿ ಮನೆಯ ಹೊರಗೆ ಮಾಡುವಂಥ ಕಾರ್ಯಗಳಲ್ಲಿ ಅವರು ಭಾಗ ತೆಗೆದುಕೊಳ್ಳುವದು ಅಶಕ್ಯವಾಯಿತು.

ಕರ್ನಾಟಕದಲ್ಲಿ ಪಡದಾ ಪದ್ಧತಿಯು ಎಂದೂ ಹಬ್ಬಲಿಲ್ಲ, ಪಡದಾ ಪದ್ಧತಿಯನ್ನು ಅಭಿಮಾನದಿಂದ ನಡೆಸುವಂಥ ಮುಸಲ್ಮಾನ, ಮರಾಠ ಮತ್ತು ರಜಪೂತ ವಗೈರೆ ಸಮಾಜದವರು ಸಹ ಕರ್ನಾಟಕದೊಳಗೆ ಇರಲಾರಂಭಿಸಿದರೆಂದರೆ ಬಹುಶಃ ಅದನ್ನು ಬಿಟ್ಟುಬಿಡುತ್ತಾರೆ ಕರ್ಣಾಟಕಸ್ಥರಿಗೆ ಪಡದಾ ಪದ್ಧತಿಯು ಸಮ್ಮತವಿಲ್ಲ. ಅವರು ಈ ಪದ್ಧತಿಯನ್ನು ಟೀಕಿಸುತ್ತಾರೆ. ಆದ್ದರಿಂದ ಇಲ್ಲಿರುವಂಥ ಪಡದಾ ಪದ್ಧತಿಯ ಪುರಸ್ಕರ್ತರುಗಳಿಗೆ ಸಹ ಈ ಪದ್ಧತಿಯನ್ನು ಬಿಟ್ಟುಬಿಡುವದು ಲೇಸೆಂದು ಅನಿಸುವದರಲ್ಲೇನಾಶ್ಚರ್ಯ!

ರಾಯರ ಕಾಲದಲ್ಲಿ ಕನ್ನಡ ಮಹಿಳೆಯರಿಗೆ ವಿದ್ಯಾಭ್ಯಾಸ ಮಾಡಲಿಕ್ಕೆ ಯಾವದೂ ಪ್ರತಿಬಂಧವಿದ್ದಂತೆ ತೋರುವದಿಲ್ಲ. ಅನುಕೂಲವಿದ್ದವರು ತಮ್ಮ ಹೆಣ್ಣುಮಕ್ಕಳಿಗೆ ಆ ಕಾಲದಲ್ಲಿ ಸಾಮಾನ್ಯವಾದಂಥ ಉಚ್ಚಶಿಕ್ಷಣವನ್ನೂ ಕೊಡುತ್ತಿದ್ದರು. ಸ್ತ್ರೀಯರು ಕಲಿಯುವ ಮುಖ್ಯವಾದ ವಿಷಯಗಳೆಂದರೆ ಕಾವ್ಯ, ಗಾಯನ, ಶಿಲ್ಪ, ವೇದಾಂತ ಮುಂತಾದವುಗಳಾಗಿದ್ದವು. ಕೆಲವರು ಗಾಯನ ನೃತ್ಯಗಳಲ್ಲಿ ವಿಶೇಷ ಪ್ರವೀಣರಾಗುತ್ತಿದ್ದರು. ಕೆಲವರು ಪಾಕಶಾಸ್ತ್ರ ಮುಂತಾದವುಗಳಲ್ಲಿ

ಹೆಸರು ಪಡೆಯುತ್ತಿದ್ದರು. ವೇಶ್ಯವರ್ಗದ ಸ್ತ್ರೀಯರು ಕಸ್ಬವಟ್ಟಿಗೆ ವ್ಯಾಪಾರಾದಿಗಳಲ್ಲಿ ತಮ್ಮ ಪುರುಷರಿಗೆ ಸಹಾಯಕರಾಗುತ್ತಿದ್ದರು. ಮತ್ತು ಒಕ್ಕಲತನದ ವರ್ಗದ ಸ್ತ್ರೀಯರು ಹೊಲಗಳಲ್ಲಿ ಕೆಲಸಗಳನ್ನು ಮಾಡುತ್ತಿದ್ದರು.

ರಾಯರ ಕಾಲದಲ್ಲಿ ಸ್ತ್ರೀ ಸಮಾಜಕ್ಕೆ ಮುಂದರಿಯುಲಿಕ್ಕೆ ಒಂದು ದೊಡ್ಡ ಸಾಧನವಿತ್ತು. ಅದಾವುದೆಂದರೆ ಸ್ತ್ರೀಯರಿಗೆ ಸರಕಾರಿ ನೌಕರಿಗಳು ದೊರೆಯುತ್ತಿದ್ದವು. ರಾಯರ ಅರಮನೆಯಲ್ಲಿ, ರಾಯರ ವಿಭಾಗದಲ್ಲಿಯೂ ರಾಣಿಯರ ವಿಭಾಗದಲ್ಲಿಯೂ ಸಾವಿರಾರು ಸ್ತ್ರೀಯರಿಗೆ ಪೋಲೀಸ ಕೆಲಸಗಳು ದೊರೆಯುತ್ತಿದ್ದವು. ಕೆಲವರಿಗೆ ರಾಯರ ಭೋಜನ ಶಾಲೆಯಲ್ಲಿ ನೌಕರಿಗಳು ಸಿಗುತ್ತಿದ್ದವು. ರಾಣೀವಾಸದೊಳಗಿರುವಂಥ ದಾಸಿಗಳಂತೂ ಇದ್ದೇ ಇದ್ದರು.

ಕೆಲವರು ಸ್ತ್ರೀಯರು ನ್ಯಾಯಾಧೀಶರ ಕೆಲಸ ಸಹ ಮಾಡುತ್ತಿದ್ದರೆಂದು ತಿಳಿಯುತ್ತದೆ. ಹೆಣ್ಣುಮಕ್ಕಳಿಗೆ ಸಂಬಂಧಿಸಿದ ವ್ಯಾಜ್ಯಗಳ ತೀರ್ಮಾನ ಮಾಡುವದೇ ಈ ಸ್ತ್ರೀ ನ್ಯಾಯಾಧೀಶರ ಕೆಲಸವಿದ್ದಿರಬಹುದು.

ರಾಯರ ಅರಮನೆಯೊಳಗಿನ ಜಮಾಖರ್ಚಿನ ಲೆಕ್ಕಗಳನ್ನು ಬರೆಯಲಿಕ್ಕೆ ಪುರುಷರಂತೆಯೇ ಸ್ತ್ರೀ ಕಾರಕೂನರೂ ಇದ್ದರು. ಅದೇಪ್ರಕಾರ ರಾಜ್ಯದೊಳಗೆ ನಡೆಯುವಂಥ ಮಹತ್ವದ ಸಂಗತಿಗಳನ್ನು ಬರೆಯಲಿಕ್ಕೂ ಮತ್ತು ಅರಮನೆ ಹೊರಗಿರುವ ಕಚೇರಿಗಳಲ್ಲಿ ಪುರುಷರಿಂದ ಬರೆಯಲ್ಪಟ್ಟ ವೃತ್ತಾಂತಗಳಿಗೂ, ಅರಮನೆಯೊಳಗಿನ ಸ್ತ್ರೀ ಲೇಖಕರಿಂದ ಬರೆಯಲ್ಪಟ್ಟ ವೃತ್ತಾಂತಗಳಿಗೂ ಮೇಳಗೂಡಿಸಿ ನೋಡುವದಕ್ಕಾಗಿಯೂ ಸ್ತ್ರೀಯರಿಗೆ ಅರಮನೆಯಲ್ಲಿ ನೌಕರಿಗಳು ದೊರೆಯುತ್ತಿದ್ದವು.

ಮಲ್ಲಯುದ್ಧದಲ್ಲಿ, ವೈದ್ಯಕದಲ್ಲಿ, ಮಂತ್ರಶಾಸ್ತ್ರದಲ್ಲಿ, ಮತ್ತು ಜ್ಯೋತಿಷ್ಯದಲ್ಲಿಯೂ ಪ್ರವೀಣರಾದ ಸ್ತ್ರೀಯರು ರಾಯರ ನವಕರಿಯಲ್ಲಿದ್ದರು

ಆ ಕಾಲದಲ್ಲಿ ಯುದ್ಧದಲ್ಲಿ ಸಹ ಕುಶಲರಾದ ಸ್ತ್ರೀಯರನೇಕರಿದ್ದರು. ಯುದ್ಧಕ್ಕೆ ತಮ್ಮ ಪತಿಗಳ ಸಂಗಡ ಅನೇಕ ಸ್ತ್ರೀಯರು ಹೋಗುತ್ತಿದ್ದರು. ವಿಜಯನಗರದರಸರು ಯುದ್ಧಕ್ಕೆ ಹೋದಾಗ್ಯೆ ಅನೇಕಾವರ್ತಿ ಅವರ ಹೆಂಡರು ಅವರ ಜೊತೆಗೆ ಇರುತ್ತಿದ್ದರು. ಅದೇ ಪ್ರಕಾರ ಅನೇಕ ಸರದಾರ ಮಾಂಡಲೀಕರ ಹೆಂಡತಿರುಗಳೂ ತಮ್ಮ ಪತಿಗಳ ಸಂಗಡ ರಣಾಂಗಣದ ಮೇಲೆ ಹಾಜರ ಇರುತ್ತಿದ್ದರು. ಎಷ್ಟೋ ಸಾರೆ ಯುದ್ಧದಲ್ಲಿ ತಮ್ಮ ಪತಿಯು ಮಡಿದ ಬಳಿಕ ಧೈರ್ಯದಿಂದ ಪತಿಯ ಸ್ಥಳದಲ್ಲಿ ತಾವು ನಿಂತು, ಯುದ್ಧವನ್ನು ಮುಂದೆ ಸಾಗಿಸುತ್ತಿದ್ದರು. ಈ ಸಂಗತಿಗಳು ಅಭಿಮಾನದಿಂದ ಶಿಲಾಲಿಪಿಗಳಲ್ಲಿಯೂ ಬರೆಯಲ್ಪಟ್ಟಿವೆ.

ಕೆಲವು ಸ್ತ್ರೀಯರು ರಾಜಕೀಯ ಕ್ಷೇತ್ರಗಳಲ್ಲಿ ಸಹ ಕೆಲಸ ಮಾಡಿದಂತೆ ಕಂಡುಬಂದದೆ. ಕೆಲವರು ಜಮೀನುಗಳ ವ್ಯವಸ್ಥೆಯನ್ನು ತಾವೇ ನೋಡುತ್ತಿದ್ದರು. ಮತ್ತು ದೇವಸ್ಥಾನಗಳಿಗಾಗಿ ಹೊಸ ಅಗ್ರಹಾರಾದಿಗಳನ್ನು ಬೇಡುವದಕ್ಕಾಗಿ ಸ್ತ್ರೀಯರು ಸ್ವತಃ ರಾಯರ ಭೆಟ್ಟಿಗೆ ಬಂದು ತಮ್ಮ ಕೆಲಸವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದರು.

ಕೆಲವರಂತೂ ವಿದುಷಿಯರೆಂದು ವಿಶೇಷ ಖ್ಯಾತಿಯನ್ನು ಹೊಂದಿದ್ದರು, ಅರಮನೆಯ ಅರಸಿಯರು ಬಹುಶಃ ವಿದುಷಿಯರೇ ಇರುತ್ತಿದ್ದರು, ಈ ಕಾಲದಲ್ಲಿ ಅನೇಕರು ಗ್ರಂಥಕರ್ತ್ರಿಯರು ಕವಯಿತ್ರಿಗಳೂ ಆಗಿ ಹೋದರು. ತಿರುಮಲಾಂಬಾ ಎಂಬ ಕವಯಿತ್ರಿಯು ವರದಾಂಬಿಕಾ ಪರಿಣಯವು ಎಂಬ ಕಾವ್ಯವನ್ನು ಬರೆದು ಅಚ್ಯುತರಾಯ ಮತ್ತು ವರದಾಂಬೆಯರ ವಿವಾಹ ಮಹೋತ್ಸವವನ್ನು ಅತಿ ಸರಸವಾಗಿ ವರ್ಣಿಸಿರುವಳು. ಮೊಡೆಯ ತಿರುಮಲಮ್ಮಾ ಈಕೆಯು ಅಚ್ಯುತರಾಯನು ಮಾಡಿದ ಸುವರ್ಣ ಮೇರುದಾನದ ಸಂಗತಿಯನ್ನು ವರ್ಣಿಸಿರುವಳು. ಶಿಲಾಲಿಪಿಯೊಳಗಿನ ಸಂಸ್ಕೃತ ಶ್ಲೋಕಗಳನ್ನೂ ರಚಿಸಿರುವಳಂತೆ. ಇದೇ ಪ್ರಕಾರ ತಂಜಾವರದ ನಾಯಕನಾದ ರಘುನಾಥನಾಯಕನ ಹೆಂಡತಿಯು ಮಹಾವಿದುಷಿಯಾಗಿದ್ದಳು ಈಕೆಯೂ ರಘುನಾಥಾಭ್ಯುದಯವೆಂಬ ಕಾವ್ಯವನ್ನು ರಚಿಸಿರುವಳು.

ರಾಯರ ಕಾಲದ ಸ್ತ್ರೀ ಸಮಾಜದ ಉಡಿಗೆ ತೊಡಿಗೆ, ಅಲಂಕಾರ, ಇವುಗಳ ಬಗ್ಗೆ ಹೆಚ್ಚಿಗೆ ಬರೆಯುವ ಅವಶ್ಯಕತೆ ಇಲ್ಲ. ಇತ್ತೀಚಿನ ಫ್ಯಾಶನವನ್ನನುಸರಿಸದೆ ಇದ್ದ ಸದ್ಯದ ಕುಲೀನ ಕರ್ನಾಟಕ ಮಹಿಳೆಯರ, ಉಡಿಗೆ ತೊಡಿಗೆ, ಮತ್ತು ಅಲಂಕಾರಗಳಂತೆಯೆ ಆಗಿನವಾಗಿದ್ದವೆಂದು ಹೇಳಿದರೆ ಸಾಕು. ಆಟನೋಟ ಹಬ್ಬಹುಣ್ಣಿವೆ ಇವುಗಳ ಬಗ್ಗೆ ಆಗಿನ ರೀತಿಗಳೇ ಇವತ್ತಿಗೂ ಹಲಕೆಲ ಅಂಶದಿಂದ ಉಳಿದೇ ಇರುತ್ತವೆ. ರಾಯರ ಕಾಲಕ್ಕೂ ಈಗಿನ ಕಾಲಕ್ಕೂ ವ್ಯತ್ಯಾಸ ಉಂಟಾದದ್ದು ಈ ೨೦೦ ೩೦ ವರ್ಷಗಳಲ್ಲಿ

ಕೆಲ ಸುಧಾರಕೀಯತದ ಜನರಲ್ಲಿ ಮಾತ್ರ. ಬಹುಜನ ಸಮುದಾಯದೊಳಗಿನ ಮಹಿಳೆಯರ ನಡತೆ ನಡಾವಳಿಗಳು ಈಗಲೂ ಹಳೆ ಪದ್ಧತಿಯನ್ನೇ ಅವಲಂಬಿಸಿರುತ್ತವೆ.

ರಾಯರ ಕಾಲದಲ್ಲಿ ಹೆಣ್ಣುಮಕ್ಕಳ ವಿವಾಹವು ಪ್ರಾಯಃ ಬಾಲ್ಯದಲ್ಲಿಯೇ ಆಗುತ್ತಿತ್ತು. ರಾಯರ ಕಾಲದಲ್ಲಿ ಗಂಡಸರು ಅನೇಕ ಪತ್ನಿಯರನ್ನು ಮದುವೆ ಮಾಡಿಕೊಳ್ಳುವ ಪದ್ಧತಿಯಿತ್ತು. ರಾಯರಂತೂ ತಮಗೆ ಇಷ್ಟವಿದ್ದಷ್ಟು ಮಂದಿ ಹೆಂಡಂದಿರನ್ನು ಮಾಡಿಕೊಳ್ಳುತ್ತಿದ್ದರು. ಸುಸ್ವರೂಪಿಯಾದ ಮತ್ತು ಗಾಯನಾದಿ ಕಲೆಗಳಲ್ಲಿ ನಿಪುಣರಾದ ಕುಲೀನ ಕನ್ಯೆಯರಿಗೆ ತಾವು ದೈವಯೋಗವಿದ್ದರೆ ಅರಮನೆಯ ಅರಸಿಯರಾಗಬಹುದೆಂದು ಹೆಮ್ಮೆಯಿರುತ್ತಿತ್ತು.

ರಾಯರ ರಾಜಧಾನಿಯಲ್ಲಿ ಅನೇಕ ಹೀನಸ್ತ್ರೀಯರು ಸೂಳೆತನವನ್ನು ಮಾಡಿ ವೈಭವಸಂಪನ್ನರಾಗುತ್ತಿದ್ದರು ರಾಜಧಾನಿಯಲ್ಲಿ ಇವರ ಸಂಖ್ಯೆಯು ಸಾವಿರಗಟ್ಲೆ ಇತ್ತೆಂದು ಹೇಳುತ್ತಾರೆ. ಇತರ ಸ್ಥಳಗಳಲ್ಲಿ ಸಹ ಆ ಗ್ರಾಮಕ್ಕೆ ತಕ್ಕಂತೆ ಸೂಳೆಯರು ಇರುತ್ತಿದ್ದರು. ಆ ಭಾಗಕ್ಕೆ ಸೂಳಿಗೇರಿ ಯೆಂದು ಹೆಸರು. ಈ ಸೂಳಿಗೇರಿಗಳ ವರ್ಣನೆಗಳು ಅನೇಕ ಕಾವ್ಯಗಳಲ್ಲಿ ಬಂದಿವೆ.

ವಿಧವೆಯರಲ್ಲಿ ಅನೇಕರು ಮಹಾಧರ್ಮಿಷ್ಠರಾಗಿರುತ್ತಿದ್ದರು. ಇವರಲ್ಲಿ ವಿಜಯರಂಗ ಚೊಕ್ಕನಾಥ ನಾಯಕನ ತಾಯಿಯಾದ ಮಂಗಮ್ಮಳ ಈಕೆಯ ಕೀರ್ತಿಯು ದಿಗಂತ ವ್ಯಾಪಿಸಿತ್ತು. ಮಗನು ಅಲ್ಪವಯಸ್ಕನಾಗಿದ್ದ ಕಾರಣ ಮಂಗಮ್ಮಳ ಈಕೆಯೇ ರಾಜ್ಯ ಕಾರಭಾರವನ್ನು ನಡೆಸುತ್ತಿದ್ದಳು. ಅನೇಕ ದೇವಾಲಯಗಳು, ಮತ್ತು ಅನ್ನ ಛತ್ರಾಲಯಗಳು ಆಕೆಯಿಂದ ಕಟ್ಟಿಸಲ್ಪಟ್ಟವು. ಅನೇಕ ಅಗ್ರಹಾರಗಳು ದೊಡ್ಡದೊಡ್ಡ ದೇವಸ್ಥಾನಗಳಿಗೆ ಈಕೆಯಿಂದ ಕೊಡಲ್ಪಟ್ಟವು. ಒಮ್ಮೆ ಮರೆತು ಎಡಗೈಯಿಂದ ತಾಂಬೂಲ ಭಕ್ಷಣ ಮಾಡಿದ್ದು ಬಲು ದೊಡ್ಡ ಪಾತಕವಾಯಿತೆಂದು ಆ ಪಾಪದ ಕ್ಷಾಲನಾರ್ಥವಾಗಿ ಮಂಗಮ್ಮಳ ಈಕೆಯು ಕಾಶಿಯಿಂದ ರಾಮೇಶ್ವರದ ವರೆಗೆ ರಸ್ತೆಯನ್ನು ಕಟ್ಟಿಸಿದಳ. ಆ ರಸ್ತೆಯ ಎರಡೂ ಭಾಗದಲ್ಲಿ ಸಾಲಾಗಿ ಗಿಡಗಳನ್ನು ಹಚ್ಚಿಸಿದಳು. ಕನ್ಯಾಕುಮಾರಿ ಮುಂತಾದ ಇನ್ನೂ ಅನೇಕ ಕ್ಷೇತ್ರಗಳಿಗೂ ಮಾರ್ಗಗಳನ್ನು ಕಟ್ಟಿಸಿದಳು. ಲೆಖ್ಖವಿಲ್ಲದಷ್ಟು ಭಾವಿಗಳು, ಹೊಂಡಗಳು ಧರ್ಮಶಾಲೆಗಳು, ಅನ್ನಛತ್ರಗಳು, ಆಕೆಯ ಕಾಲದಲ್ಲಿ ನಿರ್ಮಿತವಾದವು.

ರಾಯರ ಪಟ್ಟಾಭಿಷೇಕದ ಕಾಲದಲ್ಲಿ ರಾಯರ ಜೊತೆಗೆ ಮುಖ್ಯ ರಾಣಿಗಾದರೂ ಪಟ್ಟಾಭಿಷೇಕವಾಗುತ್ತಿತ್ತು. ಹೀಗೆ ಪಟ್ಟಾಭಿಷೇಕವಾದ ಅರಸಿಗೆ ಮಹಾರಾಜ್ಞಿ ಅಂದರೆ ಪಟ್ಟದ ಅರಸಿ ಎಂದು ಬಿರುದು ಬರುತ್ತಿತ್ತು.

ವಿಜಯನಗರದ ಸಾಮ್ರಾಜ್ಯದಲ್ಲಿ, ದೇವದಾಸಿಯರ ಪದ್ಧತಿಯು ಪ್ರಚಾರದಲ್ಲಿತ್ತು. ದೇವಾಲಯಗಳಲ್ಲಿ ಉತ್ಸವದಕಾಲದಲ್ಲಿ ಗಾಯನ ನರ್ತನಾದಿಗಳನ್ನು ಮಾಡುವದೇ ಇವರ ಕರ್ತವ್ಯ. ಈ ಕೆಲಸಕ್ಕಾಗಿ ಅವರಿಗೆ ಜಮೀನುಗಳು ಇನಾಮು ಇರುತ್ತಿದ್ದವು ಈ ಪದ್ಧತಿಯು ಕರ್ನಾಟಕದಲ್ಲಿ ಇನ್ನೂ ಪ್ರಚಾರದಲ್ಲಿರುವದರಿಂದ ಹೆಚ್ಚಿಗೆ ಬರೆಯುವ ಅವಶ್ಯಕತೆಯಿಲ್ಲ. ಬಹುಶಃ ಕರ್ನಾಟಕದ ಯಾವತ್ತೂ ಪ್ರಾಚೀನ ಮತ್ತು ಮಹತ್ವದ ದೇವಸ್ಥಾನಗಳಲ್ಲಿ ದೇವದಾಸಿಯರು ಈ ವತ್ತಿಗೂ ಉತ್ಸವಕಾಲದಲ್ಲಿ ದೇವರ ಮುಂದೆ ಗಾಯನ ನರ್ತನ ಮುಂತಾದ ಸೇವೆಗಳನ್ನು ಮಾಡುತ್ತಾರೆ.

ಸ್ತ್ರೀಯರಲ್ಲಿ ಕೆಲವರು ಜ್ಞಾನ ಮಾರ್ಗಾವಲಂಬಿಯಾಗಿ ವೇದಾಂತದಂಥ ಗಹನ ವಿಷಯಗಳಲ್ಲಿ ಸಹ ಗ್ರಂಥಗಳನ್ನು ಬರೆಯುತ್ತಿದ್ದರು. ಮಹಾದೇವಿಯಕ್ಕನಂಥವರ ವಚನಗಳೇ ಇದಕ್ಕೆ ಸಾಕ್ಷಿ. ಇದಲ್ಲದೆ ಸ್ತ್ರೀಯರಲ್ಲಿ ಅನೇಕರು ಮಹಾಧರ್ಮನಿಷ್ಠರಾಗಿದ್ದರು. ಜೈನರಲ್ಲಿ ಕೆಲಸ್ತ್ರೀಯರು ಉಗ್ರತಪಾಚರಣೆ ಮಾಡಿ ಖ್ಯಾತಿಯನ್ನು ಪಡೆದವರಿರುವರು. ಲಿಂಗಾಯತ ಧರ್ಮದೊಳಗಿನ ಅನೇಕ ಶರಣೆಯರು ಪ್ರಸಿದ್ಧರಿದ್ದಾರೆ.

ಇಷ್ಟಲ್ಲದೆ ಸೂಳೆಯ ಕುಲದಲ್ಲಿಹುಟ್ಟಿದವರನೇಕರೂ ಆ ಕೆಟ್ಟ ಕೆಲಸದಲ್ಲಿ ಸಿಲುಕದೆ ಭಕ್ತಿಮಾರ್ಗಾವಲಂಬಿಯಾಗಿ ವಿರಕ್ತರಾಗಿ ಶಿವಾಜಸೇವೆಯನ್ನು ಮಾಡುವದರಲ್ಲಿ ಕಾಲ ಕಳೆಯುತ್ತಿದ್ದರು.

ಆ ಕಾಲದಲ್ಲಿ ಸ್ತ್ರೀಯರು ಪತಿನಿಧನಾನಂತರದಲ್ಲಿ ತಮ್ಮ ಪತಿ ಭಕ್ತಿಗೆ ಒಪ್ಪುವಂತೆ ಧೈರ್ಯದಿಂದಲೂ ಸ್ವಸಂತೋಷದಿಂದಲೂ ಸಹಗಮನವಂ ಮಾಡಿ ಅಕ್ಷಯ ಸ್ವರ್ಗಸುಖವನ್ನು ಪಡೆದ ಉದಾಹರಣೆಗಳು ಹೇರಳವಾಗಿವೆ ಅಂಥ ಸತಿಯರ ಸ್ಮಾರಕಗಳು ಕರ್ನಾಟಕದಲ್ಲಿ ಮಾಸತಿಗಲ್ಲುಗಳೆಂದು ಅಲ್ಲಲ್ಲಿ ಇರುವವು. ಸತಿಹೋದ ಸ್ತ್ರೀಯರ ಬಗ್ಗೆ ಜನತೆಯಲ್ಲಿ ಅತ್ಯಂತ ಪೂಜ್ಯ ಭಾವನೆ ಇರುತ್ತಿತ್ತು.

ಅಂತೂ ರಾಯರ ಕಾಲದಲ್ಲಿ ಸ್ತ್ರೀ ಸಮಾಜವು ಒಳ್ಳೇ ಸ್ಥಿತಿಯಲ್ಲಿತ್ತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಅವರು ಮಾದರಿಯ ಮಹಿಳೆಯರಾಗಿದ್ದರು. ಅವರ ಉಜ್ವಲ ಪರಂಪರೆಯನ್ನು ಸಾಗಿಸುತ್ತ ಬಂದರೆ ಈಗ್ಯೂ ಕರ್ನಾಟಕ ಮಹಿಳೆಯರು ಆದರ್ಶ ಮಾತೆಯರಾಗಿ, ಪತ್ನಿಯರಾಗಿ ಖ್ಯಾತಿಪಡೆದು, ಅವರಿಂದ ಸ್ಫೂರ್ತಿಗೊಂಡ ಕರ್ನಾಟಕವೀರರು ಆದರ್ಶ ಪುರುಷರಾಗಿ, ಕರ್ನಾಟಕದ ಕೀರ್ತಿಯು ಆಚಂದ್ರಾರ್ಕವಾಗಿ ಅಖಂಡ ಭೂಮಂಡಲದಲ್ಲಿ ಮೆರೆದಾಡುವಂತೆ ಮಾಡುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

|| ಜಯಭುವನೇಶ್ವರಿ ||

---

# ಗತವೈಭವಗಳನಾಡೆ! ಇಂದಿನ ದುರ್ಗತಿಬೀಡೆ!

( ಕವಿ:— ಶ್ರೀ ಟಿ. ಎನ್. ಶ್ರೀನಿವಾಸಮೂರ್ತಿ ಮೈಸೂರ. )

ಗತವೈಭವಗಳ ನಾಡೆ !
ಇಂದಿನ ದುರ್ಗತಿ ಬೀಡೆ !
ಪಿಂತಾ ಮುಸಲರ ದಾಳಿಗೆ ಸಿಲುಕಿ,
ಅನ್ಯ ಧರ್ಮಗಳ ತುಳಿತಕೆ ಸಿಲುಕಿ,
ಆರ್ಯ ಧರ್ಮ ತಾ ಲಘುವಾಗುತಿರೆ,
ಭಾರತ ಕಲೆಯದು ಮಣ್ಣು ಗೂಡುತಿರೆ
ಹೊಡಿ! ಕಡಿ! ಇರಿ! ತಿವಿ! ಎಂಬದ ಹುಯಿಲು
ಕೈದುಗಳಾಟವು, ಮಜ್ಜೆಯ ಹೊನಲು,
ಭೀಷಣ, ಹೇಷಣ, ಜಯಘೋಷ!
ಕಾದುವ ಭಟರ್ಗಳ ಆವೇಶ!
ಸೋತರ ಆಕ್ರೋಶ!
ಭಾರತಭೂಮಿಯ ತುಂಬಿರಲೆಲ್ಲೂ,
ದೆಸೆಮುಸಗುತ್ತಿರೆ ಆ ಗುಲ್ಲು;
ಬಂಜರ ಭೂಮಿಯೆ ನೋಡಿದರೆಲ್ಲೂ;
ಕುಂದಿದ ಮೊಗಗಳೆ ಮೇಣೆಲ್ಲು;
ವಿಪ್ಲವ! ವಿಪ್ಲವ! ಭೀಷಣ ವಿಪ್ಲವ!
ಪ್ಲಾವಿತವಾಗಿದೆ ವೇದದ ಬೀಡು,
ಶಾಂತಿಯು ಮುಸುಗಿರಲು;
ಕ್ರಾಂತಿಯು ಕೆರಳಿರಲು!
ನಾಡಿನ ಸುಸ್ಕೃತಿ ಹಾಳಾಗಿ!
ಸಂಸ್ಕೃತಿ ಹೀನರ ತೊತ್ತಾಗಿ!
ಕಲೆಕೊಲೆಯಾಗಿ;
ಜೀವನ ಕಟುವಾಗಿ;
ಇರಲಿದ ಕಾಣುತ ವಿದ್ಯಾರಣ್ಯಂ,
ಮನದಲಿ ಮರಗುತ ಮಹರ್ಷಿವಾನ್ಯಂ,
ನಾಡಿನ ಪುವರುದ ರಣ ಬಗೆದು_
ಯೋಜಿಸಿ, ಯೋಜಿಸಿ, ಯೋಜಿಸಿ, ನೆನೆದು,
ಹುಕ್ಕ ಬುಕ್ಕರಲಿ ಕ್ಷಾತ್ರವ ಕಂಡು.
ಮಂತ್ರಾಲೋಚನೆ ತಾಗೈಕೊಂಡು,
ತುಂಗಾಪ್ಲಾವಿತ ಕ್ಷೇತ್ರದಲಿ
ರಾಜ್ಯವ ಕಟ್ಟಿದನು.
ನಾಡಿನ ಚದುರಿದ ವೀರರು ಎಲ್ಲ!
ಒಟ್ಟುಗೂಡಿದರು ಒಡನೆಯೆ, ಎಲ್ಲ;
ಮುಸಲಾ ಘಾತದಿ ನೊಂದವರು;
ವಿಪ್ಲವದಿಂದಲಿ ಬೆಂದವರು!
ವಿದ್ಯಾರಣ್ಯರ ಆಶ್ರಯದಲ್ಲಿ
ರಾಜ್ಯವ ಕಟ್ಟಿದರು;
ಹುಕ್ಕಬುಕ್ಕರಲಿ ಹಿರಿಯವಹುಕ್ಕಗೆ
ಪಟ್ಟವಕಟ್ಟಿದರು.

ವಿದ್ಯಾರಣ್ಯರು ಕಟ್ಟಿದ ರಾಜ್ಯವು
ವಿದ್ಯಾನಗರವವೆನ್ನಿಸಿತು;
ವಿಜಯಕೆ ನೆಲೆವನೆಯಾದುದರಿಂದದು
**ವಿಜಯನಗರ ವೆಂದೆನ್ನಿಸಿತು.**

ಬೆಳೆಯಿತು, ಬೆಳೆಯಿತು, ಬೆಳೆಯಿತು ನಾಡು!
ವಿದ್ಯಾರಣ್ಯರು ಕಟ್ಟಿದ ನಾಡು!
ಐಸಿರಿಯಿಂದಲಿ ಬಲವನು ಹೊಂದಿ,
ಧರ್ಮದ ಪಥದಲೆ ನಡೆಯುತಬಂದು,
ಆಶ್ರಯಹೊಕ್ಕರಿಗಾಶ್ರಯವಿತ್ತು,
ಆರ್ಯ ಧರ್ಮಕೆ ಮೇಲ್ಮೆಯನಿತ್ತು,
ಬೆಳೆದುದು ಸತ್ಯಕೆ ನೈತಿಕತ್ತು!
ಅಧರ್ಮಕ್ಕದುವೆ ತಡೆಯಿತ್ತು!

ವಿದ್ಯಾನಗರದ ಏಳ್ಗೆಯಲಿ
ಹಿಂದೂ ರಾಜರ ಮೇಲ್ಮೆಯಲಿ,
ನಾಡಿನ ಕ್ರಾಂತಿಯು ಮುಳುಗಿದುದು !
ಶಾಂತಿಯು ಅದನಾವರಿಸಿದುದು !
ಬೆಳೆಸುದು ನಾಡಿನ ಧರ್ಮವು, ಕಲೆಯು
ಡಂಕಣ ಜಕಣರ ಶಿಲ್ಪಕೆ ನೆಲೆಯು !
ಕನ್ನಡ ಕವಿಗಳಿಗಾಶ್ರಯವಿತ್ತು
ಕನ್ನಡ ನಾಡದು ಬೆಳೆಯುತಲಿತ್ತು;
ನೇಗಿಲ ಯೋಗಿಯು ಹೊಲವನು ಉಳುತೆ,
ಗೋಪಾಲನು ತುರುಮಂದೆಯ ಕಾಯುತೆ
ಕಾಲಕೆ ವಳೆ ಬೀಳುತೆ, ಬೆಳೆ ಬೆಳೆಯುತೆ,
ಶಾಲಿಯ ವನಗಳು ಎಲ್ಲೆಡೆ ಮೆರೆಯುತೆ,
ಎಸೆದುದು ನೆಮ್ಮದಿಯಲಿ ಆನಾಡು,
  ವೇದದ ಋಷಿಗಳಾ ನೆಲೆವೀಡು !
ಸುತ್ತಣ ಬಳಸಿನ ರಾಜ್ಯದ ರಾಜರು,
ಕಪ್ಪಕಾಣಿಕೆಯನೀಯುತ ಬಂದರು
  ಸಾಮಂತರ ವೊಲು ತಪ್ಪದಲೆ;
ಆದರಿಂಪೆಸರಾಂತುದು ಆ ರಾಜ್ಯವು
  ಸಾಮ್ರಾಜ್ಯ ವೆಂದೆನ್ನುತಲೆ !
ಜಾತಿಸದುದು ಆ ಮಂಗಳಧಾಮ,
  ಸಿರಿಸತಿಯರ ಆರಾಮ !
ಪ್ರಕೃತಿ ಜನನಿಯು ನರ್ತನ ರಂಗ;
  ಹರಿಯುವುದತಿ ಪಾವನ ತುಂಗಾ !
    ಆದರೆ ಏನು ?
    ಅಯ್ಯೋ ಏನು ?
ಅಂದಿನ ವೈಭವ ಯಿಂದಿನ ಕನಸು;
ತಿರುಕನು ನೆನೆಯುವ ಸಗ್ಗದ ನೆನಸು !
ನಾಡಿನ ಧರ್ಮವು ಕ್ಷಾತ್ರವು ಉಡುಗಿ,
ಸಮತಾ, ಮೈತ್ರಿಯು, ಮಣ್ಣೊಳು ಹುದುಗಿ
  ನಾಡಿನ ವೈಭವ ಗತಿಸುದುದು,
  ಹಸಿಮುಸಣಕೆ ಸಮನೆನಿಸಿಹುದು !
  ಗತ ವೈಭವಗಳ ನಾಡು;
  ಇಂದಿನ ಮಸಣದಗೂಡು !
ಹಿಂದಿನ ವೈಭವ ನೆನೆಯುತ ರಸಿಕನು
  ಮನದಲಿ ಹಿಗ್ಗುವನು,
ಅಂದಿನಕಲೆ ಛಾಯೆಯ ಕಾಣುತಲವ
  ಅಂತೆಯೆ ಸಿಗ್ಗುವನು;
ಮರುಚಣದಲೆ ಯಿಂದಿನ ದುರ್ಗತಿಯವ
  ನೆನೆಯುತ ವೊಗ್ಗುವನು !
  ಅಯ್ಯೋ ! ಎನ್ನುವನು;
  ನಿಡುಸುಯ್ಯುವನು !
ಏಕೆಲೆ ಈ ಪರಿ ಮರಗುವೆ ಜೀವ !
ಗತವೈಭವಗಳ ನೆನೆಯುವದಾವ—
ಹಿರಿತನ ! ಅದನಶ್ವರಬಾಳ,
ನೆನೆದರೆ ತಪ್ಪದು ಎಂದಿಗು ಗೋಳು !
ಕೆಚ್ಚಿಡು ! ನೆಚ್ಚಿಡು ! ನಿನ್ನೊಳು ನೀನು!
ನನ್ನಿಯಪಥದಲೆ ನಡೆ ನಡೆ ! ಏನು !
ಧರ್ಮಕೆ ಮೈಗೊಡು ! ಮೈತ್ರಿಯ ಗಳಿಸು
ನಾಡಿನ ಮೇಲ್ಮೆಯ ಕಳೆಯದೆ ಉಳುಹು !
ಸ್ವಾತಂತ್ರ್ಯಕೆ ದುಡಿ ! ಸಂತೃಪ್ತತೆಯಲಿ !
ಬಾಳಿಲೆ ಜೀವವೆ, ಧರ್ಮದ ನೆಲೆಯಲಿ !
ಕಾಣುವೆ ನಾಕವ ಲೋಕದೊಳೆ
ಅಮೃತತೆ ಸೌಖ್ಯವ ಬಾಳಿನೊಳೆ !
ಮೆರೆಯಲಿ ವಿದ್ಯಾನಗರವು ಸಿರಿಮರಳಿ !
ಸುಗತಿಯ ನೈದಲಿ ಕಾಲವು ಹೊರಳಿ !
  ಜಯ ಹೇ ಮಾಧವ ವಿದ್ಯಾರಣ್ಯ!
  ಜೈ ಭುವನೇಶ್ವರಿ! ಜೈ ! ಜೈ !!

---

# ಆಂಧ್ರಕುಲದ ರಾಮರಾಜ.

[ ಲೇಖಕರು:- ಶ್ರೀ ಉಗ್ರಾಣ ಮಂಗೇಶರಾಯರು, ಪುತ್ತೂರು. ]

ವೀರ ಪ್ರತಾಪ ಚಕ್ರವರ್ತಿ ಶ್ರೀಕೃಷ್ಣದೇವರಾಯನು ಪರಾಕ್ರಮದಿಂದ ವೈಭವದ ಶಿಖರವನ್ನೇರಿ ಅನಂತರದ ಅಚ್ಯುತರಾಯನ ಆಳ್ವಿಕೆಯಲ್ಲಿ ಅಷ್ಟೇ ಘನತೆಯಿಂದ ರಾರಾಜಿಸುತ್ತಲಿದ್ದ ವಿಜಯನಗರ ಸಾಮ್ರಾಜ್ಯವು ಬಳಿಕ ಸಿಂಹಾಸನವನ್ನೇರಿದ ಸದಾಶಿವರಾಯನ ಕಾಲದಲ್ಲಿ ಮುಹಮ್ಮದೀಯರ ಪಾದಾಕ್ರಾಂತವಾಗಿ ಭಾರತೇತಿಹಾಸದಿಂದ ನಿರ್ನಾಮವಾಗಿ ಹೋಯಿತೆಂದು ಚರಿತ್ರೆ ತಿಳಿಸುವದು. ವಿಜಯನಗರದ ಈ ಅಪದೆಶೆಗೆ ಕೃಷ್ಣದೇವರಾಯನ ಅಳಿಯನೂ ಸದಾಶಿವರಾಯನ ಸೇನಾನಿಯೂ ಆದ ಆಂಧ್ರಕುಲದ ರಾಮರಾಜನು ಕಾರಣನು, ರಾಮರಾಜನ ಔದ್ಧತ್ಯವೇ ಮುಹಮ್ಮದೀಯರ ಶತ್ರುತ್ವಕ್ಕೆ ಹೇತುವಾಗಿ, ದಕ್ಕಣದ ಯವನರಾಜ್ಯಗಳೆಲ್ಲವೂ ಒಂದಾಗಿ ತಾಳಿಕೋಟೆಯಲ್ಲಿ ಕಲೆತು, ಹಿಂದೂ ಸಾಮ್ರಾಜ್ಯದ ಸಮಸ್ತ ಸೇನೆಯೊಂದಿಗೆ ಘೋರ ಯುದ್ಧವನ್ನೆಸಗಿ ಸೇನಾನಾಯಕನಾದ ರಾಮರಾಜನನ್ನು ಕೊಂದು, ಪ್ರತಿಭಟಿಸಿದ ವೀರರನ್ನು ಧ್ವಂಸಮಾಡಿ ಸಂಪೂರ್ಣವಾಗಿ ಹಿಂದುಗಳನ್ನು ಸೋಲಿಸಿ, ಅವರ ಮೇಲಣ ರೋಷದಿಂದ ಭೂಸ್ವರ್ಗದಂತಿದ್ದ ವಿಜಯ ನಗರವನ್ನು ಸ್ಮಶಾನ ಭೂಮಿಯಂತೆ ಮಾಡಿದುವು; ಆದ್ದರಿಂದ ರಾಮರಾಜನು, ಕುರುಕುಲಕ್ಕೆ ದುರ್ಯೋಧನನಂತೆ ತುಳುವ ಕುಲಕ್ಕೆ ಕೇತುಪ್ರಾಯನಾದನು— ಎಂಬ ಅಭಿಪ್ರಾಯವು ಸರ್ವಸಾಧಾರಣವಾಗಿದೆ.

ಆದರೆ ರಾಮರಾಜನು ಅಚ್ಯುತರಾಯನ ಅನಂತರ ಕಳೆಗುಂದುತ್ತಿದ್ದ ರಾಜ್ಯಕ್ಕೆ ಹೊಸ ಕಳೆಯನ್ನು ತುಂಬಿಸಿ, ಅಲುಗಾಡುತ್ತಲಿದ್ದ ಕೀರ್ತಿ ಧ್ವಜವನ್ನು ದೃಢವಾಗಿ ನೆಟ್ಟು ಇಪ್ಪತ್ತೈದು ವರ್ಷಕಾಲ, ಪೂರ್ವಕ್ಕಿಂತಲೂ ಅಧಿಕವಾದ ವೈಭವದಿಂದ ಅದನ್ನು ಮೆರೆಯಿಸಿ, 'ಚಿಕ್ಕದೇವರಾಜವಂಶಾವಳಿ' ಎನ್ನುವಂತೆ "ನಿಜರಾಜಂಗೆ ದ್ರಾವಿಡಾಂಧ್ರಕರ್ನಾಟಸಾಮ್ರಾಜ್ಯಮಂ ಸಾರ್ಚಿ ಪತಿಕಾರ್ಯದೊಳರ್ಪಿತಪ್ರಾಣನೆನಿಸಿ ಒಮ್ಮೆ ಉತ್ತರದಿಗ್ವಿಜಯದೊಳುದ್ವೃತ್ತ ಯವನಸೇನಾ ಚಕ್ರ ಮನೊಕ್ಕಲಿಕ್ಕಿಯರಪ್ರೈಪ್ಸನಾದನು. ಆತನು ತನ್ನ ರಾಷ್ಟ್ರಕಲ್ಯಾಣಾರ್ಥವಾಗಿ ಪಟ್ಟ ಸಾಹಸವನ್ನೂ ೧೫೪೩ ರಿಂದ ೧೫೬೫ ರ ವರೆಗೆ ಮುಹಮ್ಮದೀಯರೊಂದಿಗೆ ಪರಾಕ್ರಮದಿಂದ ಕಾದಿ ಸಾಮ್ರಾಜ್ಯಕ್ಕೆ ತಂದ ಕೀರ್ತಿಯನ್ನೂ ಕೊನೆಗೆ ಅಸಾಧಾರಣ ಶೌರ್ಯದಿಂದ ಹೋರಾಡಿ ಮಡಿದ ಕ್ರಮವನ್ನೂ ಪರಿಶೀಲಿಸಿದರೆ, ರಾಮರಾಜನಂತಹ ಉಪಾಯಚತುರರೂ ರಾಜ್ಯತಂತ್ರಧುರೀಣರೂ ಶೂರಾಗ್ರೇಸರರೂ ಭಾರತೇತಿಹಾಸದಲ್ಲಿ ಹಲವು ಮಂದಿಯಿಲ್ಲವೆಂದು ವೇದ್ಯವಾದೀತು. ಭೇದೋಪಾಯದಿಂದ ನೆರೆಯ ಮುಹಮ್ಮದೀಯ ರಾಜ್ಯಗಳು ತಮ್ಮೊಳಗೆ ಸದಾ ಕಾದುತ್ತ ಶಕ್ತಿಗುಂದುವಂತೆ ಮಾಡಿ, ಅವರ ಯುದ್ಧಗಳಲ್ಲಿ ಸಮಯವರಿತು ಆತನು ಪ್ರವೇಶಿಸಿ ಜಯಶೀಲನಾಗಿ ಕಾದುತ್ತ ರಣಭಯಂಕರನೂ ಅಜೇಯನೂ ಲೋಕೈಕವೀರನೂ ಎನ್ನಿಸಿಕೊಂಡು, ಗ್ರೀಸಿಯ ಶಕಪುರುಷ ಪ್ರತಾಪಶಾಲಿಯಾದ ನೆಪೋಲಿಯನನಂತೆ ದಿಗ್ವಿಜಯವನ್ನು ಮಾಡುತ್ತ ಕೊನೆಗೆ ಅವನಂತೆ ಪ್ರಬಲವಾದ ಶತ್ರುಮಂಡಲದಿಂದ ಆವೃತನಾಗಿ, ೯೬ ವರ್ಷದ ಹಳೆಯ ಮುದುಕನಾದರೂ ೩೦ ವರ್ಷದ ಹೊಸ ಜವ್ವನಿಗನಂತೆ ಪರಾಕ್ರಮದಿಂದ ಕಾದಾಡಿ ವೀರಸ್ವರ್ಗವನ್ನು ಪಡೆದನು. ವೀರರಾದವರಿಗೆ ಅಂತಹ ಮರಣವೇ ಪರಮಶ್ರೇಯಸ್ಕರವಾದುದರಿಂದ ಸೆರೆಗೆ ಸಿಕ್ಕಿ ನರಳಿದ ನೆಪೋಲಿಯನನಿಗಿಂತ ರಾಮರಾಜನೇ ಶ್ರೇಷ್ಠನೆನ್ನಬಹುದು.

ರಾಮರಾಜನು ವಿಜಯನಗರದ ಚಕ್ರವರ್ತಿಗಳಲ್ಲಿ ಅಧಿಕ ಪ್ರತಾಪಶಾಲಿಯಾದ ಶ್ರೀಕೃಷ್ಣದೇವರಾಯನ ಅಳಿಯನು ಚಕ್ರವರ್ತಿಯ ಏಕಮಾತ್ರ ಪುತ್ರಿಯಾದ ತಿರುಮಲಾಂಬಿಕೆಯನ್ನು ವಿವಾಹವಾದುದರಿಂದ ರಾಮರಾಜನ ಪ್ರಸಿದ್ಧಿ ಆಗಲೇ ಪ್ರಾರಂಭವಾಗಿದ್ದಿತು. ಆತನ ಕಾಲದಲ್ಲಿಯೂ ಅನಂತರವೂ ಹುಟ್ಟಿದ ಅನೇಕ ಶಾಸನಗಳಲ್ಲಿ ಆತನ ಕುಲದ ಶ್ರೇಷ್ಠತೆಯು ವರ್ಣಿತವಾಗಿದೆ. ಆತನು ಪುರಾಣದೃಷ್ಟಿಯಿಂದ, ಪುರೂರವ ಮೊದಲಾದ ಪೂರ್ವಿಕರಿಂದಾಗಿ ಚಂದ್ರ ವಂಶದವನೆಂದೂ, ಚರಿತ್ರದೃಷ್ಟಿಯಿಂದ ಪಾಟಲೀಪುತ್ರದ ನಂದರ

ಮನೆತನದವನೆಂದೂ, ಚಾಲುಕ್ಯವಂಶದ ಬಿಜ್ಜಲೇಂದ್ರನ ಕುಲದವನೆಂದೂ ಶಾಸನಗಳಿಂದ ತಿಳಿಯುತ್ತದೆ. ಆತನ ಪೂರ್ವಜರಾದ ಸೋಮದೇವ ಬುಕ್ಕ ಮೊದಲಾದವರು ವಿಜಯನಗರದ ದ್ವಿತೀಯ ರಾಜವಂಶಸ್ಥಾಪಕನಾದ ಸಾಳುವ ನರಸಿಂಹನಿಗೆ ಸೇನಾನಾಯಕರಾಗಿ ಸಹಾಯಮಾಡಿದ್ದರು. ಬುಕ್ಕನ ಮೊಮ್ಮಗನಾದ ಶ್ರೀರಂಗನು ಕೃಷ್ಣದೇವರಾಯನ ಮಂತ್ರಿಗಳಲ್ಲೊಬ್ಬನಾಗಿದ್ದನು. ಆತನ ಐದು ಮಂದಿ ಪುತ್ರರಲ್ಲಿ ರಾಮರಾಜನು ಹಿರಿಯನು. ರಾಮರಾಜನ ತಮ್ಮಂದಿರಲ್ಲಿ ಎರೆದಿಮ್ಮರಾಜ ವೆಂಕಟಾದ್ರಿಯೆಂಬುವರು ಆತನ ಯುದ್ಧಗಳಲ್ಲಿ ಸಮಭಾಗಿಗಳಾಗಿ ಪ್ರಸಿದ್ಧಿಗೆ ಬಂದರು.

ಕೃಷ್ಣದೇವರಾಯನ ಕಾಲದಲ್ಲಿ ರಾಮರಾಜನು ಸೇನಾನಾಯಕರಲ್ಲೊಬ್ಬನಾಗಿ ಪ್ರಸಿದ್ಧಿಗೆ ಬಂದಿದ್ದನು. ಅನಂತರ ಪಟ್ಟಕ್ಕೆ ಬಂದ ಆತನ ತಮ್ಮನಾದ ಅಚ್ಯುತರಾಯನ ಆಳಿಕೆಯಲ್ಲಿ ರಾಮರಾಜನೂ ಎರೆದಿಮ್ಮರಾಜನೂ ಆತನ ಮುಖ್ಯ ಮಂತ್ರಿಗಳಾಗಿ ಪ್ರಬಲರಾಗಿದ್ದರು. ಅಚ್ಯುತರಾಯನ ತರುವಾಯ ಪಟ್ಟಕ್ಕೆ ಬಂದ ಚಿನ್ನ ವೆಂಕಟಾದ್ರಿಯು ಕೇವಲ ಬಾಲಕನಾದುದರಿಂದ ಅವನ ಸೋದರ ಮಾವನಾದ ತಿಮ್ಮರಾಜನು ಸರ್ವಾಧಿಕಾರಿಯಾದನು. ಆತನು ಅರೆಮರುಳಾದುದರಿಂದ ಹುಚ್ಚ ತಿಮ್ಮರಾಜನೆಂದು ಆತನಿಗೆ ಹೆಸರಿದ್ದಿತು. ಆತನ ಆಡಳಿತೆಯಲ್ಲಿ ರಾಜ್ಯದಲ್ಲಿ ಬೇಗನೇ ಅವ್ಯವಸ್ಥೆಯುಂಟಾಯಿತು. ರಾಜಮನೆತನದವರನ್ನೊಬ್ಬೊಬ್ಬರನ್ನೇ ಆತನು ವಧಿಸುತ್ತ ಬಂದು ರಾಮರಾಜ ಎರೆದಿಮ್ಮರಾಜರ ಮೇಲೆ ಕಣ್ಣು ಹಾಕಿದುದರಿಂದ ಅವರು ಪ್ರಕೃತಕ್ಕೆ ವಿಜಯನಗರದಿಂದ ಪಲಾಯನ ಮಾಡಬೇಕಾಯಿತು. ಕೊನೆಗೆ ರಾಜನನ್ನೇ ಕುತ್ತಿಗೆ ಹಿಸುಕಿ ಕೊಂದು ತಾನೇ ರಾಯನಾಗಿ ವಿಜಯನಗರದಲ್ಲೆಲ್ಲ ಕೋಲಾಹಲವನ್ನೆಬ್ಬಿಸಲು ಕೆಲವು ಸರದಾರರು ತಿಮ್ಮರಾಜನನ್ನು ಸಿಂಹಾಸನದಿಂದ ತಳ್ಳುವದಕ್ಕೆ ಯತ್ನಿಸಿದಾಗ ಆತನು ಲಕ್ಷಾಂತರ ಹಣಗಳನ್ನು ಒಪ್ಪಿಸಿ ಬಿಜಾಪುರದ ಇಬ್ರಾಹಿಮ್ ಆದಿಲ್‌ಷಾಹನನ್ನು ತನ್ನ ಸಹಾಯಕ್ಕೆ ಬರಮಾಡಿಕೊಂಡನು ಇಂತಹ ವಿದ್ಯಮಾನಗಳಲ್ಲಿ ಮಾತೃಭೂಮಿಯ ವಾತ್ಸಲ್ಯದಿಂದ ರಾಮರಾಜನು ಚತುರೋಪಾಯಗಳನ್ನು ಹೂಡಿ ಆದಿಲ್‌ಷಾಹನನ್ನು ವಿಜಯನಗರದಿಂದ ಹೊರಡಿಸಿ, ತನಗೆ ಸಹಾಯಕರಾದ ಸರದಾರರೊಡನೆ ತಿಮ್ಮರಾಜನನ್ನು ಆತನ ಅರಮನೆಯಲ್ಲಿ ಮುತ್ತಲು ಆತನು ವೈರಿಗಳ ಕೈಗೆ ಸೆರೆಸಿಕ್ಕುವದಕ್ಕಿಂತ ಮರಣವೇ ಲೇಸೆಂದು ಕಠಾರಿಯಿಂದ ತಿವಿದುಕೊಂಡು ಆತ್ಮಹತ್ಯ ಮಾಡಿಕೊಂಡನು. ಅನಂತರ ಪುಣ್ಯಬಲದಿಂದ ವಧೆಗೊಳಗಾಗದೆ ಬದುಕಿದ ಬಾಲಕನಾದ ತುಳುವಂಶದ ಸದಾಶಿವರಾಯನನ್ನು ರಾಮರಾಜನು ಪಟ್ಟಕ್ಕೇರಿಸಿದನು.

ಇದು ಆಂಧ್ರ ಸಹೋದರರ ನಿಜಾಧಿಕಾರದ ಪ್ರಾರಂಭವು. ಪ್ರಥಮತಃ ಪೆನಕೊಂಡೆಯಲ್ಲಿ ಪಟ್ಟಾಭಿಷಿಕ್ತನಾದ ಸದಾಶಿವರಾಯನಿಗೆ ಅನಂತರ ವಿಜಯನಗರದಲ್ಲಿ ಕ್ರಮವಾಗಿ ಪುನಃ ಅಭಿಷೇಕವಾಯಿತು. ಸದಾಶಿವರಾಯನು ಚಿಕ್ಕ ವಯಸ್ಸಿನವನಾದುದರಿಂದ ಸರ್ವಾಧಿಕಾರವು ರಾಮರಾಜನ ಕರಗತವಾಯಿತು. ವೀರ ಪ್ರತಾಪ ಕಠಾರಿ ಸಾಳುವ ವೀರ ಸದಾಶಿವರಾಯದೇವನನ್ನು ಸಾಮ್ರಾಜ್ಯದ ಸರದಾರರೆಲ್ಲರೂ ಚಕ್ರವರ್ತಿಯಾಗಿ ಅಂಗೀಕರಿಸಿದರು. ಆದರೆ ಆತನ ಮುಖ್ಯಮಂತ್ರಿಯೂ ದಳವಾಯಿಯೂ ಸರ್ವಾಧಿಕಾರಿಯೂ ಆದ ರಾಮರಾಜನ ಕೈಯಲ್ಲಿ ಆತನು ಬರಿಯ ಆಡುಗೊಂಬೆಯಾಗಿದ್ದನೆಂದು ಆ ಕಾಲದ ಮಹಮ್ಮದೀಯ ಚರಿತ್ರಕಾರರು ಅಭಿಪ್ರಾಯ ಪಡುವರು. ಅಷ್ಟೇ ಅಲ್ಲದೆ ಕೊನೆಗೆ ಅಧಿಕಾರಮದದಿಂದ ಆತನ ಕಿರೀಟನ್ನೇ ಅಪಹರಿಸಿ ತಾನೇ ರಾಜಾಧಿರಾಜ ರಾಜಪರಮೇಶ್ವರ ವೀರ ಪ್ರತಾಪ ಮಹಾರಾಯ ರಾಮದೇವರಾಯನೆಂದು ಹೊಗಳಿಸಿಕೊಳ್ಳುತ್ತಿದ್ದನೆಂದೂ ಶಾಸನಗಳಿಂದ ವ್ಯಕ್ತವಾಗುತ್ತದೆ ರಾಮರಾಜನು ಅಷ್ಟು ಪ್ರಬಲನಾದುದ ಹೇಗೆ ?

ಪ್ರಾರಂಭದಲ್ಲಿ ರಾಮರಾಜನು 'ಮಹಾಮಂಡಲೇಶ್ವರ ಅಳಿಯ ರಾಮರಾಯ ಮಹಾರಾಜ' ನಾಗಿ ಸರ್ವಾಧಿಕಾರವನ್ನು ವಹಿಸಿದರೂ ಚಕ್ರವರ್ತಿಯ ಆಜ್ಞೆಗೆ ಒಳಗಾಗಿದ್ದನೆಂದು ೧೫೪೬-೪೭ರ ಶಾಸನಗಳಿಂದ ತಿಳಿಯುವುದು. ರಾಜ್ಯಭಾರಕ್ರಮದಲ್ಲಿ ಅಸದೃಶವಾದ ಚಾತುರ್ಯವನ್ನು ತೋರಿ ಸಂಧಿವಿಗ್ರಹದ ಮಂತ್ರಿತ್ವವನ್ನು ತಾನೇ ವಹಿಸಿ, ನ್ಯಾಯಕ್ಕ ಎರದಿಮ್ಮರಾಜನನ್ನೂ, ಕಂದಾಯಕ್ಕ ವೆಂಕಟಾದ್ರಿಯನ್ನೂ ಮಂತ್ರಿಯನ್ನಾಗಿ ನಿಯಮಿಸಿ ಆಡಳಿತದಬಾಧ್ಯತೆಯನ್ನು ತನ್ನ ಸಹೋದರರೊಳಗೆ ಹಂಚಿದಾಗಲೇ ರಾಮರಾಜನು ಅಸಾಧಾರಣನೆಂದು ವ್ಯಕ್ತವಾಗಿದ್ದಿತು. ೧೫೫೦ರಲ್ಲಿ ಪ್ರಾಪ್ತವಯಸ್ಕನಾಗಿ ಸದಾಶಿವರಾಯನು ಆಡಳಿತದಲ್ಲಿ ವಿಶೇಷ ತಲೆಹಾಕಲು ಪ್ರಾರಂಭಮಾಡಿದಾಗ ಆತನನ್ನು ತನ್ನ ಉಚ್ಛೃಂಖಲ ಪ್ರವೃತ್ತಿಗೆ ಕಂಟಕವಾಗೆಣಿಸಿ,

ಆವರಂಗಜೇಬನು ಷಾಹಾಜಹಾನನ್ನು ಆತನ ಅರಮನೆಯೊಳಗೆ ಸೆರೆಯಲ್ಲಿಟ್ಟಂತೆ, ಸದಾಶಿವರಾಯನನ್ನು ಆತನ ಅರಮನೆಯಲ್ಲಿಯೇ ನಿರ್ಬಂಧದಲ್ಲಿಟ್ಟು ಆತನನ್ನು ನವರಾತ್ರಿಯ ಸಮಯದಲ್ಲಿ ಮಾತ್ರ ಉತ್ಸವ ಮೂರ್ತಿಯಂತೆ ಮೆರೆಯಿಸಿ, ತಾನು ಸರ್ವತಂತ್ರ ಸ್ವತಂತ್ರನಾಗಿದ್ದನು ಚಕ್ರವರ್ತಿಯನ್ನು ವರ್ಷಕ್ಕೊಮ್ಮೆ ಪ್ರಜೆಗಳಿಗೆ ದರ್ಶನ ಮಾಡಿಸುವ ಕ್ರಮವು ೧೫೬೩ರಲ್ಲಿ ನಿಂತಿರಬೇಕು; ಏತಕ್ಕೆಂದರೆ ಆಗ ಸದಾಶಿವರಾಯನು ಕಾಲವಾದನೆಂಬ ವರ್ತಮಾನವು ರಾಜ್ಯದಲ್ಲಿ ಪ್ರಕಟವಾಗಿ ರಾಮರಾಜನು ಕ್ರಮವಾಗಿ ಪಟ್ಟಾಭಿಷಿಕ್ತನಾಗಿ ಚಕ್ರವರ್ತಿಯ ಬಿರುದುಗಳನ್ನು ವಹಿಸಿಕೊಂಡಂತೆ ಕಾಣುತ್ತದೆ. ಆದರೂ ಮೂವರು ಸಹೋದರರು ವರ್ಷಕ್ಕೊಮ್ಮೆ ಚ ಕ್ರ ವ ರ್ತಿ ಯ ದರ್ಶನ ತೆಗೆದುಕೊಳ್ಳುವ ಮರ್ಯಾದಯನ್ನಿಟ್ಟುಕೊಂಡಿದ್ದರು.

ಈ ಅಧಿಕಾರಾಪಹಾರವು ರಾಜ್ಯಕಲ್ಯಾಣಾರ್ಥವಾಗಿ ಆಯಿತೋ ಸ್ವ ವಂ ಶ ಸ್ಥಾಪನಾನಿಮಿತ್ತವಾಗಿ ಆಯಿತೋ ಹೇಳಲು ಸಂಧಿಗ್ದವಾದಿದೆ. ಪ್ರಾರಂಭದಲ್ಲಿ ಏನಾಗಿದ್ದರೂ ಪರಿಣಾಮದಲ್ಲಿ ಅದು ಅರವೀಡು ವಂಶದ ಸ್ಥಾಪನೆಗೆ ಅವಕಾಶಗೊಟ್ಟಿತು ಕುರುಂಬ ವಂಶದ ಕೊನೆಯ ರಾಜನಾದ ವಿರುಪಾಕ್ಷನ ಆಳಿಕೆಯಲ್ಲಿ ರಾಜ್ಯವು ಮುಹಮ್ಮದೀಯರಿಂದ ಆಕ್ರಮಣವಾಗುವ ಸಂದರ್ಭದಲ್ಲಿ ಸಾಮ್ರಾಜ್ಯದ ಯಶಸ್ಸನ್ನು ಕಾಪಾಡುವದಕ್ಕಾಗಿ ಸಾಳುವ ನರಶಿಂಹನು ಸಿಂಹಾಸನವನ್ನಪಹರಿಸಿ ಸಾಳುವ ವಂಶವನ್ನು ಸ್ಥಾಪಿಸಿದಂತೆ ರಾಮರಾಜನಾದರೂ ಅಷ್ಟೇ ಉಚ್ಛ ಧ್ಯೇಯದಿಂದ ಚಕ್ರವರ್ತಿಯನ್ನು ಅದೃಶ್ಯ ಮಾಡಿ ತನ್ನ ಅಧಿಕಾರವನ್ನು ಸ್ಥಾಪಿಸಿರಬಹುದೆಂದು ಹೇಳುವದಕ್ಕೆ ಅವಕಾಶವಿದೆ.

ರಾಮರಾಜನು ಸರ್ವಾಧಿಕಾರಿಯಾದೊಡನೆ ಅಲ್ಲಲ್ಲಿದ್ದ ಮಾಂಡಲಿಕರ ದಂಗೆಗಳನ್ನು ಅಣಗಿಸಿ ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿ ತನ್ನ ಸಾಮರ್ಥ್ಯವನ್ನು ತೋರಿದ್ದನು. ಚಕ್ರವರ್ತಿಯನ್ನು ನಿರ್ಬಂಧದಲ್ಲಿರಿಸುವ ಆಲೋಚನೆಗೆ ಆತನ ಸಹೋದರರು ಒಪ್ಪದೆ ದಂಗೆಯೆದ್ದು ಅಣ್ಣನೊಡನೆ ಯುದ್ಧಕ್ಕೆ ನಿಂತಾಗ ಆತನು ಗೋಲಕೊಂಡದ ಕುತುಬಷಹಾನ ಸಹಾಯದಿಂದ ಅವರನ್ನು ಸೋಲಿಸಿ ಔದಾರ್ಯದಿಂದ ಅವರನ್ನು ಕ್ಷಮಿಸಿ ಪುನಃ ತನಗೆ ಸಹಾಯಕರನ್ನಾಗಿ ಮಾಡಿಕೊಂಡನು.

ನೆರೆಯ ಮುಹಮ್ಮದೀಯರಾಜ್ಯಗಳಿಗೂ ವಿಜಯನಗರಕ್ಕೂ ಯುದ್ಧವು ಸದಾಶಿವರಾಯನ ಸಿಂಹಾಸನಾರೋಹಣದ ದಿನವೇ ಎಂಬಂತೆ ಪ್ರಾರಂಭವಾಯಿತು. 'ಹುಚ್ಚ' ತಿಮ್ಮರಾಜನನ್ನು ಸಿಂಹಾಸನದಿಂದ ತಳ್ಳಿ ಸದಾಶಿವರಾಯನನ್ನು ಪಟ್ಟಕ್ಕೇರಿಸಿದರೆಂಬ ವಾರ್ತೆ ಬಿಜಾಪುರದ ಇಬ್ರಾಹಿಮ ಆದಿಲಷಾಹನು ಕೇಳಿದೊಡನೆ ತನಗದೇ ಸಂದರ್ಭವೆಂದು ತಿಳಿದು ಅಸದಖಾನನನ್ನು ಅದೋನಿ ದುರ್ಗವನ್ನು ವಶಮಾಡಿಕೊಳ್ಳುವದಕ್ಕೆ ಕಳುಹಿದನು. ಇವರೊಳಗೆ ನಡೆದ ಕದನದಲ್ಲಿ ಅಸದಖಾನನು ಸೋತು ಸೇನಾರಕ್ಷಣಾರ್ಥವಾಗಿ ಹಿಂದಕ್ಕೆ ಸರಿದನು. ಆದರೆ ವೆಂಕಟಾದ್ರಿಯು ಜಯದಿಂದ ಸೈನುರೆತಿರುವನೆಂದು ತಿಳಿದು ಥಕ್ಕನೆ ಆತನ ಮೇಲೆ ಬಿದ್ದು ಆತನನ್ನು ಬೆರಗುಗೊಳಿಸಿದನು. ವೇಂಕಟಾದ್ರಿಯ ಹೆಂಡಿರು ಮಕ್ಕಳು ಶತ್ರುಗಳ ಕೈಗೆ ಸಿಕ್ಕಿರುವದರಿಂದ ಯುದ್ಧಕ್ಕೊಡ್ಡದೆ ಹಿಂದಕ್ಕೆ ಸರಿದು ರಾಮರಾಜನಿಗೆ ಅಲ್ಲಿಯ ವಿದ್ಯಮಾನಗಳನ್ನು ತಿಳಿಸಿದನು. ರಾಮರಾಜನು ಯುದ್ಧವನ್ನು ಬಿರುಸಾಗಿ ಸಾಗುವಂತೆ ಆಜ್ಞೆ ಮಾಡಿ ಬಹಿರಂಗದಲ್ಲಿ ಇನ್ನೊಂದು ಸೇನೆಯನ್ನು ಸಹಾಯಕ್ಕೆ ಕಳುಹಿಸಿದರೂ ಹೆಂಡಿರು ಮಕ್ಕಳು ಶತ್ರುಗಳ ಕೈಗೆ ಸಿಕ್ಕಿದುದರಿಂದ ಬಿಜಾಪುರದೊಡನೆ ಒಪ್ಪಂದವನ್ನು ಬೆಳೆಸುವಂತೆ ಅಂತರಂಗವಾಗಿ ತಿಳಿಸಿದನು. ಅಂತೆಯೇ ಈ ರಾಜ್ಯಗಳೊಳಗೆ ಒಪ್ಪಂದವಾಯಿತು.

ಆದರೆ ಈ ಒಪ್ಪಂದವು ಸ್ವಲ್ಪವೇ ಸಮಯಕ್ಕಾಯಿತು. ಇಬ್ರಾಹಿಮ ಆದಿಲ್‌ಷಾಹನು ಅಹಮ್ಮದನಗರದ ಬರ್ಹನ್ ನೈಜಾಮುಷಾಹನೊಡನೆ ಸೇರಿ ವಿಜಯನಗರದ ಮೇಲೆ ದಂಡೆತ್ತಿ ನಡೆದನು. ಈ ಯುದ್ಧಕ್ಕೆ ಮೂಲಕಾರಣನು ಅಹಮ್ಮದನಗರದ ಸುಲ್ತಾನನೆಂದು ತಿಳಿದು ರಾಮರಾಜನು ಅಹಮ್ಮದನಗರದ ಮೇಲೆ ಬಿದ್ದು ಅದನ್ನು ಕೊಳ್ಳೆ ಹೊಡೆದು ನಗರವನ್ನು ನೆಲಸಮ ಮಾಡಿ ಔಡಲ ಬೀಜವನ್ನು ಬಿ ತ್ತಿ ದ ನೆಂ ದು ರಾಮರಾಜೀಯವೆಂಬ ಗ್ರಂಥವು ತಿಳಿಸುವದು. ನೈಜಾಮುಷಾಹನು ಬೇರೆ ಯತ್ನವಿಲ್ಲದೆ ಆ ದಿ ಲ್ ಷಾ ಹ ನ ಸಂಗವನ್ನು ತ್ಯಜಿಸಿ ರಾಮರಾಯನ ಪಕ್ಷವನ್ನು ವಹಿಸಿದನು.

ಇದಾದ ಸ್ವಲ್ಪ ಸಮಯದೆದೊಳಗಾಗಿ ನೈಜಾಮುಷಾಹನೂ ಗೋಲಕೊಂಡದ ಕುತುಬಷಾಹನೂ

ಬಿಜಾಪುರದೊಡನೆ ಯುದ್ಧಮಾಡುವುದಕ್ಕಾಗಿ ರಾಮರಾಜನ ಸಹಾಯವನ್ನು ಬೇಡಿದರು. ಹಿಂದೆ ಬಿಜಾಪುರದೊಡನೆ ಮಾಡಿದ ಒಪ್ಪಂದದ ಮೇರೆ ಆದಿಲ್‌ಶಾಹನಿಗೆ ಒಪ್ಪಿಸಿದ ಐದು ಗ್ರಾಮಗಳನ್ನು ಆಗ ಸ್ವಾಧೀನಪಡಿಸಿಕೊಳ್ಳವದೇ ನೈಜಾಮಷಾಹನ ಉದ್ದೇಶವಾಗಿದ್ದಿತು. ರಾಮರಾಜನು ಬಿಜಾಪುರಸೀಮೆಯನ್ನು ತೆಂಕಣದಿಂದ ನುಗ್ಗುವದೆಂದು ನಿಶ್ಚಿತವಾಗಿತ್ತು. ಆತನು ಅಂತೆಯೇ ಬಿಜಾಪುರವನ್ನು ಪ್ರವೇಶಿಸಿ ಅನೇಕ ಜಿಲ್ಲೆಗಳನ್ನು ಕೊಳ್ಳೆ ಹೊಡೆದು ಆದಿಲ್‌ಷಾಹನನ್ನು ಹಲವೆಡೆಗಳಲ್ಲಿ ಸೋಲಿಸಿದನು. ಎಲ್ಲ ಕಡೆಗಳಿಂದಲೂ ಶತ್ರುಗಳು ಮುತ್ತಿದುದನ್ನು ಕಂಡು ಆದಿಲ್‌ಷಾಹನು ಅಸದಖಾನನೊಡನೆ ಆಲೋಚನೆ ಮಾಡಿ ಕುತುಬಷಾಹನೇ ಇದಕ್ಕೆ ಮೂಲ ಹೇತುವೆಂದು ಊಹಿಸಿ ಅಹಮ್ಮದನಗರ ವಿಜಯನಗರಗಳೊಂದಿಗೆ ಒಪ್ಪಂದ ಮಾಡಿ ಕುತುಬಷಾಹನನ್ನು ಹೊಡೆಬಡಿದನು.

ಈ ಒಪ್ಪಂದವೂ ಬಹಳ ಕಾಲ ಉಳಿಯಲಿಲ್ಲ. ರಾಮರಾಜನು ನೈಜಾಮುಷಾಹನನ್ನು ಗುಲಬುರ್ಗೆಯ ದುರ್ಗವನ್ನು ಹುಡಿಗುಟ್ಟುವಂತೆ ಪ್ರೇರಿಸಿದನು. ಇದರಿಂದ ಬಿಜಾಪುರ ಅಹಮ್ಮದನಗರಗಳೊಳಗೆ ಕೆಲವು ತಿಂಗಳುಗಳ ವರೆಗೆ ಕದನಗಳು ನಡೆದು ನೈಜಾಮನು ಸಂಪೂರ್ಣ ಸೋತು ಹೋದನು. ರಾಮರಾಜನು ಈ ರೀತಿ ಭೇದೋಪಾಯದಿಂದ ಮಹಮ್ಮದೀಯ ರಾಜ್ಯಗಳೊಳಗೆ ಪರಸ್ಪರ ಕಲಹಗಳನ್ನೆಬ್ಬಿಸಿ ಅವರ ಶಕ್ತಿಯನ್ನು ಕುಂದಿಸಿ ತಾನು ಆನಂದಿಸುತ್ತಿದ್ದನು.

೧೫೪೯ ರಲ್ಲಿ ಬಿಜಾಪುರದ ಮುಖ್ಯ ಸರದಾರನಾದ ಅಸದಖಾನನು ಮಡಿಯಲು ನೈಜಾಮುಷಾಹನು ಪೂರ್ವದ ಸೇಡನ್ನು ತೀರಿಸುವದಕ್ಕಿದು ಯೋಗ್ಯ ಸಮಯವೆಂದು ತಿಳಿದು ಬಿಜಾಪುರದ ಮೇಲೆ ದಂಡೆತ್ತಿ ನಡೆಯುವದಕ್ಕೆ ರಾಮರಾಜನ ಕಡೆಗೆ ತನ್ನ ರಾಯಭಾರಿಗಳನ್ನು ಕಳುಹಿದನು. ರಾಮರಾಜನು ಸಂತೋಷದಿಂದದಕ್ಕೊಪ್ಪಿ ಇಕ್ಕೇರಿಯ ಸದಾಶಿವನಾಯಕನೊಂದಿಗೆ ಒಂದು ಸೈನ್ಯವನ್ನು ಕೊಂಡುಹೋಗಿ ಷಾಹನಿಗೆ ನೆರವಾದನು. ಕಲ್ಯಾಣಿಯೆಂಬಲ್ಲಿ ಬಿಜಾಪುರ ವಿಜಯನಗರ ಸೇನೆಗಳೊಳಗೆ ದೊಡ್ಡ ಕದನವಾಗಿ ಆದಿಲ್‌ಷಾಹನು ಸೋತು ಸಂಧಿಗೊಪ್ಪಿದನು.

ಮರುವರುಷವೇ ಆದಿಲ್‌ಷಾಹನು ಕಲ್ಯಾಣಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆಯತ್ನಿಸಿದಾಗನೈಜಾಮುಷಾಹನು ಪುನಃ ರಾಯಭಾರಿಗಳನ್ನು ವಿಜಯನಗರಕ್ಕೆ ಕಳುಹಿದನು. ಒಡನೆಯೆ ರಾಮರಾಜನು ತನ್ನ ಸೇನೆಯೊಂದಿಗೆ ಅವನಿಗೆ ನೆರವಾದನು. ರಾಯಚೂರ ಮುದುಗಲ್ಲು ದುರ್ಗಗಳನ್ನು ರಾಮರಾಜನು ಸ್ವಾಧೀನ ಪಡಿಸಿಕೊಳ್ಳುವುದೆಂದೂ ನಿಶ್ಚಯವಾಯಿತು. ರಾಯಚೂರು ಮುದುಗಲ್ಲುಗಳು ಬೇಗನೇ ವಶವಾದುವು ವೇಂಕಟಾದ್ರಿಯ ಸಹಾಯದಿಂದ ನೈಜಾಮನು ಶೋಲಾಪುರವನ್ನು ಕೊಂಡನು. ರಾಮರಾಜನು ಅಹಮ್ಮದನಗರದೊಂದಿಗೆ ಸೇರಿ ಯುದ್ಧಮಾಡಿದುದು ಇದು ಕೊನೆಯ ಬಾರಿ. ಆತನು ಅಲ್ಲಿಂದ ಮುಂದೆ ಬಿಜಾಪುರದ ಪಕ್ಷವನ್ನು ವಹಿಸಿ ಇತರ ಮಹಮ್ಮದೀಯ ಸುಲ್ತಾನರೊಂದಿಗೆ ಯುದ್ಧ ಮಾಡಲಾರಂಭಿಸಿದನು.

ಇದು ೧೫೫೩ ರಲ್ಲಿ ಸಂಭವಿಸಿತು. ಅಹಮ್ಮದನಗರದ ಹಳೆಯ ಸುಲ್ತಾನನು ಕಾಲವಾಗಿ ಹುಸೇನ ನೈಜಾಮಷಾಹನು ಪಟ್ಟಕ್ಕೆ ಬಂದಿದ್ದನು. ಗೋಲಕೊಂಡದ ಷಾಹನು ತೀರಿಹೋಗಿ ಇಬ್ರಾಹಿಮ್ ಕುತುಬಷಾಹನು ಗದ್ದುಗೆಯನ್ನೇರಿದನು. ಈ ಇಬ್ಬರು ತರುಣರು ಒಂದಾಗಿ ಗುಲಬುರ್ಗೆಯ ದುರ್ಗವನ್ನು ಹಿಡಿಯುವ ಪ್ರಯತ್ನ ಮಾಡಿದರು. ಆದಿಲ್‌ಷಾಹನು ಅವರೊಡನೆ ಒಬ್ಬಂಟಿಗನಾಗಿ ಕಾದಲಾರದೆ ರಾಮರಾಜನ ಸಹಾಯವನ್ನು ಬೇಡಿ ತನ್ನ ರಾಯಭಾರಿಗಳನ್ನು ಅಮೂಲ್ಯವಾದ ಕಾಣಿಕೆಗಳ ಸಹಿತ ವಿಜಯನಗರಕ್ಕೆ ಕಳುಹಿದನು. ರಾಮರಾಜನು ಸುಪ್ರೀತನಾಗಿ ತನ್ನಪ್ರಬಲ ಸೇನೆಯೊಂದಿಗೆ ಆತನ ಸಹಾಯಕ್ಕೆ ನಡೆದನು ಆತನು ಇಬ್ರಾಹಿಮ್ ಕುತುಬಷಾಹನನ್ನು ಹಿತವಚನಗಳ ಮೂಲಕ ನೈಜಾಮನಿಂದ ದೂರಗೊಳಿಸಿ ಅಹಮ್ಮದನಗರದ ಮೇಲೆ ಬಿದ್ದನು. ಪ್ರಬಲರಾದ ಇಬ್ಬರೊಡನೆ ಕಾದುವುದು ಅಚಾತುರ್ಯವೆಂದು ನೈಜಾಮನು ಅವರೊಡನೆ ಒಪ್ಪಂದ ಮಾಡಿದನು.

೧೫೫೭ರಲ್ಲಿ ಇಬ್ರಾಹಿಮ ಆದಿಲ್‌ಷಾಹನು ಪಟ್ಟವೇರಿದನು. ಈತನು ಬಿಜಾಪೂರಕ್ಕೆ ಪೂರ್ವಯುದ್ಧಗಳಲ್ಲಿ ನಷ್ಟವಾದ ಪ್ರದೇಶಗಳನ್ನು ಜಯಿಸಿಕೊಳ್ಳುವ ಉದ್ದೇಶದಿಂದ ರಾಮರಾಜನೊಂದಿಗೆ ಪ್ರೇಮದ

ಒಪ್ಪಂದವನ್ನು ಮಾಡಿದನು. ಆದಿಲ್‌ಷಾಹನ ಮರಣದ ಸಂದರ್ಭವನ್ನು ಹಿಡಿದು ನೈಜಾಮನು ಬಿಜಾಪುರದ ಮೇಲೆ ಬಿದ್ದಿದ್ದನು. ಚಿಕ್ಕ ಪ್ರಾಯದ ಅಲಿ ಆದಿಲ್‌ಷಾಹನು ಬಿಜಾಪುರದಿಂದ ಪಲಾಯನಮಾಡಿ ರಾಮರಾಜನ ಆಶ್ರಯವನ್ನು ಸೇರಿದನು. ಆಗ ರಾಮರಾಜನು ಪುತ್ರಶೋಕದ ದುಃಖದಿಂದಿದ್ದುದನ್ನು ಸೂಚಿಸುವದಕ್ಕೆ ಸ್ವತಃ ಬಂದನೆಂದು ನಟಿಸಿ ತನ್ನ ಕಾರ್ಯವನ್ನು ಚೆನ್ನಾಗಿ ನೆರವೇರಿಸಿಕೊಂಡನು. ರಾಮರಾಜನ ಪತ್ನಿ ಷಾಹನನ್ನು ತನ್ನ ದತ್ತಪುತ್ರನನ್ನಾಗಿ ಸ್ವೀಕರಿಸಿ ಆತನಿಗೆ ವಿಶೇಷ ಮರ್ಯಾದೆ ಮಾಡಿದಳು. ಬಿಜಾಪುರಕ್ಕೂ ವಿಜಯನಗರಕ್ಕೂ ಪ್ರೇಮದ ಸಂಬಂಧ ವೆಂಬಂತಾಗಿ ರಾಮರಾಜನು ಪುತ್ರಶೋಕವನ್ನು ತೊರೆದು ಆದಿಲ್‌ಷಾಹನ ಸಹಾಯಾರ್ಥವಾಗಿ ಅಹಮ್ಮದನಗರದ ಮೇಲೆ ನಡೆದನು. ಆತನ ಸೇನೆಯು ಹೋದಲ್ಲೆಲ್ಲ ಸೀಮೆಯನ್ನು ಹಾಳುಗೆಡವುತ್ತ ಮಸೀದೆಗಳನ್ನು ಕುದುರೆಲಾಯಗಳನ್ನಾಗಿ ಮಾಡುತ್ತ ಮಹಮ್ಮದೀಯ ಸ್ತ್ರೀಯರ ಮಾನಭಂಗ ಮಾಡುತ್ತ ನಡೆಯಿತು. ನೈಜಾಮನು ಯುದ್ಧದಲ್ಲಿ ಹುರುಳನ್ನು ಕಾಣದೆ ಕಲ್ಯಾಣಿಯನ್ನು ಬಿಜಾಪುರಕ್ಕೊಪ್ಪಿಸಿ ಒಪ್ಪಂದವನ್ನು ಮಾಡಿದನು.

ಶತ್ರುಗಳು ಅಹಮ್ಮದನಗರದಿಂದ ಹೊರಟೊಡನೆಯೆ ನೈಜಾಮನು ಇಬ್ರಾಹಿಮ್ ಕುತುಬಷಾಹನ ಸಹಾಯವನ್ನು ಪಡೆದು ಕಲ್ಯಾಣಿದುರ್ಗವನ್ನು ಪುನಃ ಸ್ವಾಧೀನಪಡಿಸಿಕೊಳ್ಳುವುದಕ್ಕೆ ಹವಣಿಸಿದನು. ಆದಿಲ್‌ಷಾಹನು ಪುನಃ ತನ್ನ 'ತಾತ'ನಾದ ರಾಮರಾಜನು ಕುತುಬಷಾಹನನ್ನು, ಪೂರ್ವಯುಕ್ತಿಯಿಂದ ಅಹಮ್ಮದನಗರದ ಸ್ನೇಹವನ್ನು ತಪ್ಪಿಸಿ, ತಮ್ಮ ಪಕ್ಷಕ್ಕೆ ಒಲಿಸಿಕೊಂಡನು. ಆದರೂ ಆತನು ರಾಮರಾಜನ ದಾಕ್ಷಿಣ್ಯಕ್ಕೆ ಪ್ರಕಟವಾಗಿ ಹಾಗೆ ವರ್ತಿಸಿದರೂ ರಹಸ್ಯವಾಗಿ ನೈಜಾಮನಿಗೆ ಆಹಾರಸಾಮಗ್ರಿಗಳನ್ನು ಒದಗಿಸಿ ಸಹಾಯಮಾಡಿದುದಲ್ಲದೆ ಚಾತುರ್ಯದಿಂದ ಅಹಮ್ಮದನಗರ ಬಿಜಾಪುರ ವಿಜಯನಗರಗಳೊಳಗೆ ಒಪ್ಪಂದವಾಗುವಂತೆ ಮಾಡಿದನು.

೧೫೬೮ರಲ್ಲಿ ಅಹಮ್ಮದನಗರದ ಸುಲ್ತಾನನ ಗೋಲಕೊಂಡದ ಕುತುಬಷಾಹನೊಂದಿಗೆ ವಿವಾಹಸಂಬಂಧವನ್ನು ಬೆಳೆಯಿಸಿ ಕಲ್ಯಾಣಿದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವ ಯತ್ನಕ್ಕಾರಂಭಿಸಿದನು. ರಾಮರಾಜನು ಆದಿಲ್‌ಷಾಹನ ಸಹಾಯಕ್ಕೆ ಪುನಃ ಬಂದನು. ರಾಮರಾಜನು ಶತ್ರುಗಳೊಳಗೆ ವಿಯೋಗವನ್ನು ಕಲ್ಪಿಸುವುದಕ್ಕೆ ಇನ್ನೊಂದು ಸೈನ್ಯವನ್ನು ವೇಂಕಟಾದ್ರಿಯೊಂದಿಗೆ ಗೋಲಕೊಂಡಕ್ಕೆ ಕಳುಹಿದನು. ಒಡನೆಯೇ ಕುತುಬಷಾಹನು ತನ್ನ ರಾಜ್ಯದ ರಕ್ಷಣೆಗೆ ನಡೆಯಬೇಕಾಗಿ ಕಲ್ಯಾಣಿಯ ಮುತ್ತಿಗೆಯನ್ನು ತೆಗೆದು ಈ ಇಬ್ಬರು ಮಿತ್ರರು ಸ್ವಸ್ಥಾನಕ್ಕೆ ತೆರಳಬೇಕಾಯಿತು. ಆದಪ್ರಯುಕ್ತ ಅವರು ರಾಮರಾಜನೊಂದಿಗೆ ಪ್ರತ್ಯೇಕ ಒಪ್ಪಂದಮಾಡಬೇಕಾಯಿತು. ಈ ಒಪ್ಪಂದದ ಒಂದು ಶರ್ತವಾಗಿ ಅಹಮ್ಮದನಗರದ ಸುಲ್ತಾನನು ರಾಮರಾಜನ ದರ್ಶನವನ್ನು ತೆಗೆದುಕೊಂಡು ವೀಳ್ಯವನ್ನು ಸ್ವೀಕರಿಸಬೇಕಿದ್ದಿತು ಆ ದರ್ಶನಕಾಲದಲ್ಲಿ ಇವರೊಳಗೆ ಪುನಃ ಕ್ಲೇಶಗಳುಂಟಾದುವು.

ರಾಮರಾಜನು ಅಹಮ್ಮದನಗರದ ಮೇಲೆ ದಂಡೆತ್ತಿಕೊಂಡು ಹೋದಾಗಲೆಲ್ಲ ಆತನು ಮಾಡಿದ ಹಾವಳಿ, ನಡೆಸಿದ ಅನಾಚಾರ ದುರಾಚಾರಗಳಿಂದ ಮಹಮ್ಮದೀಯರು ರೋಷಾವಿಷ್ಟರಾಗಿ ಆತನಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕೆ ಸಂದರ್ಭವನ್ನು ಕಾಯುತ್ತಿದ್ದರು ಅಹಮ್ಮದನಗರದೊಂದಿಗೆ ಆದ ಕೊನೆಯ ಯುದ್ಧದಲ್ಲಿ ಗೋಲಕೊಂಡವನ್ನು ರಾಮರಾಜನ ಸೇನೆಯು ನುಗ್ಗಿ ಹಾವಳಿ ಮಾಡಿದುದರಿಂದ ಕುತುಬಷಾಹನಿಗೂ ರಾಮರಾಜನಿಗೂ ಇದ್ದ ಸ್ನೇಹವು ಕೊನೆಗೊಂಡಿತು. ಮಹಮ್ಮದೀಯರು ತಮ್ಮೊಳಗಿನ ವೈರವನ್ನು ಒತ್ತಟ್ಟಿಗಿಟ್ಟು ಒಂದಾಗಿ ರಾಮರಾಜನ ಸೊಕ್ಕನ್ನು ಮುರಿಯಬೇಕೆಂದು ರಹಸ್ಯವಾಗಿ ಆಲೋಚನೆಮಾಡುತ್ತಿದ್ದರು. ರಾಮರಾಜನಾದರೂ ಇಂತಹ ಘಟನೆಯು ಅಸಂಭವವೆಂದು ತಿಳಿದಿರದೆ ವಿಜಯನಗರದ ಕೋಟೆಕೊತ್ತಗಳನ್ನೂ ಭದ್ರಪಡಿಸಿ ಅದಕ್ಕೆ ತಕ್ಕ ಸಿದ್ಧತೆಯನ್ನು ಮಾಡುತ್ತಿದ್ದನು. ಆದರೆ ರೋಷಾವೇಶದಿಂದ ಒಂದಾಗಿ ಬಂದ ಮಹಮ್ಮದೀಯರ ಮುಂದೆ ಇದೊಂದೂ ಸಫಲವಾಗಲಿಲ್ಲ.

ಮಹಮ್ಮದೀಯರು ಒಂದಾಗಲು ಅಹಮ್ಮದನಗರದ ಸುಲ್ತಾನನೇ ಮುಖ್ಯ ಕಾರಣನೆಂದು ಆ ಕಾಲದ ಪೋರ್ಚುಗೀಸರ ಅಭಿಪ್ರಾಯವು. ಆದರೆ ಮಹಮ್ಮದೀಯ ಚರಿತ್ರಕಾರನಾದ ಫೆರಿಷ್ಟನ ಅಭಿಪ್ರಾಯದ ಮೇರೆ, ಪ್ರಬಲನಾಗುತ್ತಿರುವ ರಾಮರಾಜನ

ಮದವನ್ನು ಣಗಿಸಬೇಕೆಂದು ಅಲ್ಲಿ ಆದಿಲ್‌ಷಾಹನೇ ಮಹಮ್ಮದೀಯ ರಾಜರೊಳಗೆ ವಿವಾಹ ಸಂಬಂಧ ದಿಂದ ಪ್ರಬಲವಾದ ಮಿತ್ರಮಂಡಲವನ್ನು ಕಲ್ಪಿಸಿದ ನೆಂದು ಗೊತ್ತಾಗುವದು. ಮಹಮ್ಮದೀಯರು ಅಂತಃ ಕಲಹಗಳನ್ನು ಮರೆತು ಒಂದಾಗುವಂತೆ ಪ್ರತಿಜ್ಞೆ ಮಾಡಿದ ಮೇಲೆ ಹುಸೇನ ನೈಜಾಮುಷಾಹನು ಚರಿತ್ರೆಯಲ್ಲಿ ಅನಂತರ ಪ್ರಸಿದ್ಧಿಗೆ ಬಂದ ತನ್ನ ಪುತ್ರಿಯಾದ ಚಾಂದಬೀಬಿಯನ್ನು ಅಲ್ಲಿ ಆದಿಲ್‌ಷಾಹನಿಗೆ ವಿವಾಹ ಮಾಡಿಕೊಟ್ಟನು. ಆದಿಲ್‌ಷಾಹನು ತನ್ನ ಸಹೋದರಿಯಾದ ಫಹ್ಲಾಬೀಬಿಯನ್ನು ಅಹಮದನಗರ ಯುವರಾಜನಿಗೆ ವಿವಾಹ ಮಾಡಿದನು. ನೈಜಾಮುಷಾಹನು ತನ್ನ ಮತ್ತೊಬ್ಬ ಪುತ್ರಿಯನ್ನು ಇಬ್ರಾಹಿಮು ಕುತುಬಷಾಹನಿಗೆ ಕೊಟ್ಟು ಆತನೊಡನೆ ತನಗಿದ್ದ ಸಂಬಂಧವನ್ನು ಮತ್ತೂ ಬಲಪಡಿಸಿದನು. ಈ ವಿವಾಹ ಸಂಬಂಧಗಳು ಯುದ್ಧಸನ್ನಾಹಗಳೆಂದು ರಾಮರಾಜನು ತಿಳಿದು ಕೃಷ್ಣಾತೀರದಿಂದ ಸಿಂಹಳ ದ್ವೀಪದವರೆಗೆ ಅಲ್ಲಲ್ಲಿದ್ದ ತನ್ನ ಮಾಂಡಲೀಕರನ್ನೆಲ್ಲ ಯುದ್ಧಕ್ಕೆ ಸನ್ನದ್ಧರಾಗಿರುವಂತೆ ಆಜ್ಞಾಪಿಸಿದನು

ರಾಮರಾಜನು ಈ ರೀತಿ ಸಿದ್ಧತೆಯನ್ನು ಮಾಡುತ್ತ ಲಿದ್ದಾಗ ಅಲ್ಲಿ ಆದಿಲ್‌ಷಾಹನು ವಿಜಯನಗರವು ಬಿಜಾಪುರದಿಂದ ಪೂರ್ವದಲ್ಲಿ ಅಪಹರಿಸಿದ ರಾಯ ಚೂರು ಬಾಗಲಕೋಟೆ, ಮೂಡುಗಲ್ಲು ದುರ್ಗ ಗಳನ್ನು ಬಿಜಾಪುರಕ್ಕೆ ಒಪ್ಪಿಸಬೇಕೆಂದು ರಾಯಭಾರಿ ಗಳನ್ನು ವಿಜಯನಗರಕ್ಕೆ ಕಳುಹಿದನು. ಅವರ ನಿರೀ ಕ್ಷಣೆಯಂತೆ ರಾಮರಾಜನು ಅವರ ಬಿನ್ನಹವನ್ನು ತಿರಸ್ಕರಿಸಿದುದಲ್ಲದೆ ಅವರನ್ನು ಅಪಮಾನಗೊಳಿಸಿ ಹಿಂದಕ್ಕಟ್ಟಿದನು. ಯುದ್ಧಕ್ಕೆ ಹೇತುವಾಗಿ ಮಹಮ್ಮದೀಯರಿಗೆ ಅಷ್ಟೇ ಬೇಕಾಗಿದ್ದಿತು.

೧೫೬೫ ರಲ್ಲಿ ಮಿತ್ರಮಂಡಲಿಯ ಸೇನೆಗಳು ತಾಳೀ ಕೋಟೆ ಎಂಬಲ್ಲಿ ಒಟ್ಟುಗೂಡಿದುವು. ಗೋಲ ಕೊಂಡದ ಮುಸ್ತಾಫಾಖಾನನೂ ಅಹಮ್ಮದನಗರದ ಇನಾಯತುಲ್ಲಾಖಾನನೂ ಬಿಜಾಪುರದ ಕಿಶಾವರ ಖಾನನೂ ಮಹಮ್ಮದೀಯರ ಮುಖ್ಯ ಸೇನಾ ಪತಿಗಳಾಗಿದ್ದರು. ರಾಮರಾಜನು ತನ್ನ ಸಹೋದರರಾದ ಎರೆದಿಮ್ಮರಾಜ ವೇಂಕ ಟಾದ್ರಿಗಳೊಂದಿಗೆ ಸೇನೆಯ ಆಧಿಪತ್ಯವನ್ನು ವಹಿಸಿದ್ದನು. ರಾಮರಾಜನು ಆಗ ೯೬ ವರ್ಷದ ಮುದುಕನಾದುದರಿಂದ ಆತನ ತಮ್ಮಂದಿರು (ಅವರೂ ಸಾಧಾರಣ ೮೫-೮೦ ವರ್ಷದವರು) ಆತನನ್ನು ತನ್ನ ರಮನೆಯೊಳಗೆ ನೆಮ್ಮದಿಯಾಗಿರೆಂದು ಪ್ರಾರ್ಥಿಸಿದರೂ ಕೇಳದೆ, ತನ್ನ ವೃದ್ಧಾಪ್ಯದಲ್ಲಿ ತನ್ನ ಹೆಸರಿಗೆ ಕಳಂಕ ವನ್ನು ತರುವನಲ್ಲವೆಂದು ಆತನು ತರುಣರಿಗೆ ಸಹಜ ವಾದ ಉತ್ಸಾಹವನ್ನು ತೋರಿ ಸಮಸ್ತಸೇನೆಗೆ ಮುಖ್ಯ ಸೇನಾಧಿಪನಾದನು.

ರಾಮರಾಜನು ತನ್ನ ತಮ್ಮಂದಿರನ್ನು ಸೇನಾಸಮೇ ತರಾಗಿ ಕೃಷ್ಣಾನದೀತೀರಕ್ಕೆ ಎಲ್ಲ ಕಡವುಗಳನ್ನು ಕಾಯುವದಕ್ಕಾಗಿ ಕಳುಹಿಸಿ ತಾನೂ ಪ್ರಬಲವಾದ ಸೇನೆಯೊಂದಿಗೆ ಮುಂದುವರಿದನು. ಮಿತ್ರಮಂಡಲಿ ಯವರು ಕೃಷ್ಣಾನದಿಯನ್ನು ಸಮೀಪಿಸಿದಾಗ ನದಿ ಯನ್ನು ದಾಟುವ ಮಾರ್ಗವನ್ನು ಕಾಣದೆ ತಮ್ಮೊಳಗೆ ಆ ಲೋ ಚ ನೆ ಮಾ ಡ ತೊ ಡ ಗಿ ದ ರು. ಅವರ ಆಲೋಚನಾ ಸಭೆಯಲ್ಲಿ ಸೇನೆಯನ್ನು ಕೃಷ್ಣಾನದಿಯ ಇನ್ನೊಂದು ಕಡೆಗೆ ನಡೆಯಿಸಿ ಶತ್ರುಗಳನ್ನು ವಂಚಿ ಸುವುದೆಂದು ನಿಶ್ಚಯವಾಯಿತು. ಆಂತೆಯೇ ಮೂರು ದಿವಸಗಳವರೆಗೆ ಅವರು ಸೈನ್ಯವನ್ನು ಇನ್ನೊಂದು ಕಡೆಗೆ ನಡೆಯಿಸಿದರು. ಮಹಮ್ಮದೀ ಯರು ಅಲ್ಲಿಯ ಕಡವಿನ ಆಶೆಬಿಟ್ಟರೆಂದು ನಂಬಿ ಹಿಂದುಗಳೂ ತಮ್ಮ ಸೇನೆಗಳನ್ನು ಅಲ್ಲಿಂದ ಚಲಿಸಿ ದರು. ಥಟ್ಟನೆ ಮಹಮ್ಮದೀಯರು ಹಿಂದಿರುಗಿ ನದಿ ಯನ್ನು ದಾಟಿ ಹಿಂದುಗಳನ್ನು ಬೆರಗುಗೊಳಿಸಿದರು. ಮೂರನೆಯ ದಿನ ಎರಡು ಪಕ್ಷದವರ ಸೇನೆಗಳು ಯುದ್ಧಕ್ಕೆ ಸನ್ನದ್ಧವಾದುವು.

ರಾಮರಾಜನು ಬಲಭಾಗದಲ್ಲಿ ಎರೆದಿಮ್ಮರಾಜ ನನ್ನೂ ಎಡಭಾಗಲ್ಲಿ ವೇಂಕಟಾದ್ರಿಯನ್ನೂ ಇಟ್ಟು ಮಧ್ಯಭಾಗದಲ್ಲಿ ತಾನೇ ನಿಂತನು. ಮಿತ್ರಮಂಡಲಿ ಯವರು ಇದರಂತೆ ತಮ್ಮ ಸೈನ್ಯವನ್ನು ಮೂರಾಗಿ ವಿಭಾಗಿಸಿ ಆದಿಲ್‌ಷಾಹನು ಬಲ ಭಾಗದಲ್ಲಿದ್ದು ವೇಂಕಟಾದ್ರಿಯನ್ನು ಇದಿರಾಯಿಸುವದೆಂದೂ ಇಬ್ರಾ ಹಿಮ ಕುತುಬಷಾಹ ಅಲಿಬರೀದಷಾಹರು ಎಡಭಾಗ ದಲ್ಲಿದ್ದು ತಿಮ್ಮರಾಜನೊಡನೆ ಕಾದುವುದೆಂದೂ ಮಧ್ಯದಲ್ಲಿ ನೈಜಾಮುಷಾಹನು ನಿಂತು ರಾಮರಾಜ ನನ್ನು ಪ್ರತಿಭಟಿಸುವದೆಂದೂ ನಿಶ್ಚಯಿಸಿದರು.

ಯುದ್ಧಕ್ಕೆ ಪ್ರಾರಂಭ ಮಾಡಿದುದು ವೇಂಕಟಾ ದ್ರಿಯ ದಳವು. ಅವನ ಸೇನೆಯು ಶತ್ರುಗಳ ಹೃದಯದಲ್ಲಿ ಒಮ್ಮೆಗೆ ಕಂಪನವನ್ನು ಹುಟ್ಟಿಸಿತು.

ಆದಿಲ್‌ಷಾಹನ ದಳವು ಕಾದಲಾರದೆ ಹಿಮ್ಮೆಟ್ಟಿತು ವೇಂಕಟಾದ್ರಿ ಯುದ್ಧವನ್ನು ಪ್ರಾರಂಭ ಮಾಡಿದೊಡನೆ ರಂಗದ ಇತರ ಕಡೆಗಳಲ್ಲಿಯೂ ಕದನಕ್ಕೆ ಹತ್ತಿತು ಎರೆದಿಮ್ಮರಾಜನು ಗೋಲಕೊಂಡ ಬೀದರ ಸುಲ್ತಾನರೊಂದಿಗೆ ಜಯಶೀಲನಾಗಿ ಕಾದುತ್ತಿದ್ದನು. ಮಹಮ್ಮದೀಯ ಚರಿತ್ರಕಾರರು ಈ ಇಬ್ಬರ ಸೇನೆಗಳು ಶತ್ರುಗಳ ಪೆಟ್ಟನ್ನು ತಡೆಯಲಾರದೆ ಹಿಂದಕ್ಕೆ ಸರಿದುವೆಂದು ಒಪ್ಪಿಕೊಂಡಿರುವರು ಆದರೆ ವೇಂಕಟಾದ್ರಿ ಎರೆದಿಮ್ಮರಾಜರುಗಳಿಗಿಬ್ಬರಿಗೂ ಗಾಯವಾಗಿ ಅವರು ರಣರಂಗದಿಂದ ತೆರಳಬೇಕಾಯಿತೆಂಬ ವರ್ತಮಾನವು ರಾಮರಾಜನಿಗೆ ಮುಟ್ಟಿತು. ಒಡನೆಯೆ ಅತನು ತನ್ನ ‘ ಗರುಡ ’ ಎಂಬ ಅಶ್ವವನ್ನೇರಿ ಮಿತ್ರಮಂಡಲಿಯ ಸಮಸ್ತಸೇನೆಯ ಮೇಲೆ ಬೀಳುವಂತೆ ತನ್ನ ಅಶ್ವದಳಕ್ಕೆ ಆಜ್ಞೆಯನ್ನಿತ್ತನು. ಅಶ್ವದಳವು ಮೇಲೆ ಬಿದ್ದ ರಭಸಕ್ಕ ವಿಜಾಪುರ ಗೋಲಕೊಂಡ ಬೀದರ ಸುಲ್ತಾನರು ವಿಮುಖರಾಗಿ ಹಿಂದಕ್ಕೆ ಸರಿದರು. ಆಗ ವಿಜಯನಗರದ ಸೇನೆ ಒಮ್ಮಿಂದೊಮ್ಮೆಗೆ ಮಧ್ಯದಲ್ಲಿದ್ದ ಅಹಮ್ಮದನಗರದ ಸೇನೆಯ ಮೇಲೆ ನೇರವಾಗಿ ನಡೆಯಿತು. ಅನಿರೀಕ್ಷಿತವಾದ ಈ ಚಲನೆಯಿಂದ ಎರಡು ಸಾವಿರ ಮಂದಿ ಬಿದ್ದು ಹೋಗಿ ಸುಲ್ತಾನನ ಸೇನೆ ಅರ್ಧ ಹರದಾರಿ ಹಿಂದಕ್ಕೆ ಸರಿದು ನಿಲ್ಲಬೇಕಾಯಿತು.

ಆದರೆ ವೇಂಕಟಾದ್ರಿ ಎರೆದಿಮ್ಮರಾಜರಿಗೆ ಆದ ಗಾಯವು ಬಲವಾಗಿದ್ದುದರಿಂದ ಅವರಿಗೆ ಮತ್ತೆ ನಾಯಕತ್ವವನ್ನು ವಹಿಸಲಾಗಲಿಲ್ಲ. ಎರೆದಿಮ್ಮರಾಜನಿಗೆ ಒಂದು ಕಣ್ಣೆ ಕುರುಡಾಯಿತು; ವೇಂಕಟಾದ್ರಿ ಗಾಯದಿಂದ ಮಡಿದನೆಂದು ಕೆಲವರೂ, ಅವನು ಅಲ್ಲಿಂದ ಆ ಮೇಲೆ ಮರೆಯಾದನೆಂದು ಕೆಲವರೂ ಅನ್ನುವರು, ಆದಿಲ್‌ಷಾಹನು ಈಗ ಹಿಂದಿರುಗಿ ರಾಮರಾಜನನ್ನು ತಡೆಗಟ್ಟುವುದಕ್ಕೆ ಬಂದನು. ಇವರೊಳಗಿನ ಕದನವು ಕೊನೆಗಾಣುವುದಕ್ಕೆ ಮೊದಲೇ ಅಹಮ್ಮದನಗರದ ಸುಲ್ತಾನನು ಚೇತರಿಸಿಕೊಂಡು ಯುದ್ಧಕ್ಕೆ ಒಡ್ಡಿ ನಿಂತನು. ಅವನನ್ನು ಇದಿರಿಸುವುದಕ್ಕೆ ಕೆಲವು ದಳಗಳನ್ನು ಕಳುಹಿಸುವುದು ಆಗತ್ಯವಾಯಿತು. ಅಹಮ್ಮದನಗರದ ಸುಲ್ತಾನನು ನಿಂತಲ್ಲಿಂದ ಜಯಲಾಭವಾಗದೆ ಕದಲುವದಿಲ್ಲೆಂದು ಪ್ರತಿಜ್ಞೆಮಾಡಿ ತನ್ನ ಡೇರೆಯನ್ನು ಯುದ್ಧರಂಗದಲ್ಲಿ ಹಾಕಿಸಿದನು. ಇದನ್ನು ನೋಡಿ ರಾಮರಾಜನು [illegible] ಖಚಿತವಾದ ಸಿಂಹಾಸನವನ್ನು ರಂಗದಲ್ಲಿಡಿಸಿ ಅದರ ಮೇಲೆ ಆಸೀನನಾಗಿ ತನ್ನ ಮುಂದೆ ಹಣದ ರಾಶಿಯನ್ನಿಡಿಸಿ ಆ ದಿನ ಪರಾಕ್ರಮದಿಂದ ಕಾದುವವರಿಗೆಲ್ಲ ಉಚಿತವು ದೊರೆವುದೆಂದು ಸಾರಿ ತನ್ನ ಜನರನ್ನು ಹುರಿದುಂಬಿಸಿದನು. ಅವನ ರಾಹುತರು ಹೊಸ ಉತ್ಸಾಹದಿಂದ ಕಾದಿ ಶತ್ರುಗಳನ್ನು ಸಿಕ್ಕ ಸಿಕ್ಕಲ್ಲಿ ಕಡಿಕಡಿದು ಹಾಕಿದರು ಮಹಮ್ಮದೀಯರಿಗೆ ಇನ್ನುಳಿಗಾಲವಿಲ್ಲ. ಅವರು ಸಂಪೂರ್ಣವಾಗಿ ಸೋತರೆಂಬಂತೆ ಅವರಲ್ಲಿ ಭಯವು ಹರಡಿತೆಂದು ಮಹಮ್ಮದೀಯರ ವರದಿಗಳಿಂದಲೇ ಗೊತ್ತಾಗುವದು. ಹುಸೇನ ನೈಜಾಮುಷಾಹನು ಮಾತ್ರ ತನ್ನ ಪ್ರತಿಜ್ಞೆಯಂತೆ ಕದಲದೆ ಧೈರ್ಯದಿಂದ ಕಾದುತ್ತಿದ್ದನು. ಆವನ ನಾಯಕನಲ್ಲೊಬ್ಬನಾದ ರೂಮಿಖಾನನು ಫಿರಂಗಗಳಲ್ಲಿ ತಾಮ್ರದ ನಾಣ್ಯಗಳನ್ನು ತುಂಬಿ ಅವನ್ನು ಹಿಂದೂ ಸೈನ್ಯದ ಮೇಲೆ ಹಾರಿಸಿ ಅವರಲ್ಲಿ ಬಹಳ ಹಾನಿಯನ್ನು ಮಾಡುವದಕ್ಕ ತೊಡಗಿದನು. ವಿಜಯನಗರದ ಸೇನೆಯಲ್ಲಿ ಒಡನೆ ದಿಗಿಲು ಹತ್ತಿತು.

ಈ ಎಡರಿನ ವೇಳೆಯಲ್ಲಿ ವಿಜಯನಗರದ ಸೇನೆಯೊಳಗಿದ್ದ ಇಬ್ಬರು ಮಹಮ್ಮದೀ ನಾಯಕರು ತಿಂದ ಉಪ್ಪನ್ನು ಮರೆತು ತಮ್ಮ ರಾಜನಿಗೆ ದ್ರೋಹವೆಣಿಸಿ ಶತ್ರುಪಕ್ಷಕ್ಕೆ ತಮ್ಮ ದಳ ಸಹಿತವಾಗಿ ಹೋದರು. ಆಗ ಶತ್ರುಗಳು ಅಸಮಬಲರಾಗಲು ವಿಜಯನಗರದ ಶಕ್ತಿ ಕುಂದುತ್ತ ಬಂದಿತು. ರಾಮರಾಜನು ತನ್ನ ಜನರನ್ನು ಉತ್ಸಾಹಗೊಳಿಸುವದಕ್ಕೆ ಪಲ್ಲಕ್ಕಿಯಲ್ಲಿ ಕುಳಿತು ಅಡ್ಡಾಡುತ್ತಿದ್ದನು. ವಾಹಕರು ಇದಿರಾಗಿ ಬರುವ ಒಂದು ಸೊಕ್ಕಾನೆಯನ್ನು ಕಂಡು ಹೆದರಿ ಪಲ್ಲಕ್ಕಿಯನ್ನು ಹೊತ್ತು ಹಾಕಿ ಪಲಾಯನಮಾಡಿದರು. ರಾಮರಾಜನು ಎದ್ದು ತನ್ನ ರಕ್ಷಣೆಗಾಗಿ ಪ್ರಯತ್ನಪಡುತ್ತಲಿದ್ದಾಗ ಶತ್ರುಗಳ ಕೈಗೆ ಸಿಕ್ಕಿ ನೈಜಾಮನ ಮುಂದೆ ಒಯ್ಯಲ್ಪಟ್ಟನು. ಅವನು ಒಡನೆಯೆ ಆತನ ಶಿರಚ್ಛೇದವನ್ನು ಮಾಡಿಸಿ ಆತನ ರುಂಡವನ್ನು ಧ್ವಜಕ್ಕೆ ಕಟ್ಟಿಸಿ ಮೆರೆಯಿಸಲು ವಿಜಯನಗರದ ಸೆನೆಯಲ್ಲಿ ಕೋಲಾಹಲವೆದ್ದು ಯೋಧರು ಸೇನಾನಾಯಕನ ಮರಣದಿಂದ ಎದೆಗುಂದಿ ಕಾದಲಾರದೆ ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಇಂತು ಪ್ರಾರಂಭದಲ್ಲಿ ವಿಜಯನಗರದ ಕಡೆಗೆ ಇದ್ದ ಜಯಲಕ್ಷ್ಮಿ ಅವರ ಕೈಬಿಟ್ಟು ಮಹಮ್ಮದೀಯರಿಗೆ ಒಲಿದುದು ವಿಜಯನಗರದ ದೌರ್ಭಾಗ್ಯವೆನ್ನಬೇಕು.

ಶ್ರೀ. ಎನ್. ಆರ್. ಕುಲಕರ್ಣಿ.
ಎಂ. ಎ. ಎಲ್‌ಎಲ್. ಬಿ. ಬೈಲಹೊಂಗಲ.



ಶ್ರೀ. ಬೇಂದ್ರೆ ದತ್ತರಾಯರು.
ಎ೧. ಎ. ಧಾರವಾಡ.



ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು
ಪ್ರಿನ್ಸಿಪಾಲ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜ, ಹುಬ್ಬಳ್ಳಿ.



ಅನಂತರದ ಕಥೆ ಇಲ್ಲಿ ಪ್ರಕೃತವಾಗಿಲ್ಲ. ಆದರೂ ರಾಮರಾಜನ ಮರಣದೊಂದಿಗೆ ವಿಜಯನಗರವು ಸರ್ವನಾಶವಾಯಿತೆಂದು ಒಂದೇ ಮಾತಿನಲ್ಲಿ ಹೇಳಬಹುದು. ಎರೆದಿಮ್ಮರಾಜನು ಉಳಿದ ಸೈನ್ಯಸಹಿತನಾಗಿ ರಣರಂಗವನ್ನುಳಿದು ವಿಜಯನಗರವನ್ನು ತೀವ್ರವಾಗಿ ಸೇರಿ ಚಕ್ರವರ್ತಿಯಾದ ಸದಾಶಿವರಾಯನನ್ನೊಡಗೊಂಡು, ೧೫೫೦ ಆನೆಗಳ ಮೇಲೆ ಅರಮನೆಯ ಭಂಡಾರವನ್ನು ಹೊರಿಸಿ ಪರಿವಾರ ಸಮೇತ ಪೆನುಕೊಂಡೆಗೆ ಪಲಾಯನ ಮಾಡಿ ಅದನ್ನು ಸಾಮ್ರಾಜ್ಯದ ರಾಜಧಾನಿಯಾಗಿಟ್ಟುಕೊಂಡು ಕೆಲಕಾಲ ರಾಜ್ಯಭಾರವೆಸಗಿ, ವಿಜಯನಗರದ ಕೊನೆಯ ರಾಜವಂಶವಾದ ಅರವೀಡು ಮನೆತನದ ಮೊದಲನೆಯ ರಾಜನಾದನು. ಮಹಮ್ಮದೀಯರು ಆರು ತಿಂಗಳು ಪರ್ಯಂತ ವಿಜಯನಗರವನ್ನು ಸ್ಮಶಾನಭೂಮಿಯಂತೆಸಗಿ ತಮ್ಮ ಪೂರ್ವ ವೈರವನ್ನು ತೀರಿಸಿಕೊಂಡು ತಮ್ಮತಮ್ಮ ರಾಜ್ಯಕ್ಕೆ ತೆರಳಿದರು.

ಅರವೀಡು ಮನೆತನದ ರಾಜರು ಪೆನುಕೊಂಡೆಯಲ್ಲಿ ಆಳುತ್ತ ಚಕ್ರವರ್ತಿಯ ಬಿರುದುಗಳನ್ನು ವಹಿಸಿಕೊಂಡು ವಿಜಯನಗರ ಸಾಮ್ರಾಜ್ಯದ ಪೂರ್ವ ಗೌರವವನ್ನು ಕಾಪಾಡಲು ಯತ್ನಿಸುತ್ತಿದ್ದರು. ಅವರ ಎಲ್ಲ ಶಾಸನಗಳು ಆ ವಂಶದ ಮೂಲ ಪುರುಷನಾದ ರಾಮರಾಜನ ಕೀರ್ತಿಯನ್ನು ಬಿಡದೆ ಶ್ಲಾಘಿಸುವವು. ಕೃಷ್ಣದೇವರಾಯನ ಕಾಲದ ಯುದ್ಧಗಳಿಂದ ತಾಳಿಕೋಟೆಯ ಯುದ್ಧದವರೆಗೆ ಆ ಶೂರನು ಎಷ್ಟು ಕದನಗಳಲ್ಲಿ ಜಯಶೀಲನಾಗಿ ಬಂದಿಲ್ಲ! ಆತನನ್ನು ನೂರಾರು ಕದನಗಳ ಶೂರನೆಂದು ಹೊಗಳಿದರೆ ಆತನ ಕೀರ್ತಿಗೆ ಅದೊಂದು ವಿಶೇಷ ಶ್ಲಾಘನೆಯಾಗಲಾರದು. ವಿಜಯನಗರಕ್ಕೆ ಆತನು ಕೇತುಪ್ರಾಯನಾದನೆನ್ನುವದಕ್ಕಿಂತ ಆತನ ಕಾಲದಲ್ಲಿ ವಿಜಯನಗರವು ವೈಭವದ ಪರಾಕಾಷ್ಠೆಯನ್ನೈದಿತೆನ್ನಬಹುದು.

---

# ಚೆನ್ನಿ.

( ಲೇಖಕ:— ಶ್ರೀ ಕೃಷ್ಣಮೂರ್ತಿ ಪುರಾಣಿಕ. ಧಾರವಾಡ )

೧

"ನೆತ್ತರ ಹರಿಯುವ ಕಾಳಗವಮ್ಮಾ
ನಲ್ಲ ಹೋಗಿಹನ ।
ಕೊತ್ತುನೆ ನರಿಗಳ ನೊತ್ತುವೆನೆನ್ನುತ
ಬಿಲ್ಲ ಧರಿಸಿದನ ।
ಜೀವದ ಹಕ್ಕಿಯು ಬೇಯುವದಮ್ಮಾ
ಮಲ್ಲನ ಕಾಣದಲೆ ।
ಸಾವಿನ ಸಂಕಟ ವೇಳುವದಮ್ಮಾ
ನಲ್ಲನ ನೋಡದಲೆ ।
ಎಂತಹ ಚಂದ ಮನಸಿಜಗಂದ
ಸುಂದರನೋಡಮ್ಮಾ ।
ನಿಂತನೆಂದರೆ ಕಾಮನ ಬಿಂಬ
ಕಳುಹಿದೆ ತಾಯಮ್ಮಾ ।
ನೆತ್ತರ ಬಣ್ಣದ ನೇಸರನಿದ್ದನು
ಬಾನಿನ ಬಯಲಿನೊಳು ।
ಎತ್ತಲು! ಎತ್ತಲು! ಅರಿಲುಗಳಿದ್ದವು
ಮಿನುಗುತ ಗಗನದೊಳು ।
ವಿಜಯಾ ದಶಮಿಯ ಕಹಳೆ ಕೂಗಿತು
ಬೀರರ ನೆಬ್ಬಿಸುತ ।
ವಿಜಯ ಧ್ವಜವದು ಮೆರೆಯುತಲಿತ್ತು
ಪಡೆಯೊಳು ಶೋಭಿಸುತ"

೨

"ಬಾರೇ! ಚೆನ್ನಿ! ಬೆಡಗಿನ ನನ್ನಿ!
ಬನ್ನಿಯ ಮುಡಿಯೋಣ।
ತಾರೇ! ಹೊನ್ನಿ! ಸುರಗಿಯ ಕಣ್ಣಿ
ಸಿ ಮೆಯ ದಾಟೋಣ।
ಕನ್ನಡನಾಡಿನ ಮನ್ನಣೆಕೆಣಕಲು
ಯವನರು ಬಂದಿಹರ ।
ಕನ್ನಡ ಒಂಟರ ಕಬ್ಬಿಣದೆದೆಗಳ
ನವರೇ ಕೆಣಕಿಹರ
ನಲ್ಲೆ! ನಮ್ಮನು ನುಂಗಲು ಬರುತಿಹ
ರಕ್ಕಸರಿವರನ್ನು !
ಅಲ್ಲಿಂದಲ್ಲಿಗೆ ಓಡಿಸದಿರುವೆನೆ?
ಮುಕ್ಕಿಪೆ ಹುಡಿಯನ್ನು।

ನೋಡಬಾರಲೆ! ಕುರುಬರ ಕುವರಿ
ಕನ್ನಡ ಪಡೆಯನ್ನು।
ಕೇಳಲಾರೆಯ? ಮೋಹರದಬ್ಬರ
ಮತ್ತಿದೆ ಮುಗಿಲನ್ನು॥"
ಇಷ್ಟು ಹೇಳಿ ತಾ ನೆಟ್ಟನೆ ಹೊರಟನು
ಮಿಂಚಿನ ವೇಗದಲಿ।
ತಟ್ಟನೆ ತಡೆದೆನು, ಪೋಗದಿರೆಂದೆನು
ಹೆಚ್ಚಿದ ಪ್ರೇಮದಲಿ॥"

೩

"ಗಂಡನು ಶೌರ್ಯನ ತೋರುವನೆಂದು
ಹಿಗ್ಗಲೆನಾನಿಂದು।
ಕೆಂಡದ ಕಣೆಯಲಿ ಬೀಳುವನೆಂದು
ಕುಗ್ಗಲೆ ನಾನಿಂದು।
ಕುರುಬರ ಒಂಟಿಗಾಗೆಲ್ಲೋ ಎಂದು
ಹರಿಸಲಾ ನಾನಿನ್ನು॥
ಹರಹರ! ನೆನ್ನುತ ಮಡಿದೀ ಎಂದು
ತಡಿಯಲಾ ನಿನ್ನನ್ನು।
ನಾಡಿಗೆ ನಾಡೇ ಸಿಡಿದೆದ್ದಿರಲು
ಮಡದಿಗೆ ಸೋತಿಹನು।
ಎನ್ನುವ ಮಾತಿಗೆ ಈಡು ಮಾಡಲಾ
ಪ್ರೇಮದ ಮೂರ್ತಿಯನು।
ನಾಡಿನ ಕಷ್ಟವ ತಡೆಯುವದೆಂದರೆ
ನರಕದಲಿಳಿದಂತೆ।
ಯುದ್ಧಕೆ 'ಮಲ್ಲ'ನ ಕಳಹುದೆಂದರೆ
ನಲ್ಮೆಯು ಮುಗಿದಂತೆ।
ಬವರಕೆ ಕಳುಹಿಸಿ ಗಂಡನ ಕೊಲ್ವುದು
ಗರತಿಗೆ ವಿಷದಂತೆ।
ಪ್ರೇಮದಿ ಬಂಧಿಸಿ ಮನೆಯೊಳಗಿಟ್ಟರೆ
ಷಂಢನಗೆಯ್ದಂತೆ।
ಗಂಡನ ಕೊಲ್ಲುವ ಗರತಿಯರುಂಟೆ?
ಕಾಳಗ ಬೇಡಮ್ಮಾ।
ಷಢಂಗೆ ಹಾರವ ಹಾಕಿದು ದುಂಟೆ?
ಕನ್ನಡ ಹೆಣ್ಣಮ್ಮಾ।

ವೇಳೆ ಬಂದಿತಮ್ಮಾ॥ ಪರಕಿಪ
ಸಮಯಬಂದಿತಮ್ಮಾ॥
ಕಾಳಿಕಾಯಿಯಮ್ಮಾ॥ ಗಂಡನ
ಹರಣವುಳಿಯಿಸಮ್ಮಾ॥

೪

ಮೂರುತಿಂಗಳಮ್ಮಾ॥ ನಲ್ಲನ
ಸುಳಿವು ತಿಳಿಯದಮ್ಮಾ॥
ಎಲ್ಲಿಯರಸಲೆಮ್ಮಾ॥ 'ಮಲ್ಲ'ನ
ಪ್ರೇಮವಚ್ಚರಮ್ಮಾ॥
ಹೊಟ್ಟೆ ಹಸಿಯದಮ್ಮಾ॥ ನಲ್ಲನ
ಬಿಟ್ಟುಬಾಳೆನಮ್ಮಾ॥
ಕನಸು ಕೆಟ್ಟದಮ್ಮಾ। ನಿನ್ನಿನ
ಇರುಳಿಕಂಡೆನಮ್ಮಾ॥
ಮನಕೆ ಭೀತಿಯಮ್ಮಾ॥ ತಾಳೆನು
ನೆನಹದಳಿಯದಮ್ಮಾ॥
ರಣದಂಗಣದಲಿ ವೀರಾವೇಶದಿ
ಕಾದುತ ಕೊಚ್ಚುತ ದುಂಡಮುಂಡಗಳ
ನೆತ್ತರ ಹೊಂಡದಿ ಚಂಡಾಡುತಲಿರೆ
ಸೋತು ಸಿಡಿದನೇನೆ? ॥ ವೀರನ
ಮಾತು ಮುಗಿಯಿತೇನೆ?॥
ಧಾರಾ ತೀರ್ಥವು ರಕ್ತದ ಮಡುವೊ?
ನೆತ್ತರ ನೀರಿನ ಕಾಳ್ಪುರವೊ?
ಕೊತ್ತಿದ ಕತ್ತಿಗೆ ನೆತ್ತರ ಹತ್ತಿ
ಒಂದೇ ಬಗೆಯಲಿ ಬಸಿಬಸಿಯುತ್ತಿರೆ
ನೆತ್ತರ! ನೆತ್ತರ! ನೆತ್ತರ! ವೆಂದು
ನರಿಗಳು, ಹುಲಿಗಳು, ಮರಳುಗಳೆಲ್ಲಾ
ನಲ್ಲನ ಮುತ್ತಿಹವೆ? ॥ ಅಮ್ಮಾ
ಮಲ್ಲನ ತಿಂದಿಹವೆ?॥
ಏನು ಮಾಡಲೆಮ್ಮಾ॥ ಗಂಡನ
ತಾಣವರಿಯೆನಮ್ಮಾ।
ಯಾರ ಕಳುಹಲೆಮ್ಮಾ॥ ನಲ್ಲನ
ಯಾರು ತರುವರಮ್ಮಾ॥
ಹುಚ್ಚು ಹಿಡಿಯಿತಮ್ಮಾ। ನಲ್ಲನ
ಮೆಚ್ಚು ಮಾಡಿತಮ್ಮಾ॥
ಕೆಚ್ಚು ಕಡಿಯಿತಮ್ಮಾ। ಹೃದಯದ
ಕಿಚ್ಚು ಹರಡಿತಮ್ಮಾ॥
ಬದಕು ಚಂದವೇನೆ॥ ಈ ಪರಿ
ಬಾಳು ಬೆಳೆವುದೇನೆ?॥
ಒಂದು ಜೀವವಮ್ಮಾ। ನೆಚ್ಚಿಲೆ
ಹೊಂದಿ ಕೊಂಡೆವಮ್ಮಾ॥
ಕಾಮದಾಶೆಗಲ್ಲಾ॥ ಪ್ರೇಮದ
ಮೂರ್ತಿಯಿದ್ದೆವಮ್ಮಾ॥

ಜಗದಿ ಬಾಳಬಹುದೆ ॥ ನಲ್ಲನ
ತೆಗೆದು ತಾಬಹುದೆ ॥

೫

ಕಾಳಗ ಕಣದಲಿ ಅಬ್ಬರವೇನಿದು
ಸೈನ್ಯ ಹರಿವುದೇಕೆ ? ||
ಬೇಡಗೆ ಬೆಚ್ಚಿದ ಹರಿಣಗಳಂದದಿ
ಮೋಹರ ಓಡುತಿದೆ ।
ಹೆಣ್ಣಿನ ರೂಪ! ಕರದಲಿ ಕತ್ತಿ !
ಗರಗರ ತಿರುವುತ
ತರಿಯುತ, ಕೊರೆಯುತ
ರುಂಡವ ಸೈರಿಸ
ಚಂಡಿನ ತೆರದಲಿ
ಹೆಣಗಳ ಹಿಂಡಿಗೆ
ಹಿಂಡನೆ ಯುರುಳಿಸಿ
ಕಡಿದೂ ! ಕಡಿದೂ !
ತೇಗೀ ! ತೇಗೀ !
ನೆತ್ತರ ಹೀರುತ ಸಾಗಿಹುದು !
ತಾಂಡವ ನೃತ್ಯವನೆಸಗುವದು ।
ಚಂಡಿಯೋ ? ಮೇಣ್
ಚಾಮುಂಡಿಯೊ ಹೇಳು
ರುಂಡ ಮಾಲೆಗಳು ಶೋಭಿಸುತಿಹವು.
ಕೆಂಡದ ಕಂಗಳು ಕಿಡಿಸುತ್ತಿಹವು.
ನರಗಳ ಹಾರವು ಕೊರಳಲ್ಲಿ
ಎಲುಬಿನ ದಂಡವು ಕರದಲ್ಲಿ
ಗಡುಗಿನ ದನಿಯಲಿ ನುಡಿಯ.ವಳೇನಿದು ||
ಮುಗಿಲ ಮೀಟುವಂತೆ ॥
ಜಿಡಗಿನ ದನಿಯೊ ? ಗುಡುಗಿನ ದನಿಯೊ ? ।
ನಡುಗಿತು ಬಯಲಂತೆ ॥

೬

ಕಾಣ ವದೇನಿದು ! ಎಂತಹ ನೋಟ
ಭೀಕರವಾಗಿಹ ರಣದೃಶ್ಯ !
ರುಂಡ ರುಂಡಗಳ
ನೆರ್ಘ ಮುಂಡಗಳ
ನಂದಳು ಚೆನ್ನಿಯು ರೊಚ್ಚಿನಲಿ
'ಹಿರಿಯ'ನ ಸೇಡಿನ ಹುಚ್ಚಿನಲಿ.
ಏನದು ಸಪ್ಪಳ ಗಗನದಲಿ
ಮಲ್ಲನ ದನಿಯದು ಬಾನಿನಲಿ
'ಬೇಗದಿ ಬಾರೇ ಬಿನ್ನಾಣಿ
ಪ್ರೇಮದ ಮೂರುತಿ ನನ್ನಾಣಿ'
ಘುಡುಘುಡು ಸಪ್ಪಳ ಬಯಲಿನಲಿ
ಸಿಡಿಲದೊ ಬಂದಿತು ಧರಣಿಯಲಿ
ತುಬಾಕಿ ಹಾರಿತು ಹುರಿದಾಡಿ
ಚೆನ್ನಿಯು ಬಿದ್ದಳು ಉರಿಯಾಡಿ.
ಕನ್ನಡ ನಾಡಿನ ಕೈವಾರಿ
ರಣದಲ ಮಡಿದಳು ಮೂಮಾರಿ
ಕೀರ್ತಿ ಹಬ್ಬಿತಲ್ಲೊ । ಚೆನ್ನಿಯ
ನಾಡು ಹರಿಸಿತಲ್ಲೊ ।
ಮಡಿದಳೆನ್ನಬೇಕೋ ? ॥ ಚೆನ್ನಿಯು
ಉಳಿದಳೆನ್ನಬೇಕೊ ?

---



# ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯಲ್ಲಿ ವಿದ್ಯಾರಣ್ಯರ ಸ್ಥಾನ.

ಲೇಖಕರ : ಶ್ರೀ. ನಾರಾಯಣಾಚಾರ್ಯರು ಎಸ್, ಎ, ಎಲ್. ಬಿ, ಬೈಲಹೊಂಗಲ.

ಶ್ರೀಮದ್ವಿದ್ಯಾರಣ್ಯರ ಹೆಸರನ್ನು ಕೇಳದ ಕನ್ನಡಿಗರು ತೀರ ಅಪರೂಪ. ಮಧ್ಯ ಯುಗೀನ ಭಾರತದಲ್ಲಿ ಅವರು ಸರ್ವತೋಮುಖವಾಗಿ ಮಾಡಿದ ಕನ್ನಡಿಗರ ಅದೇಕೆ? ಭಾರತೀಯರ—ಸೇವೆಯನ್ನು ಎಷ್ಟು ರೀತಿಯಿಂದ ಬಣ್ಣಿಸಿದರೂ ತೀರದು. 'सर्वज्ञः स हि माधवः' ಎಂಬ ವರ್ಣನೆಯು ಅವರಿಗೆ ಯಥಾರ್ಥವಾಗಿಯೇ ಹತ್ತುವದು. ಅವರು ಪ್ರಭುತ್ವದಿಂದ ಪ್ರವೇಶ ಮಾಡದಿದ್ದ ಜ್ಞಾನ ವಿಜ್ಞಾನ ಶಾಖೆಯಿಲ್ಲ, ಬರೆಯದಿದ್ದ ವಿಷಯವಿಲ್ಲ. ಈ ದೃಷ್ಟಿಯಿಂದ ಅವರನ್ನು ಗ್ರೀಕರ ಅರಿಸ್ಟಾಟಲನಿಗೂ ಜರ್ಮನಿಯ ಹೇಗೆಲ್ಲನಿಗೂ, ಇಂಗ್ಲಂಡದ ಹರ್ಬರ್ಟ ಸ್ಪೆನ್ಸರನಿಗೂ ಹೋಲಿಸಬಹುದು. ಆದರೆ ಒಂದು ವಿಷಯದಲ್ಲಿ ಮಾತ್ರ ವಿದ್ಯಾರಣ್ಯರು ಇವರೆಲ್ಲರಿಗಿಂತಲೂ ಮಿಗಿಲಾಗಿರುವರು. ಅವರು ಪರಮಾತ್ಮನನ್ನು ಸಹ ಸಾಕ್ಷಾತ್ಕರಿಸಿಕೊಂಡ ಮಹಾತಪಸ್ವಿಗಳೂ, ಪ್ರಭಾವಶಾಲಿಗಳೂ ಆಗಿದ್ದರೆಂದು ನಿಃಸಂದೇಹವಾಗಿ ಹೇಳಬಹುದು. ಇರಲಿ; ಅವರು ಬರೆದ ಗ್ರಂಥಗಳ ರಾಶಿಯೂ ಕೂಡ ನಮ್ಮನ್ನು ಆಶ್ಚರ್ಯಗೊಳಿಸುವಂತಿದೆ. ಭಾರತೀಯ ಸಂಸ್ಕೃತಿಯ ಉಗಮಸ್ಥಾನವೇ ಆದ ವೇದಗಳ ಅರ್ಥವನ್ನು ಇಂದು ನಾವು ಮಾಡುವದು ಶಕ್ಯವಿದ್ದರೆ ಅದು ಶ್ರೀವಿದ್ಯಾರಣ್ಯರ 'ವೇದಾರ್ಥ ಪ್ರಕಾಶ'ವೆಂಬ ಭಾಷ್ಯದ ಸಹಾಯದಿಂದಲೇ ಸರಿ. ಅವರು ಆ ಕಾಲದಲ್ಲಿ ಈ ಮಹತ್ವದ ಕೆಲಸವನ್ನು ಕೊನೆಗಾಣಿಸದಿದ್ದರೆ ವೇದಗಳ ಅರ್ಥವು ಇಂದಿಗೂ ನಮಗೆ ಗೂಢವಾಗಿಯೇ ಉಳಿಯುತ್ತಿತ್ತೆಂದು ದೊಡ್ಡ ದೊಡ್ಡ ಪಂಡಿತರೂ ಕೂಡ ಒಡಂಬಟ್ಟಿದ್ದಾರೆ. ಅದರಂತೆಯೇ ಅವರು ಜ್ಞಾನಕಾಂಡ, ಕರ್ಮಕಾಂಡಗಳ ಮೇಲೆ ಬಹು ಉಪಯುಕ್ತವಾದ ಗ್ರಂಥಗಳನ್ನು ಬರೆದಿದ್ದಾರೆ. ಶ್ರೀಮಚ್ಛಂಕರಾಚಾರ್ಯರ 'ದೃಗ್‌ದೃಶ್ಯವಿವೇಕ' 'ಅಪರೋಕ್ಷಾನುಭೂತಿ' ಮೊದಲಾದ ಗ್ರಂಥಗಳಮೇಲೆ ವ್ಯಾಖ್ಯಾನಗಳೂ ಇವರಿಂದ ರಚಿತವಾಗಿವೆ. 'ಪರಾಶರಸ್ಮೃತಿ'ಗೆ ಇವರು ಬರೆದ ಟೀಕೆಯಂತೂ ಸುಪ್ರಸಿದ್ಧವಾಗಿದೆ. ಹಾಗೆಯೇ 'ನೂತನ ಸಂಹಿತೆ'ಯ ಮೇಲೂ ಇವರು ವ್ಯಾಖ್ಯಾನ ಮಾಡಿದ್ದಾರೆ. ಇವರ 'ಸರ್ವದರ್ಶನಸಂಗ್ರಹ' ಮತ್ತು 'ಪಂಚದಶೀ' ಎಂಬ ಗ್ರಂಥಗಳಂತೂ ತತ್ವ ಶಾಸ್ತ್ರದ ಅಭ್ಯಾಸಕರಿಗೆ ರತ್ನಪ್ರಾಯವಾಗಿವೆ. 'ಅನುಭೂತಿ ಪ್ರಕಾಶ'ವೆಂಬ ೩೦೦೦ ಅನುಷ್ಟುಬ್ ಶ್ಲೋಕಗಳ ಪರಿಮಾಣವುಳ್ಳ ಗ್ರಂಥದಲ್ಲಿ ಇವರು ಎಲ್ಲಉಪನಿಷತ್ತುಗಳ ಸಾರವನ್ನೂ ಸಂಕ್ಷೇಪವಾಗಿ ವಿವರಿಸಿ ಹೇಳಿದ್ದಾರೆ. 'ಜೀವನ್ಮುಕ್ತಿ ವಿವೇಕ,' 'ಬ್ರಹ್ಮಗೀತಾ' ಮೊದಲಾದವು ಇವರ ಉಳಿದ ವೇದಾಂತಗ್ರಂಥಗಳು ಇವರ 'ಮಾಧವವೃತ್ತಿ' ಎಂಬ ಹೆಸರಿನ ಬಹು ವಿಸ್ತೃತವಾದಗ್ರಂಥವು ವ್ಯಾಕರಣದ ಮೇಲೆ ಬರೆದದ್ದು 'ಮಾಧವನಿದಾನ'ವೆಂಬ ವೈದ್ಯವಿಷಯಕ ಗ್ರಂಥವು ಇಂದಿಗೂ ಆ ಶಾಸ್ತ್ರದಲ್ಲಿ ಪ್ರಮಾಣವಾಗಿದೆ. ಇಷ್ಟಾಗಿ, 'ಕಾಲಮಾಧವ'ವೆಂಬ ಜ್ಯೋತಿಷಗ್ರಂಥವನ್ನೂ ಇವರು ಬರೆದಿದ್ದಾರೆ. 'ಶತಪ್ರಶ್ನ ಕಲ್ಪಲತಿಕಾ,' 'ಆಚಾರಮಾಧವ,' 'ವ್ಯವಹಾರ ಮಾಧವ' ಮೊದಲಾದ ಗ್ರಂಥಗಳನ್ನು ಇವರೇ ಬರೆದಿದ್ದರೆಂದು ಕೆಲವರ ಅಂಬೋಣವಿದೆ. ಇವರು ಬರೆದ 'ಶಂಕರ ದಿಗ್ವಿಜಯ' ವಂತೂ ಬಹು ಪ್ರೌಢವಾದ ಕಾವ್ಯವಾಗಿದೆ. ಹೀಗೆ ಇವರು ಅನೇಕ ಶಾಸ್ತ್ರಗಳ ಮೇಲೆ ಪುಸ್ತಕಗಳನ್ನು ಬರೆದದ್ದಲ್ಲದೆ, ಹುಕ್ಕ ಬುಕ್ಕರ ಅಮಾತ್ಯರಾಗಿ ರಾಜಕಾರಣದಲ್ಲಿ ಸಹ ಪ್ರತ್ಯಕ್ಷ ಭಾಗವನ್ನು ವಹಿಸಿದರು. ಕೊನೆಗೆ ಶ್ರೃಂಗೇರಿಯ ಪೀಠವನ್ನು ಸಹ ಇವರು ಅಲಂಕರಿಸಿ ದೇಹವಿಟ್ಟರು.

ಆದರೆ ಶ್ರೀವಿದ್ಯಾರಣ್ಯರನ್ನು ನಾವಿಂದು ಇಷ್ಟು ಮನ್ನಿಸುವದು ಅವರು ಮಾಡಿದ ಉಳಿದ ಕೆಲಸಗಳಿಗಾಗಿ ಅಲ್ಲ. ಅವರ ಮೊದಲೂ, ನಂತರವೂ ಅಮಾತ್ಯರಾಗಿ ಹೋದವರು ಹಲವರು. ಶ್ರೀಂಗೇರೀ ಪೀಠವನ್ನು ಏರಿದವರೂ ಹಲವರು. ಮತ್ತು ಆಯಾ ಶಾಸ್ತ್ರಗಳಲ್ಲಿ ಉತ್ಕೃಷ್ಟವಾದ ಗ್ರಂಥಗಳನ್ನು ಬರೆದ ಜನರೂ ಹಲವರಾಗಿ ಹೋದರು. ಆದರೆ ಈ ಉಳಿದ ಹಲವರ ಹೆಸರನ್ನು ಇಂದು ಅಖಿಲ ಕನ್ನಡಿಗರು ನೆನಿಸುವದಿಲ್ಲ, ಆಯಾ ಪಂಥದವರೋ, ಆಯಾ

ಮತದವರೇ ಆಯಾ ಅಭ್ಯಾಸೇಚ್ಛೆಗಳೋ ಅವರನ್ನು ಬಲ್ಲರು. ಆದರೆ ಜಾತಿಮತಗಳ ಗಣನೆಯಿಲ್ಲದೆ ಎಲ್ಲ ಕನ್ನಡಿಗರು ಇಂದು ವಿದ್ಯಾರಣ್ಯರ ಸ್ಮರಣೆಯನ್ನು ಸಮನಾದ ಪೂಜ್ಯಭಾವದಿಂದಲೇ ನೋಡುತ್ತಾರೆ. ಎಲ್ಲಿ ನೋಡಿದಲ್ಲಿ ವಿದ್ಯಾರಣ್ಯರ ಉತ್ಸವಗಳು ಜರುಗುತ್ತಲಿವೆ ಅವರ ಹೆಸರಿನ ವಾಚನಾಲಯಗಳೂ ಉಳಿದ ಸಂಸ್ಥೆಗಳೂ ಅಸ್ತಿತ್ವದಲ್ಲಿ ಬರಲಾರಂಭಿಸಿವೆ. ಅವರ ಜೀವನದ ಬಗ್ಗೆ ವ್ಯಾಖ್ಯಾನಗಳೂ, ಪ್ರವಚನಗಳೂ ಏರ್ಪಾಡಾಗುತ್ತಲಿವೆ. ಇಷ್ಟೇ ಅಲ್ಲ, ವಿಜಯನಗರ ಸ್ಥಾಪನೆಯ ೬೦೦ ನೆಯ ವರ್ಷದ ಉತ್ಸವವನ್ನು ಮಾಡಲುಜ್ಜುಗಿಸಿದ ಈಗಿನ ಕಾಲದಲ್ಲಿ ಎಲ್ಲರೂ ವಿದ್ಯಾರಣ್ಯರ ಹೆಸರನ್ನು ಜಪಿಸುತ್ತಲಿದ್ದಾರೆ ಅದೇಕೆ? ಅಂತಹ ಯಾವ ಕೆಲಸವನ್ನು ಆ ಮಹಪುರುಷ ಮಾಡಿದ್ದೆಂದು ನಾವವರನ್ನು ಇಷ್ಟು ಆದರಭಾವದಿಂದ ನೋಡುತ್ತಿದ್ದೇವೆ? ಈ ಸಾಮ್ರಾಜ್ಯ ಸ್ಥಾಪನೆಯನ್ನು ಕೈಕೊಂಡ ಧೀರರಾದ ಪಂಡಿತ ವೆಂಕಟರಾಯರಿಗೆ ಇಲ್ಲೆನ್ನಲಾಗದೆ ನಾವು ಈ ಲೇಖನವನ್ನು ಬರೆದಿದ್ದೇವೆ. ನಮಗೆ ದುಂಬಾಲು ಬಿದ್ದು ಈ ಲೇಖನವನ್ನು ಬರೆಸಿಕೊಂಡುದಕ್ಕೂ, ಅದನ್ನು ಅಚ್ಚು ಹಾಕಿ ಪ್ರಕಟಿಸಿದ್ದಕ್ಕೂ ಅವರಿಗೆ ನಾವು ತುಂಬಾ ಋಣಿಯಾಗಿದ್ದೇವೆ.

೧೪-೧೫ನೆಯ ಶತಮಾನಗಳಲ್ಲಿ ಉತ್ತರಹಿಂದುಸ್ಥಾನದಿಂದ ಒಳ್ಳೇ ರಭಸದಿಂದ ಬರುತ್ತಿರುವ ಮಹಮ್ಮದೀಯ ಮತಧರ್ಮದ ತೆರೆಗಳನ್ನು ಮುನ್ನೂರು ವರ್ಷಗಳಿಗಿಂತ ಹೆಚ್ಚು ಕಾಲ ತಡೆಹಿಡಿದು, ದಕ್ಷಿಣ ಹಿಂದುಸ್ಥಾನದೊಳಗಿನ ಹಿಂದುತ್ವವನ್ನು ಕಾಯ್ದ ಪ್ರಶಸ್ತಿಯು ವಿಜಯನಗರ ಸಾಮ್ರಾಜ್ಯಕ್ಕೇ ಸಲ್ಲುವದು. ಅದು ಆಗ ಅಸ್ತಿತ್ವದಲ್ಲಿ ಬರದಿದ್ದರ ಇಲ್ಲಿಯ ಹಿಂದುತ್ವವು ಇಂದಿಗೆ ಏನಾಗುತ್ತಿತ್ತೋ ಯಾರಿಗೆ ಗೊತ್ತು! ಇಂತಹ ಸಾಮ್ರಾಜ್ಯವು ಕನ್ನಡಿಗರದು. ಕನ್ನಡಿಗರು ಕನ್ನಡಿಗರ ಸಹಾಯದಿಂದಲೇ ಅದನ್ನು ಸ್ಥಾಪಿಸಿ, ಕನ್ನಡಿಗರಿಗಾಗಿಯೇ ಅದನ್ನು ನಡಿಸಿಕೊಂಡು ಹೋದರು. ಆ ಕಾಲಕ್ಕೆ ಕನ್ನಡಿಗರ ಉತ್ಕರ್ಷವು ಎಲ್ಲ ವಿಧದಿಂದಲೂ ಆಗಿತ್ತು. ಅವರು ಪರದೇಶಗಳೊಡನೆ ವ್ಯಾಪಾರಮಾಡಿ ಕುಬೇರನಂತೆ ಧನಿಕರಾಗಿದ್ದರು. ಬಹು ವಿಶಾಲವಾದ ವಿಜಯನಗರದ ಪೇಟೆಗಳಲ್ಲಿ ಜಗತ್ತಿಗೇ ಅಮೂಲ್ಯವಾದ ಮುತ್ತು ರತ್ನಗಳೂ, ವಜ್ರವೈಡೂರ್ಯಾದಿಗಳೂ ಹೇರಳವಾಗಿ ಸಿಕ್ಕುತ್ತಿದ್ದವು. ಒಕ್ಕಲುತನ ಮೇಲೆ ಕೃಷಿ, ವಾಣಿಜ್ಯ, ಯುದ್ಧಕಲೆ, ರಾಜ್ಯಶಾಸನಕಲೆ, ಶಿಲ್ಪ, ಸಂಗೀತ, ಸಾಹಿತ್ಯ ಮೊದಲಾದ ಬೇರೆ ಬೇರೆ ಜ್ಞಾನಾಂಗಗಳಲ್ಲಿ ಕನ್ನಡಿಗರು ಮುಂದುವರೆದಿದ್ದರು. ಕನ್ನಡ ಸಾಹಿತ್ಯವಂತೂ ಆ ಕಾಲಕ್ಕೆ ಉನ್ನತಿಯ ಶಿಖರವನ್ನೇ ಮುಟ್ಟಿತ್ತು. ಬಹಳೇನು? ವಿಜಯನಗರ ಸಾಮ್ರಾಜ್ಯ ಕಾಲವೆಂದರೆ ಕನ್ನಡ ಯುವತಿಯ ಪ್ರೌಢಾವಸ್ಥೆಯೆಂದು ಹೇಳಬಹುದು. ಭೋಗಿಸಬೇಕಾದ ಸುಖಗಳನ್ನೆಲ್ಲ ಅವಳು ಆ ಕಾಲದಲ್ಲಿ ಅನುಭೋಗಿಸಿಬಿಟ್ಟಳು. ಅದಾದ ಕೆಲದಿನಗಳಲ್ಲಿಯೇ ಅವಳನ್ನು ಜರೆಯು ವ್ಯಾಪಿಸಿ ತೀರ ನಿಶಕ್ತಳನ್ನಾಗಿ ಮಾಡಿಬಿಟ್ಟಿತೆಂದು ಹೇಳಿದರೆ ಅತಿಶಯೋಕ್ತಿಯಾಗದಿರಲಾರದು.

ಕನ್ನಡ ಯುವತಿಯ ಕುಂಕುಮತಿಲಕದಂತಿದ್ದ ಈ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದವರೇ ವಿದ್ಯಾರಣ್ಯರು! ಪ್ರತ್ಯಕ್ಷ–ಅಪ್ರತ್ಯಕ್ಷವಾಗಿ—ಎರಡೂ ತರದಿಂದ — ಅವರು ಆ ಸಾಮ್ರಾಜ್ಯಸ್ಥಾಪನೆಯ ಕೆಲಸದಲ್ಲಿ ಬಹು ಮಹತ್ವದ ಭಾಗವನ್ನು ಕೈಕೊಂಡಿದ್ದರು. ವಿಜಯನಗರದ ಮೊದಲಿನ ಇಬ್ಬರು ರಾಜರೂ, ಅಣ್ಣ ತಮ್ಮಂದಿರೂ ಆದ ಹುಕ್ಕ ಬುಕ್ಕರು ವಿದ್ಯಾರಣ್ಯರ ಪ್ರತ್ಯಕ್ಷ ಶಿಷ್ಯರಾಗಿದ್ದರೆಂಬ ಬಗ್ಗೆ ಇತಿಹಾಸಕಾರರಲ್ಲಿ ವಿಶೇಷ ಮತಭೇದವಿದ್ದಂತೆ ಕಂಡು ಬರುವದಿಲ್ಲ. ಈ ಸಂದರ್ಭದಲ್ಲಿ ಮಹಾರಾಷ್ಟ್ರ ರಾಜ್ಯ ಸಂಸ್ಥಾಪಕರಾದ ಶಿವಾಜಿ – ರಾಮದಾಸರ ನಡುವಿನ ಶಿಷ್ಯ - ಗುರು ಸಂಬಂಧವು ನಮ್ಮ ಕಣ್ಣಮುಂದೆ ನಿಲ್ಲುವದು. ರಾಜ್ಯವನ್ನು ಸ್ಥಾಪಿಸುವ ಪ್ರತ್ಯಕ್ಷ ಕೆಲಸವನ್ನು ಶಿವಾಜಿಯು ಮಾಡಿದ್ದನೋ ನಿಜ. ಆದರೆ ಅವನಿಗೆ ಆ ಬಗ್ಗೆ ಬೇಕಾಗುವ ಸ್ಫೂರ್ತಿಯನ್ನೂ, ಆಧ್ಯಾತ್ಮಿಕ ಶಕ್ತಿಯನ್ನೂ ದಯಪಾಲಿಸಿದವರು ಶ್ರೀ ರಾಮದಾಸರು. ಶಿವಾಜಿಯು ಕ್ಷಾತ್ರಬಲದರ್ಶಕನು. ರಾಮದಾಸರು ಬ್ರಹ್ಮಬಲದರ್ಶಕರು; ಅವೆರಡೂ ಬಲಗಳು ಕೂಡಿದ ಸತ್ಫಲವೆಂದೇ ಮಹಾರಾಷ್ಟ್ರ ರಾಜ್ಯವು ಅಸ್ತಿತ್ವದಲ್ಲಿ ಬಂತು. ಹಾಗೆಯೇ ವಿದ್ಯಾರಣ್ಯ ಮತ್ತು ಹುಕ್ಕಬುಕ್ಕರ ಸಂಯೋಗವೆಂದು ಹೇಳಬಹುದು. ಹುಕ್ಕಬುಕ್ಕರಿಗೆ ಆ ಕಾಲದಲ್ಲಿ ಅವಶ್ಯಕವಾಗಿದ್ದ ಆಧ್ಯಾತ್ಮಿಕ ಶಕ್ತಿಯೂ, ಸ್ಫೂರ್ತಿಯೂ ಶ್ರೀವಿದ್ಯಾರಣ್ಯರಿಂದ ದೊರೆತವು ಕ್ಷತ್ರಿಯ ಶಿರೋಮಣಿಯಾದ ವಿಶ್ವಾಮಿತ್ರನು

'धिग्बल क्षत्रियबलं ब्रह्मतेजोबल बलम्'

ಎಂದು ಹೇಳಿದ್ದನ್ನು ನೆನಿಸಿದರೆ, ವಿಜಯನಗರ ರಾಜ್ಯ ಸ್ಥಾಪನೆಯಲ್ಲಿ ವಿದ್ಯಾರಣ್ಯರಿಗೆ ಯಾವ ಸ್ಥಾನವನ್ನು

ಕೊಡಬೇಕೆಂಬದು ಸುಲಭವಾಗಿಯೇ ತಿಳಿಯುವಂತಿದೆ.

ಶ್ರೀರಾಮದಾಸರ ಉದಾಹರಣೆಯು ಹೊರಟಿರುವದೆಂದವೇಲೆ ಇನ್ನೊಂದು ಮಾತನ್ನು ಇಲ್ಲಿ ಸ್ವಾಭಿಮಾನದಿಂದ ಹೇಳಬೇಕಾಗುತ್ತದೆ. ರಾಮದಾಸರು ತತ್ವತಃ ರಾಜಕಾರಣಪಟುಗಳಾಗಿದ್ದಿರಬಹುದು ಆದರೆ ಅವರ ಸ್ವಂತದ ಆಚರಣೆಯು ಮಾತ್ರ ನಿವೃತ್ತಿಪರವೇ ಆಗಿತ್ತು. ರಾಜ್ಯಶಾಸ್ತ್ರದ ತತ್ವವಿಚಾರಗಳಲ್ಲಿ ( in the theory of politics ) ಅವರು ಎಷ್ಟೇ ಉಚ್ಚ ಸ್ಥಿತಿಗೆ ಮುಟ್ಟಿದ್ದರೂ, ಅವುಗಳ ಪ್ರತ್ಯಕ್ಷ ಆಚರಣೆಯಲ್ಲಿ ಮಾತ್ರ ಅವರು ಎಂದೂ ಭಾಗವಹಿಸಲಿಲ್ಲ. ಅವರು ಸ್ವಭಾವತಃ ನಿವೃತ್ತಿಪರರು; ಏಕಾಂತಪ್ರಿಯರು ಅಖಂಡವಾದ ರಾಮನಾಮ ಭಜನೆಯಲ್ಲಿ ಅವರು ತಮ್ಮ ಸರ್ವಕಾಲವನ್ನೂ ಕಳೆಯುತ್ತಿದ್ದರು. ಆದರೆ ಕನ್ನಡಿಗರಾದ ಶ್ರೀಮದ್ವಿದ್ಯಾರಣ್ಯರ ಮಾತು ಹಾಗಲ್ಲ. ಅವರು ಸ್ವತಃ ರಾಜಕಾರಣದಲ್ಲಿ ಪ್ರತ್ಯಕ್ಷ ಭಾಗವನ್ನು ವಹಿಸುತ್ತಿದ್ದರು. ರಾಮದಾಸರಂತೆ ಅವರು

ज्ञानिनाचरितुं शक्यं सम्यग्राज्यादि लौकिकम्।

( पंचदशी ೯.೧೧೪)

ಎಂದರೆ 'ಜ್ಞಾನಿಯಾದವನು ರಾಜ್ಯಾದಿ ಲೌಕಿಕ ಕೆಲಸಗಳನ್ನುಚನ್ನಾಗಿ ಮಾಡುವದು ಶಕ್ಯವಿದೆ' ಯೆಂದಿಷ್ಟೇ ಮಾತ್ರ ಹೇಳಲಿಲ್ಲ. ಆದರೆ

तत्वविद्वविरोधित्वाल्लौकिकं सम्यगाचरेत्।

(पंचदशी ೯.೧೧೬ )

ಎಂದರೆ ' ತತ್ವಜ್ಞಾನಕ್ಕೂ ರಾಜ್ಯದಾಡಳಿತೆ ಮೊದಲಾದ ಲೌಕಿಕ ಕೆಲಸಗಳಲ್ಲಿ ಪ್ರತ್ಯಕ್ಷ ಭಾಗ ವಹಿಸುವದಕ್ಕೂ ಏನೂ ವಿರೋಧವಿಲ್ಲ. ಎಂತೆಯೇ ಜ್ಞಾನಿಯಾದವನು ತಾನು ಮಾಡಬೇಕಾಗಿದ್ದ ಲೌಕಿಕ ಕರ್ತವ್ಯಗಳನ್ನುಉಳಿದೆಲ್ಲರಿಗಿಂತ ಹೆಚ್ಚು 'ಚನ್ನಾಗಿಯೇ ಆಚರಿಸುತ್ತಿರುತ್ತಾನೆ.' ಎಂಬದು ಅವರ ಆಚಾರ ವಿಚಾರದ ರಹಸ್ಯವಾಗಿತ್ತು. ಇದಕ್ಕನುಸಾರವಾಗಿಯೇ ವಿದ್ಯಾರಣ್ಯರು ೩೦-೪೦ ವರ್ಷಗಳವರೆಗೆ ಹುಕ್ಕಬುಕ್ಕರ ಅಮಾತ್ಯರಾಗಿ,ವಿಜಯನಗರ ಸಾಮ್ರಾಜ್ಯದ ಆಡಳಿತೆಗಳನ್ನೆಲ್ಲ ತಮ್ಮಕೈಯಲ್ಲಿಟ್ಟುಕೊಂಡು ಆದರ್ಶರಾಗುವಂತೆ ಕೆಲಸಮಾಡಿ ತೋರಿಸಿದರು. ಇಷ್ಟೇ ಅಲ್ಲ; ಪ್ರಸಂಗಬಿದ್ದಾಗ ಸ್ವತಃ ಕೈಯಲ್ಲಿ ಶಸ್ತ್ರಾಸ್ತ್ರಗಳನ್ನು ಧರಿಸಿ, ಸೇನಾನಾಯಕರಾಗಿಯೂ, ಸಾಮಾನ್ಯ ಶಿಪಾಯಿಯಾಗಿಯೂ ಇವರು ಕಾದುತ್ತಿದ್ದರು. ಹೀಗೆ ಒಂದೆರಡು ಯುದ್ಧಗಳಲ್ಲಿ ಕೆಲಸಮಾಡಿ ಜಯಶಾಲಿಗಳಾಗಿಯೇ ಬಂದರೆಂದು ನಾನು ಓದಿದಂತೆ ನೆನಪಿದೆ. ಸಾರಾಂಶವೇನೆಂದರೆ, ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಆದರ್ಶಕರ್ಮಯೋಗಿಯನ್ನು ವರ್ಣಿಸಿ ಆದರಂತೆ ತಾನೂ ಆಚರಣೆಮಾಡಿ ತೋರಿಸಿದ್ದನು. ಆದನ್ನು ಅವನ ನಂತರದಲ್ಲಿ ಐತಿಹಾಸಿಕ ಸತ್ಯವೆಂಬ ರೀತಿಯಲ್ಲಿ ವಿವೇಚಿಸಿ, ಆಚರಣೆ ಮಾಡಿ ತೋರಿಸಿದವರೆಂದರೆ ಶ್ರೀಮದ್ವಿದ್ಯಾರಣ್ಯರೊಬ್ಬರೆಂದೇ ನಮಗೆ ನಿಸುತ್ತದೆ. ಇಂತಹ ವಿದ್ಯಾರಣ್ಯರು ಅಚ್ಚಕನ್ನಡಿಗರಾಗಿದ್ದರೆಂಬದು ಎಷ್ಟು ಆನಂದದ ಮಾತು !

ಇಲ್ಲಿ ಇನ್ನೊಂದು ಸೂಕ್ಷ್ಮವಾದ ಆದರೂ ವಿವಾದಾಸ್ಪದವಾದ ಮಾತನ್ನೆತ್ತುವದು ಸರಿಯೆನಿಸುತ್ತದೆ. ನಮ್ಮ ಭಾರತೀಯರ ಆದರ್ಶವು ಯಾವಾಗಾದರೂ ರಾಜ್ಯಶಾಸ್ತ್ರ ( Politics ) ಮತ್ತು ಅಧ್ಯಾತ್ಮಗಳ ಸಮನ್ವಯ ಮಾಡುವದೇ ಇರುತ್ತದೆ. ಅದೇಕೆ ? ಅದು ನಮ್ಮವೈಶಿಷ್ಟ್ಯವೆಂದೇ ನಾವು ಅಭಿಮಾನದಿಂದ ಹೇಳುತ್ತೇವೆ. ಆದರೆ ರಾಜ್ಯಶಾಸ್ತ್ರ ಮತ್ತು ಅಧ್ಯಾತ್ಮಗಳಬಗ್ಗೆ ನಮ್ಮ ಪ್ರಾಚೀನರ ವಿಚಾರಗಳನ್ನೂ, ಈಗಿನವರ ವಿಚಾರಗಳನ್ನೂ ತುಲನೆಮಾಡಿ, ನಮ್ಮ ಆದರ್ಶವು ಸರಿಯಾದುದೇ ಹೇಗೆ, ಎಂದು ವಿಚಾರಮಾಡುತ್ತ ಕೂಡ್ರುವದು ಸದ್ಯಕ್ಕೆ ನಮ್ಮ ಮನಸ್ಸಿನಲ್ಲಿಲ್ಲ. ಇವುಗಳನ್ನು ಯಾವ ರೀತಿಯಿಂದ ನಮ್ಮವರು ಸಮನ್ವಯ ಮಾಡುತ್ತ ಬಂದಿರುವರೆಂಬದನ್ನಷ್ಟೇ ಈಗ ಪರೀಕ್ಷಿಸುವ ನಮ್ಮವರೆಲ್ಲರು ಬಹುಶಃ ಅಧ್ಯಾತ್ಮಕ್ಕೇ ಮಹತ್ವಕೊಟ್ಟು, ರಾಜ್ಯಶಾಸ್ತ್ರವು ಅದಕ್ಕೆ ಅಧೀನವಾಗಿರಬೇಕೆಂದೇ ಸಾರಿರುವರು. ಅಧ್ಯಾತ್ಮವೆಂದರೆ ಸರ್ವಸಾಧಾರಣವಾಗಿ ವ್ಯಕ್ತಿಯು ಪಾರಲೌಕಿಕ ಹಿತವನ್ನೇ ವಿವರಿಸಿ, ಅದನ್ನು ಹೇಗೆ ಕೈವಶಮಾಡಿಕೊಳ್ಳಬೇಕೆಂಬದನ್ನು ತಿಳಿಸಿಕೊಡುವ ಶಾಸ್ತ್ರವೆಂದು ವ್ಯಾಖ್ಯೆ ಮಾಡಬಹುದು. ಈ ವ್ಯಾಖ್ಯೆಯು ಎಲ್ಲರ ಮನಸ್ಸಿಗೆ ಒರದಿದ್ದರೂ,ಅದರಲ್ಲಿ ತಥ್ಯಾಂಶವಂತೂ ಇದ್ದೇ ಇರುವದೆಂಬುದರಲ್ಲಿ ಸಂಶಯವಿರಲಾರದು.ಆದರೆ ರಾಜ್ಯಶಾಸ್ತ್ರದಹಬರ್ವೆ ಬೇರೆಕಡೆಗೆ ಇರುತ್ತದೆ ಯಾವದೊಂದು ಭೂಭಾಗವು 'ದೇಶ'ವೆಂದು 'ರಾಷ್ಟ್ರ'ವೆಂದು ಕರೆಯಲ್ಪಡುತ್ತಿದ್ದು, ಅದರೊಳಗಿನ ಎಲ್ಲ ಜನರ ಹಿತಾಹಿತಗಳನ್ನು ಸಾಮೂಹಿಕ ರೀತಿಯಿಂದ ವಿಚಾರ ಮಾಡುವದೇ ರಾಜ್ಯಶಾಸ್ತ್ರದ ಮುಖ್ಯ ಕರ್ತವ್ಯವು. ರಾಜ್ಯಶಾಸ್ತ್ರದಲ್ಲಿ ಪರಲೋಕಕ್ಕೆ ಎಷ್ಟೂ ಸ್ಥಾನವಿಲ್ಲ. ಎಂದರೆ ದೇಶವಾಸಿಗಳ ಸಾಮೂಹಿಕ ಮತ್ತು ಐಹಿಕ ಹಿತವೇ ರಾಜ್ಯಶಾಸ್ತ್ರದ ಗುರಿಯೆಂದು ಹೇಳಬಹುದು. ಆದರಲ್ಲಿ

ವ್ಯಕ್ತಿಗೆ ವಿಶೇಷ ಮಹತ್ವವಿಲ್ಲ. ಇದರ ಮೇಲಿಂದ ಇವೆರಡು ಶಾಸ್ತ್ರಗಳೊಳಗಿನ ಸಂಬಂಧವು ಕಂಡು ಬರುವಂತಿದೆ. ವ್ಯಕ್ತಿಯಂತೆ ರಾಷ್ಟ್ರಕ್ಕೆ ಒಬ್ಬ ವಿಶಿಷ್ಟನಾದ 'ಜೀವ' ನು ಇರುವನೆಂದೂ, ಅವನು ತನ್ನ ಇಲ್ಲಿಯ ಪಾಪಪುಣ್ಯಗಳಿಗನುಸಾರವಾಗಿ ಪರಲೋಕದಲ್ಲಿ ಸುಖ ದುಃಖಗಳನ್ನು ಅನುಭವಿಸಬೆ ಕಾಗುವದೆಂದೂ ಹೇಳಲಿಕ್ಕೆ ಬರಲಾರದು. ಆದುದರಿಂದ ಇಂತಹ ಅಧ್ಯಾತ್ಮ ಶಾಸ್ತ್ರಕ್ಕೆ ರಾಜ್ಯಶಾಸ್ತ್ರವನ್ನು ಸಂಪೂರ್ಣವಾಗಿ ಕೈಗೊಂಬೆಯಾಗಿ ಮಾಡುವದು ಸರಿಯಾಗುವದಿಲ್ಲವೆಂದು ಹಲವರ ಅಂಬೋಣವಿದೆ. ಮತ್ತು ಅನ್ವಯು ವ್ಯತಿರೇಕ ಪದ್ಧತಿಯನ್ನು ಹಿಡಿದು ಜಗತ್ತಿನೊಳಗೆ ಇಲ್ಲಿಯವರೆಗಾದ ರಾಷ್ಟ್ರಗಳ ಇತಿಹಾಸವನ್ನು ನಾವು ನೋಡಿದರೆ ನಮಗೆ ಈ ಮಾತಿನ ಸತ್ಯತೆಯು ಕಂಡು ಬರುವಂತಿದೆ, ಕೇವಲ ಅಧ್ಯಾತ್ಮ ಶಾಸ್ತ್ರದ ಮೇಲೆಯೇ ರಚಿಸಲ್ಪಟ್ಟ ರಾಜ್ಯಗಳೆಲ್ಲ ಇಂದಿಗೆ ಮುಣುಪಾಲಾಗಿ ಹೋಗಿವೆ. ಅದಕ್ಕೆ ವಿರುದ್ಧವಾಗಿ, ಈಗ ಉತ್ಕರ್ಷವನ್ನು ಹೊಂದಿದ ಯಾವದೇ ರಾಷ್ಟ್ರವನ್ನು ತೆಗೆದುಕೊಂಡರೂ, ಅಲ್ಲಿಯ ಜನರು ಧಾರ್ಮಿಕ ಮೂಢ ಭಾವನೆಗಳನ್ನೆಲ್ಲ ಬದಿಗೊತ್ತಿ, ಪ್ರಯತ್ನವಾದಿಗಳಾಗಿ, ಮೈಮುರಿ ದುಡಿದು, ರಾಷ್ಟ್ರಭಾವನೆಯಿಂದ ಯುಕ್ತರಾಗಿ, ಭೌತಿಕಶಾಸ್ತ್ರದಲ್ಲಿ ಪ್ರಾವೀಣ್ಯವನ್ನು ಪಡೆದು, ಸದ್ಯಕ್ಕಿನ ಘನತೆಗೇರಿದರೆಂಬದನ್ನು ಇತಿಹಾಸದ ಬಲದಿಂದ ಸಿದ್ಧಮಾಡಿ ನೋಡಬಹುದು. ಇಂಗ್ಲಂಡ, ಫ್ರಾನ್ಸ, ಜರ್ಮನಿ ಅಮೇರಿಕಾ ಮತ್ತು ಜಪಾನದೇಶಗಳೆಲ್ಲ ಈ ಮಾತಿಗೆ ಸಾಕ್ಷಿಯಾಗಿವೆ. ಅಲ್ಲಿ ಧರ್ಮೋಪದೇಶ ಮಾಡಲಿಕ್ಕೆ ಯಾವ ಆಧ್ಯಾತ್ಮಿಕ ಪುರುಷನೂ ಹುಟ್ಟಬಂದಿರಲಿಲ್ಲ ಆದರೂಅವರು ಇಂದುಎಂತೆಂತಹ ಸಾಮ್ರಾಜ್ಯಗಳನ್ನು ಆಳುತ್ತಿರುವರು! ಇಷ್ಟೇ ಅಲ್ಲ; ಅವರ ಧರ್ಮಗುರುಗಳಾದ ಯೇಸೂಕ್ರಿಸ್ತನ 'ಗುಡ್ಡದ ಮೇಲಿನ ಪ್ರವಚನವನ್ನಾಗಲಿ, ಅಥವಾ ಗೌತುಮಬುದ್ಧನ ಅಹಿಂಸಾಧರ್ಮವನ್ನಾಗಲಿ ಅವರು ಪಾಲಿಸ ತೊಡಗಿದ್ದರೆ ಇಂದು ಅವರು ಎಲ್ಲಿರಬೇಕಾಗುತ್ತಿತ್ತೊ ಯಾರಿಗೆ ಗೊತ್ತು! 'ಬಲಗಡೆಯ ಕೆನ್ನೆಯ ಮೇಲೆ ಹೊಡೆದವನಿಗೆ ಎಡಗಡೆಯ ಕೆನ್ನೆಯನ್ನು ಮುಂದೆಮಾಡು,' 'ದುಷ್ಟಮನುಷ್ಯನಿಗೆ ಪ್ರತಿಬಂಧ ಮಾಡಬೇಡ,' 'ಕೆಡಕನ್ನು ಒಳಿತದಿಂದ ಗೆದಿ' ಎಂಬಿವೇ ಮೊದಲಾದವುಗಳು ಕ್ರಿಸ್ತೋಪದೇಶದ ರಹಸ್ಯವಾಗಿವೆ. ಇವನ್ನೆಲ್ಲ ಮೊನ್ನಿನ ದೊಡ್ಡ ಯುದ್ಧದಲ್ಲಿ ಯಾರಾದರೂ ನಿಜವಾಗಿಯೇ ಕೃತಿಯಲ್ಲಿ ತಂದಿದ್ದರೆ, ಅವರು ಜನರ ನಗೆಗೆ ಈಡಾಗಬೇಕಾಗುತ್ತಿತ್ತು!

ಆದರೆ ಮೇಲಿನ ವಿವರಣೆಯಿಂದ ಅಧ್ಯಾತ್ಮಕ್ಕೂ ರಾಜ್ಯಶಾಸ್ತ್ರಕ್ಕೂ ಏನೂ ಸಂಬಂಧವೇ ಇರಕೂಡದೆಂಬ ಅಭಿಪ್ರಾಯವು ಮಾತ್ರ ನಮ್ಮದೆಂದು ಯಾರೂ ತಿಳಿಯಬಾರದು. ಜಗತ್ತಿನೊಳಗಿನ ಈಗಿನ ಹಲವು ಪಂಡಿತರು ಈ ಅಭಿಪ್ರಾಯದ ಪುರಸ್ಕರ್ತರಾಗಿದ್ದರೂ,ನಮ್ಮ ಸ್ವಂತದ ಅಭಿಪ್ರಾಯವು ಮಾತ್ರ ಹಾಗಿಲ್ಲ. ಆದರೆ ಮೇಲಿನವರ ಅಭಿಪ್ರಾಯಕ್ಕೆ ವಿರುದ್ಧವಾಗಿ, ಅಧ್ಯಾತ್ಮವೇ ಮುಖ್ಯವೆಂದೂ, ಅದಕ್ಕೆ ಅಕ್ಷರಶಃ ಅನುಸಾರವಾಗಿಯೇ ರಾಜ್ಯಸೂತ್ರಗಳು ನಡೆಯಬೇಕೆಂದು ಯಾರು ಹೇಳುವರೋ ಅವರೂ ನಮಗೆ ಸಮ್ಮತವಾಗಲಾರರು. ಮಹಾತ್ಮಾಗಾಂಧಿಯವರು ಈ ಮತದ ಪುರಸ್ಕರ್ತರೆಂದು ನಮಗೆನಿಸುತ್ತದೆ. ಎಂದರೆ ವ್ಯಕ್ತಿಯ ಅಧ್ಯಾತ್ಮಿಕ ಜೀವನದ ಬಗ್ಗೆ ಯಾವ ನಿಯಮಗಳನ್ನು ಹಚ್ಚಬೇಕಾಗುವದೋ, ಅವನ್ನೇ ಇದ್ದಕ್ಕಿದ್ದಂತೆ ರಾಷ್ಟ್ರದ ರಾಜಕೀಯ ಜೀವನಕ್ಕೂ ಹಚ್ಚಬೇಕೆಂದು ಅವರ ಅಭಿಪ್ರಾಯವಿರುವದೆಂದು ನಮಗೆ ತೋರುತ್ತದೆ. ಆದರೆ ಈ ಮಾರ್ಗವಾದರೂ ಯಶಸ್ವಿಯಾಗಲಾರದೆಂಬದು ಮೊನ್ನಿನ ಅಸಹಕಾರ ಮತ್ತು ಕಾಯದೇಭಂಗ ಚಳವಳಿಗಳಿಂದ ಎಲ್ಲರಿಗೂ ಗೊತ್ತಾಗುವಂತಿದೆ. ಆದರೆ ಯಾವದು ನಮ್ಮ ಭಾರತೀಯರ ವೈಶಿಷ್ಟ್ಯವೆಂದು ನಾವು ಮೇಲೆ ಹೇಳಿದೆವೋ ಆ ಅಧ್ಯಾತ್ಮ ಮತ್ತು ರಾಜ್ಯಶಾಸ್ತ್ರಗಳ ಸಮನ್ವಯವು ಇವೆರಡೂ ಮಾರ್ಗಗಳೊಳಗಿನ ದೋಷಗಳನ್ನು ಬಿಟ್ಟು ಕೊಟ್ಟು, ಎರಡೂ ಕಡೆಯ ಗುಣಗಳನ್ನು ಮಾತ್ರ ಸ್ವೀಕರಿಸುವಂತಹದೆಂದು ಹೇಳಬಹುದು. ಇದನ್ನು ಮೊತ್ತಮೊದಲು ಚನ್ನಾಗಿ ಬಳಿಕೆಯಲ್ಲಿ ತಂದವನು ಶ್ರೀಕೃಷ್ಣಪರಮಾತ್ಮನು ಅವನ್ನೇ ಮುಂದೆ ವಿದ್ಯಾರಣ್ಯರೂ, ರಾಮದಾಸರೂ ಮತ್ತು ಉಳಿದವರೂ ನಮ್ಮ ಭಾರತದಲ್ಲಿ ಪ್ರಚುರ ಪಡಿಸುತ್ತ ಬಂದಿದ್ದಾರೆ. ಅಧ್ಯಾತ್ಮವೇ ವ್ಯಕ್ತಿಶಃ ನಮ್ಮ ಮುಖ್ಯ ಹೆಗ್ಗುರಿಯಾಗಿರಬೇಕು. ಆದರ ಅದು ರಾಜ್ಯಶಾಸ್ತ್ರದ ತತ್ವಗಳಿಗೆ ವಿರೋಧವಾಗಿಲ್ಲ; ಆಗಿರುವದೂ ಶಕ್ಯವಿಲ್ಲ; ಅಧ್ಯಾತ್ಮವೇ ಮುಖ್ಯವಾಗಿದ್ದ ಮನುಷ್ಯನೂ ರಾಜ್ಯಶಾಸ್ತ್ರವನ್ನು ಆಚರಿಸುವದು ಶಕ್ಯವಿದೆ; ಎಂದರೆ ಅಧ್ಯಾತ್ಮಕ್ಕೆ ಮೋಹಗೊಂಡವನೂ ಕೂಡ ರಾಷ್ಟ್ರದ

**ಐಹಿಕ** ಉತ್ಕರ್ಷವಾಗುವಂತೆ ವರ್ತಿಸುವದು ಶಕ್ಯವಿದೆ; ಮತ್ತು ರಾಜ್ಯಶಾಸ್ತ್ರದ ತತ್ವಗಳನ್ನಾದರೂ ಈ ತತ್ವದ ಮೇಲಿಂದಲೇ ಆಚರಣೆಯಲ್ಲಿ ತರಬೇಕು. ರಾಷ್ಟ್ರದ **ಐಹಿಕ** ಹಿತಕ್ಕಾಗಿ ಯುದ್ಧ ಮೊದಲಾದ ಕ್ರೂರ ಕರ್ಮಗಳಲ್ಲಿ ಭಾಗ ವಹಿಸಬೇಕಾಗಲಿ ಅಥವಾ ರಾಜನೀತಿಯ ಸುಳ್ಳು, ಕಪಟ ಮೊದಲಾದವುಗಳನ್ನು ಆಚರಿಸಬೇಕಾಗಲಿ ಎಲ್ಲವೂ ಕರ್ತವ್ಯವೇ. ಅಲ್ಲಿ ಆ ಕೆಲಸದಿಂದ ಹಿಂಜರಿಯುವ ಕಾರಣವಿಲ್ಲ. ವ್ಯಕ್ತಿಯ ಅಧ್ಯಾತ್ಮಿಕ ಜೀವನದ ದೃಷ್ಟಿಯಿಂದ ಅವಕ್ಕೆ ಹಿಂಸೆಯೆಂದೂ, ಅನೀತಿ, ಅಧರ್ಮವೆಂದೂ ಕರೆಯಬಹುದಾದರೂ, ವ್ಯಕ್ತಿಯು ನಿಃಸ್ವಾರ್ಥ ಬುದ್ಧಿಯಿಂದ ರಾಷ್ಟ್ರ ಹಿತಕ್ಕಾಗಿ ಅವುಗಳನ್ನು ಆಚರಿಸುವಾಗ ಅವಕ್ಕೆ ಈ ಹೆಸರು ಹಚ್ಚಿದ್ದು ಅನ್ಯಾಯವಾಗುವದು, ಎಂಬುದೇ ಈ ಗ್ರಂಥ ದ ಅಭಿಪ್ರಾಯದ ತಿರುಳು. ಅಧ್ಯಾತ್ಮವನ್ನು ಬಿಟ್ಟು ಬರೇ ರಾಷ್ಟ್ರದ ಐಹಿಕಉನ್ನತಿಯನ್ನು ಹಿಡಿಯುವದೆಂದರೆ ಕುರುಡನಾದಂತಾಗುವದು. ರಾಷ್ಟ್ರದ ಐಹಿಕ ಉನ್ನತಿಯನ್ನು ನೋಡದ ಆಧ್ಯಾತ್ಮವಿರಬೇಕೆನ್ನುವದೆಂದರೆ ಕುಂಟನಾದಂತಾಗುವದು. ಆಧ್ಯಾತ್ಮವು ಕಣ್ಣು; ರಾಜ್ಯಶಾಸ್ತ್ರವು ಕಾಲು. ಇವೆರಡೂ ಕೂಡಿದರೆ ಮಾತ್ರ ಹಿತಕಾರಿಯಾಗುವದು. ಇಲ್ಲದಿದ್ದರೆ ಇಲ್ಲ. ಆದುದರಿಂದ ಅವೆರಡಕ್ಕೂ ಮೇಳ ಹಾಕುವದೇ ಶ್ರೇಯಸ್ಕರವು. ಆ ಕೆಲಸವನ್ನೇ ಶ್ರೀಮದ್ವಿದ್ಯಾರಣ್ಯರು ವಿಜಯ ನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಮಾಡಿ, ಜಗತ್ತಿಗೆ ಆದರ್ಶ ಪುರುಷರಾಗಿದ್ದಾರೆ. ಅವರು ಸ್ವತಃ ತಾವು ವೇದ ವೇದಾಂಗ ಪಾರೀಣರೂ, ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದ ಕೃತಕೃತ್ಯರೂ, ಆಗಿದ್ದರೂ ಕೂಡ, ವೇಳೆಯು ಬಂದೊಡನೆ "ಏಳು ಸಾಯಣ, ಕಟ್ಟು ಗಂಟನ್ನು" ಎಂದು ಹೇಳಿ ರಾಜ್ಯಶಾಸ್ತ್ರದಲ್ಲಿ ಧುಮುಕಿ ಹಿಂದೂ ಸಾಮ್ರಾಜ್ಯಸ್ಥಾಪನೆಯಂತಹ ಮಹತ್ಕಾರ್ಯವನ್ನು ಮಾಡಿದರು.

ವಿದ್ಯಾರಣ್ಯರು ಎಂದು, ಹೇಗೆ ಮನೆ ಬಿಟ್ಟು ಹೊರಟರು? ಅವರಿಗ ಹುಕ್ಕ ಬುಕ್ಕರ ಜೆಟ್ಟಿಯು ಎಂದು, ಯಾವ ಪರಿಸ್ಥಿತಿಯಲ್ಲಾಯಿತು? ಹುಕ್ಕ ಬುಕ್ಕರೇ ಇವರನ್ನು ಹುಡುಕಿಕೊಂಡು ಬಂದರೋ? ಅಥವಾ ಇವರೇ ಅವರನ್ನು ಅರಿಸಿತೆಗೆದರೋ? ಮುಂದೆ ಅವರಕಡೆಯಿಂದ ಎಂದು, ಯಾವ ಪ್ರಾರೀತಿಯಿಂದ ಕೆಲಸ ಮಾಡಿಸಿದರು? ಸಾಮ್ರಾಜ್ಯ ಸ್ಥಾಪನೆಗೆ ಎಷ್ಟು ವರ್ಷಗಳು ಹಿಡಿದವು? — ಇ ಮೊದಲಾದ ಪ್ರಶ್ನೆಗಳನ್ನು ನಾವೀಗ ಚರ್ಚಿಸುವದಿಲ್ಲ. ಅವು ಕೇವಲ ಇತಿಹಾಸ ಸಂಶೋಧಕರ ಕೆಲಸಗಳಾಗಿದ್ದು, ಆ ಅಧಿಕಾರವು ನಮಗೆ ಎಷ್ಟು ಮಾತ್ರವೂ ಇರುವದಿಲ್ಲ. ನಾವು ಕರ್ನಾಟಕದ ಇತಿಹಾಸವನ್ನು ಈ ದೃಷ್ಟಿಯಿಂದ ಎಂದೂ ಅಭ್ಯಾಸ ಮಾಡಿಯೇ ಇಲ್ಲ. ಆದುದರಿಂದ ವಾಚಕರು ನಮ್ಮನ್ನು ಈ ವಿಷಯದಲ್ಲಿ ಕ್ಷಮಿಸಿಬೇಕೆಂದು ಬೇಡಿಕೊಳ್ಳುತ್ತೇವೆ. ನಾವೀಗ ಇಲ್ಲಿ ವಿವರಿಸುತ್ತಿರುವದು ಬರೇ ತಾತ್ವಿಕ ದೃಷ್ಟಿಯಿಂದಲೇ ಸರಿ,

ವಿದ್ಯಾರಣ್ಯರು ಕ್ರಿ. ಶಕ ೧೩೦೮ ನೇ ಇಸವಿಯಲ್ಲಿ ಹುಟ್ಟಿದರೆಂಬುದು ಸತ್ಯವೆಂದಿಟ್ಟುಕೊಂಡರೆ ಅವರು ಮನೆಯನ್ನು ಬಿಟ್ಟಾಗ ೨೨-೨೩ ವರುಷದ ತರುಣರಿರಬಹುದೆಂದು ಊಹಿಸಲಿಕ್ಕೆ ಆಸ್ಪದವಿದೆ ಆ ಕಾಲಕ್ಕೆ ದಿನೇ ದಿನೇ ಪ್ರಬಲವಾಗುತ್ತ ನಡೆದಿದ್ದ ಮುಸಲ್ಮಾನರ ಹಾವಳಿಯನ್ನು ನೋಡಿ, ಅದಕ್ಕೆ ತಡೆಹಾಕಬೇಕೆಂಬ ತ್ವೇಷದಿಂದಲೇ ಇವರು ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸುವ ಸಂಕಲ್ಪ ಮಾಡಿದರು ಮುಂದೆ ಇವರು ಕೆಲವರ್ಷ ತಪಶ್ಚರ್ಯ ಮಾಡಿದರೆಂದೂ, ದೇವಿಯ ವರದಿಂದ ಬಂಗಾರದ ಮಳೆಸುರಿಸಿ, ಆ ಹಣದಿಂದ ರಾಜ್ಯವನ್ನು ಸ್ಥಾಪಿಸಿದರೆಂದೂ ನಾವು ಇತಿಹಾಸದಲ್ಲಿ ಓದುತ್ತೇವೆ. ಪ್ರತ್ಯಕ್ಷವಾಗಿ ಆಕಾಶದಿಂದಲೇ ಬಂಗಾರದ ಮಳೆಯು ಬಿತ್ತೋ ಇಲ್ಲೋ ದೇವರೇ ಬಲ್ಲ ಆದರೆ ಆ ಮಾತಿನ ಅರ್ಥವನ್ನು ಕೇವಲ ಲೌಕಿಕ ದೃಷ್ಟಿಯಿಂದ ಮಾಡಿದವರೂ ಕೂಡ, ವಿದ್ಯಾರಣ್ಯರು ಸಾಮ್ರಾಜ್ಯ ಸ್ಥಾಪನೆಗೆ ಬೇಕಾಗುವ ದುಡ್ಡನ್ನೆಲ್ಲ ತಾವೇ ಸಂಗ್ರಹ ಮಾಡಿದರೆಂಬುದು ಇದರಿಂದ ಸಿದ್ಧವಾಗುವದೆಂದು ಒಡಂಬಡುತ್ತಾರೆ. ವಿಲಕ್ಷಣ ತಪಃ ಪ್ರಭಾವದಿಂದ ಒಪ್ಪುತ್ತಿರುವ ತರುಣ ಮಾಧವ ಮುನಿಯು ಹಿಂದೂ ಸಂಸ್ಕೃತಿಯು ತೀರ ಹಾಳಾಗಿ ಹೋಗುತ್ತಿರುವ ಕಾಲದಲ್ಲಿ, ಕೇವಲ ಆ ಸಂಸ್ಕೃತಿಯನ್ನು ಕಾಪಾಡುವ ಸಲುವಾಗಿಯೇ ದುಡ್ಡು ಕೊಡಿರೆಂದು ಜೋಳಿಗೆಯನ್ನು ಹಿಡಿದನೆಂದೂ, ಬಂಗಾರದ ಮಳೆ ಸುರಿಯುವಂತೆ ಜನರು ಬಡಬಡ ಆ ಜೋಳಿಗೆಯಲ್ಲಿ ದುಡ್ಡನ್ನು ಹಾಕಿದರೆಂದೂ ಈ ಐತಿಹ್ಯದ ಲೌಕಿಕಾರ್ಥವಿದೆ. ಇದರ ಮೇಲಿಂದ ಸಾಮ್ರಾಜ್ಯಸ್ಥಾಪನೆಗೆ ಬೇಕಾಗುವ **ಆರ್ಥಿಕ ಸಹಾಯಕ್ಕೆಲ್ಲ** ಶ್ರೀಮದ್ವಿದ್ಯಾರಣ್ಯರೇ ಕಾರಣರಾದರೆಂಬದಂತೂ ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಅವರಂತೆಯೇ ಇವರು ಸ್ವಂತವಾಗಿಯೂ,

ಶಿಷ್ಯರ ಮುಖಾಂತರವಾಗಿಯೂ ಕರ್ನಾಟಕದಲ್ಲೆಲ್ಲ ಓಡಾಡಿ ಜನರನ್ನು ಹುರಿದುಂಬಿಸಿ, ಅವರೆಲ್ಲರೂ ಸಂಘಟಿತರಾಗುವಂತೆ **ಮಾಡಿ, ಅವರನ್ನು ಯುದ್ಧಕ್ಕೆ** ಸಜ್ಜುಗೊಳಿಸಿದರೆಂಬುದೂ ಸಹ ಸ್ಪಷ್ಟವಿದೆ. ಎಂದರೆ ಸಾಮ್ರಾಜ್ಯಸ್ಥಾಪನೆಗೆ ಅವಶ್ಯಕವಾದ **ಜನಸಹಾಯವು** ದೊರೆಯಲಿಕ್ಕೂ ಕೂಡ ಇವರೇ ಮುಖ್ಯರಾದರೆಂದು ಹೇಳಬಹುದು. ವಿಜಯನಗರದ **ಕೋಟೆಶಿಲೆಯನ್ನಾದರೂ ಇವರೇ ಕೂಡಿಸಿದ**ರೆಂದು ಐತಿಹ್ಯವು ಹೇಳಿರುತ್ತದೆ. ಇದರ ಮೇಲಿಂದ ಸಾಮ್ರಾಜ್ಯದ ರಾಜಧಾನಿಯನ್ನು ಇವರೇ ಕಟ್ಟಿಸಿದರೆಂದು ಹೇಳಲಭ್ಯಂತರವಿಲ್ಲ. ಎಂದರೆ ಸಾಮ್ರಾಜ್ಯಸ್ಥಾಪನೆಗೆ **ತತ್ವತಃ ಕಾರಣ**ರಾದಂತೆ **ಪ್ರಾಕೃತಿಕ ಸ್ಥಾಪನೆಗೂ** ಇವರು ಕಾರಣರಾದರೆಂದಂತಾಯಿತು. ( He was the founder of the Empire both positically and physically. ) ಆದರೆ ಬರೀ ರಾಜ್ಯಸ್ಥಾಪನೆಯಾಗಿಯೂ ಉಪಯೋಗವಿಲ್ಲ. ಅದು ಸುವ್ಯವಸ್ಥೆಯಿಂದ ನಡೆಯುವಂತೆ **ಮಾದರಿಯ ಶಾಸನ ಪದ್ಧತಿಯನ್ನೂ ಹಾಕಿಕೊಡಬೇಕಾಗುತ್ತದೆ.** ಆ ಕೆಲಸವೂ ಸಹ ವಿದ್ಯಾರಣ್ಯರದೇ ಎಂದು ಹೇಳಬಹುದು. ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿಯ ರಾಜ್ಯಶಾಸನ ಪದ್ಧತಿಯೆಲ್ಲ ವಿದ್ಯಾರಣ್ಯರು ವಿಜಯನಗರದ ರಾಜರಿಗೆ ಹಾಕಿಕೊಟ್ಟ ಪದ್ಧತಿಯ ಅನುಕರಣವೇ ಅಹುದೆಂಬುದು ಇತಿಹಾಸಜ್ಞರಿಗೆ ಗೊತ್ತುಂಟು. ಅಷ್ಟಪ್ರಧಾನ ಮಂಡಲವೂ ಆ ಮೂಲಕ ರಾಜನೊಬ್ಬನೇ ರಾಜ್ಯವನ್ನಾಳುವದೂ ವಿದ್ಯಾರಣ್ಯರ ಬುದ್ಧಿಯ ಪರಿಣಾಮಗಳೇ. ಆದರೆ ಹೀಗೆ ಶಿವಾಜಿಯಂಥವನೂ ಕೂಡ ಅನುಕರಣ ಮಾಡಬೇಕಾದ ರಾಜ್ಯಶಾಸನ ಪದ್ಧತಿಯನ್ನು ಏರ್ಪಡಿಸಿದವರಷ್ಟೇ ವಿದ್ಯಾರಣ್ಯರಲ್ಲ. ಅವರು ಸ್ವತಃ ೩೦-೪೦ ವರುಷಗಳ ವರೆಗೆ ಹುಕ್ಕಬುಕ್ಕರ ಅಮಾತ್ಯರಾಗಿ ಆ ಶಾಸನ ಪದ್ಧತಿಯ **'ಅಮಲ ಬಜಾವಣಿಯ'** ಕೆಲಸವನ್ನೂ ಮಾಡಿದರು. ಈ ಕಾಲದಲ್ಲಿ ಅವರು **ಮುಂದೆ ಸಾಮ್ರಾಜ್ಯದ ಘನತೆಗೆ ಬೇಕಾಗುವ ಬೀಜಗಳನ್ನೆಲ್ಲ** ಸರಿಯಾಗಿ **ಬಿತ್ತಿಬಿಟ್ಟ**ರೆಂದು ಹೇಳಬಹುದು. ಮತ್ತು ಈ ಮೊದಲೇ ಹೇಳಿದಂತೆ **ಸೇನೆಯ ಕೆಲಸದಲ್ಲಿ** ಸಹ ಪ್ರತ್ಯಕ್ಷ ಭಾಗವನ್ನು ವಹಿಸಿ, **ಯುದ್ಧಕಲೆಯ ಪಾಠವನ್ನೂ** ವಿಜಯನಗರದ ರಾಜರಿಗೆ ಹಾಕಿಕೊಟ್ಟರು. ಬೇರೆ ಬೇರೆ ಅರಸರ ಕಡೆಗೆ ರಾಯಭಾರಿಗಳನ್ನು ಕಳಿಸಿ ತಮ್ಮ **ರಾಜನೀತಿ ನಿಪುಣತೆ**ಯನ್ನು ತೋರಿಸಿದರು. ವ್ಯಾಪಾರ ಉದ್ಯೋಗ, ಒಕ್ಕಲತನ, ಶಿಕ್ಷಣ, ಮೊದಲಾದ ರಾಷ್ಟ್ರಪೋಷಕವಾದ **ಎಲ್ಲಕಸಬುಗಳೂ ಘನತೆಹೊಂದುವಂತೆ ಏರ್ಪಾಡು ಮಾಡಿದರು.** ಭಾರತ ದೇಶದಲ್ಲೆಲ್ಲ ಆ ಕಾಲಕ್ಕೆ ವಿಖ್ಯಾತರಾಗಿದ್ದ **ಪಂಡಿತೋತ್ತಮರನ್ನು ಒಂದೆಡೆ ಕೂಡಿಸಿ** ೧೫-೨೦ ವರುಷಗಳವರೆಗೆ ಒಂದೇಸವನೇ ಶ್ರಮಬಟ್ಟು, ಸುಪ್ರಸಿದ್ಧವಾದ **ವೇದಾದಿಗಳ ಭಾಷ್ಯವನ್ನು ರಚಿಸಿ,** ವಿಜಯನಗರ ಸಾಮ್ರಾಜ್ಯಕ್ಕಷ್ಟೇ ಅಲ್ಲದೆ, ಇಡೀ ಭಾರತೀಯರ ಮೇಲೆಯೇ ಇವರು ಉಪಕಾರದ ಭಾರವನ್ನು ಹೊರಿಸಿದ್ದಾರೆ. ಕೊನೆಗೆ ತಾವೇ ಶ್ರಿಂಗೇರಿ ಪೀಠವನ್ನೇರಿ ವಿಜಯನಗರ ರಾಜ್ಯದೊಳಗಿನ **ಧಾರ್ಮಿಕ ಸಂಸ್ಥೆಗಳ ವ್ಯವಸ್ಥೆಯನ್ನೆಲ್ಲ ಸರಿಗೊಳಿಸಿದರು.** ಸಾರಾಂಶವೇನೆಂದರೆ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯಸ್ಥಾಪನೆಯಲ್ಲಿ ಇಂತಿಂತಹ ಕೆಲಸಗಳನ್ನು ಮಾಡಿ ಪ್ರಸಿದ್ಧರಾಗಿದ್ದಾರೆಂದು ಹೇಳುವ ಬದಲು, ಅವರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಕೆಲಸದಲ್ಲಿ ಮಾಡದಿದ್ದ ಕೆಲಸವೇ ಉಳಿಯಲಿಲ್ಲೆಂದು ಹೇಳುವದು ಹೆಚ್ಚು ಸಯುಕ್ತಿಕವೆಂದುತೋರುತ್ತದೆ. ತನಮನದಿಂದಅವರು ಸಾಮ್ರಾಜ್ಯದ ಸೇವೆಯನ್ನು ಮಾಡಿ ಕೀರ್ತಿಶೇಷರಾದರು. ಆ ಕಾಲದ ಕನ್ನಡಿಗರ ಬೆಡಗನ್ನು, ತಿರುಗಿ ಪಡೆಯಬೇಕೆನ್ನುವ ನಾವು ವರ್ಡ್ಸ್‌ವರ್ಥ ಕವಿಯು ಮಿಲ್ಟನ್‌ನನ್ನುದ್ದೇಶಿಸಿ ಹೇಳುವಂತೆ, ವಿದ್ಯಾರಣ್ಯರನ್ನೇ ಸಂಬೋಧಿಸಿ "Vidyaranya! thou shouldst be living at this hour!" ಎಂದರೆ "ಶ್ರೀಮದ್ವಿದ್ಯಾರಣ್ಯರೇ, ನೀವು ಈ ಕಾಲದಲ್ಲಿರಬೇಕಾಗಿತ್ತು!" ಎಂದು ಹೇಳಿ, ಅವರಿಗೆ ನಾವು ಎಷ್ಟು ಉಪಕೃತರಾಗಿರುವೆವೆಂಬದನ್ನು ಇದಕ್ಕೂ ಹೆಚ್ಚು ಸ್ಪಷ್ಟವಾಗಿ ಹೇಳಲಿಕ್ಕೆ ಬರಲಾರದೆಂದು ನಂಬಬಹುದು. ಕೊನೆಗೆ ಅವರು ಆ ಕಾಲದಲ್ಲಿ ಕನ್ನಡಿಗರಿಗೆ ಹಾಕಿ ಕೊಟ್ಟ ಮಾರ್ಗವನ್ನನುಸರಿಸುವ ಬುದ್ಧಿಯನ್ನು ದೇವರು ನಮಗಿಂದು ಕೊಡಲೆಂದೂ, ನಮ್ಮ ಪ್ರಾಚೀನ ವೈಭವವನ್ನು ತಿರುಗಿ ಪಡೆಯ ಬಯಸುವ ನಮ್ಮನ್ನು ವಿದ್ಯಾರಣ್ಯರು ಆಶೀರ್ವದಿಸಲೆಂದೂ, ಆ ವೈಭವದ ಕಿಂಚಿನ್ಮಾರ್ಗದರ್ಶಕವೆಂದು ಹೊರಡಿಸಿದ ಪಂಡಿತ ವೆಂಕಟರಾಯರ ಸಾಮ್ರಾಜ್ಯಸಂಚಿಕೆಗೆ ದೇವರು ಮತ್ತು ವಿದ್ಯಾರಣ್ಯರಿಬ್ಬರೂ ಕೂಡಿಯೇ ಯಶಸ್ವಿಯಾಗುವಂತೆ ಹರಿಸಲೆಂದೂ ಬೇಡಿಕೊಂಡು **ನಾವೀ** ಲೇಖವನ್ನು ಮುಗಿಸುತ್ತೇವೆ.

---

# ವಿಜಯನಗರ ಸಾಮ್ರಾಜ್ಯದಲ್ಲಿ ಸಾಹಿತ್ಯದ ಬೆಳವಣಿಗೆ.

( ಲೇಖಕರು— ಶ್ರೀ. ಆರ್. ಬಿ. ಕುಲಕರ್ಣಿ ಕಾವ್ಯರತ್ನ ಬೆಳಗಾವಿ. )

ಹಿಂದೂ ಜನರ ಸ್ವಾತಂತ್ರ್ಯ ಹಾಗು ಧರ್ಮರಕ್ಷಣೆಗಾಗಿಯೂ ಸಾಹಿತ್ಯದ ಅಭಿವೃದ್ಧಿಗಾಗಿಯೂ, ಶ್ರೀ ವಿದ್ಯಾರಣ್ಯರು ಆಂಸಿದ ಕ್ಷೇತ್ರವು ಬಹು ಪ್ರಾಚೀನ ಕಾಲದಿಂದ ಪ್ರಸಿದ್ಧವಾದ ಹಂಪೆಯ ಪುಣ್ಯ ಭೂಮಿಯು. ಇದಕ್ಕೆ ರಾಮಾಯಣ ಕಾಲದಲ್ಲಿ ಕಿಷ್ಕಿಂಧೆಯೆಂಬ ಹೆಸರು. ರಾಮಾಯಣದಲ್ಲಿ ಬರುವ ಕಿಷ್ಕಿಂಧಾಕಾಂಡವು ಶ್ರೀರಾಮನ ಕರ್ನಾಟಕ ಸಂಚಾರವನ್ನೇ ವ್ಯಕ್ತ ಪಡಿಸುತ್ತದೆ. ಇದೇ ಸ್ಥಳದ ಸುಗ್ರೀವ ಹನುಮಂತಾದಿ ವೀರರು ಶ್ರೀರಾಮನಿಗೆ ನೆರವಾಗಿ ರಾಮಾಯಣವನ್ನು ಪೂರ್ತಿಗೊಳಿಸಿ ಕೀರ್ತಿಶೇಷರಾಗಿರುವರು. ಪಾಂಡವರ ಅಜ್ಞಾತವಾಸಕ್ಕೂ ಕರ್ನಾಟಕವೇ ಆಶ್ರಯ ಕೊಟ್ಟಿದ್ದು, ಅವರು ಅಲ್ಲಿಂದ ಹೊರಬಿದ್ದ ಬಳಿಕ ಕೆಲವು ದಿವಸ ಉಪಪ್ಲಾವ್ಯನಗರದಲ್ಲಿ ವಾಸಿಸಿದರೆಂದೂ, ಆ ಉಪಪ್ಲಾವ್ಯವೇ ಆನೆಗುಂದಿ ( ಹಂಪೆಯ ಹತ್ತರ ) ಎಂದೂ ಬಲ್ಲವರು ಬರೆದಿರುವರು. ಕರ್ನಾಟಕದ ವಾಸ್ತವ್ಯಕ್ಕೆ ಮೆಚ್ಚಿದ ಪಾಂಡವರು ಬಹುಕಾಲ ತಮಗೆ ಕರ್ನಾಟಕದಲ್ಲಿ ಇರಲಿಕ್ಕಾಗಲಿಲ್ಲೆಂಬ ಕಾರಣದಿಂದ ಪುನಃ ಕಲಿಯುಗದಲ್ಲಿ ಹರಿಹರ ಪಂಚಕ ( ಹುಕ್ಕ, ಕಂಪ, ಬುಕ್ಕ, ಮಾರಪ್ಪ ಮುದ್ದಪ್ಪ, ) ರಾಗಿ ಜನ್ಮವೆತ್ತರೋ ಏನೋ ಎಂಬುದೊಂದು ಕವಿಯ ಕಲ್ಪನೆ! ಶೃಂಗೇರಿಯ ಶಾಸನವೊಂದು ಬುಕ್ಕ ಮಹಾರಾಯನನ್ನು ಕುರಿತು 'ಪಾಂಡವರಲ್ಲಿ ಅರ್ಜುನನಿದ್ದ ಹಾಗೆ' ಎಂದು ಘೋಷಿಸುತ್ತದೆ. ಮನಸ್ಸಿನಿಂದ ಪಾಂಡವ ಪಕ್ಷಪಾತಿಗಳಾದರೂ ವಚನಬದ್ಧರಾದ್ದರಿಂದ ಕೌರವನ ಪಕ್ಷದಿಂದ ಹೋರಾಡಿದ ಭೀಷ್ಮಾಚಾರ್ಯರು ಮತ್ತೊಂದು ಪ್ರಸಂಗದಲ್ಲಿ ಪಾಂಡವರಿಗೆ ಸಹಾಯಕರಾಗಬೇಕೆಂಬ ಕಾಂಕ್ಷೆಯಿಂದ ಈ ಹರಿಹರ ಪಂಚಕದ ಜೊತೆಗೆ ವಿದ್ಯಾರಣ್ಯರಾಗಿ ಅವತರಿಸಿದರೋ ಎಂದು ಕವಿಗೆ ಮತ್ತೊಂದು ಕಲ್ಪನೆ ! ವಿದ್ಯಾನಗರ ಸ್ಥಾಪನೆಯ ಕಾಲಕ್ಕೆ ಅವರಿಗೆ ೭೦ ವರ್ಷ ವಯಸ್ಸಾಗಿತ್ತು. ಹರಿಹರ, ಬುಕ್ಕ, ೨ನೆಯ ಹರಿಹರನ ಕಾಲದಲ್ಲಿ ಸುಮಾರು ೧೦ ವರ್ಷ ಹೀಗೆ ಮುಂದೆ ೫೦ ವರ್ಷ ಸಾಮ್ರಾಜ್ಯದ ಮುಖ್ಯ ಮಂತ್ರಿಗಳಾಗಿ ನಿಃಸ್ವಾರ್ಥಬುದ್ಧಿಯಿಂದ ಹಿಂದುಗಳ ಸ್ವಾತಂತ್ರ್ಯ ರಕ್ಷಣೆಗಾಗಿಯೂ ಧರ್ಮರಕ್ಷಣೆಗಾಗಿಯೂ, ಸಾಹಿತ್ಯಾಭಿವೃದ್ಧಿಗಾಗಿಯೂ ಪರಿಶ್ರಮ ಪಟ್ಟು ತಮ್ಮ ಕನಸು ಫಲಸಾದುದನ್ನು ಕಣ್ತುಂಬ ನೋಡಿ ೧೨೦ ವಯಸ್ಸಿನಲ್ಲಿ ಜೀವಂತ ಸಮಾಧಿಸ್ತರಾಗಿ ಹಂಪೆಯ ಶ್ರೀವಿರೂಪಾಕ್ಷದೇವಾಲಯದ ಹಿಂಬದಿಯಲ್ಲಿ ಇಂದಿಗೂ ಸಮಾಧಿಸ್ತರಾಗಿ ಕುಳಿತಿರುವರು.

ಈ ಅಗಾಧ ಮಹಿಮಾವಿಶೇಷರೂ, ಅಪ್ರತಿಮ ಕರ್ತವ್ಯಶಾಲಿಗಳೂ ಲೋಕೋತ್ತರ ಪ್ರತಿಭಾ ಸಂಪನ್ನರೂ, ಆದ ಶ್ರೀವಿದ್ಯಾರಣ್ಯರು ಕಾಂಚಿಯ ಪ್ರಸಿದ್ಧವಾದ ವಿದ್ಯಾಪೀಠದಲ್ಲಿ ವಿದ್ಯಾತೀರ್ಥರಿಂದ ವಿದ್ಯೆಯನ್ನು ಸಂಪಾದಿಸಿ, ವಿದ್ಯಾನಗರವೆಂಬ ಅನ್ವರ್ಥಕ ನಾಮವುಳ್ಳ ರಾಜ್ಯವನ್ನು ಸ್ಥಾಪಿಸಿ ತಮ್ಮನಾದ ಸಾಯಣಾಚಾರ್ಯರೊಡನೆ ಲೆಕ್ಕಣಿಕೆಯನ್ನು ಹಿಡಿದು ತಮ್ಮ ತಪೋಬಲಯುಕ್ತವಾದ ಆ ಲೆಕ್ಕಣಿಕೆಯಿಂದ ಯಾವ ಸಾಹಿತ್ಯವನ್ನು ಹೊರಪಡಿಸಿದರೋ ಆ ಸಂಸ್ಕೃತ ಸಾಹಿತ್ಯವನ್ನು ವರ್ಣಿಸುವದು ಸಾಮಾನ್ಯರ ಶಕ್ತಿಯಲ್ಲ. ಈ ಪ್ರಸಂಗದಲ್ಲಿ ರನ್ನನು ತನ್ನ ಕವಿತಾ ಶಕ್ತಿಯನ್ನು ಕುರಿತು ಹೇಳಿದ ಪದ್ಯವೊಂದು ನೆನಪಾಗುತ್ತದೆ. ಇದೇ ಆ ಪದ್ಯವು.

ಆರಾತೀಯ ಕವೀಶ್ವರ ।
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯಭಂ ॥
ಡಾರದ ಮುದ್ರೆಯ ನೊಡೆದಂ ।
ಸಾರಸ್ವತಮೆನಿಪ ಕವಿತೆಯೊಳ್ ಕವಿರನ್ನಂ ॥

ಇದರಲ್ಲಿ ತುಸು ಮಾರ್ಪಾಟುಗಳನ್ನು ಮಾಡಿ ಇದೇ ಕವಿತೆಯಿಂದಲೇ ಶ್ರೀವಿದ್ಯಾರಣ್ಯರ ಹಾಗು ಸಾಯಣಾಚಾರ್ಯರ ಸಾಹಿತ್ಯಭಕ್ತಿಯನ್ನು ಒಂದೇ ಮಾತಿನಲ್ಲಿ ಹೇಳಬಹುದು. (ಕೆಳಗಣ ಪದ್ಯವನ್ನು ನೋಡಿರಿ )

ಆರಾತೀಯ ವಿಭೂತಿಗ ।
ಳಾರುಂ ಮುನ್ನಾರ್ತರಿಲ್ಲ ವೇದಾದ್ರಿಯ ಭಂ ॥
ಡಾರಮನಗಿದರ್ ತೆಗೆದರ್ ।
ಸಾರಸ್ವತರೆನಿಪ ಸಾಯಣಂ ಮಾಧವರುಂ ॥

ಈ ನನ್ನ ಅಭಿಪ್ರಾಯದ ಪುಷ್ಟ್ಯರ್ಥವಾಗಿ ಮಾಕ್ಸ ಮುಲ್ಲರ ಸಾಹೇಬರ ಇಂಗ್ಲಿಷ ಅವತರಣಿಕೆಯೊಂದನ್ನು ಇದರಡಿಯಲ್ಲಿ ಕೊಡುತ್ತೇನೆ. ಆಧುನಿಕ ಪಂಡಿತರಲ್ಲಿ ಕೆಲವರು ಒಮ್ಮೆಲೆ ಸಾಯಣಾಚಾರ್ಯರ ಮೇಲೆ ಟೀಕಾಸ್ತ್ರ ಪ್ರಯೋಗಮಾಡಿ ತಮ್ಮ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಲು ಹವಣಿಸಿರುವದನ್ನು ಕಂಡು ಮಾಕ್ಸ ಮುಲ್ಲರರು ಎಷ್ಟು ವಿನೋದ ಪೂರ್ಣವಾಗಿ ಬರೆದಿರುವರೆಂಬದನ್ನು ನೋಡಿರಿ! ಇದು ಈ ಬಂಧು ದ್ವಯರ ಸಾಹಿತ್ಯದ ಬಗ್ಗೆ ಅಪ್ರತಿಮ ಪ್ರಮಾಣ ಪತ್ರ ( certificate ) ವೆಂದು ಯಾರಿಗಾದರೂ ಕಂಡು ಬರುವಂತಿದೆ.

"I do not wonder that others who have more recently entered on thestudy of Vedas are inclined to speakdisparagingly of the scholastic interpretatious of Sayan. They hardly know how much we all owe to his guidance in effecting our first entrance into the fortress of Vedic language and Vedic religion & how much even they without being aware of it, are indebted to that Indian Eustathius ............ If we can now walk without Sayan, we ought to bear in mind that five and twenty years ago we could not have made even our first steps, we could never at least, have gained a firm footing without his leading strings. If therefore we can now see further than he could, let us not forget that we are standing on his shoulders."

Rig-Veda Samhita Vol. I

ಹೀಗೆ ಮಾಧವ ಸಾಯಣರ ಸಾಹಿತ್ಯವು ಭೂಮಂಡಲದ ಪ್ರಸಿದ್ಧ ವಿದ್ವಾಂಸರ ಚಿತ್ತವನ್ನು ಇಂದಿಗೂ ಆಕರ್ಷಿಸುತ್ತದೆ.

ಈ ಮಹನೀಯರ ಪ್ರೋತ್ಸಾಹನದಿಂದಲೂ ಇವರ ತರುವಾಯ ಸಹ ವಿಜಯನಗರ ರಾಜರ ಪೋಷಣೆಯಿಂದಲೂ ಕನ್ನಡ ಸಾಹಿತ್ಯಸಸಿಯು ಕೂಡ ಭರದಿಂದ ಬೆಳೆದು ಬಂದು ವಿಶಾಲವೃಕ್ಷವಾಗಿ ಪರಿಣಮಿಸಿತು. ವಿದ್ಯಾನಗರದ ಸ್ಥಾಪನೆಗಿಂತ ಪೂರ್ವದಲ್ಲಿಯೇ [ ಸು ೧೭೦ ವರ್ಷ ] ಹಂಪೆಯ ಕ್ಷೇತ್ರವು ಸಾಹಿತ್ಯದ ದೃಷ್ಟಿಯಿಂದ ಹದಗೊಳಿಸಲ್ಪಟ್ಟಿತ್ತು. ಹರೀಶ್ವರನು ಹಂಪೆಯ ವಿರೂಪಾಕ್ಷನ ಸಾನ್ನಿಧ್ಯದಲ್ಲಿಯೇ "ಗಿರಿಜಾ ಕಲ್ಯಾಣ" ( ಪ್ರಸಿದ್ಧವಾದ ಕಾವ್ಯ ) ವನ್ನು ಬರೆದಿದ್ದನು. ಈತನ ಸೋದರಳಿಯನಾದ ರಾಘವಾಂಕನು ಹರಿಶ್ಚಂದ್ರ ಕಾವ್ಯವನ್ನು ರಚಿಸಿದ್ದನು. ಇಂತಹ ಹದಗೊಳಿಸಿದ ಕ್ಷೇತ್ರದಲ್ಲಿ ನಟ್ಟ ಸಾಹಿತ್ಯಸಸಿಯು ಬರಬರುತ್ತಾ ವಿಶಾಲ ವೃಕ್ಷವಾಗಿ ಪೂರ್ವ-ಪಶ್ಚಿಮ ದಕ್ಷಿಣ ದಿಕ್ಕುಗಳಲ್ಲಿ ತನ್ನ ಶಾಖೋಪಶಾಖೆಗಳನ್ನು ಪಸರಿಸಿ ಕರ್ನಾಟಕದ ಸಾಹಿತ್ಯಭಕ್ತರಿಗೆ ಮಧುರತರ ಫಲಗಳನ್ನು ಕೊಟ್ಟಿರುತ್ತದೆ. ಕಾಲನ ಕೈಗೆ ಸಿಕ್ಕು ಕಲ್ಲು ಮಣ್ಣಿನ ಕಟ್ಟಡಗಳು ಕಳಚಿ ಬಿದ್ದಿದ್ದರೂ, ಸಾಹಿತ್ಯವು ಜೀವಂತವಾಗಿದೆ. "ಮರೆತು ಹೋದ ಸಾಮ್ರಾಜ್ಯವೆನ್ನುವವರಿಗೆ ಎಂದೂ ಮರೆಯದ ಸಾಮ್ರಾಜ್ಯವೆಂದು ಉತ್ತರ ಕೊಡುವದಾದರೆ ಈ ಸಾಹಿತ್ಯದ ದೃಷ್ಟಿಯಿಂದ ಇಂದಿಗೂ ಶಕ್ಯವಾಗಿದೆ. "ಆ ಸಾಮ್ರಾಜ್ಯದ ರಾಜಧಾನಿಯಕಟಾ ಆ ರಾಜನಾ ವೈಭವಂ" ಎಂದು ಕಳವಳಿಸುವ ಕನ್ನಡಿಗನು ತನ್ನ ಮನಸ್ಸನ್ನು 'ಆ ಸಾಹಿತ್ಯ ವಿಶಾಲವೃಕ್ಷ ಮಹಹಾ ಆ ಪಣ್ಗಳಾ ಗೊಂಚಲುಂ' ಎಂದು ಅವರ ಮಧುರವಾದ ಹಣ್ಣುಗಳನ್ನು ಒಂದೊಂದಾಗಿ ಸವಿದು ಸಮಾಧಾನಪಡಿಸಬಹುದಾಗಿದೆ.

ಈ ಸಾಮ್ರಾಜ್ಯದಲ್ಲಾದ ಸಾಹಿತ್ಯಾಭಿವೃದ್ಧಿಗೆ ಕೆಳಗಣ ಕಾರಣಗಳು ಪ್ರಾಮುಖ್ಯವಾಗಿ ಕಂಡು ಬರುತ್ತಿವೆ.

( ೧ ) ವಿದ್ಯಾರಣ್ಯರಂತಹ ಘನ ವಿದ್ವಾಂಸರು ಮುಂದಾಳುವಾಗಿ ತಮ್ಮ ಅನುಭವದಿಂದ ಉತ್ತಮ ಪದ್ಧತಿಯನ್ನು ನೆಲೆಗೊಳಿಸಿದುದು ಪ್ರತಿಯೊಂದು ವಿಭಾಗಕ್ಕೆನಿಯಮಿಸಲ್ಪಟ್ಟ ರಾಜಪ್ರತಿನಿಧಿಗೆ ಒಬ್ಬ ವಿದ್ವಾಂಸನಾದ ಮಂತ್ರಿಯನ್ನು ಒಪ್ಪಿಸಿದುದು. ಹರಿಹರ ರಾಯನಿಗೆ ವಿದ್ಯಾರಣ್ಯರೂ ಪೂರ್ವಭಾಗದಲ್ಲಿ ಕಂಪನಿಗೆ ಸಾಯಣಾಚಾರ್ಯರೂ, ಪಶ್ಚಿಮಭಾಗದಲ್ಲಿ ಮಾರಪ್ಪನಿಗೆ ಮಾಧವಾಮಾತ್ಯರೂ ಮಂತ್ರಿಗಳಾಗಿದ್ದರು.

(೨) ರಾಜರು, ಸಾಮಂತರು ಮಂತ್ರಿಗಳು, ದಂಡನಾಯಕರು ಪಾಳಯಗಾರರು ಇವರೇ ಮೊದಲಾದವರು ಸಾಹಿತ್ಯಕ್ಕೆ ಪ್ರೋತ್ಸಾಹನ ಕೊಟ್ಟುದು.

(೩) ಪರಕೀಯರ ಹಾವಳಿಯಿಂದ ಹಿಂದೂ ರಾಜ್ಯಗಳು ಒಂದೊಂದಾಗಿ ಹಾಳಾಗಲು, ನಿರಾಶ್ರಿತರಾದ ಪಂಡಿತರು ಎಲ್ಲ ದಿಕ್ಕುಗಳಿಂದಲೂ ಬಂದು ವಿದ್ಯಾನಗರದಲ್ಲಿ ಆಶ್ರಯಪಡೆದುಕೊಂಡಿದ್ದುದು.

(೪) ಬ್ರಾಹ್ಮಣ, ಲಿಂಗಾಯತ, ಜೈನ ಮೊದಲಾದ ಭೇದಭಾವವನ್ನೆಣಿಸದೆ ಸಾಮಾನ್ಯವಾದ ಪರಕೀಯ ದಾಳಿಯನ್ನು ಹಿಂದೂಡುವದಕ್ಕಾಗಿ ಎಲ್ಲರೂ ಏಕೀಕರಿಸಿದುದು, (ಒಂದಾದುದು)

(೫) ಅರಸರು ಅಗಣಿತ ದ್ರವ್ಯದಿಂದ ಕಟ್ಟಿಸಿದ ಪ್ರಸಿದ್ಧವಾದ ಮತ್ತು ಪ್ರಶಸ್ತವಾದ ದೇವಾಲಯಗಳನ್ನು ಶಾಲೆಗಳಿಗೂ ವಿಶ್ವವಿದ್ಯಾಲಯಗಳಿಗೂ ಉಪಯೋಗಿಸಿದುದು.

(೬) ವಿದ್ಯಾವಂತರು ತಮ್ಮ ಮನೆಗಳಲ್ಲಿಯೂ ಮಠಗಳಲ್ಲಿಯೂ, ವಿದ್ಯಾದಾನ, ಗ್ರಂಥಲೇಖನ ಮೊದಲಾದ ಕಾರ್ಯಗಳನ್ನು ಸಾಗಿಸಿದುದು.

ಪ್ರವಾಸಿಕರು ಕೆಳಗಣ ಅವತರಣಗಳನ್ನು ಓದಿದರೆ ಈ ಮಾತು ದೃಢಪಡುವದು.

(೧) ಗುಡಿಗಳನ್ನು ಯಾರವಶಕ್ಕೆ ಕೊಟ್ಟಿರುವರೋ ಅವರೆಲ್ಲರೂ ವಿದ್ವಾಂಸರಿದ್ದು ಮದ್ಯಮಾಂಸಗಳನ್ನು ಸೇವಿಸುವದಿಲ್ಲ.

ಪಟ್ಟಣದ ವಾಯುವ್ಯಕ್ಕೆ ಕೃಷ್ಣಪುರವೆಂಬ ಉಪನಗರವಿದ್ದು ಮುಖ್ಯ ಗುಡಿಗಳೆಲ್ಲ ಈ ಭಾಗಲ್ಲಿಯೇ ಇರುವವು. ಪಟ್ಟಣದ ಉತ್ಪನ್ನವೆಲ್ಲ ( ಸುಮಾರು ೧ಲಕ್ಷ ಸುವರ್ಣ ನಾಣ್ಯಗಳು ] ಈ ಗುಡಿಗೆ ಅರ್ಪಿಸಲ್ಪಟ್ಟಿದೆ.

[೩] ನಿಕೋಲೋಕೊಂಟಿ ಎಂಬ ಇಟಾಲಿಯನ್ ಪ್ರವಾಸಿಯು ೧೪೨೦-೨೧ ರಲ್ಲಿ ( ಪ್ರೌಢದೇವರಾಯನ ಕಾಲ) ವಿಜಯನಗರವನ್ನು ಕಂಡು " ಎಲ್ಲಿ ನೋಡಿದರೂ ಆಶ್ಚರ್ಯವನ್ನುಂಟುಮಾಡುವಂಥ ಗುಡಿಗಳಿದ್ದು ಅವುಗಳಲ್ಲಿ ಮುಖ್ಯ ಮುಖ್ಯವಾದ ಗುಡಿಗಳಲ್ಲಿ ಬ್ರಾಹ್ಮಣರಿಂದ ನಡೆಯಿಸಲ್ಪಟ್ಟ ಶಾಲೆಗಳೂ ವಿಶ್ವವಿದ್ಯಾಲಯಗಳೂ ಇರುತ್ತವೆ" ಎಂದು ಬರೆದಿರುತ್ತಾನೆ.

(೪) ಅಚ್ಯುತರಾಯನು ೧೫೩೪ ರಲ್ಲಿ ಆಕ್ಟೋಬರ ೧೨ ನೇ ತಾರೀಖಿನ ದಿವಸ ( ಬಹುಶಃ ನವರಾತ್ರ ಉತ್ಸವ) ವಿಠ್ಠಲಸ್ವಾಮಿಯ ಗುಡಿಗೆ ದರ್ಶನವನ್ನು ಕೊಟ್ಟನು. ನೆರೆದವರಿಗೆಲ್ಲ ಆಶ್ಚರ್ಯವಾಗುವಂತೆ ವೇದಪಾರಂಗತರಾದ ಬ್ರಾಹ್ಮಣರಿಗೆ ಮುದ್ರಾಸದ ಹತ್ತರ ಒಂದು ಹಳ್ಳಿಯನ್ನು ದಾನವಾಗಿ ಕೊಟ್ಟನು.

[ ವಿಜಯನಗರದಲ್ಲಿ ೧೧೧ ವಿರಕ್ತರಿದ್ದು (ವೀರಶೈವ) ಅವರಲ್ಲಿ ಅನೇಕರು ಗ್ರಂಥಗಳನ್ನು ಬರೆದಿರುತ್ತಾರೆ.— ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರು ವಿದ್ಯಾಪೀಠದ ಮುಖ್ಯಾಧಿಕಾರಿಯಾಗಿದ್ದರು. )

ವಿಜಯನಗರದ ರಾಜ್ಯದಲ್ಲಿ ನಾಲ್ಕು ಮನೆತನಗಳಾದವು. ೧ ಸಂಗಮ ವಂಶ, ೨ ಸಾಳ್ವ ವಂಶ, ೩ ತುಳುವ ವಂಶ, ೪ ಅರವೀಡು ವಂಶ, (ಕರ್ನಾಟಕ ವಂಶ-ವಿಜಯನಗರದ ಪತನವಾದನಂತರಪೇನಗುಂಡಿಯಲ್ಲಿ ) ಸಂಗಮವಂಶದ ಬುಕ್ಕರಾಯನ ಕಾಲದಲ್ಲ ಶ್ರೀವಿದ್ಯಾರಣ್ಯರೂ ಸಾಯಣಾಚಾರ್ಯರೂ ವೇದಭಾಷ್ಯಾದಿಗಳನ್ನು ಬರೆದು ಅದ್ವಿತೀಯ ಸಾಹಿತ್ಯವನ್ನು ಸಿದ್ಧಪಡಿಸಿದರು. ಸಂಸ್ಕೃತ ಹಾಗೂ ಕನ್ನಡ ಎರಡೂ ಭಾಷೆಯಸಾಹಿತ್ಯಕ್ಕೂ ಪ್ರೋತ್ಸಾಹನವನ್ನಿತ್ತರು. ಇನ್ನು ಕನ್ನಡ ವಾಙ್ಮಯದ ಬಗ್ಗೆ ಹೇಳುವದಾದರೆ ಸಂಗಮವಂಶದ ಪ್ರೌಢದೇವರಾಯನೂ, ತುಳುವ ವಂಶದ ಕೃಷ್ಣದೇವರಾಯನೂ ಅಗ್ರಗಣ್ಯರಾಗಿರುವರ . ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಗ್ರಂಥಕಾರರಿಗೆ ವಿಶೇಷವಾಗಿ ಪ್ರೋತ್ಸಾಹನವು ದೊರೆತದ್ದರಿಂದ ಅವನ ಕಾಲವು 'ವೀರಶೈವ ಗ್ರಂಥಗಳ ಸುಗ್ಗಿಯ ಕಾಲ' ವಾಗಿದೆ. ವೀರಶೈವ ಗ್ರಂಥಕಾರರು ಈ ಅರಸನನ್ನು ವಿಶೇಷವಾಗಿ ಹೊಗಳಿರುವರು. ಕೃಷ್ಣದೇವರಾಯನು 'ಕನ್ನಡ ರಾಯ' 'ಕನ್ನಡ ರಾಜ್ಯ ರಮಾರಮಣ' ಎನಿಸಿಕೊಂಡಿರುವನು. ಈತನನ್ನು ಕುರಿತು ಯುರೋಪದ ಪ್ರವಾಸಿಕರು 'ಪರಿಪೂರ್ಣರಾದ' [ Perfect King ] ಎಂದು ಉಲ್ಲೇಖಿಸಿರುವರು. ಈತನ ಜೀವವನ್ನು ರಕ್ಷಿಸಿ ಈತನಿಗೆ ಪಟ್ಟವನ್ನು ದೊರೆಕಿಸಿ ಕೊಡುವ ಕಾರ್ಯವನ್ನು ಮಾಡಿದ ತಿಮ್ಮರಸ ಮಂತ್ರಿಯು ಅಚ್ಚ ಕನ್ನಡಿಗನು. ಈ ತಿಮ್ಮರಸನಿಗೆ ಕೃಷ್ಣರಾಯನು 'ಅಪ್ಪಾಜಿ' ಎಂದು ಆದರದಿಂದ ಕರೆಯುತ್ತಿದ್ದನು. ೧೬ ಆನೆಗಳನ್ನು ಮೂವರಲ್ಲಿ ಹಂಚಿಕೊಟ್ಟ ಅಪ್ಪಾಜಿಯು ಈತನೇ ಆಗಿರಬಹುದು. ಈ ಮಂತ್ರಿಯ ಅಳಿಯನಾದ ನಂದಿಯಾಳ ಅಪ್ಪಯ್ಯನು ತೆಲಗು ಭಾಷೆಯವನು. ತನ್ನ ಅಳಿಯನ ಮುರವತ್ತಿನಿಂದ ತಿಮ್ಮರಸನು ಕೃಷ್ಣದೇವರಾಯನ ಮನವೊಲಿಸಿ ತೆಲಗು ಕವಿಗಳಿಗೆ ಆಶ್ರಯಕೊಡಿಸಿದನು. ಈ ಕಾರಣದಿಂದ ಕೃಷ್ಣದೇವರಾಯನ ಕಾಲದಲ್ಲಿ ತೆಲಗು ಸಮಾಪುಷ್ಟವಾಗಿದೆ. ಕೃಷ್ಣದೇವರಾಯನ ಮಗನಿಗೆ ವಿಷ ಪ್ರಯೋಗ ಮಾಡಿಸಿದ ಕಾರ್ಯದಲ್ಲಿ ತಿಮ್ಮರಸನ ಅಂಗವಿತ್ತೆಂದು ತಿಳಿಯಲು ಅರಸನು ಅವನ

ಕಣ್ಣುಗಳನ್ನು ಕೀಳಿಸಿದನು. ಅಂದಿನಿಂದ ತೆಲಗು ಕವಿಗಳ ಪ್ರಭಾವವೂ ಕಡಿಮೆಯಾಯಿತು. ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಾಂಕಿತವಾದ ಈ ಸಾಮ್ರಾಜ್ಯದಲ್ಲಿ ಕನ್ನಡದ ಜೊತೆಗೆ ತೆಲಗು ತಮಿಳುಗಳಿಗೂ ತುಸು ಉತ್ತೇಜನವು ದೊರೆತಿರುವದು ಸ್ವಾಭಾವಿಕವು. ತಿರುಮಲಾರ್ಯನು ತನ್ನ ಚಿಕ್ಕದೇವರಾಯನವಂಶಾವಳಿಯಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ "ದ್ರವಿಡಾಂಧ್ರ ಕರ್ನಾಟಕಸಾಮ್ರಾಜ್ಯ" ಎಂದಿರುವನು. "ದ್ರವಿಡ ಆಂಧ್ರ ಪ್ರದೇಶಗಳನ್ನು ಒಳಕೊಂಡ ಕರ್ನಾಟಕ ಸಾಮ್ರಾಜ್ಯವೆಂದು ಇದರ ಅರ್ಥವು ಸ್ಪಷ್ಟವದೆ. ಆದ್ದರಿಂದ ವಿಜಯನಗರದ ಸಾಮ್ರಾಜ್ಯದಲ್ಲಿ ಸಾಹಿತ್ಯದ ಬೆಳವಣಿಗೆಯ ಬಗ್ಗೆ ಬರೆಯುವದಾದರ ಸಂಸ್ಕೃತ, ಕನ್ನಡ, ತೆಲಗು, ತಮಿಳು ಹೀಗೆ ನಾಲ್ಕ ಭಾಷೆಯ ಕಡೆಗೆ ನೋಡಬೇಕಾಗುವದು. ಯಾಕಂದರೆ ಆಯಾ ಸಾಹಿತ್ಯದಲ್ಲಿ ವಿಜಯನಗರಕ್ಕೆ ಸಂಬಂಧಿಸಿದ, ಕೆಲವು ಸಂಗತಿಗಳು ತಿಳಿದುಬರುತ್ತವೆ. ಪಾಲ್ಕುರಿಕೆಯ ಸೋಮೇಶ್ವರನು ಆಂಧ್ರ ಕರ್ನಾಟಕ ಎರಡೂ ಭಾಷೆಗಳಲ್ಲಿಯೂ ಗ್ರಂಥಗಳನ್ನು ಬರೆದಿರುವನು. ಚಾಮರಸನ "ಪ್ರಭುಲಿಂಗಲೀಲೆಯು" ತೆಲಗು. ತಮಿಳಿನಲ್ಲಿ ಭಾಷಾಂತರಿಸಲ್ಪಟ್ಟಿದೆ. ಗುಬ್ಬಿಯ ಮಲ್ಲಣಾರ್ಯನು ಸತ್ಯೇಂದ್ರ ಚೋಳನ ಕಥೆಯನ್ನು ತಮಿಳಿನಿಂದ ಕನ್ನಡಕ್ಕೆ ಪರಿವರ್ತಿಸಿ "ಭಾವಚಿಂತಾರತ್ನ"ವನ್ನು ಬರೆದಂತೆ ಹೇಳುತ್ತಾನೆ. ಗುರು ಮೂರ್ತಿ ಶಂಕರ ಶತಕವನ್ನು ಬರೆದ ಚಂದ್ರಶೇಖರನು ಅಷ್ಟ ಭಾಷಾ ವಿಶಾರದನಿದ್ದನು. ಶಬ್ದಾನುಶಾಸನವೆಂಬ ವ್ಯಾಕರಣವನ್ನು ಬರೆದ ಭಟ್ಟಾಕಳಂಕನು ಷಡ್ಭಾಷಾ ಪ್ರವೀಣನು. ಹೀಗೆಯೇ ಚತುರ್ಭಾಷಾ ಪಂಡಿತರೂ ಕೆಲವರಿದ್ದಾರೆ. ಈ ಪ್ರಕಾರ ಪರಸ್ಪರ ವಿನಿಮಯ ಕಾರ್ಯದಿಂದಲೂ ಕೆಲಕೆಲವು ಪ್ರಸಂಗಗಳಲ್ಲಿ ನಡೆದ ಸಾತ್ವಿಕ ಸ್ಪರ್ಧೆಯಿಂದಲೂ ಸಾಹಿತ್ಯಕ್ಕೆ ಒಂದು ಬಗೆಯ ಸಹಾಯ.ವಾಗಿದೆಯೆಂದು ತಿಳಿದುಬರುವದು.

೧೩೩೬ ರಿಂದ ೧೬೬೪ ರ ರವರೆಗೆ ಸುಮಾರು ೩೦೦ ವರ್ಷಗಳಲ್ಲಿ ಕನ್ನಡ ಸಾಹಿತ್ಯವು ಉನ್ನತ ಶಿಖರಕ್ಕೆ ಮುಟ್ಟಿರುತ್ತದೆ. ಚಾಲುಕ್ಯರು ರಾಷ್ಟ್ರಕೂಟರು, ಹೊಯ್ಸಳರು, ಯಾದವರು ಇವರೇ ಮೊದಲಾದ ಕನ್ನಡ ರಾಜರಿಂದ ಪೋಷಿಸಲ್ಪಟ್ಟ ಕನ್ನಡಸಾಹಿತ್ಯವು ವಿಜಯನಗರದ ರಾಯರ ಕಾಲದಲ್ಲಿ ಪರಮಾವಧಿ ಘನತೆಯನ್ನು ಪಡೆದಿದೆ. ಈ ಸಾಮ್ರಾಜ್ಯದ ಕನ್ನಡ ಸಾಹಿತ್ಯದಲ್ಲಿ ಮುಖ್ಯವಾಗಿ ಐದು ಭಾಗಗಳನ್ನು ಮಾಡಬಹುದು.

೧ ಪ್ರತ್ಯಕ್ಷವಾಗಿ ವಿಜಯನಗರದ ಅರಸರ ಪೋಷಣೆಗೆ ಒಳಗಾದ ಕವಿಗಳೂ ಗ್ರಂಥಕಾರರೂ.
೨ ಸಾಮಂತರ, ಮಂತ್ರಿಗಳ, ದಂಡನಾಯಕರ ಪೋಷಣೆಗೆ ಒಳಗಾದವರು
೩ ಸ್ವತಂತ್ರವಾಗಿ ಗ್ರಂಥಗಳನ್ನು ಬರೆದವರು
೪ ದಾಸಕೂಟದ ವಾಙ್ಮಯ [ ವೈಶಿಷ್ಟ್ಯ ]
೫ ಶಿಲಾ ಶಾಸನಗಳು.

೧೫೬೫ ರಲ್ಲಾದ ರಾಕ್ಷಸ ತಂಗಡಿಯ ಕಾಳಗದಿಂದ ವಿಜಯನಗರವು ಸಂಪೂರ್ಣ ಹಾಳಾಗಿ ಹೋಗಲು, ಅದರ ಕೂಡ ಎಷ್ಟೋ ಉದ್ಗ್ರಂಥಗಳೂ ಹಾಳಾಗಿ ಹೋಗಿರಬಹುದೆಂದು ಊಹಿಸಬಹುದಾಗಿದೆ. ಇನ್ನು ಅಳಿದುಳಿದ ಕೆಲವು ಗ್ರಂಥಗಳು ಮನೆಯಲ್ಲಿಯೋ ಮಠದಲ್ಲಿಯೋ ಮೂಲೆಗುಂಪಾಗಿ ಬಿದ್ದು ಸೂರ್ಯ ಪ್ರಕಾಶವನ್ನು ಕಂಡಿಲ್ಲ. ಕನ್ನಡ ಕವಿ ಚರಿತೆಕಾರರು ಕವಿಚರಿತೆಯ ಪುಸ್ತಕಗಳನ್ನು ಪ್ರಸಿದ್ಧ ಮಾಡಿ ಕನ್ನಡಿಗರ ಮೇಲೆ ಬಹು ದೊಡ್ಡ ಉಪಕಾರವನ್ನು ಮಾಡಿರುವರೆಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳಲೇಬೇಕು. "ಶಾಸನ ಪದ್ಯ ಮಂಜರಿ" ಯನ್ನು ನೋಡಿದರೆ ಶಿಲಾಶಾಸನಗಳಲ್ಲಿ ಅಡಕ ವಾಗಿರುವ ಸಾಹಿತ್ಯವನ್ನು ಗ್ರಂಥರೂಪಕ್ಕೆ ತಂದು ಕನ್ನಡಿಗರ ಮನೆ ಮನೆಗೂ ಮುಟ್ಟುವಂತೆ ಮಾಡುವ ಉಪಕ್ರಮವೂ ಸಾಗಿದ್ದು ಕಂಡುಬರುತ್ತಿದೆ. ಇರಲಿ. ವಿಜಯನಗರದ ಸಾಹಿತ್ಯವನ್ನು ಸಾಮಾನ್ಯವಾಗಿ ಅವಲೋಕಿಸಿದರೂ ಅದರಲ್ಲಿ ಭಾರತ, ರಾಮಾಯಣ, ಭಾಗವತದಂತಹ ಉದ್ಗ್ರಂಥಗಳೂ, ವೀರಶೈವರ ಮತಗ್ರಂಥಗಳೂ, ಜೈನರ ಪುರಾಣ, ಚರಿತ್ರೆಗಳೂ ಕಂಡುಬರುವವು. ಅಲ್ಲದೆ ವ್ಯಾಕರಣ, ಛಂದಸ್ಸು ಅಲಂಕಾರ, ನಿಘಂಟುಗಳೂ ಮತ್ತು ಇತರ ಗ್ರಂಥಗಳೂ ತಲೆದೋರುತ್ತವೆ. ದಾಸಕೂಟದ ವಾಙ್ಮಯದಿಂದ ಪುರಂದರದಾಸ, ಕನಕದಾಸರ ಪದಗಳು ಹಳ್ಳಿಗರ ಮನೆಮನೆಗೂ ಮುಟ್ಟಿ ಜನ ಸಾಮಾನ್ಯರ ಚಿತ್ತವನ್ನು ಸೆಳೆದಿರುತ್ತವೆ. ಶಾಸನದಲ್ಲಿ ಹುದುಗಿಕೊಂಡಿದ್ದ ಸಾಹಿತ್ಯವು ಶೋಧಕರನ್ನು ಇನ್ನೂ ತನ್ನ ಕಡೆಗೆ ಎಳೆಯುತ್ತಿದೆ. ಹೀಗೆ ಪಂಡಿತರಿಗೂ ಪಾಮರರಿಗೂ ಮೆಚ್ಚಿಕೆಯಾಗುವಂತೆ ಆ ಕಾಲದ ವಾಙ್ಮಯವು ಸಿದ್ಧವಾಗಿದೆ.

ಇನ್ನು ಆ ಕಾಲದ ಮುಖ್ಯ ಮುಖ್ಯ ಕವಿಗಳೂ ಗ್ರಂಥಕಾರರೂ ತಮ್ಮ ಬಗ್ಗೆ ಹೇಳಿಕೊಂಡಿರುವ ಮಾತುಗಳನ್ನೂ ನೋಡಿದರೆ ಆ ಕಾಲದ ವಾಙ್ಮಯ ಭಕ್ತರ ಯೋಗ್ಯತೆಯು ತಿಳಿದು ಬರುವದು. ಮಧುರ ಕವಿಯು '' ತಾನು ಹೆಸರಿಗೆ ಮಾತ್ರ ಮಧುರನಾಗಿರದೆ ತನ್ನ ವಾಣಿಯೂ ಮಧುರವಾಗಿದೆ '' ಎಂದು ಹೇಳಿರುವನು. ಅಲ್ಲದೆ ಇವನಿಗೆ ' ಕವಿರಾಜಕಲಾವಿಲಾಸ,' 'ಸರಸಕವಿರಸಾಲವಸಂತ' ನೆಂಬ ಬಿರುದುಗಳಿದ್ದವು. ಕುಮಾರವ್ಯಾಸನು '' ಸುಧಾಮಧುರ ಕರ್ನಾಟಕಭಾಷಾಭಾಮಿನೀಪತಿ'' ಎನಿಸಿಕೊಂಡಿರುತ್ತಾನೆ. ಈತನು ಕವಿತಾರಚನೆಗಾಗಿ ಹಲಗೆಯನ್ನೂ ಹಿಡಿಯಲಿಲ್ಲ. ಒಮ್ಮೆ ಇಟ್ಟ ಪದವನ್ನು ಅಳಿಸಲಿಲ್ಲ ಎಂದು ಹೇಳಿಕೊಂಡಿರುವನು. ಕುಮಾರ ವಾಲ್ಮೀಕಿಯು ಕೂಡ ಇದೇ ರೀತಿ ಹೇಳಿರುತ್ತಾನೆ. ಚಾಮರಸನು ದಿನವೊಂದಕ್ಕೆ ೧೦೧ ಕವಿತೆಗಳನ್ನು ರಚಿಸಿ ತನ್ನ ಪ್ರಭುಲಿಂಗಲೀಲೆಯನ್ನು ಕೇವಲ ೧೧ ದಿನಗಳಲ್ಲಿ ಮುಗಿಸಿದನೆಂದು ವೀರಶೈವ ಗ್ರಂಥಗಳಿಂದ ತಿಳಿದು ಬರುತ್ತದೆ. ಕೃಷ್ಣರಾಜನ ಕಾಲದಲ್ಲಿ ಭಾರತವನ್ನು ಬರೆದ ತಿಮ್ಮಣ್ಣಕವಿಗೆ '' ಕವಿಕುಲಸಾರ್ವಭೌಮ '' ಎಂಬ ಬಿರುದಿತ್ತು. ಜೈಮಿನೀ ಭಾರತವನ್ನು ಬರೆದ ಲಕ್ಷ್ಮೀಶ ಕವಿಗೆ '' ಕರ್ನಾಟಕ ಕವಿ ಚೂತ ವನಚೈತ್ರ '' ಎಂಬ ಬಿರುದಿತ್ತು. ವಿಜಯನಗರದ ಹಿರಿಯ ಮಠದಲ್ಲಿ ಸಿದ್ಧೇಶ್ವರ ಸ್ವಾಮಿಯ ಶಿಷ್ಯನಾಗಿ ಚೆನ್ನಬಸವ ಪುರಾಣವನ್ನು ಬರೆದ ವಿರೂಪಾಕ್ಷ ಪಂಡಿತನು " ಸರಸ ಕರ್ನಾಟಾದಿ ಭಾಷಾವಿಶಾರದ'' "ಪರಕವಿಯ ನಾಲಗೆ ಕಿವಿ ಮನಂಗಳಂ ಸೆಳೆವವಂ'' ಎನಿಸಿಕೊಂಡಿರುತ್ತಾನೆ. ಸಾಳ್ವಕವಿಗೆ "ಕರ್ನಾಟಕದ ಲಕ್ಷಣದೋಜ '' ಎಂಬ ಬಿರುದಿತ್ತು. ಅಭಿನವವಾದಿ ವಿದ್ಯಾನಂದರ ಯೋಗ್ಯತೆಯನ್ನು ಅವರ ಈ ಹೆಸರಿನಿಂದಲೇ ತಿಳಿಯಬಹುದು. ಶಬ್ದಾನುಶಾಸನವನ್ನು ಬರೆದ ಭಟ್ಟಾಕಳಂಕನು " ಕರ್ನಾಟಕ ಸಂಸ್ಕೃತೋಭಯವಿಧಂ ಶಬ್ದಾಬ್ಧಿ ಮುತ್ತೀರ್ಣವಾನ್ '' ಎಂದು ಹೇಳಿಕೊಂಡಿದ್ದಾನೆ. ಕಾಲಜ್ಞಾನ (ಭವಿಷ್ಯ)ವನ್ನು ಬರೆದ ಎಮ್ಮೆಬಸವನೂ, ಷಟ್‌ಸ್ಥಲ ಜ್ಞಾನ ಸಾರಾಮೃತವನ್ನು ಬರೆದ ತೋಂಟದ ಸಿದ್ಧೇಶ್ವರನೂ ತಪಸ್ವಿಗಳಾಗಿದ್ದರೆಂಬದನ್ನು ಮರೆಯಲಿಕ್ಕಾಗದು.

ಕವಿಚರಿತೆಯ ಪುಸ್ತಕಗಳನ್ನೂ, ಬೇರೆ ಗ್ರಂಥಗಳನ್ನೂ ಮಾಸಿಕ ಪುಸ್ತಕಗಳಲ್ಲಿ ಪ್ರಕಟವಾದ ವಿದ್ವಜ್ಜನರ ಲೇಖಗಳನ್ನೂ ನೋಡಿ, ನನಗೆ ತಿಳಿದ ಮಟ್ಟಿಗೆ ವಿಷಯ ವಿವೇಚನೆ ಮಾಡಿರುತ್ತೇನೆ. ಆಯಾ ಮಹನೀಯರಿಗೆ ಕೃತಜ್ಞನಾಗಿರುತ್ತೇನೆ. ತಮಿಳ ಗ್ರಂಥಕಾರರ ಬಗ್ಗೆ ನನಗೆ ಏನೂ ಬರೆಯಲಿಕ್ಕೆ ಸಾಧ್ಯವಾಗಲಿಲ್ಲ ಬೇರೊಬ್ಬರು ಈ ಕಾರ್ಯವನ್ನು ಮಾಡಬಹುದೆಂದು ಆಶಿಸುತ್ತೇನೆ. ಸಾಹಿತ್ಯಕ್ಕೆ ಜಾತಿ ಭೇದವಿಲ್ಲ. ಜಾತಿಯನ್ನು ನೋಡಿ ಸಾಹಿತ್ಯವನ್ನು ಪರೀಕ್ಷಿಸುವವನು ನಿಜವಾಗಿ ಸಾಹಿತಿಯೇ ಅಲ್ಲ. ಅದುದರಿಂದ ಸಾಹಿತ್ಯ ವಿಷಯದಲ್ಲಿ ಎಲ್ಲ ಜಾತಿಯ ಹಾಗು ಪಂಗಡದ ಕನ್ನಡಿಗರು ಒಂದುಗೂಡಿ ನಮ್ಮ ಪೂರ್ವಿಕರು ನಮಗಾಗಿಟ್ಟ ಸಾಹಿತ್ಯನಿಧಿಯನ್ನು ಇತೋಪ್ಯತಿಶಯವಾಗಿ ಬೆಳೆಯಿಸಿ ಕೀರ್ತಿಶೇಷರಾಗಲೆಂದೂ, ಕನ್ನಡಿಗರಲ್ಲಿ ಈ ಸದ್ಭಾವನೆಯನ್ನು ಯಾವ ಭುವನೇಶ್ವರಿಯು ಶ್ರೀವಿದ್ಯಾರಣ್ಯರಕಾಲದಲ್ಲಿ ಉಂಟುಮಾಡಿದಳೋ ಅವಳೇ ಈಗಾದರೂ ಅದೇ ಭಾವನೆಯನ್ನು ಕನ್ನಡಿಗರೆಲ್ಲರಲ್ಲೂ ಉಂಟುಮಾಡಲೆಂದೂ ಹಾರೈಸುತ್ತೇನೆ.

---

## ಬುಕ್ಕರಾಯನ ಪಟ್ಟಾಭಿಷೇಕಕಾಲದಲ್ಲಿ ಶ್ರೀವಿದ್ಯಾರಣ್ಯರು ಮಾಡಿದ ಆಶೀರ್ವಾದ.

ಸತ್ಯೈಕವ್ರತ ಪಾಲಕೋದ್ವಿಗಣಧೀ ಸ್ತ್ರ್ಯರ್ಥೀಚತುರ್ವೇದಿತಾ ।
ಪಂಚಸ್ಕಂಧಮಯೀಷಡನ್ವಯದ್ರಧಸ್ಸಪ್ತಾಂಗ ಸರ್ವಂಸಹಃ ॥
ಅಷ್ಟವ್ಯಕ್ತಿಕಳಾಧರೋನವನಿಧಿಃ ಪುಷ್ಯದ್ದಶ ಪ್ರತ್ಯಯಃ ।
ಸ್ಮಾರ್ತೋರ್ಚ್ಛಾಶ್ರಯಧುರಂಧರೋ ವಿಜಯತಾಂ ಶ್ರೀ ಬುಕ್ಕಣಕ್ಷ್ಮಾಪತಿಃ॥

# ದೊಡ್ಡವರು.

ಲೇಖಕರು:- ಶ್ರೀ ಅಂಬಿಕಾತನಯ ದತ್ತರು.

ದೊಡ್ಡವರದೆಲ್ಲವೂ ದೊಡ್ಡದೆಂಬುವ ಮಾತು
ಸುಳ್ಳಲ್ಲ! ಶ್ರವಣಬೆಳಗುಳದಲ್ಲಿ ಒಂದು ಸಾ
ವಿರವರುಷ ನಿಂತ ಗೊಮ್ಮಟ! ವಿಜಯನಗರದ
ಲ್ಲಿರುವ ಸಾಸಿವೆ ಗಣಪ! ವಿಜಯಪುರದೊಳಗೀಗು
ಆಡಿದ್ದನಾಡಾಡಿ ಏಳೇಳು ಸಲನಲಿವಗೋಳ
ಗುಮ್ಮಟ! ಚೆನ್ನಕೇಶವನ ಕಣ್ಣೆದಿರು ಕುಣಿಕುಣಿವ
ನಲ್ಲರೂಹಿನ ಕಲ್ಲು! ವಿಜಯವಿಠ್ಠಲನ ಪಾ
ಡುವ ಕಂಬ! ಹಳ್ಳಿವಳ್ಳಿಯ ಶಿಲಾಶಾಸನವು!
ಕನ್ನಡರ ಕೈವಾಡದಿಂದ್ರ ಜಾಲಕೆ ಕಲ್ಲು
ಕುಸುರಿತು! ಶಿಲಾಧ್ಯಾನದಿಂದ ಧೇನಿಸುವವರ
ಜೀವನ್ಮುಕ್ತೇಶನ ಸಮಾಧಿಯೇ ಕವಿದುದೋ?
ಬರಬಕ್ಕುತ ಕಲ್ಲಾದುದೋ? ಚಕ್ರವರ್ತಿಗಳ
ಸಿಂಹ ಪೀಠವು, ಜಗದ್ಗುರು ಪೀಠ, ಕಲ್ನಾಟಿ
ಸಿದ ವೀರರಾಡಿದಾಡುಬೊಲವು, ಮಾಸತಿಯ
ನಿಶದಿಗೆಯು ಭೂಮಿ, ಪಾಳ್, ಪಡು, ಬರಡು, ಜಾಗೃತಿಯು
ಘನ, ಕೃತಿಯು ಘನವು, ವಿಸ್ಮೃತಿಯು ಘನ! ದೊಡ್ಡವರು!

---

## ದಾವಣಗೇರಿಯ ಒಂದು ಶಾಸನ ಪದ್ಯ.

ಆಗಿನ ಕಾಲದ ಮಾದರಿಯು ಶಾಸನಪದ್ಯವಿದು.

ಧರಣೋಜನು ಬರೆದುದು

ವೀರಭಗೀರಥಂ ಗಗನಗಂಗೆಯ ನುರ್ವಿಗೆ ತಂದನಾತದೇಂ ॥
ಪೌರುಷ ಮಲ್ತು ಕೇಳ್ ಗಗನದಿಂ ಕೆಳಗಿದುರ್ದ ಹರಿದ್ರಯಿತ್ತಲುಂ ।
ಬಾರದಿರಲ್ಕೆ ಕಟ್ಟಿ ಪಿಡಿದಟ್ಟಿ ಹರಿಶ ಪುರಕ್ಕೆ ಕೊಂಡ ಬಂ ।
ದೀರಸೆಯೊಳ್ ಬೆಸರ್ವಡೆದ ಬಳ್ಳಚಮೂಪನಿದೇಂ ಸಭಾಗ್ಯನೋ ||

# ಹಂಪೆಯ ಪೆಂಪು.

ಬರೆದವರು:—ಶ್ರೀ. ಬಿ. ವ್ಹಿ. ರಮಣನ್ ಸೀನಿಯರ ಡೆಪ್ಯುಟಿ ಇನ್ಸ್ಪೆಕ್ಟರ ಪುತ್ರಿ

ಹಾಳು ಹಂಪೆಯ ನೋಡು ।
ಕೇಳು ಕೊಂಪೆಯ ಜೋಡು ॥
ಹಾಳು ಕಾಲನ ಸೇಡು ।
ಹಾಳಾದ ಪುರದೋಡು ॥
ಮುನ್ನ ಹೊನ್ನಿನ ಬೀಡು ।
ಕನ್ನಡಿಯ ತಾಯ್ನಾಡು ॥
ಮನ್ನಣೆಯ ಮಲ್ನಾಡು ।
ಬಲ್ಲಾಳ ಬಲ್ನಾಡು ॥
ಗಂಡುವಾಲಿಯ ನಗರಿ ।
ಪುಂಡ ಅಂಗದ ನೆಗರಿ ॥
ಮೊಂಡರಾವಣ ನೊಡರಿ ।
ಬುಗರಿಯಾಡಿದ ಅಗರಿ ॥
ವಿಜಯಾರಣ್ಯನು ತಾನು ।
ರಜತ ಸುರಿಸಿದ ಸಾನು ॥
ಧ್ವಜವನೂರಿದ ರೇಣು ।
ವಿಜಯ ಮೆರಸಿದ ಮೇಣು ॥
ಹುಕ್ಕ-ಬುಕ್ಕರು ತಾವು ।
ರಕುತ ಸುರಿಸಿದ ಠಾವು ॥
ಉಕ್ಕಿಮದಿಸಿದ ಸೊಕ್ಕ ।
ಮುಕ್ಕಿಮುದರಿದ ರಾವು ॥
ಕಕ್ಕ ಕೃಷ್ಣನ ಡಾವು ।
ಮುಕ್ಕಿಯವ್ವನ ಮೇವು ॥
ಉಕ್ಕ್ಯ ಬೀಗಿದ ಠಾವು ।
ಕೀರ್ತಿ ವೆಣ್ಣನ ಕೇವು ॥
ತುಳುವ ಸಾಲ್ವರ ಬಲುಮೆ ।
ಬಳಿಕ ನಾಯಕ ಕಲಿಮೆ ॥
ಹೊಳೆದು ಮಿರುಗಿಡ ಕುಲಿಮೆ ।
ಉರಿದು ತೋರಿದ ಚಲುಮೆ ॥

ಪಂಪಾಪತಿಯ ಪೆಂಪು ।
ಇಂಪು ಗಾನದ ಸೊಂಪು ॥
ತಂಪು ಗಂಧದ ಕಂಪು ।
ಹೊಂಚಿ ಹೊರಳಿದ ಗುಂಪು ॥
ಲಕುಮಿ ಸರಸತಿ ಕೂಡಿ ।
ಸುಕದುಯ್ಯಾಲೆಯಾಡಿ ॥
ಸೊಗದ ಗೀತವ ಪಾಡಿ ।
ಜಗವ ಮೆರಸಿದ ಹಾಡಿ ॥
ಸರಳ ಪ್ರೇಮದ ಸುಧೆಯು ।
ತರುಳ ಚೆಲುವಿನ ದಧಿಯು ॥
ನೆರೆದು ಉರುಳಿದ ತೊರೆಯು ।
ಮೊರೆದು ಕನಲಿದ ಕರೆಯು ॥
ತುಂಗಭದ್ರೆಯ ರೊಲವು ।
ತುಂಗ ಕುಚೆಯರ ಗೆಲವು ॥
ಭೃಂಗ ದನಿಯನ ಗೆಲವು ।
ತುಂಬಿ ಒಸರಿದ ನೆಲವು ॥
ವಿನುತ ತೋಷದ ಲಹರಿ ।
ಇಸಿದು ಗಾನವ ಸೇರಿ ॥
ಮನದ ಮೋಹವ ಬೀರಿ ।
ಹರಿದು ಉರುಬಿದ ನಗರಿ ॥
ಜೀವಗಡಣವದಿಡಿದು ।
ಭಾವ ಬಗೆಯನು ಮರೆದು ॥
ಜೀವ ಸಾರವ ಕುಡಿದು ।
ದುಡಿದು ಅಡಗಿದ ಊರು ॥
ಸುದತಿ ಮಣಿಯರ ವಿಮಲ ।
ವದನ ಕಾಂತಿಯು ಬೆಳಗಿ ॥
ಎದೆಯ ತಿಮಿರವ ಕಳೆದು ।
ಹೊಳೆದು ಜಗಿಸಿಹುದಿಲ್ಲಿ ॥

# ಶಾಸ್ತ್ರಿ ಮಹಿಷಿ ಇವರ ಅನುಭವಸಿದ್ಧ ಔಷಧಿಗಳು.

## ಅಶೋಕಾ ಕಾರ್ಡಿಯಲ್.

**ಇದು ಸ್ತ್ರೀಯರ ಮುಟ್ಟಿನ ಹಾಗು ಗರ್ಭಾಶಯದ ಎಲ್ಲ ವಿಕಾರಗಳಿಗೆ ಸಿದ್ಧೌಷಧಿಯು.**

---

## ವ್ಹಾಯುಬರನಮ್ ಕಂಪೌಂಡ.

ಇದರ ಯೋಗದಿಂದ ಬಂಜೆತನದ ದೋಷಗಳು ನಾಶವಾಗಿ ಗರ್ಭಧಾರಣೆಯಾಗುವದು ಗರ್ಭವತಿಯರು ೩ ನೆಯ ತಿಂಗಳಿನಿಂದ ಇದನ್ನು ಸಾಧಿಸಿದಲ್ಲಿ ಗರ್ಭವು ಬಲಪಡುವದು ಅಲ್ಲದೆ ಹಳೆಯುಳಿಯುವ ಭೀತಿಯು ಇಲ್ಲದಂತಾಗುವದು. ಸುಖಪ್ರಸೂತಿಯಾಗುವದು.

## ಅಶ್ವಗಂಧಿ ಟಾನಿಕ್

ಇದು ಅದ್ವಿತೀಯವಾದ ಶಕ್ತಿವರ್ಧಕ ಹಾಗು ಕಾಮೋತ್ತೇಜಕ ಔಷಧಿಯು. ಇದರ ಸೇವನೆಯಿಂದ ಶರೀರವು ಬಲಗಟ್ಟು ಸ್ವಪ್ನಾವಸ್ಥೆ, ಇಂದ್ರಿಯ ಶಿಥಿಲತೆ, ನಪುಂಸಕತ್ವ ಮೊದಲಾದವುಗಳು ಸ್ವಲ್ಪೇ ಅವಧಿಯಲ್ಲಿ ಅತಿ ಆಶ್ಚರ್ಯವಾಗುವಂತೆ ಗುಣವಾಗುವವು

## ಸಾಯುರಸ್ ವಾಸಕ.

ಇದು ದಮ್ಮಿನ ಬೇನೆಗೆ ಸಿದ್ಧೌಷಧಿಯಾಗಿರುವದು ಇದನ್ನು ಕ್ರಮದಿಂದ ಕೆಲವು ದಿವಸಗಳ ವರೆಗೆ ಸೇವಿಸಿದರೆ ಕಾಸ ಶ್ವಾಸದಿಂದುಂಟಾದ ಪೀಡಸೆಯು ಕಡಿಮೆಯಾಗುವದು. ಕಫವು ನೀರಾಗಿ ತ್ರಾಸ ಕೊಡದೆ ಹೊರಬಿದ್ದು ಹೋಗುವದು. ಗಂಟಲಲ್ಲಾಗುವ "ಸೊಂಯಿ" "ಸೊಂಯಿ" ಸಪ್ಪಳವು ನಿಲ್ಲುವದು

**ಸೂಚನೆ:--ಈ ಔಷಧಗಳ ಹಾಗು ಇನ್ನೂ ಕೆಲವು ಔಷಧಗಳ ಸಂಪೂರ್ಣ ಮಾಹಿತಿಗಾಗಿ ಇಂದೇ ನಮ್ಮ ಕ್ಯಾಟಲಾಗಿಗೆ ಬರೆಯಿರಿ. ಇವಲ್ಲದೆ ಅತಿಶುದ್ಧವಾದ ಹೋಮಿಯೋ ಪ್ಯಾಥಿಕ್ ಔಷಧಿಗಳು ಬೇಕಾದ ಪೊಟೆನ್ಸಿಯಲ್ಲಿ ದೊರೆಯುವವು**

| ನಮ್ಮ ಕಾನಡಾ ಏಜಂಟರು | ಮ್ಯಾನೇಜರ |
|---|---|
| ಶಿವರಾಮ ಗಣೇಶ ಶಾಸ್ತ್ರಿ, ಕುಮುಟಾ | ಸ್ವಾಸ್ಥ್ಯ ನಿಲಯ ಫಾರ್ಮಸಿ ಧಾರವಾಡ |

ಶಿಲ್ಪರಾಜನ ಸಿಂಗ ।
ನೃತ್ಯಗೀತದ ರಂಗ ॥
ಮುತ್ತುಮಾಣಿಕದಂಗ ।
ವಂದು ಕಲೆಗಳ ಗಂಗ ॥
ದೇವ ದೇಗುಲ ತಾನ ।
ಸೇವ ಸೋಜಿಗ ರಾಣ ।
ಮೋಹನೇಹದ ಬಾನ ।
ಏದಂದು ಸುಖದ ಮಾನ ॥
ಇನ್ನು ಮಾತಂಗಯತಿ ।
ಉನ್ನತಾದ್ರಿಯ ಹತ್ತಿ ॥
ಮುನ್ನ ತಪಸನು ಎತ್ತಿ ।
ಪಡೆದನಿಲ್ಲಿಯೆ ಮುಕ್ತಿ ।
ಕನ್ನಡಿಗ ನೀನೋಡು ।
ಮುನ್ನ ಉನ್ನತ ನಾಡು ।
ಕನ್ನಡೆಯ ಸಿರಿ ಬೀಡು ।
ನಿನ್ನ ವೀರ್ಯದ ಕೋಡು ॥
ರಜಕ ಪೇಯಸ ಬಂದು ।
ವಿಜಯ ವೈಭವ ಕಂದು ।
ಮುಜುರೆ ಮಾಡಲಿಂದು ।
ಪಿಥದಿ ಹೊಗಳಿದ ಬಿಂದು ।
ನೋಡು ಹಂಪೆಯ ಸೊಂಪ ।
ನೋಡು ವಿಠಲನ ಪೆಂಪ ॥

ಜೋಡಿಯಿಹುದೆ ನೋಡು ।
ಶಿಲ್ಪಕಲೆಯುದಕಿಂದು ॥
ಹಿಂದೆ ಬಲ್ಮೆಯ ನಾಡು ।
ಮುಂದಿ ನಲ್ಮೆಯ ಬೀಡು ।
ಅಂದು ಮೈಮೆಯ ಕಾಡು ।
ನರರ ಕೈಯ್ಮೆಯ ಕೋಡು ।
ಇಂದು ಹೊಲಸಿನ ಕಾಡು ।
ಹಂದಿ ನರಿಗಳ ಬೀಡು ॥
ನಿಂದೆ ಪಳಿವಿಗೆ ಈಡು ।
ನೊಂದಿ ಅಡಗಿದ ನಾಡು ।
ನೋಡು ಹಿರಿಯರ ಬಲುಮೆ ॥
ನೋಡಿ ಹಂಪೆಯನೊಡನೆ ॥
ಕೋಡಿ ಹರಿಯಿಸು ಜಲವ ।
ನೋಡಿ ಅಡಗಿದ ಕಲೆಯ ॥
ಗೆಳೆಯ ಕನ್ನಡ ಸುತರೆ ।
ತಳೆಯಿರೊಮ್ಮೆ ತೊಮ್ಮನ ॥
ಬೆಳಗಿ ಪಡೆಯಿರಿಯಶವ ।
ಬೆಳಗಿ ಮಾತೆಯ ಪೆಸರ ॥
ತೊಳೆದು ಸೇಡಿನ ಬೀಜ ।
ಉಳಿದು ಸೋದರರೊಡನೆ ॥
ಅಳಿಗ ಕೀರ್ತಿಯ ಪಡೆದು ।
ಸಾರಿ ಹಂಪೆಯ ಪೆಂಪ ॥

---

# ಪ್ರಭುಲಿಂಗಲೀಲೆ ಪ್ರಶಂಸೆ.

( ಚಾಮರಸ )

ಸತ್ತವರ ಕಥೆಯಲ್ಲ ಜನನದ ।
ಕುತ್ತಿನಲಿ ಬಲುಕುಸಿದು ಕರ್ಮದ ।
ಕತ್ತರಿಗೆ ಸಿಕ್ಕವರ ಸೀಮೆಯ ಮಾತು ತಾನಲ್ಲ ।
ಹೊತ್ತು ಹೋಗದೆ ಕುಂಡನಾಲಿಪ ।
ಮತ್ತಮತಿಗಳ ಗೋಷ್ಠಿಯಲ್ಲಿದು ।
ಸತ್ಯಶರಣರು ತಿಳುವುದೀಪ್ರಭುಲಿಂಗಲೀಲೆಯನು ॥

---

# ವಿಜಯನಗರ ಸಾಮ್ರಾಜ್ಯವೂ-ಕನ್ನಡ ವಾಙ್ಮಯಾಭಿವೃದ್ಧಿಯೂ.

ಲೇ: ಚಂದ್ರಶೇಖರಶಾಸ್ತ್ರಿ ವ್ಯಾಕರಣತೀರ್ಥ ಪ್ರಿನ್ಸಿಪಾಲ ಜಗದ್ಗುರು ಗಂಗಾಧರ
ಸಂಸ್ಕೃತ ಕಾಲೇಜ ಹುಬ್ಬಳ್ಳಿ.

ಈ ನಮ್ಮ ಕನ್ನಡ ಸಾಮ್ರಾಜ್ಯದ ವೈಭವವನ್ನು ಕನ್ನಡಿಗರು ಮಾತ್ರ ಹೊಗಳುತ್ತಾರೆಂದು ಯಾರೂ ತಿಳಿಯಬಾರದು. ಪ್ರಪಂಚದ ಎಲ್ಲ ಭಾಗಗಳ ಪ್ರವಾಸಿಕರೂ ಮುಕ್ತಕಂಠದಿಂದ ಅನೇಕ ಪ್ರಕಾರವಾಗಿ ಸಾಮ್ರಾಜ್ಯದ ವೈಭವಗಳನ್ನು ಹೊಗಳಿರುತ್ತಾರೆ. ಹಿಂದೂ ಧರ್ಮದ ದೃಷ್ಟಿಯಿಂದಂತೂ ಈ ವಿಜಯನಗರದ ಸಾಮ್ರಾಜ್ಯಕ್ಕೆ ಅಖಿಲ ಭರತಖಂಡದಲ್ಲಿ ಗೌರವಾದರಗಳು ಇದ್ದವು. ಮುಸಲ್ಮಾನರ ಭಯಂಕರಗಳಾದ, ಅದರಲ್ಲಿಯೂ ಮೇಲಿಂದ ಮೇಲೆ ಬರತಕ್ಕ ದಾಳಿಗಳಿಂದ ಹಿಂದೂ ಸಮಾಜವು ಕಂಗೆಟ್ಟು ಹೋಗಿತ್ತು. ಅದನ್ನು ಪುನ. ಸಂಘಟಿತವಾಗಿ ಮಾಡಿದ ಗೌರವವು ವಿಜಯನಗರದ ಸಾಮ್ರಾಜ್ಯಕ್ಕೆ ಇರುತ್ತದೆ. ಆ ಕಾಲಕ್ಕೆ ಕರ್ನಾಟಕದಲ್ಲಿರತಕ್ಕ ಹಿಂದೂ ರಾಜರ ಸಂಸ್ಥಾನಗಳ ಸ್ಥಿತಿಗಳೆಲ್ಲ ಕೆಟ್ಟು ಹೋಗಿದ್ದವು. ಉತ್ತರ ದಿಕ್ಕಿನಿಂದ ಮುಸಲ್ಮಾನರ ಹಾವಳಿಗಳು ಎಡೆಬಿಡದೆ ಬರುತ್ತಲೇ ಇದ್ದವು. ಅವರ ದಾಳಿಯಿಂದ ದೇವಗಿರಿ ಯಾದವರ ರಾಜ್ಯವು ಮಣ್ಣುಮುಕ್ಕಿ ಹೋಯಿತು. ಓರಂಗಲ್ಲಿನ ವಿಸ್ತಾರವಾದ ಪ್ರದೇಶವು ಹಾಳಾಗಿ ಹೋಯಿತು. ಆನೆಗುಂದಿಯ ಅರಸರೆಲ್ಲರೂ ಯುದ್ಧದಲ್ಲಿ ಸತ್ತರು. ಅಂತೂ ಇಂತೂ ಕನ್ನಡಿಗರು ರಾಜ್ಯವನ್ನು ಕಳೆದುಕೊಂಡರು. ಆ ಕಾಲಕ್ಕೆ ಹಿಂದೂ ಧರ್ಮದ ರಕ್ಷಣೆ ಮಾಡುವವರೇ ಉಳಿಯಲಿಲ್ಲ. ಪವಿತ್ರವಾದ ದೇವಾಲಯಗಳು ನಾಶವಾಗುತ್ತಿದ್ದವು. ಹಿಂದೂ ಸ್ತ್ರೀಯರು ಅಪಮಾನಕ್ಕೊಳಗಾಗಬೇಕಾಗುತ್ತಿದ್ದಿತು. ಅವರ ಧರ್ಮಗ್ರಂಥಗಳು ಬೆಂಕಿಯಪಾಲಾದ ಎಷ್ಟೋ ಉದಾಹರಣೆಗಳು ಸಿಗುತ್ತಲಿವೆ ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಯಾಯಿತು. ಶ್ರೀವಿದ್ಯಾರಣ್ಯ ಮಹಾ ಮುನಿಗಳು ಈ ಸಾಮ್ರಾಜ್ಯವನ್ನು ಸಂಸ್ಥಾಪಿಸಿ ತಾವು ನಾಲ್ಕೂ ವೇದಗಳಿಗೆ ಭಾಷ್ಯವನ್ನು ಬರೆದು ಕರ್ನಾಟಕದ ಉಪಕಾರವು ಉಳಿದ ಪ್ರಾಂತಗಳ ಮೇಲೆ ಯಾವಾಗಲೂ ಇರುವಂತೆ ಮಾಡಿದರು. ಇಂತಹ ಸಾಮ್ರಾಜ್ಯದ ಆಳಿಕೆಯ ಪರಿಣಾಮವು ಆ ಕಾಲಕ್ಕೆ ಭರತಖಂಡದ ತುಂಬ ಆಗದೆ ಇರಲಿಲ್ಲ. ಮುಖ್ಯವಾಗಿ ವಿಜಯನಗರದ ಅರಸರ ಕಾಲದಲ್ಲಿ ಕನ್ನಡ ನುಡಿಯು ಹೇಗೆ ಉನ್ನತಿಯನ್ನು ಹೊಂದಿತೆಂಬುವದನ್ನು ತೋರಿಸುವದೇ ಈ ಲೇಖದ ಮುಖ್ಯೋದ್ದೇಶವಾಗಿರುತ್ತದೆ. ವಿಜಯನಗರದ ಆಳಿಕೆಯು ಅವಿಚ್ಛಿನ್ನವಾಗಿ ೨೫೦—೩೦೦ ವರ್ಷಗಳ ವರೆಗೆ ಇದ್ದಿತು. ಒಂದೇ ವಂಶದವರೇ ೧೬೦ ವರ್ಷಗಳ ವರೆಗೆ ಆಳಿದರೆಂದು ಇತಿಹಾಸದಿಂದ ತಿಳಿಯುತ್ತದೆ. ಈ ದೀರ್ಘಕಾಲದ ಅವಧಿಯಲ್ಲಿ ಅನೇಕ ಜನರು ಅರಸರಾಗಿ ಹೋಗಿರುತ್ತಾರೆ ಇವರಲ್ಲಿ ಹರಿಹರ, ಒಂದನೆಯ ದೇವರಾಯ. ಎರಡನೆಯದೇವರಾಯ, ಕೃಷ್ಣರಾಯ, ಮಲ್ಲಿಕಾರ್ಜುನರೆ ಮೊದಲಾದ ರಾಜರು ಬಹು ಪ್ರಖ್ಯಾತರಾಗಿರುತ್ತಾರೆ. ಈ ಅರಸರಲ್ಲಿ ಬಹಳ ಜನರು ಪಂಡಿತರೂ ಸ್ವತಃ ಕವಿಗಳೂ ಆಗಿದ್ದ ಕಾರಣ ತಮ್ಮ ಆಶ್ರಯದಲ್ಲಿ ಅನೇಕ ಕವಿಗಳಿಗೆ ಮನ್ನಣೆಯನ್ನು ಕೊಟ್ಟು ಕನ್ನಡ ಗ್ರಂಥಗಳನ್ನು ಬರೆಸಿರುತ್ತಾರೆ

ವಿಜಯನಗರದ ಅರಸರ ಆಳಿಕೆಯಲ್ಲಿ ಕನ್ನಡ ವಾಙ್ಮಯಾಭಿವೃದ್ಧಿಯು ಅದ್ಭುತವಾಗಿ ಆಯಿತು. ಇವರು ಕನ್ನಡ ನುಡಿಗೆ ಸಹಾಯ ಮಾಡುವದನ್ನು ನೋಡಿ ಇವರ ಮಾಂಡಲಿಕ ರಾಜರೂ, ಪಾಳೆಯಗಾರರೂ ಕೂಡ ಬಹಳ ಜನ ವಿದ್ವಾಂಸರಿಗೆ ಆಶ್ರಯವನ್ನು ಕೊಟ್ಟು ಗ್ರಂಥಗಳನ್ನು ಬರೆಯಿಸಿರುತ್ತಾರೆ. ಇದಕ್ಕೆ ಕೆಳದಿಯ ಅರಸರ ಉದಾಹರಣೆಯೇ ಸಾಕು. ವಿಜಯನಗರದ ರಾಜರ ಆಳಿಕೆಯಲ್ಲಿ ಇನ್ನೊಂದು ವೈಶಿಷ್ಟ್ಯವೇನಂದರೆ ಹಿಂದೂ ಧರ್ಮದಲ್ಲಿರತಕ್ಕ ಜಾತಿ ಮತ ಪಂಥಗಳ ತೊಡಕಿಗೆ ಆಸ್ಪದವಿರಲಿಲ್ಲ. ಸ್ತ್ರೀಪುರುಷರೆಂಬುವ ಭೇದಭಾವನೆಯೂ ಕೂಡ ಇದ್ದಿರಲಿಲ್ಲ. ಇವರ ಆಸ್ಥಾನದಲ್ಲಿ ಕೆಲವರು ಸ್ತ್ರೀಯರೂ ಕೂಡ ಕವಿತೆಗಳನ್ನು ಬರೆದಿರುತ್ತಾರೆ. ಗಂಗಾ

ದೇವಿಯು 'ಕಂಪಣರಾಯ ವೀರಚರಿತೆ' ಎಂಬುವ ಗ್ರಂಥವನ್ನು ಬರೆದಿರುತ್ತಾಳೆ. ಈ ಅರಸರ ದೀರ್ಘ ಕಾಲದ ಆಳಿಕೆಯಲ್ಲಿ ನೂರಾರು ಜನ ಕನ್ನಡ ಕವಿಗಳಿಗೆ ಆಶ್ರಯವು ಸಿಕ್ಕು ಬಹಳ ವಾಙ್ಮಯಸೇವೆಯು ಆಗಿರುತ್ತದೆ. ಅವರೆಲ್ಲರ ಭಾಷಾಸೇವೆಯನ್ನೂ, ಅವರ ಹೆಸರುಗಳನ್ನೂ ಇಲ್ಲಿ ಉಲ್ಲೇಖಿಸಲಿಕ್ಕೆ ಈ ಚಿಕ್ಕ ಲೇಖದಲ್ಲಿ ಸಾಧ್ಯವಿಲ್ಲದೆ ಇದ್ದರೂ ನಾಮಾಂಕಿತರಾದ ಕೆಲವು ಕವಿಗಳ ಹೆಸರುಗಳನ್ನೂ,ಅವರ ಕೃತಿಗಳನ್ನೂ ಬರೆಯುವದಾಗುತ್ತದೆ. ಪರಮತದವರ ದಾಳಿಯಿಂದ ಕನ್ನಡದ ವಾಙ್ಮಯವು ಕಳೆಗುಂದಿದ ಕಾಲಕ್ಕೆ ಮೊದಲು ವಿಜಯನಗರದ ಅರಸರಲ್ಲಿ ಎರಡನೆಯ ದೇವರಾಯನು ಕನ್ನಡ ವಾಙ್ಮಯಾಭಿವೃದ್ಧಿಗೆ ಬಹಳ ಸಹಾಯಕನಾದನು. ಈತನ ಕಾಲಕ್ಕೇನೇ ವೀರಶೈವ ಸಮಾಜದಲ್ಲಿ ೧೦೧ ಜನ ವಿರಕ್ತರು ಆಗಿ ಅಪಾರ ಗ್ರಂಥಗಳನ್ನೂ ವಚನಗಳನ್ನೂ ಬರೆದು ಬೆಳಕಿಗೆ ತಂದರು. ಈ ೧೦೧ ಜನರಲ್ಲಿ ಲಕ್ಕಣ್ಣದಂಡೇಶ, ತೋಂಟದಾರ್ಯ, ಚಾಮರಸ, ಜಕ್ಕಣಾರ್ಯ, ಕರಸ್ಥಲದ ನಾಗಿದೇವ, ಗೂಳೂರಸಿದ್ಧವೀರಣಾರ್ಯ, ಕುಮಾರ ಬಂಕನಾಥ, ಮೊದಲಾದವರು ಪ್ರಮುಖರಿರುತ್ತಾರೆ. ಈ ನೂರಾಒಂದು ಜನರೆಲ್ಲರೂ ಬೇರೆ ಬೇರೆತರಹದ ಗ್ರಂಥಗಳನ್ನು ಬರೆದು ಕನ್ನಡ ವಾಙ್ಮಯವನ್ನು ಪುಷ್ಟಿಗೊಳಿಸಿದರು. ಬಸವ, ಸಿದ್ಧರಾಮ, ಚನ್ನಬಸವ, ಅಲ್ಲಮ, ಅಕ್ಕಮಹಾದೇವಿ. ಮೊದಲಾದವರು ಎರಡೆಂಭತ್ತು ಕೋಟಿ ವಚನಗಳನ್ನು ಬರೆದು ಒಂದು ವೈಶಿಷ್ಟ್ಯಪೂರ್ಣ ವಾಙ್ಮಯವನ್ನೆ ನಿರ್ಮಿಸಿದರು. ಆದರೆ ಕರ್ನಾಟಕದ ಉತ್ತರ ಸೀಮೆಯಲ್ಲಿಯೇ ಇವರು ಮಾಡಿದ ಕಾರ್ಯವು ಅದೇ ಪ್ರಾಂತದಿಂದಲೇ ಮುಸಲ್ಮಾನರ ದಾಳಿಗಳು ಬಂದ ಕಾರಣ ವಚನ ವಾಙ್ಮಯವು ಕಳೆಗುಂದಿಹೋಯಿತು. ಆದರೆ ಸುಖದುಃಖಗಳು ಸ್ಥಿರವಾದವುಗಳಲ್ಲವಷ್ಟೇ? ಈ ವಾಙ್ಮಯಕ್ಕೆ ಮತ್ತೆ ಕಳೆಯೇರಿದ್ದು ವಿಜಯನಗರದ ಮೊದಲನೆಯ ದೇವರಾಯನ ಕಾಲದಲ್ಲಿಯೇ. ಆದ್ದರಿಂದ ಕನ್ನಡ ವಾಙ್ಮಯಾಭಿವೃದ್ಧಿಯುಕಾಲದಲ್ಲಿ ವಿಜಯನಗರದ ಅರಸರೊಳು ದೇವರಾಯನಕಾಲವೇ ಮಹತ್ವದ್ದಾಗಿರುತ್ತದೆ.

ಬುಕ್ಕರಾಯನ ಮೊಮ್ಮಗನಾದ ದೇವರಾಯನು ಸೊಬಗಿನಸೋನೆ,ಅಮರುಕ,ಈ ಎರಡುಗ್ರಂಥಗಳನ್ನು ಬರೆದಿರುತ್ತಾನೆ. ಪ್ರೌಢದೇವರಾಯನಲ್ಲಿ ದಂಡನಾಯಕರಾಗಿದ್ದ ಜಕ್ಕಣಾಚಾರ್ಯರ ಗುರುಗಳಾದ "ಮಹಾಲಿಂಗದೇವನು" ಏಕೋತ್ತರ ಶತಸ್ಥಲ, ಮತ್ತು ಪ್ರಭುದೇವರ ಷಟ್‌ಸ್ಥಲ ಜ್ಞಾನಚಾರಿತ್ರ್ಯದ ಟೀಕೆಗಳನ್ನೂ ಬರೆದಿರುತ್ತಾನೆ. ಈತನಿಗೆ ಪರಮ ವೀರಶೈವಾಚಾರ್ಯನೆಂಬುವ ಬಿರುದು ಇರುತ್ತದೆ. ಮೂರುರಾಯರ ಗಂಡ, ಗಜವೆಂಟೆಕಾರ ಎಂಬುವ ಬಿರುದುಳ್ಳ ಪ್ರೌಢದೇವರಾಯನಿಗೆ ಮುಖ್ಯ ಮಂತ್ರಿಯೂ, ಪರಮ ಆಪ್ತನೂ ಆಗಿದ್ದ ಲಕ್ಕಣ್ಣದಂಡೇಶನು 'ಶಿವತತ್ವಚಿಂತಾಮಣಿ' ಎಂಬುವ ಉದ್ಗ್ರಂಥವನ್ನು ಬರೆದಿರುತ್ತಾನೆ. ಈತನು ಒಂದು ಪದ್ಯದಲ್ಲಿ ಪ್ರೌಢದೇವರಾಯನ ವರ್ಣನೆಯನ್ನು ಕೆಳಗೆ ಬರೆದಂತೆ ಮಾಡಿರುತ್ತಾನೆ. ಆ ಶ್ಲೋಕದಿಂದ ಈತನು ಪ್ರೌಢರಾಯನ ಪ್ರಧಾನ ಮಂತ್ರಿಯು ಇದ್ದನೆಂಬುವದೂ ಕೂಡ ತಿಳಿಯುತ್ತದೆ.

> ಧರೆಗಧಿಕ ಮೂರುರಾಯರ ಗಂಡನ ಪ್ರತಿಮ ।
> ಬಿರುದಾಂಕಗಜವೇಂಟೆ ದೇವೇಂದ್ರಭೂ ।
> ವರನಮಹದೈಶ್ವರ್ಯ ಶರಧಿ ಚಂದ್ರೋದಯ
> ನ.ದಾರಕರುಣಾಧಾರನೂ ॥
>
> ನಿರುಪಮಿತ ಸಪ್ತಾಂಗ ರಾಜ್ಯವರ್ಧನಕಳಾ ।
> ಧರನಮಲ ಕೀರ್ತಿಯುತ ಲಕ್ಕಣ್ಣ ದಂಡೇಶ ।
> ಈ ಕಲಿಯುಗದೊಳತಿ ಪ್ರೌಢಮತಿ ದೇವ
> ರಾಜೇಂದ್ರನಾ ಪ್ರಧಾನಂ ॥

ಎಂದು ಹೇಳಿರುತ್ತಾನೆ. ದೇವರಾಯನ ದಂಡನಾಯಕನಾಗಿದ್ದ ಜಕ್ಕಣಾಚಾರ್ಯರ ಗುರುಗಳಾಗಿದ್ದ 'ಕುಮಾರಬಂಕನಾಥ'ನು ಷಟಸ್ಥಲೋಪದೇಶ ಮತ್ತು ಪ್ರಭುದೇವರ ಟೀಕಿನ ವಚನಗಳನ್ನು ಬರೆದಿದ್ದಾನೆ. ಶ್ರೀಜಕ್ಕಣಾಚಾರ್ಯನು ಭಕ್ತಿಭಂಡಾರಿ ಎಂಬುವ ಬಿರುದನ್ನು ಪ್ರೌಢ ದೇವರಾಯನಿಂದ ಹೊಂದಿ ಅವನಲ್ಲಿಯೇ ದಂಡನಾಯಕನೂ ಆಗಿದ್ದು 'ಏಕೋತ್ತರ ಶತಸ್ಥಲ' ಎನ್ನುವ ಗ್ರಂಥವನ್ನು ರಚಿಸಿ ರಾಜನಿಂದ ಬಹಳ ಸನ್ಮಾನವನ್ನು ಹೊಂದಿರುತ್ತಾನೆ. ಈತನಿಗೆ ಜಕ್ಕಣ್ಣನೆಂಬುವ ಹೆಸರೂ ಕೂಡ ಇರುತ್ತದೆ. ಕಲ್ಮಠದ ಪ್ರಭುದೇವ, ಕರಸ್ಥಲದ ನಾಗಿದೇವ, ವೀರಣ್ಣೊಡೆಯ ಮೊದಲಾದವರು ಈತನ ಸಂಗಡಿಗರಾಗಿದ್ದರು. ಇವರೂ ಕೂಡ ಗ್ರಂಥಗಳನ್ನು ರಚಿಸಿದ್ದಾರೆ.

ಕನ್ನಡ ಕವಿಗಳಲ್ಲಿ ಸುಪ್ರಸಿದ್ಧನಾದ ಚಾಮರಸನು ಪ್ರೌಢರಾಯನ ಅಪ್ಪಣೆಯ ಮೇರೆಗೆ ಪ್ರಭುಲಿಂಗ ಲೀಲೆಯನ್ನು ಬರೆದು ಅತನಿಂದ ಅತಿ ಸನ್ಮಾನಿತನಾಗಿರುತ್ತಾನೆ. ಈ ಚಾಮಯ್ಯನಿಗೂ, ಉಳಿದ ಕವಿಗಳಿಗೂ ರಾಜನ ಸಭೆಯಲ್ಲಿ ಮೇಲಿಂದ ಮೇಲೆ ಚಮತ್ಕಾರಿಕ ಸಂಗತಿಗಳು ನಡೆದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ಉಲ್ಲೇಖವಿರುತ್ತದೆ. ಕಲ್ಮಠದ ಪ್ರಭುದೇವನು ಲಿಂಗಲೀಲಾವಿಲಾಸಚಾರಿತ್ರ್ಯ"ವನ್ನು ಮಂತ್ರಗೋಪ್ಯಕ್ಕೆ ಟೀಕೆಯನ್ನು ಮಾಡಿರುತ್ತಾನೆ. ಕುಮಾರವ್ಯಾಸನು ಕನ್ನಡ ಕವಿಗಳಲ್ಲಿ ಬಹಳ ಹೆಸರನ್ನು ಪಡೆದು ಪ್ರಖ್ಯಾತನಾದ ಕವಿಯು ಇರುತ್ತಾನೆ. ಈತನು ದೇವರಾಯನ ಸಹಾಯವನ್ನು ಹೊಂದಿ ಭಾರತದ ೧೦ ಪರ್ವಗಳನ್ನು ಬರೆದಿರುತ್ತಾನೆ. ಈ ಗ್ರಂಥದಿಂದ ಕನ್ನಡ ವಾಙ್ಮಯದ ಪ್ರೌಢಿಮೆಯು ಬೆಳಕಿಗೆ ಬರುವಂತಿದೆ. ಈ ಕುಮಾರವ್ಯಾಸನು ಭಾರತದ ೧೦ ಪರ್ವಗಳನ್ನು ಮಾತ್ರ ಬರೆದನು. ಉಳಿದ ಪರ್ವಗಳನ್ನು ಅವನು ಬರೆಯಲಿಲ್ಲ, ಕಾರಣವು ತಿಳಿದಿಲ್ಲ. ಅದರ ಮುಂದಿನ ೭ ಪರ್ವಗಳನ್ನು ಕೃಷ್ಣದೇವರಾಯರ ಆಳಿಕೆಯಲ್ಲಿ ಅವರ ಆಸ್ಥಾನದಲ್ಲಿದ್ದ ಕರ್ಣಾಟಕ ಕವಿಸಾರ್ವಭೌಮನೆಂಬುವ ಬಿರುದನ್ನು ಪಡೆದ ತಿಮ್ಮಣ್ಣ ಕವಿಯು ರಚಿಸಿದನು. ಮೊದಲನೆಯ ದೇವರಾಯನ ಕಾಲಕ್ಕೂ ಕೃಷ್ಣದೇವರಾಯನ ಕಾಲಕ್ಕೂ ಸುಮಾರು ೧೦೦ ವರ್ಷ ಅಂತರವಿರುವದು. ವಿಜಯನಗರದ ಅರಸರ ಕಾಲದಲ್ಲಿ ಪ್ರಾರಂಭವಾದ ಗ್ರಂಥವು ಅದೇ ವಂಶದವರ ಸಹಾಯದಿಂದ ಮುಗಿದಿರುತ್ತದೆ ಉತ್ತರ ಭಾಗಕ್ಕೆ ಅರ್ಥಾತ್ ತಿಮ್ಮಣ್ಣ ಕವಿಯಿಂದ ಮಾಡಿದ ಭಾರತಕ್ಕೆ "ಕೃಷ್ಣರಾಯರ ಭಾರತ"ವೆಂದು ಹೆಸರಿರುತ್ತದೆ. ಶ್ರೀವ್ಯಾಸರಾಯರು ಕೃಷ್ಣರಾಯರ ಆಳಿಕೆಯಲ್ಲಿ ಅನೇಕ ಹರಿಕೀರ್ತನೆಗಳನ್ನು ಬರೆದಿರುತ್ತಾರೆ. ಇವರು ವಿಜಯನಗರದ ಸಿಂಹಾಸನದ ಮೇಲೆ ಕೆಲವು ಕಾಲ ಕುಳಿತಿದ್ದರೆಂದು ತಿಳಿಯುತ್ತದೆ. ಇವರು ಸೋಸಲೆಯ ವ್ಯಾಸರಾಯರ ಮಠಕ್ಕೆ ಸ್ವಾಮಿಗಳಾಗಿದ್ದರು. ಹೀಗೆಯೇ ವಿಜಯನಗರದ ರಾಜರ ಬೇರೆ ಬೇರೆಯವರ ಆಳಿಕೆಯಲ್ಲಿ ಬೇರೆ ಬೇರೆ ಕವಿಗಳಾಗಿದ್ದಾರೆ. ಒಂದನೆಯ ಹರಿಹರನ ಆಳಿಕೆಯಲ್ಲಿ ಮಂಗರಸನು ಖಗೇಂದ್ರಮಣಿದರ್ಪಣವನ್ನು ರಚಿಸಿದ್ದಾನೆ. ಬತ್ತಲೇಶ್ವರನೆಂಬುವ ಕವಿಯು ರಾಮಾಯಣವನ್ನೂ ಬರೆದಿದ್ದಾನೆ. ಈತನು ದೇವರಾಯನ ಕಾಲದಲ್ಲಿದ್ದನು.

ಚಂದ್ರಕವಿ ಅಥವಾ ಚಂದ್ರಶೇಖರನೆಂಬುವ ಕವಿಯು ವಿರೂಪಾಕ್ಷಸ್ಥಾನ, ಗುರುಮೂರ್ತಿಶಂಕರ ಶತಕಗಳನ್ನು ಬರೆದಿರುತ್ತಾನೆ. ಈತನು ಈ ಗ್ರಂಥಗಳನ್ನು ವಿಜಯರಾಯನ ಮಗ ಗಜವೇಂಟೆಕಾರ ಪ್ರೌಢರಾಯನ ಪ್ರಧಾನಿಯಾದ ಗುರುರಾಯನ ಆಜ್ಞೆಯಿಂದ ಈ ಗ್ರಂಥಗಳನ್ನು ರಚಿಸಿದ್ದಾನೆ. ಈ ಕವಿಯು ಅಷ್ಟಭಾಷೆಗಳಲ್ಲಿ ಪಂಡಿತನಾಗಿದ್ದನೆಂದು ಈತನ ಗ್ರಂಥಗಳಿಂದ ತಿಳಿಯುತ್ತಲಿದೆ. ವಿಜಯನಗರದ ಮಲ್ಲಿಕಾರ್ಜುನನೆಂಬುವ ದೊರೆಯ ಆಳಿಕೆಯಲ್ಲಿ ಕಲ್ಲರಸನು 'ಜನವಶ್ಯವನ್ನು' ಬರೆದಿದ್ದಾನೆ. ವಿರೂಪಾಕ್ಷರಾಜನ ಕಾಲದಲ್ಲಿ ತೋಂಟದ ಸಿದ್ಧಲಿಂಗನು 'ಷಟ್ಸ್ಥಲ ಜ್ಞಾನಾಮೃತ ಸಾರವನ್ನು' ರಚಿಸಿದ್ದಾನೆ. ಸದಾಶಿವರಾಯನ ಆಳಿಕೆಯಲ್ಲಿ ಎಮ್ಮೆಬಸವನು ಕಾಲಜ್ಞಾನವನ್ನು ಬರೆದು ಒಂದು ಹಳ್ಳಿಯನ್ನು ಇನಾಮು ಪಡೆದಿದ್ದನೆಂದು ತಿಳಿಯುತ್ತದೆ. ಪ್ರೌಢರಾಯನ ಕಾಲದಲ್ಲಿ ಮೊಗ್ಗೆಯ ಮಾಯಿದೇವರು 'ಅನುಭವಸೂತ್ರ' ಪ್ರಭುಗೀತೆ, ಏಕೋತ್ತರಶತಸ್ಥಲದಲಷಟ್ಪದಿ, ಶತಕತ್ರಯ, ಷಟ್ಸ್ಥಲಗದ್ಯ, ಮೊದಲಾದ ಗ್ರಂಥಗಳನ್ನು ಬರೆದಿರುತ್ತಾರೆ. ಇದೇ ರಾಜನ ಆಶ್ರಯದಿಂದ ಗುರುಬಸವನೆಂಬವನು ಸುಪ್ರಸಿದ್ಧ ವಿದ್ವಾಂಸನು ಕವಿಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯಕಾವ್ಯ ಮೊದಲಾದ ಸಪ್ತಕಾವ್ಯಗಳನ್ನು ಬರೆದಿದ್ದಾನೆ. ಗೂಳೂರ ಸಿದ್ಧವೀರಣ್ಣನು ಶೂನ್ಯಸಂಪಾದನೆಯೆಂಬುವ ಪ್ರೌಢ ಗ್ರಂಥವನ್ನು ದೇವರಾಯನ ಕಾಲದಲ್ಲಿಯೇ ರಚಿಸಿದ್ದಾನೆ ಹೀಗೆಯೇ ಇನ್ನು ಎಷ್ಟೋ ಕವಿಗಳು ವಿಜಯನಗರದ ಅರಸರ ಸಹಾಯವನ್ನು ಹೊಂದಿ ಕನ್ನಡ ನುಡಿಯನ್ನು ಬೆಳಕಿಗೆ ತಂದಿರುತ್ತಾರೆ. ಅಂತೂ ಆ ಸಾಮ್ರಾಜ್ಯದಿಂದ ನಮ್ಮ ಕನ್ನಡ ವಾಙ್ಮಯವು ಬಹಳ ಬೆಳೆಯಿತು. ವಿಜಯನಗರದ ಅರಸರ ಆಳಿಕೆಯಲ್ಲಿ ತೆನ್ನಾಲ ರಾಮಕೃಷ್ಣನೇ ಮೊದಲಾದ ಕೆಲವು ಕವಿಗಳಿಗೆ ಆಶ್ರಯವಿತ್ತು. ಈ ರಾಜರ ಆಳಿಕೆಯಲ್ಲಿ ತೆಲುಗು ಸಾಹಿತ್ಯಕ್ಕೂ ಸಹಾಯವಾಗಿರುತ್ತದೆ. ಈ ಸಾಮ್ರಾಜ್ಯವನ್ನು ಕನ್ನಡಿಗರೆಂದಿಗೂ ಮರೆಯುವಂತಿಲ್ಲ.

# ವಿಜಯ ನಗರದ ಕಾಲದ ಶಕ್ತಿಯ ಪೂಜೆಯ ರೀತಿ ನೀತಿಗಳು.

ಲೇಖಕರು:—ಶ್ರೀ **ಮಂಜಪ್ಪ ಹರ್ಡೇಕರ** ಸಂಪಾದಕ ಶರಣಸಂದೇಶ ಆಲಮಟ್ಟಿ.

ಮಹಾನವಮಿಯು ಶಕ್ತಿಪೂಜೆಯ ಪರಮ ಪವಿತ್ರ ದಿನ. ಅಂತೆಯೇ ಎಲ್ಲೆಲ್ಲಿಯೂ ಆ ದಿನ ಶಕ್ತಿಪೂಜೆ. ಮಹಾನವಮಿಯ ಮುಂದಿನ ದಿನವೇ ವಿಜಯ ದಶಮೀ ಸಿಜ. ಏಕೆಂದರೆ, ಶಕ್ತಿಪೂಜೆಯನ್ನು ಮಾಡಿ ಅವಳ ಕೃಪೆಯನ್ನು ಹೊಂದಿದರಲ್ಲವೇ ಮುಂದೆ ವಿಜಯ? ಹಾಗಾದರೆ ಯಾವ ಶಕ್ತಿಯನ್ನು ಪೂಜಿಸಬೇಕು. ಶಕ್ತಿಪೂಜೆಯ ರೀತಿನೀತಿಗಳಾವವು? ಇಂದಿಗೆ ಆರುನೂರನೆಯ ವರುಷದ ಕರ್ನಾಟಕ ಹಿಂದು ವಿಭೂತಿಗಳು ಯಾವ ಶಕ್ತಿಯ ಆರಾಧನೆಯಲ್ಲಿ ಮಗ್ನರಾಗಿದ್ದರು? ಆದರಿಂದ ಅವರಿಗಾದ ಫಲಪ್ರಯೋಜನಗಳಾವುವು? ಎಂಬಂಶಗಳನ್ನು ಅದೊಂದೇ ದೃಷ್ಟಾಂತದಿಂದ ಸ್ವಲ್ಪ ತಿಳಿದುಕೊಳ್ಳೋಣ.

ಪಾರ್ವತಿಯ ಪೂಜೆಯು ಶಕ್ತಿಪೂಜೆಯೆ? ಅಥವಾ ಲಕ್ಷ್ಮಿಯ ಆರಾಧನೆಯು ಶಕ್ತಿಪೂಜೆಯೆ? ಇಲ್ಲವೆ ಸರಸ್ವತಿಯ ಅರ್ಚನೆಯು ಶಕ್ತಿಪೂಜೆಯೆ? ಅಲ್ಲಲ್ಲ. ಇವರಲ್ಲಿ ಯಾರ ಚಿತ್ರವನ್ನಿಟ್ಟು ಎಷ್ಟು ಪೂಜೆ ಮಾಡಿದರೂ ಶಕ್ತಿಪೂಜೆಯ ಪುಣ್ಯಫಲ ಪದವಿಗಳು ಲಭಿಸುವದಿಲ್ಲ. ಇಂದಿಗೆ ಆರುನೂರನೆಯ ವರುಷದಲ್ಲಿ ಕರ್ನಾಟಕದ ಆ ಮಹಾವಿಭೂತಿಗಳು ಈ ಯಾವ ಚಿತ್ರಗಳ ಅಥವಾ ಕುಂಭಾದಿ ಉಪಕರಣಗಳ ಪೂಜೆಯಲ್ಲಿ ಮಗ್ನರಾಗಿರಲಿಲ್ಲ. ಅವರ ಹಿಂದಿನ ಪಾಂಡವರಾಗಲೀ ಅಥವಾ ಅವರಾಚಿನ ಶ್ರೀರಾಮಚಂದ್ರಾದಿಗಳಾಗಲಿ ಈ ಚಿತ್ರಗಳನ್ನು ಪೂಜಿಸಿ ಶಕ್ತಿಯ ಕೃಪೆಯನ್ನು ಪಡೆದು ವಿಜಯದಶಮಿಯ ಸುಖಶಾಂತಿಗಳನ್ನು ಅನುಭವಿಸಿರಲಿಲ್ಲ.

ನಾವು ನಮ್ಮ ದೇಹಶಕ್ತಿಯನ್ನು ಹೆಚ್ಚಿಸಿಕೊಳುವದೇ ಪಾರ್ವತಿಯ ಪೂಜೆ. ನಮ್ಮ ಬುದ್ಧಿಶಕ್ತಿಯನ್ನು ಬೆಳೆಸಿಕೊಳ್ಳುವುದೇ ಸರಸ್ವತಿಯ ಅರ್ಚನೆ. ನಮ್ಮ ದ್ರವ್ಯಶಕ್ತಿಯನ್ನು ಅಭಿವೃದ್ಧಿಗೊಳಿಸಿಕೊಳ್ಳುವದೇ ಲಕ್ಷ್ಮಿಯ ಆರಾಧನೆ. ಈ ಮೂರು ಬಲಗಳೇ ಶಕ್ತಿದೇವಿಯ ಮೂರು ರೂಪಗಳು, ಇವು ಯಾರಲ್ಲಿರುತ್ತವೆಯೋ ಅವರಿಗೇನೇ ಶಕ್ತಿಯು ಪ್ರಸನ್ನಳಾಗಿದ್ದಾಳೆಂದು ತಿಳಿಯಬೇಕು. ಇಂದಿಗೆ ಆರುನೂರನೆಯ ವರುಷದಲ್ಲಿ ಕರ್ನಾಟಕದ ಮಹಾ ವಿಭೂತಿಗಳು ಇಂತಹ ಶಕ್ತಿಯ ಆರಾಧನೆಯಲ್ಲಿಯೇ ಮಗ್ನರಾಗಿದ್ದರು ಏಕೆಂದರೆ ಇಂತಹ ಶಕ್ತಿಯ ಆರಾಧನೆಯನ್ನು ಮಾಡಿ ಅವಳ ಕೃಪೆಯನ್ನು ಪಡೆಯದೆ ಚಿತ್ರಗಳ ಪೂಜೆಯೇ ಶಕ್ತಿಯ ಪೂಜೆಯೆಂದು ಆಗಿನ ಹಿಂದುಗಳು ತಿಳಿದುಕೊಂಡದ್ದರಿಂದ ರಾಜಕೀಯ ಪಾರತಂತ್ರ್ಯವಿತ್ತು; ಧಾರ್ಮಿಕ ಮಹದನರ್ಥಗಳು ಏರಿಬರುತ್ತಿದ್ದವು. ಅವುಗಳ ದುಃಖದಿಂದ ಕನ್ನಡಿಗರು ಪಾರಾಗಬೇಕಾಗಿದ್ದಿತು.

ಆಗಿನ ಹಿಂದುಗಳಿಗೆ ದೇಹಬಲದ ಕೊರತೆಯಿರಲಿಲ್ಲ. ಆದರೆ ಇವೆರಡನ್ನು ಕೂಡಿಸುವ ನಮ್ಮ ಧರ್ಮ, ನಮ್ಮ ದೇಶ, ನಮ್ಮ ಜನರೆಂಬ ಈ ಆತ್ಮೀಯ ಬುದ್ಧಿಬಲವೊಂದೇ ಅವರಲ್ಲಿರಲಿಲ್ಲ ಅಂತೆಯೇ ಅವರ ಉಭಯ ಬಲಗಳೂ ವ್ಯರ್ಥವಾಗಿ ಧಾರ್ಮಿಕ ಮತ್ತು ರಾಜಕೀಯ ವಿಪತ್ತುಗಳಿಗೊಳಗಾಗಿದ್ದವು ಈ ವಿಪತ್ತು ಉತ್ತರದಿಂದ ಕಾಡು ಬೇಗೆಯಂತೆ ದಕ್ಷಿಣಕ್ಕೆ ಭಯಂಕರವಾಗಿ ವ್ಯಾಪಿಸುತ್ತ ಬಂದಿದ್ದಿತು ಆಗ ವಿದ್ಯಾರಣ್ಯರೆಂಬ ಬುದ್ಧಿಯ ದಿವ್ಯಮೂರ್ತಿಗಳು ಹಿಂದುಗಳ ದೇಹಬಲ ಮತ್ತು ದ್ರವ್ಯಬಲಗಳನ್ನೂ ಆತ್ಮೀಯವೆಂಬ ಬುದ್ಧಿಶಕ್ತಿಯಿಂದ ಜೋಡಿಸಿ ನಿಜವಾದ ಸಂಘಟನಾ ಶಕ್ತಿಯ ಆರಾಧನೆಯ ಕಡೆಗೆ ಜನರನ್ನು ತಿರುಗಿಸಿದರು. ಆಗ ಇವರ ಈ ದಿವ್ಯಾರಾಧನೆಗೆ ಶಕ್ತಿಯು ಪ್ರಸನ್ನಳಾದಳು ವಿಜಯಮುಹೂರ್ತದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ ತಮ್ಮ ಮೇಲೆ ಬರಲಿದ್ದ ಧಾರ್ಮಿಕ ಮತ್ತು ರಾಜಕೀಯ ವಿಪತ್ತುಗಳನ್ನು ತಳ್ಳಿ ವಿಜಯಶಾಲಿಗಳಾದರು

ಎಂದಮೇಲೆ ನಮ್ಮ ದೇಹಬಲ, ಬುದ್ಧಿಬಲ, ಮತ್ತು ಧನಬಲಗಳ ಸರಿಯಾದ ಸಂಘಟನೆಯೇ ಶಕ್ತಿ-ಪೂಜೆಯ ನಿಜವಾದ ರೀತಿ ನೀತಿಗಳೆಂಬುದು ಸ್ಪಷ್ಟವಾಗುವುದಿಲ್ಲವೇ? ಈ ಸಂಘಟನಾಶಕ್ತಿಯ ಆರಾಧನೆಯು ಸರಿಯಾಗಿ ನಡೆದಿರುವವರೆಗೂ ವಿಜಯನಗರ ಸಾಮ್ರಾಜ್ಯವು ಸಾಮ್ರಾಜ್ಯವಾಗಿ ಬೆಳೆದು ಬೆಳಗಿತು. ಇವುಗಳಲ್ಲಿ ಧರ್ಮ, ಸ್ವದೇಶ, ಸ್ವಜನರ ವಿಷಯಕವಾದ ಆತ್ಮೀಯ ಬುದ್ಧಿಶಕ್ತಿಯು ಕ್ಷೀಣವಾಗುತ್ತಾ ಸಂಘಟನೆಯು ತಪ್ಪಿ ವಿಘಟನೆಯು ಪ್ರಾರಂಭವಾಗಲು

ಆದೇ ಸಾಮ್ರಾಜ್ಯಕ್ಕೆ ಆಗ ಕಾಲ ಪ್ರಾರಂಭವಾಯಿತು. ಮುಸಲ್ಮಾನ ರಾಜರು ಈ ಸಂಘಟನಾಶಕ್ತಿಯ ಆರಾಧನೆಯನ್ನು ಸರಿಯಾಗಿ ಮಾಡಿದರು. ಆಗ ಅವರಿಗೆ ಶಕ್ತಿದೇವತೆಯು ಪ್ರಸನ್ನಳಾದಳು ಅವಳೇನು ದೇಶದ ಕಾಲ ಧರ್ಮಗಳ ಪಕ್ಷಪಾತಿಯೋ? ಅಲ್ಲವೇ ಅಲ್ಲ. ಮುಸಲ್ಮಾನರಾಜರು ತಮ್ಮ ಈ ಸಂಘಟನಾಶಕ್ತಿಯಿಂದಲೇ ವಿಜಯನಗರ ಸಾಮ್ರಾಜ್ಯವನ್ನು ನಾಶಮಾಡಿದರು

ಇದರಿಂದ ಬಲಿಗಳ ಸಂಘಟನೆಯೇ ಸ್ವಾತಂತ್ರ್ಯಕ್ಕೂ ವಿಘಟನೆಯೇ ಪಾರತಂತ್ರ್ಯಕ್ಕೂ ಕಾರಣವೆಂಬುವದು ಸ್ಪಷ್ಟವಾಗುವದಿಲ್ಲವೇ? ಕಳೆದ ಆರುನೂರು ವರುಷಗಳ ಇತಿಹಾಸವೂ ಇದನ್ನೆ ಘಂಟಾಘೋಷವಾಗಿ ಹೇಳುವದಿಲ್ಲವೇ? ಆರುನೂರು ವರುಷಗಳ ಹಿಂದಿನಂತೆಯೇ ಈಗಲೂ ಹಿಂದುಗಳು ಹೀನಸ್ಥಿತಿಯಲ್ಲಿಯೇ ಇಲ್ಲವೆ? ಶಾರೀರಿಕ ಮತ್ತು ಆರ್ಥಿಕ ಬಲಗಳು ಆಗಿನಗಿಂತಲೂ ಈಗ ಹೆಚ್ಚು ಕ್ಷೀಣಿಸಿಲ್ಲವೆ? ಎಂದಮೇಲೆ ನಾವು ಈಗ ಯಾವ ಶಕ್ತಿಯ ಆರಾಧನೆಯನ್ನು ಹೇಗೆ ಮಾಡಿ ಮುಂದಣ ವಿಜಯದ ಸುಖಶಾಂತಿಗಳನ್ನನುಭವಿಸಬೇಕೆಂಬುದನ್ನು ಈ ವಿಜಯನಗರ ಸಾಮ್ರಾಜ್ಯ ಸ್ಮಾರಕದ ದಿನದಲ್ಲಿಯಾದರೂ ಯೋಚಿಸುವದು ವಿಹಿತವಲ್ಲವೇ?

---

## ಅರಿರಾಜ ಗಜಕೇಸರಿ

ಬರೆದವರು :—ಶ್ರೀ ಟಿ ವಿಶ್ವನಾಥ ಪ್ರೇಮಾಯತನ ತುಂಗಭದ್ರಾ

### ಪಾತ್ರಗಳು.

| | |
|---|---|
| **ರಾಯ** | ವಿಜಯನಗರದ ಅರಸರು |
| **ಸಾಳ್ವ ನರಸಿಂಗರಾಯ** | ವಿಜಯನಗರದ ಸೇನಾಧಿಪತಿ |
| **ಓಬಯ್ಯ** | ರಾಯರ ಕಡೆಯ ಚಾರಕ |
| **ತಿಮ್ಮಣ್ಣನಾಯಕ** .... | ಮೇಲ್ದುರ್ಗದ ನಾಯಕ |
| ಕುದುರೆಗಳ ಕಾವಲುಗಾರ ಸವಾರ. | ತಿಮ್ಮಣನಾಯಕನ ಅನುಯಾಯಿಗಳು. |

### ೧ ನೆಯ ದೃಶ್ಯ.

(ವಿಜಯನಗರದ ಅರಮನೆ! ಅದರ ದಿವಾಣಖಾನೆ' ರಾಯನು ತಳಮಳಗೊಂಡ ಮನಸ್ಸಿನಿಂದ ಅತ್ತಿಂದಿತ್ತ, ಇತ್ತಿಂದತ್ತ ತಿರುಗುತ್ತಿರುವನು, ಆಗಾಗ ಏನೋ ಗೊಣಗುತ್ತಿರುವನು, ಸಮಯ ರಾತ್ರಿ' )

**ರಾಯ**—ಏನು ಮಾಡಲಿ... ........(ಕೈಮುಷ್ಟಿಯನ್ನು ಅಂಗೈಗೆ ತಟ್ಟುವನು.) ಹಾಗೆ ಮಾಡಿದರ ಜನರ ಮನಸ್ಸಿಗೆ ಬಹಳ ನೋವಾಗುತ್ತದೆ. ಹೀಗೇ ಬಿಟ್ಟರೆ ಆ. ..ಗು...ವ ..ದಿಲ್ಲ. ಏನು ಮಾಡಬೇಕು.. ? (ಸ್ವಲ್ಪ ಹೊತ್ತಿನ ನಂತರ) ಹಾಂ! ಹಾಂ! ಹೀಗೆ ಮಾಡಬೇಕು. (ಏನೋ ನಿರ್ಧರಿಸಿದವನಂತೆ ಸಂಜ್ಞೆ ಮಾಡುವನು.) ಲೋ, ಯಾರಲ್ಲೀ ? (ಚಾರಕನು ಪ್ರವೇಶಿಸಿ ಸಲಾಂ ಮಾಡುವನು.) ನೀನು ಈಗಿಂದೀಗಲೆ ಹೋಗಿ ನರಸಿಂಗರಾಯ ಸಾಹೇಬರನ್ನು ಬರಮಾಡು ; ತಿಳಿಯಿತೇ ?

**ಚಾರಕ**—ಅಪ್ಪಣೆ (ಹೋಗುವನು)

(ರಾಯನು ಮೊದಲಿನಂತೆಯೇ ಶತಪಥ ತಿರುಗ ತೊಡಗುವನು. ಒಂದು ಉದ್ದನ ಚಣ್ಣ, ಅದರ ಮೇಲೆ ಮೊಣಕಾಲಿನ ವರೆಗೆ ಬರುವ ಮಕಮಲ್ಲಿನ ನಿಲುವಂಗಿ, ಸೊಂಟದಲ್ಲಿ ಒರೆಗಾಣಿಸಿದ ಕತ್ತಿ, ತೇಜೋಮಯವಾದ ಮುಖ, ಅರ್ಧ ಕತ್ತರಿಸಿದ ಕೂದಲುಗಳೇ ಆಭರಣವಾಗಿದೆ. ಮುಂಗೈಯಲ್ಲಿ ಸರಪಣಿ, ಬೆರಳಲ್ಲಿ ಉಂಗುರಗಳಿವೆ ಅಷ್ಟರಲ್ಲಿ ಸಾಳ್ವನರಸಿಂಗರಾಯನು ಪ್ರವೇಶಿಸುವನು. ಉದ್ದ ಆಳು, ಆದರೆ ತೆಳ್ಳಗೆಯ ಮೈ, ಬಿಳಿಯ ಚಣ್ಣವನ್ನೂ ಮತ್ತು ಬಿಳೀ ನಿಲುವಂಗಿಯನ್ನೂ ತೊಟ್ಟಿರುವನು. ಸೊಂಟದಲ್ಲಿ ಕತ್ತಿಯಿದೆ ತಲೆಯಲ್ಲಿ ಸುಂದರವಾದ ಹಸಿರು ರುಮಾಲು ಅದರ ಒಂದು ತುದಿಯು ಬೆನ್ನಿನಮೇಲೆ

ಜೋಲುತ್ತಿದೆ. ಮುಖವು ಸೌಂದರ್ಯದಿಂದ ತುಂಬಿದೆ. ಆತನು ಖಂಡವನೇ ವೀರಮಂಡಿಯುನ್ನೂರಿ)

**ಸಾಳ್ವನರಸಿಂಗರಾಯ:**—ಮಹಾಪ್ರಭುಗಳಿಗೆ ನಮಸ್ಕಾರ. ಸೇವಕನಿಂದಾಗಬೇಕಾದ ಕೆಲಸವೇನು?

**ರಾಯ**—ಇತ್ತ ಬನ್ನಿ ರಾಯರೇ, ಈಗ ನೋಡೀ, ಆ ಮೇಲ್ದುರ್ಗದ ಬೇಡರ ತಿಮ್ಮಣ್ಣನಾಯಕನು ಬಹಳ ಬಲಶಾಲಿಯಾಗಿದ್ದಾನೆ ಅದಕ್ಕೇ ಕೆಲವರು ಆತನು ಬಹಳ ಬಲಿಷ್ಠನಾದಮೇಲೆ ನಮ್ಮ ಮೇಲೆಯೇ ತಿರುಗಿ ಬೀಳುತ್ತಾನೆಂದು ಹೇಳುತ್ತಾರೆ. ಈಗ ಅವನ ಗರ್ವವನ್ನು ಮುರಿದು ಅವನನ್ನು ಕೈಕೆಳಗೆ ಇಟ್ಟುಕೊಳ್ಳದಿದ್ದರೆ ಮುಂದೆ ಕೇಡಾದೀತೆಂದೂ ಹೇಳುತ್ತಾರೆ. ಇದಕ್ಕಾಗಿ ನನಗೆ ಒಂದು ವಿಧಾನ ತೋರುತ್ತದೆ. ನೀವು ನಾಳೆ ಬೆಳಗ್ಗೆ ಸೈನ್ಯ ತೆಗೆದುಕೊಂಡು ಹೋಗಿ ಮೇಲ್ದುರ್ಗವನ್ನು ಮುತ್ತಿ ಅವನನ್ನು ಸೆರೆಹಿಡಿದು ತರಬೇಕು

**ಸಾಳ್ವ**—ಆಗಲಿ. ನಾನು ಈಗ ಹೋಗುವೆನು, ನಾಳೆಯೇ ಹೊರಡುವೆನು

**ರಾಯ**—ಆಗಲಿ!

(ಸಾಳ್ವನು ಹೋಗುವನು. ರಾಯನು ಯೋಚಿಸುತ್ತಾ ಕೂತಿರುವನು, ತೆರೆಬೀಳುವುದು.)

## ಎರಡನೆಯ ದೃಶ್ಯ.

(ತಿಮ್ಮಣನಾಯಕನ ಮೆಲ್ದುರ್ಗ ಸಾಳ್ವನ ಸೈನಿಕರೆಲ್ಲರೂ ಮುತ್ತಿಗೆ ಹಾಕಿರುವರು. ತಿಮ್ಮಣನಾಯಕನು ತನ್ನ ಕೋಣೆಯಲ್ಲಿ ಕುಳಿತುಕೊಂಡು ಈ ಸೈನ್ಯವನ್ನು ನೋಡಿ ಅನ್ನುತ್ತಾನೆ ಈತನದು ಅಗಲವಾದ ಎದೆ, ಗಟ್ಟಿಮುಟ್ಟಿಯಾದ ಕೈಕಾಲುಗಳು, ತೆಳ್ಳನೆಯ ನಿಲುವಂಗಿಯನ್ನು ತೊಟ್ಟಿರುವನು, ತಲೆಯಲ್ಲಿ ಹಳೆ ಗೂಡಿನ ತರಹದ ಒಂದು ರುಮಾಲಿದೆ.)

**ತಿಮ್ಮಣ್ಣನಾಯಕ**—ಹಾಯ್, ಹಾಯ್, ಹಾವಿಗೆ ಹಾಲೆರೆದ ಹಾಗಾಯಿತಲ್ಲ! ವಿಜಯನಗರದವರು ಸಮ್ರಾಟರು. ಅವರಿಗೆ ನಾನು ಸಾಮಂತನಾಗಿರಬೇಕೆಂದು ಯೋಚಿಸಿ ಮಾಡಿದುಪಕಾರಗಳನ್ನೆಲ್ಲಾ ಮರೆತು ಈಗ ಯಾರದೋ ಚಾಡೀಮಾತುಗಳನ್ನು ಕೇಳಿ ನನ್ನನ್ನು ಸೆರೆಹಿಡಿಯಬಂದಿರುವರು. ಇರಲಿ ಇವರ ಪೊಳ್ಳು ಬೆದರಿಕೆಗೆ ಬೆದರುವವನಾನಲ್ಲ. ....... ಆಗಲಿ ಈ ದಿನ ರಾತ್ರಿ ಹಾಡು ನನ್ನ ಈ ಕತ್ತಿಯೊಡನೆ ಆ ಸಾಳ್ವನ ಬಿಡದಿಗೆ ಹೋಗಿ ಆತನ ಸ್ವಂತದ ಕುದುರೆಯನ್ನೇ ಹಾರಿಸಿಕೊಂಡು ಬರಬೇಕು, ಈಗ ಹಾರಿಸಿಕೊಂಡು ಬಂದರೇನೇ ನಾನು ತಿಮ್ಮಣ್ಣನಾಯಕನು. ಎನ್ನುತ್ತಾ ಕತ್ತಿಯನ್ನು ತಿರುವುತ್ತಾ ಹೋಗುವನು. ತೆರೆ ಬೀಳುವುದು.

## ಮೂರನೆಯ ದೃಶ್ಯ.

(ರಾತ್ರಿ. ಸಾಳ್ವ ನರಸಿಂಗರಾಯನ ಕುದುರೆಯ ಲಾಯ. ಬಾಗಿಲಿನಲ್ಲಿ ಕುದುರೆಗಳ ಕಾವಲುಗಾರನು ಮಲಗಿರುವನು. ಸೊಂಟದಲ್ಲಿ ಕತ್ತಿಯೊಡನೆ ತಿಮ್ಮಣ್ಣನಾಯಕನು ಪ್ರವೇಶಿಸುವನು. ಮುಖವು ಬಹಳ ಭಯಂಕರವಾಗಿದೆ. ಮೈತುಂಬಾ ಕರೆಯ ಬಟ್ಟೆ. ಮೆಲ್ಲನೆ ಆತನು ಆ ಕಾವಲುಗಾರನನ್ನು ದಾಟಿಹೋಗುವನು. ಸ್ವಲ್ಪ ಹೊತ್ತಿನ ನಂತರ ಒಳಗಿನಿಂದ ಶಬ್ದ ಆಗುವದು. ಆ ಕಾವಲುಗಾರನು ಎದ್ದು ತೆರೆಯ ಕಡೆ ನೋಡಿ)

**ಕಾವಲುಗಾರ**—ಏನು ಕುದುರೆಯಿದು! ಏನಪ್ಪಾ, ಭಾರೀ ಚೇಷ್ಟೆ! ಅದನ್ನು ಕಟ್ಟಿದ ಗೂಟವನ್ನು ಕಿತ್ತುಕೊಂಡಿದೆಯೆಂದು ಕಾಣುತ್ತೆ. ಅಯ್ಯೋ ದೇವರೇ! (ಎದ್ದು ಹೋಗುವನು. ತೆರೆ ಬೀಳುವದು.)

## ನಾಲ್ಕನೆಯ ದೃಶ್ಯ.

(ಕುದುರೆಯ ಲಾಯ. ತಿಮ್ಮಣ್ಣನಾಯಕನು ಕುದುರೆಯನ್ನು ಬಿಚ್ಚುತ್ತಿರುವನು. ಬಾಗಿಲಿನಲ್ಲಿ ಸಧ್ಬಾದದ್ದನ್ನು ಕೇಳಿ ಬಾಗಿಲಿಗೆ ಬಂದು ನೋಡಿ)

**ತಿಮ್ಮಣ್ಣನಾಯಕ**— ಓಹೋ! ಕಾವಲುಗಾರನು ಬಂದ. ನಾ ಇವನನ್ನು ಕೊಂದರೆ ಯಲ್ಲರಿಗೂ ಯಚ್ಚರವಾಗುವುದು, ನನ್ನ ಕಾರ್ಯವಾಗುವದಿಲ್ಲ ಏನು ಮಾಡೋಣ? (ಯೋಚಿಸುವನು) ಓಹೋ, ಇದಕ್ಕೆ ಭಯವೇತಕ್ಕೆ. (ತಕ್ಷಣ ಕುದುರೆಯ ಮುಂಭಾಗದಲ್ಲಿದ್ದ ಹುಲ್ಲನ್ನು ಎತ್ತಿ ಅಡಿಯಲ್ಲಿ ಮಲಗಿಕೊಂಡು ತನ್ನಮೇಲೆ ಹುಲ್ಲನ್ನು ಮುಚ್ಚಿಕೊಳ್ಳುವನು. ಕಾವಲಗಾರನು ಬರುವನು)

**ಕಾವಲುಗಾರ**—ನಿನ್ನ ಮನೆ ಹಾಳಾಗ, ನೀನು ಸತ್ತು ಹೋಗ, ಎಷ್ಟುಸಾರಿ ಹಗ್ಗವನ್ನು ಬಿಚ್ಚಿಕೊಳ್ಳುತ್ತೀಯಾ, ನಿನ್ನನ್ನೀಗ ಎಂದಿಗೂ ತಪ್ಪಿಸಿಕೊಳ್ಳದ ಹಾಗೆ ಬಿಗಿಯುತ್ತೇನೆ. (ಎಂದು ಹೇಳಿ ಪಕ್ಕದಿಂದ ಒಂದು ಕಬ್ಬಿಣದ ದೊಡ್ಡ ಸಲಾಕೆಯನ್ನೂ ಒಂದು ದೊಡ್ಡ ಕೊಡತಿಯನ್ನು ತಗೆದುಕೊಂಡು ಬಂದು ತಿಮ್ಮಣನಾಯಕನ ಬಲಗೈಯದ್ದಲ್ಲಿಟ್ಟು ಗಟ್ಟಿಯಾಗಿ ಹೊಡೆದು ಆ ಸಲಾಕೆಯು ಗಟ್ಟಿಯಾದ ಮೇಲೆ ಆ ಕುದುರೆಯನ್ನು ಅದಕ್ಕೆ ಕಟ್ಟಿ) ನಿದ್ದೇ ಮಾಡೋಕೆ ಬಿಡೊಲ್ಲ.

ಇನ್ನೇನು ಮಾಡ್ತೀಯ್ಯಾ ನೋಡೋಣ. (ಹೋಗುವನು. ಸ್ವಲ್ಪಹೊತ್ತಿನ ನಂತರ ತಿಮ್ಮಣನಾಯಕನು ಹುಲ್ಲನ್ನು ಸರಿಸಿ ತನ್ನ ಬಲಗೈಯ್ಯಮೇಲೆ ಗೂಟ ಬಡೆದುದನ್ನು ನೋಡಿ)

**ತಿಮ್ಮಣ್ಣನಾಯಕ**—ಅಯ್ಯೋ! [ ಏಳಲಿಕ್ಕೆ ಹೋಗಿ ಕೈಯನ್ನು ತೆಗೆಯಲಾಗದೆ ಕೂತುಕೊಂಡು)ನಾನು ಕುದುರೆಯನ್ನು ತರಲಿಕ್ಕೆಂದು ಬಂದು ಇಲ್ಲಿ ಸಿಕ್ಕಿ ಬಿಟ್ಟೆನಲ್ಲಾ! ಇನ್ನೇನು ಮಾಡುವದು. . (ಸ್ವಲ್ಪ ಹೊತ್ತು ಯೋಚಿಸಿ )ಅದಕ್ಕೇಕೆ ಚಿಂತೆ? ಹುಟ್ಟಿದ ಜೀವಿ ಎಂದಾದರೂ ಸಾಯುವುದೇ. ನಾನು ಮಾಡಿದ ಪ್ರತಿಜ್ಞೆಯನ್ನು ನಡೆಯಿಸುವದೇ ನನ್ನ ಕರ್ತವ್ಯ. (ತಕ್ಷಣ ಯಡಗೈಯಿಂದ ಕತ್ತಿಯನ್ನು ತೆಗೆದುಕೊಂಡು ತನ್ನ ಬಲಗೈಯನ್ನು ಅಲ್ಲಿಗೇ ಕತ್ತರಿಸಿ ಮುಂಡುಗೈಯನ್ನು ಮೇಲಕ್ಕೆತ್ತುವನು. ರಕ್ತ ಸೋರುತ್ತಿರುವುದು ಹಾಗೆಯೇ ಕುದುರೆಯನ್ನು ಬಿಚ್ಚಿ, ಎಡಗೈಯಿಂದಲೇ ಲಗಾಮನ್ನು ಹಿಡಿದುಕೊಂಡು ಕುದುರೆಯಮೇಲೆ ಹಾರಿ ಕುಳಿತುಕೊಂಡು ಹೋಗುವನು. ತೆರೆ ಬೀಳುವುದು )

## ಐದನೆಯ ದೃಶ್ಯ.

[ಮಾರನೆಯ ದಿನ ಬೆಳಗ್ಗೆ ಕುದುರೆಯ ಕಾವಲುಗಾರನು ಬರುವನು.]

**ಕಾವಲುಗಾರ**— [ ಕುದುರೆಯನ್ನುದ್ದೇಶಿಸಿ ] ಬಿಚ್ಚಿಕೊಂಡ್ಯೇನು ಈಗ್ಲೂವೆ. [ ಸುತ್ತಲೂ ನೋಡಿ] ಆಂ, ಕುದುರೆಯಿಲ್ಲ.... ಲಗಾಮಿಲ್ಲ. ಯಾರೋ ಬಿಚ್ಚಿಕೊಂಡು ಹೋಗಿರುವರು [ ಒಂದು ಹೆಜ್ಜೆಯನ್ನು ಮುಂದಿಟ್ಟು ರಕ್ತವನ್ನು ನೋಡಿ ಆಶ್ಚರ್ಯಯುಕ್ತನಾಗಿ ]ಓಹೋ! ಏನೋ ನಡೆದೈತೆ.[ರಕ್ತದ ಗುರುತನ್ನೇ ಹಿಡಿದುಕೊಂಡು ಗೂಟದ ವರೆಗೆ ಹೋಗಿ ಆ ಮುಂಡುಹಸ್ತವನ್ನುನೋಡಿ]ಅಯ್ಯಬ್ಬಾ [ಯೋಚಿಸುವನು.]ಓಹೋ ಈಗ ಗೊತ್ತಾಯಿತು. ಯಾರೋ ರಾತ್ರಿ ಬಂದಿದ್ದರು ; ಕುದುರೆ ಕದಿಯಲಿಕ್ಕೆ. ಕದ್ದಿದ್ದೂ ದೊಡ್ಡದನ್ನೆ ಕದ್ದಿರುತ್ತಾರೆ. ಯಾರೋ ಗಟ್ಟಿಗರಿರಬೇಕು. ನಾನು ರಾತ್ರಿ ಬಂದ ಕೂಡಲೆ ಈ ಹುಲ್ಲಿನೆಡೆಯಲ್ಲಿ ಮಲಗಿದ್ದರು. ಅಯ್ಯೋ! ನನಗೆ ಗೊತ್ತಾಗದೆ ಅವರ ಕೈಮೇಲೇ ಸಲಾಕೆಯನ್ನು ಹೊಡೆದುಬಿಟ್ಟೆ. ನಾನೇ ಧೀರ. ಅಯ್ಯಬ್ಬಾ! ಅವರು ಮತ್ತೂ ಧೀರರು. ಕೈಯನ್ನು ಅಲ್ಲಿಗೇ ಕಡಿದುಕೊಂಡು ಕುದುರೆಯನ್ನು,ಅದರಲ್ಲೂ ನರಸಿಂಗಯ್ಯನದನ್ನೇ ತೆಗೆದುಕೊಂಡು ಹೋಗಿರುವರು. ಇನ್ನೇನು ಮಾಡೋಣ.(ಗೂಟವನ್ನು ಕಿತ್ತು ಮುಂಗೈಯನ್ನು ಮೇಲಕ್ಕೆತ್ತುವನು.ರಕ್ತವು ತೊಟ್ಟಿಕ್ಕುತ್ತಿರುವುದು. ಆತನು ಆಶ್ಚರ್ಯದಿಂದ ನೋಡುವನು ತೆರೆ ಬೀಳುವುದು. )

## ಆರನೆಯದೃಶ್ಯ.

( ಸಾಳ್ವ ನರಸಿಂಗರಾಯನ ಡೇರೆ. ಆತನು ಚಿಂತಿಸುತ್ತಾ ಕುಳಿತಿರುವನು. ರಾತ್ರಿ. ಅಲ್ಲಿಯೇ ಒಂದು ನಂದಾದೀಪವು ಉರಿಯುತ್ತಿದೆ. )

**ಸಾಳ್ವನರಸಿಂಗರಾಯ**:- ಈ ದುರ್ಗಕ್ಕೆ ಮುತ್ತಿಗೆ ಹಾಕಿದಂದಿನಿಂದ ಏನೂ ಪ್ರಯೋಜನವು ನಮಗಾಗಲಿಲ್ಲ ಆದರೆ ನಮ್ಮದೇ ಆನೆಯೂ ಕುದುರೆಯೂ ಹೋದುವು. ನಾವು ತಿಮ್ಮಣ್ಣನಾಯಕನ ಬಲಗೈ ಒಂದುಮಾತ್ರ ತೆಗೆದುಕೊಂಡೆವು. ಆತನು ಪ್ರತಿದಿನವೂ ನಮ್ಮ ಸೈನ್ಯವನ್ನು ರಕ್ಕಸನಂತೆ ಮುಕ್ಕುತ್ತಿರುವನು ಈ ದುರ್ಗವು ಬಲವಾಗಿದೆ. ದವಸ ಧಾನ್ಯಗಳೂ ಸಮೃದ್ಧಿಯಾಗಿವೆ. ಆದ್ದರಿಂದ ಆದಷ್ಟು ಬೇಗ ಹಿಂದಕ್ಕೆ ಹೋಗುವುದು ಒಳ್ಳೆಯದು. ಅಷ್ಟೇಕೆ? ನಾಳೆಯ ದಿನವೇ ಹಿಂದಕ್ಕೆ ಹೋಗೋಣ. ರಾಯರಿಗೆ ಮೊನ್ನೆ ಕಾಗದ ಕಳುಹಿಸಿದ್ದೆ. ಎಂತಹ ಧೀರ ನೀತ, ಈತನನ್ನು ಜಯಿಸಲು ನನ್ನಿಂದ ಶಕ್ತಿಯಿಲ್ಲವೆಂದೇ ತೋರುತ್ತದೆ. ಇಂತಹ ಧೀರನನ್ನು ಸ್ನೇಹಿತನಾಗಿಟ್ಟುಕೊಳ್ಳುವುದು ಒಳ್ಳೆಯದು. ಏನೇ ಇರಲಿ, ನಾಳೆ ಹೋಗಲಿಕ್ಕೆ ಸಿದ್ಧತೆಮಾಡುವೆನು. ರಾತ್ರಿ ಬಹಳವಾಯಿತು. (ಹೊರಟು ಹೋಗುವನು ತೆರೆಬೀಳುವುದು)

## ಏಳನೆಯದೃಶ್ಯ.

( ವಿಜಯನಗರದ ದಿವಾಣಖಾನೆ, ರಾಯನು ಕುಳಿತಿರುವನು. ಕಾಲ, ಮಧ್ಯಾಹ್ನ )

**ರಾಯ**:- ಏನು? ವಿಜಯನಗರದ ಹೊಡೆತಕ್ಕೆ ಮೇಲ್ದುರ್ಗವು ಬಗ್ಗದೇ ಹೋಯಿತು. ಅದನ್ನುನೋಡಿ ಈಗ ಗುಲ್ಬರ್ಗವು ತಲೆಯೆತ್ತಿತು. ಇದನ್ನು ಬಗ್ಗಬಡಿಯದೇ ಇದ್ದರೆ ಆಗುವುದಿಲ್ಲ. ಸಾಳ್ವನರಸಿಂಹನನ್ನು ಅಲ್ಲಿಗೆ ಕಳುಹಿಸಿಯಾದರೂ ನೋಡೋಣ; ಲೋ.... ..ಯಾರಲ್ಲೀ ?

**ಚಾರಕ**:—ಮಹಾಪ್ರಭೋ,

**ರಾಯ**:— ನೀನು ಸಾಳ್ವನರಸಿಂಗರಾಯರಲ್ಲಿಗೆ ಹೋಗಿ ಅವರಿಗೆ ನಾನು ಕರೆದೆನೆಂದು ಹೇಳು.

**ಚಾರಕಃ—** ಅಪ್ಪಣೆ. ( ಹೋಗುವನು. ಸ್ವಲ್ಪ ಹೊತ್ತಿನಲ್ಲಿಯೇ ಸಾಳ್ವನರಸಿಂಗರಾಯನು ಪ್ರವೇಶಿಸಿ ನಮಸ್ಕರಿಸುವನು )

**ರಾಯಃ**—ಬನ್ನಿ, ಸಾಳ್ವರೇ ನೀವು ಮೋಲ್ದುರ್ಗಕ್ಕೆ ಹೋದ ಸಂಗತಿಯನ್ನು ಮರೆತುಬಿಡಿ. ನಾಳೆ ನೀವು ಗುಲ್ಬುರ್ಗಾಕ್ಕೆ ಸೈನ್ಯಸಹಿತ ಹೋಗಿ ಅಲ್ಲಿಯ ನವಾಬನನ್ನು ಸೋಲಿಸಿ ಆ ಕೋಟೆಯನ್ನು ಹಿಡಿಯಬೇಕು.

**ಸಾಳ್ವಃ**—ಆಗಲಿ ಪ್ರಭೋ! ನಾನು ಕೈಲಾದಷ್ಟು ಪ್ರಯತ್ನಿಸುತ್ತೇನೆ. ಈಶೇಚ್ಛೆ.

**ರಾಯಃ**—ನಿಮ್ಮ ಕೈಲಾದಷ್ಟು ಪ್ರಯತ್ನಿಸಿರಿ. ನಂತರ ಹಂಪೆಯಾಧೀಶನಿಹನು

**ಸಾಳ್ವಃ**—ಅಹುದು ಪ್ರಭೋ, ತೆರಳುವೆನು.

**ರಾಯಃ**-ಆಗಲಿ, ಜಯಶೀಲರಾಗಿ ಬನ್ನಿ !!!

( ಸಾಳ್ವನು ಹೋಗುವನು. ತೆರೆಬೀಳುವುದು )

## ಎಂಟನೆಯ ದೃಶ್ಯ.

(ಹದಿನೈದು ದಿನಗಳ ನಂತರ ರಾಯನು ಚಿಂತಿಸುತ್ತಾ ಕುಳಿತಿಹನು. ಕಾಲ, ಮುಂಜಾನೆ)

**ರಾಯ**—ಅಯ್ಯೋ. ಏನಿದು ಈ ಸಾಳ್ವ ನರಸಿಂಗರಾಯನು ಹೋದಲ್ಲೆಲ್ಲಾ ನಮಗೆ ಸೋಲೇ! ಈಗ ಗುಲ್ಬುರ್ಗಾದಲ್ಲಿ ಸೋತಿರುವನಂತೆ. ಆದರೆ ಆ ನವಾಬನನ್ನು ಸೋಲಿಸದಿದ್ದರೆ ಆಗುವದಿಲ್ಲ. ಏನು ಮಾಡೋಣ? ( ಯೋಚಿಸಿ ) ತಿಳಿಯಿತು. ಈಗ ತಿಮ್ಮಣ್ಣನಾಯಕನ ರೀತಿ ನೋಡಬಹುದು. ನಾನೀಗ ಆತನಿಗೆ ಗುಲ್ಬುರ್ಗಾದವರ ಮೇಲೇರಿ ಹೋಗಲು ಪತ್ರ ಬರೆವೆನು ಏನು ಮಾಡುತ್ತಾನೋ ನೋಡೋಣ. ( ಪತ್ರ ಬರೆಯುವನು. ನಂತರ ) ಓಬಾ, ಓಬಾ,

**ಓಬಾ**—(ಪ್ರವೇಶಿಸಿ) ಪ್ರಭೋ,

**ರಾಯ**—ನೀನು ಈ ಕಾಗದವನ್ನು ಮೋಲ್ದುರ್ಗಕ್ಕೆ ಕೊಂಡು ಹೋಗಿ ತಿಮ್ಮಣ್ಣನಾಯಕನಿಗೆ ಕೊಡು.

**ಓಬಾ**—ಅಪ್ಪಣೆ. ( ಕಾಗದವನ್ನು ತೆಗೆದುಕೊಂಡು ಹೊರಡುವನು. ತೆರೆ ಬೀಳುವದು. )

## ಒಂಬತ್ತನೆಯ ದೃಶ್ಯ.

[ಮೋಲ್ದುರ್ಗ. ತಿಮ್ಮಣ್ಣನಾಯಕನು ಯುದ್ಧಸನ್ನದ್ಧನಾಗಿ ಕುಳಿತಿರುವನು. ಕಾಲ ಮುಂಜಾನೆ. ಬಲಗೈ ಮುಂದು )

**ತಿಮ್ಮಣ್ಣನಾಯಕ**—ಓಹೋ , ಸಾಳ್ವ ನರಶಿಂಗರಾಯರ ಕೈಯಲ್ಲಾಗದುದನ್ನು ನನಗೆ ಹಾಕಿರುವರು. ಅಂದು ಅದೇ ನರಸಿಂಗರಾಯರನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದ್ದರು. ಆ ಯುದ್ಧದಲ್ಲಿ ಅವರು ಸೋತುದುದರಿಂದ ಇಂದು ಈ ಸ್ನೇಹಾಚಾರದ ಪತ್ರ. ಆದರಲ್ಲೂ ಸಂಕಟ ಕಾಲದಲ್ಲಿ. ಚಿಂತೆಯಿಲ್ಲ. ಎಷ್ಟಾದರೂ ಚಕ್ರಾಧಿಪತಿಗಳು. ಒಂದು ಸಾರಿ ತಪ್ಪಿದರೆ ಇನ್ನೊಂದು ಸಾರಿ ತಿದ್ದಿಕೊಳ್ಳುವರು. ನಾನು ಈಗಿಂದೀಗಲೇ ಗುಲ್ಬುರ್ಗಾಕ್ಕೆ ಹೋಗಿ ಸಾಳ್ವ ನರಸಿಂಗರಾಯನನ್ನು ಮುತ್ತಿಗೆಯಿಂದೆಬ್ಬಿಸಿ ಆ ಗುಲ್ಬುರ್ಗಾದವನನ್ನು ಹಣ್ಣಿಗೆ ತರುವೆನು. ನನ್ನ ಸೈನ್ಯವನ್ನೆರಡು ಭಾಗ ಮಾಡಿ ಒಂದು ಭಾಗವನ್ನು ಅಣ್ಣನೂ ಇನ್ನೊಂದು ಭಾಗವನ್ನು ನಾನೂ ಇಟ್ಟುಕೊಂಡು ಆ ಗುಲ್ಬುರ್ಗಾದ ಕಂದಕವನ್ನು ಈ ದಿನ ರಾತ್ರಿ ಹತ್ತಿ. ಅಂಡಿಗೆಗಳಿಂದ ಮುಚ್ಚಿಸಿ ರಾತ್ರಿ ಬೆಳಗಾಗುವದರಲ್ಲಿಯೇ ಗುಲ್ಬುರ್ಗಾವನ್ನು ತೆಗೆದುಕೊಂಡ ಸುದ್ದಿಯನ್ನು ರಾಯರಿಗೆ ಕಳುಹಿಸದಿದ್ದರೆ ನಾನು ಮೋಲ್ದುರ್ಗದ ತಿಮ್ಮಣ್ಣನಾಯಕನೇ ಅಲ್ಲ.

(ಎನ್ನುತ್ತಾ ಹೋಗುವನು ತೆರೆ ಬೀಳುವದು.)

## ಹತ್ತನೆಯ ದೃಶ್ಯ.

(ಗುಲ್ಬುರ್ಗಾದಲ್ಲಿ ತಿಮ್ಮಣ್ಣನಾಯಕನ ಪಾಳಯ. ಗುಲ್ಬುರ್ಗಾವು ತಿಮ್ಮಣ್ಣನಾಯಕನ ವಶವಾಗಿದೆ. ಎಲ್ಲರೂ ಸಂತೋಷದಿಂದಿದ್ದಾರೆ. ಕೆಲವು ಕಡೆ ತಿಮ್ಮಣ್ಣನಾಯಕನ ಆಳುಗಳು ಲಾವಣಿಗಳನ್ನು ಹೇಳುತ್ತಲೂ ಕುಣಿಯುತ್ತಲೂ ಇದ್ದಾರೆ. ಅಷ್ಟೊತ್ತಿಗೆ ಒಬ್ಬ ಕುದುರೆ ಸವಾರನು ಬರುವನು.ಎಲ್ಲರೂ ಅವನನ್ನು ಸುತ್ತುವರು ಅವನು ಒಂದು ಕಾಗದವನ್ನು ಕೊಡುವನು ಅವರಲ್ಲಿ ಒಬ್ಬನು ಅದನ್ನು ನೋಡಿ ಆ ತಿಮ್ಮಣ್ಣನಾಯಕರಿಗೆ ಓದಿ ಅದರ ಸಾರಾಂಶವನ್ನು ಹೇಳುವನು. )

**ಸೈನಿಕ**— ಸ್ವಾಮೀ ನಾಯಕರೇ, ನಿಮ್ಮ ನಿನ್ನಿನ ರಾತ್ರಿಯ ವಿಜಯವನ್ನು ನೋಡಿ ರಾಯರು ಬಹಳ ಸಂತೋಷದಿಂದ ನಿಮಗೆ ಒಂದು ಬಿರುದನ್ನು ಕೊಟ್ಟಿರುವರು.

**ತಿಮ್ಮಣ್ಣನಾಯಕ**—(ಅವರೆಲ್ಲರ ಮಧ್ಯಕ್ಕೆ ಬಂದು) ಏನದು?

**ಸೈನಿಕ**—ನಿಮ್ಮನ್ನು ಇಂದಿನಿಂದ " **ಅರಿರಾಜ ಗಜಕೇಸರಿ** " ಎಂದು ಕರೆಯುವದಂತೆ.

**ಎಲ್ಲರೂ**—[ ತಿಮ್ಮಣ್ಣನಾಯಕನ ಹೊರತು ಕತ್ತಿಗಳನ್ನು ಹೊರಕ್ಕೆಳೆದು]

ಅರಿರಾಜ ಗಜಕೇಸರೀ
ಅರಿರಾಜ ಗಜಕೇಸರೀ
ಅರಿರಾಜ ಗಜಕೇಸರೀ

[ಎಂದು ಮೂರು ಬಾರಿ ನಮಸ್ಕರಿಸುವರು ]

[ ತೆರೆ ಬೀಳುವದು. ]

---

# ಪುರಾತನ ವಿಜಯನಗರದ ಇತಿಹಾಸ

**ಲೇಖಕರು: —ರಾ. ಬ. ಸಿ. ಹಣಮಂತಗೌಡರು. ಹೊಸಪೇಟೆ**

ಇನ್ನು ಬಹು ಸ್ವಲ್ಪ ದಿವಸಗಳಲ್ಲಿ ಶ್ರೀ ಹಂಪೀ ಕ್ಷೇತ್ರದಲ್ಲಿ ನಡೆಯುವ ಶ್ರೀವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವದಲ್ಲಿ ಆ ವಿಜಯನಗರ ರಾಜಧಾನಿಯ ಶಂಖು ಸ್ಥಾಪನಾದಿ ಮಹಾ ಸಮಾರಂಭವು ಹೇಗೆ, ಯಾವ ಸಂದರ್ಭದಲ್ಲಿ ಯಾರಿಂದ, ಯಾವ ಕಾಲದಲ್ಲಿ ನಡೆಯಿತೆಂಬುದನ್ನು ತಿಳಿದುಕೊಂಬುವ ಅಪೇಕ್ಷೆಯು ನಮ್ಮ ಕನ್ನಡನಾಡಿನಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬನಿಗೆ ಇದ್ದೇ ಇರುವದು.

ಈ ವಿಷಯದಲ್ಲಿ ಅನೇಕಾನೇಕ ಪೂರ್ವ ಹಾಗು ಆಧುನಿಕ ಚರಿತ್ರಕಾರರು, ಇತಿಹಾಸಜ್ಞರು, ಶಿಲಾಶಾಸನ ಸಂಶೋಧಕರು, ಪಾಶ್ಚಾತ್ಯ ಪ್ರವಾಸಿಕ ಮುಂತಾದ ಪಂಡಿತ ಮಾನ್ಯರು, ತಮಗೆ ದೊರೆತ ಹಲವು ಬಗೆ ಸಾಧನ ಸಾಮುಗ್ರಿಗಳಿಗನುಸರಿಸಿ ಬೇರೆಬೇರೆ ರೀತಿಯಲ್ಲಿ ಉಲ್ಲೇಖಿಸಿರುವರು. ಇವರುಗಳಲ್ಲಿ ಕೆಲವರು ಈ ಪಟ್ಟಣವು ಶ್ರೀ ವಿದ್ಯಾರಣ್ಯ ಮುನಿಗಳಿಂದ ನಿರ್ಮಾಣ ವಾಯಿತೆಂತಲು, ಇನ್ನೂ ಕೆಲವರು ಓರಗಲ್ಲು ಪ್ರಾಂತದ ಹುಕ್ಕಬುಕ್ಕರೆಂಬ ಈರ್ವರು ಕುರುಬ ಕುಮಾರರಿಂದ ಸ್ಥಾಪಿತವಾಯಿತೆಂತಲೂ ಮತ್ತೆ ಕೆಲವರು ಬೇಟೆಯನಾಯಿಗಳು ನೆವರಿಸಿನಿಂತ ಮಲದ ಹಿಂಡೆಗುಂಟಾದ ಗಂಡುಮೆಟ್ಟಿನ ಸ್ಥಾನಬಲುಮೆಯನ್ನು ಕಂಡಿಟ್ಟ ವಿದ್ಯಾರಣ್ಯರೆ ಈ ದೇಶದಲ್ಲಿ ರಾಜಧಾನಿಯ ನಿರ್ಮಾಣ ಕಾರ್ಯವನ್ನು ಕೈಕೊಂಡರೆಂತಲು, ಇವೇ ಮುಂತಾದ ವಿಷಯುಗಳಿಂದ ಕೂಡಿದ ವಿಷಯುಗಳನ್ನು ವ್ಯಕ್ತಗೊಳಿಸಿರುವರು. (Never to be forgotten Empire) ಎಂದಿಗೂ ಮರೆಯಲಾಗದ ಸಾಮ್ರಾಜ್ಯದ ಕರ್ತರಾದ ಶ್ರೀ. ಸೂರ್ಯನಾರಾಯಣರಾಯರು, ಶ್ರೀ ವಿದ್ಯಾರಣ್ಯರ ಜೀವನ ಚರಿತ್ರೆಯನ್ನು ಬರೆಗಮಣನಿಬಂದರು ವಾಸ್ತವ್ಯರು, ಸಬ್‌ಜಡ್ಜಿ ಸ್ಥಾನವನ್ನ ಲಂಕರಿಸಿದವರು ಆದ ವೆಂಕಟಶಿವಾವಧಾನಿಗಳು ಮುಂತಾದವರೆಲ್ಲ ತಮಗೆ ಶೃಂಗಗಿರಿಮಠದಲ್ಲಿ ದೊರೆತ ಪುರಾತನ ಲೇಖ ಹಾಗೂ ಶಿಲಾಶಾಸನಾದಿ ಆಧಾರಗಳಿಂದ ಈ ವಿಜಯನಗರ ಪಟ್ಟಣವು ಶ್ರೀ ವಿದ್ಯಾರಣ್ಯರಿಂದಲೇ ಪ್ರಥಮದಲ್ಲಿ ಸ್ಥಾಪಿತವಾಗಿ ಹರಿಹರ ಬುಕ್ಕರೆಂಬ ಯಾದವಕುಲೋತ್ಪನ್ನರಿಗೆ ಆಳಲು ಶಾ॥ ಶಕೆ ೧೨೫೮ನೆಯ ಧಾತು ಸಂ॥ ವೈಶಾಖಮಾಸ ಶುಕ್ಲಪಕ್ಷದ ಸಪ್ತಮೀ ಸೌಮ್ಯವಾಸರದಲ್ಲಿ ಮೂರ್ಧಾಭಿಷಿಕ್ತರನ್ನಾಗಿ ಮಾಡಿಕೊಡಲ್ಪಟ್ಟಿತೆಂದು ವಿಶದೀಕರಿಸಿರುವರು. —ಅದರೆ ಮಹಿಸೂರು, ಮದರಾಸು ಶಾಸನ ಸಂಶೋಧಕ ಇಲಾಖೆಗಳ ಅಧಿಕಾರಿಗಳಾಗಿದ್ದ ಪ್ರಾಕ್ತನ ವಿಮರ್ಶಕ ರಾಯಬಹದ್ದೂರ ಆರ್ ನರಸಿಂಹಾಚಾರ್ಯ ಎಂ. ಎ ಹಾಗು ರಾವಬಹಾದ್ದೂರ ಹೆಚ್ ಕೃಷ್ಣಶಾಸ್ತ್ರಿಗಳು ಮೇಲೆ ಸೂಚಿಸಿದ ಐತಿಹ್ಯಗಳಿಗೆ ಏಕೀಭವಿಸದೆ ಕೆಲವು ವತ್ಸರಗಳು ಕಲೆಕ್ಟರಾಗಿದ್ದ ರಾಬರ್ಟ್ಸು ಸುವೆಲ್‌ಸಾಹೇಬರು Never to be forgotten Empire) ಎಂಬ ಗ್ರಂಥದಲ್ಲಿ ಉಪಪತ್ರಗಳಾಗಿ ಪ್ರಚುರುಗೊಳಿಸಿದ ಪೋರ್ಚುಗೀಸು ದೇಶೀಯ ಪ್ರವಾಸಿಗಳ ಐತಿಹ್ಯ ಸಂಶೋಧನ ಪತ್ರಗಳ ಆಧಾರದಿಂದ ಈ ವಿಜಯನಗರವು ದೇವರಾಯನೆಂಬ ಒಬ್ಬರಾಜನಿಂದ ಗಡೀಪಟ್ಟಣವಾಗಿ ನಿರ್ಮಿತವಾಗಿ ಅವಕ್ಕೆ ವಿಜಯವಿರೂಪಾಕ್ಷೇಶ್ವರನ ಹೊಸ ಪಟ್ಟಣವೆಂದು ನಾಮಾಂಕಿತವಾಯಿತೆಂದು ತಮಗೆ ದೊರೆತ ಸಾಧನಗಳಿಂದ ನಿರ್ಧರಿಸಿರುವರು. ಹೊಸ ಪಟ್ಟಣ ನಿರ್ಮಾಣದಲ್ಲಿ ಸಹಾ ಶ್ರೀವಿದ್ಯಾರಣ್ಯರೆ ಶಂಖುಸ್ಥಾಪನ ಕಾರ್ಯವನ್ನು ಮಾಡಿದರೆಂದು ತಿಳಿದು ಬಂದಿರುವದು.

ಈ ದೇವರಾಯನಾರೆಂಬದನ್ನು ತಿಳಿದುಕೊಳ್ಳಬೇಕಾದರೆ ಪೋರ್ತುಗೀಜ ದೇಶೀಯನಾದ ನ್ಯೂನೆಜನ ಇತಿಹಾಸ ಪತ್ರಿಕೆಗಳ ಸಿಂಹಾವಲೋಕನದಿಂದ ಇದರಡಿ ಸೂಚಿಸಿದ ವಿಷಯಗಳು ಹೊರಬಿದ್ದಿರುವವು. ಈ ವಿಜಯನಗರ ಪಟ್ಟಣವನ್ನು ಪ್ರಾರಂಭದಲ್ಲಿ ಆಳಿದವನು ಸಹಾ ಈ ದೇವರಾಯನೆಂತಲು, ಆಗ್ಗೆ ಅವನು ಕಡು ವೃದ್ಧನಾಗಿದ್ದನೆಂದು ಲೇಖನವಿರುವದು. ಇದಕ್ಕೆ ಅನುಗುಣವಾಗಿ ಅರ್ಬಿ ಬಾಟೂಟಾನೆಂಬ ಪ್ರೆಂಚದೇಶೀಯ ಪ್ರವಾಸಿಯು ಈ ದೇವರಾಯನು ೧೩೪೨ರಲ್ಲಿ ಮೃತಿ ಹೊಂದಿದಾಗ್ಗೆ ಎಂಭತ್ತುವರ್ಷದವನೆಂದು ಬರೆದಿರುವನು. ಈ ವಿಷಯಗಳನ್ನೆಲ್ಲ ವಿಮರ್ಶನಮಾಡುವುದರಿಂದ ದೇವರಾಯನು ಒಮ್ಮೆ ದ್ವಾರಸಮುದ್ರದ ದೊರೆಯಾಗಿದ್ದ ವೀರಬಲ್ಲಾಳ ದೇವರಾಯನೇಯಾಗಿರಬೇಕೆಂದು ನಿರ್ಧರಿಸಬಹುದು. ಈ ವಿಷಯದಲ್ಲಿ ಪುರಾತನ ವಿಜಯನಗರ ಇತಿಹಾಸ ಗ್ರಂಥಕರ್ತನಾದ ರೆವರೆಂಡ ಹಿರಾಸು ಪಾದರಿಯು ಏಕೀಭವಿಸುವನು. ಈ ವೀರ ಬಲ್ಲಾಳದೇವರಾಯನ ಪೂರ್ವವೃತ್ತಾಂತವನ್ನು ಸ್ವಲ್ಪ ವಿಚಾರಿಸುವ–ಕ್ರಿ. ಶ. ೧೩೧೦ರಲ್ಲಿ ದೆಹಲೀ ಸುಲ್ತಾನನಾದ ಅಲ್ಲಾಉದ್ದೀನನ ಸೇನಾಪತಿ ಮಲೀಕಾಫರನು ಯಾದವಗಿರಿ ಓರಗಲ್ಲುಮುಂತಾದ ಹಿಂದೂರಾಜರನ್ನು ಗೆದ್ದು, ದಕ್ಷಿಣ ಪ್ರಾಂತದಲ್ಲಿ ಹೆಸರು ವಾಸಿಯಾಗಿದ್ದ ಹೊಯಿಸಳರಾಜರ ರಾಜಧಾನಿಯಾದ ದ್ವಾರಸಮುದ್ರವನ್ನು ಕೊಳ್ಳೆಹೊಡೆದನು. ಯುದ್ಧಗಾಣಿಕೆಯಾಗಿ ವೀರಬಲ್ಲಾಳನನ್ನು ದಿಲ್ಲೀಪಟ್ಟಣಕ್ಕೆ ಶೆರೆಯಾಳಾಗಿ ಕೊಂಡೊಯಿದು ಸುಲ್ತಾನನ ಕಾರಾಗೃಹದಲ್ಲಿ ಮೂರುವರುಷ ಬಂಧನದಲ್ಲಿಟ್ಟು ತರುವಾಯ ರಾಯನನ್ನು ಬಿಡುಗಡೆ ಮಾಡಿದನು ಈ ವಿಷಯವೆಲ್ಲ ಆಗಿನ ಇತಿಹಾಸಕಾರರಿಂದ ಬರೆಯಲ್ಪಟ್ಟಂತೆ ತಿಳಿಯುವುದು ಅಲ್ಲಾಉದ್ದಿನ ಕಿಲ್ಜಿಯ ಹದಿನಾರುವರ್ಷಗಳ ನಂತರ ದಿಲ್ಲೀ ಸಿಂಹಾಸನವೇರಿದಾತನು. ಮಹಮ್ಮದ ಬಿನ್ ತಘಲಕನು. ಈ ಸುಲ್ತಾನನು ೧೩೨೫ರಲ್ಲಿ ಇಡೀ ಹಿಂದುಸ್ಥಾನವನ್ನೆಲ್ಲವನ್ನು ಗೆದ್ದು ಕನ್ಯಾಕುಮಾರಿಯ ಪರ್ಯಂತರ ಮಹಮ್ಮದೀಯ ಮತವನ್ನು ಸ್ಥಾಪಿಸಲು ದೀಕ್ಷಾಬದ್ಧನಾಗಿ ದಂಡಯಾತ್ರೆಯನ್ನು ಹೊರಡಿಸಲು ಸಿದ್ಧತೆ ಮಾಡಲಾರಂಭಿಸಿದನು ಆ ವೇಳೆಗೆ ಶೆರೆಮನೆಯಿಂದ ಬಿಡುಗಡೆ ಹೊಂದಿ ಪುನರಪಿ ದ್ವಾರಸಮುದ್ರವನಾಳುತ್ತಿದ್ದ ವೀರ ಬಲ್ಲಾಳ ರಾಯನು ಅಲಸನಾಗಿರದೆ ತನ್ನ ರಾಜ್ಯವ ತುರುಷ್ಕರ ಹಾವಳಿಯಿಂದ ತಪ್ಪಿಸುವ ಉಪಾಯಗಳನ್ನು ಮುನ್ನು ಮುಂದಾಗಿ ಹುಡುಕಲಾರಂಭಿಸಿದನು. ತನಗಿದ್ದ ಹದಿನಾರು ವರುಷದ ಅವಧಿಯಲ್ಲಿ ಮೊಟ್ಟಮೊದಲು ತನ್ನ ರಾಜಧಾನೀ ಪಟ್ಟಣವನ್ನು ಮೊದಲಿನ ನೈಋತ್ಯ ದಶಕ್ಕೆ ತಂದು ತನ್ನ ಜಾತಿದ್ವೇಷಿಗಳಾದ ತುರುಷ್ಕರು ಮತ್ತೊಮ್ಮೆ ತನ್ನ ಪುರಿಯಲ್ಲಿ ಎಕಾಯೇಕಿ ನುಗ್ಗದಂತೆ ಪುರಿ ಕೋಟೆ ಕೊತ್ತಲಗಳ ಭದ್ರಪಡಿಸಿಕೊಂಡನು. ತರುವಾಯ ಸುಲ್ತಾನನ ದಕ್ಷಿಣಾಪಥದಂಡಯಾತ್ರೆಯ ಸಮಾಚಾರವು ಈ ರಾಯನ ಕಿವಿಗೆ ಬಿದ್ದ ಕೂಡಲೆ ತನ್ನ ರಾಜಧಾನಿಯನ್ನು ಬಿಟ್ಟು ತಿರುವಣ್ಣಾಮಲೆಗೆ ಪ್ರಯಾಣ ಮಾಡಿ ಅಲ್ಲಿ ತನ್ನ ಕುಮಾರನನ್ನು ನಗರಾಧ್ಯಕ್ಷನನ್ನಾಗಿ ಮಾಡಿ ತಾನು ತನ್ನ ರಾಜ್ಯದ ಗಡೀ ಕಿಲ್ಲೆಯಾದ ಉದಯಗಿರಿಯ ಪಟ್ಟಣದ ಕಡೆ ಪ್ರಯಾಣವನ್ನು ಬೆಳೆಸಿದನು.

ಕ್ರಿ ಶ॥ ೧೩೨೭ ರಲ್ಲಿ ತೊಗಲಕನು ದೇವಗಿರಿ ಓರುಗಲ್ಲ ರಾಜ್ಯಗಳನ್ನು ಗೆದ್ದು ಅವುಗಳನ್ನು ತನ್ನಾಳಿಕೆಯಲ್ಲಿ ಸೇರಿಸಿಕೊಂಡಿರುವನೆಂತಲು ಆನೆಗುಂದೆಯ ರಾಜ್ಯವು ಸಹಾ ನಿರ್ಮೂಲವಾಗಿ ರಾಜನ ಸತೀ ಸುತರೆಲ್ಲ ಶತ್ರುಗಳ ಸ್ವಾಧೀನರಾಗದೆ ಅಗ್ನಿ ಪ್ರವೇಶ ಮಾಡಿ ತನ್ನ ಮರ್ಯಾದೆಗೌರವವನ್ನು ಸಂರಕ್ಷಿಸಿಕೊಂಡರೆಂಬವಾರ್ತೆಯನ್ನು ಕಾಕತೀಯ ಪ್ರತಾಪ ರುದ್ರನ ಕುಮಾರನಾದ ಕೃಷ್ಣನಾಯಕನಿಂದ ಕೇಳಿದ ಕೂಡಲೆ ಬಲ್ಲಾಳ ರಾಯನು ಪಶ್ಚಿಮ ಮುಖವಾಗಿ ತಿರಿಗಿ ಸ್ವಲ್ಪ ದಿನಗಳಲ್ಲಿ ಹಾಳುಬಿದ್ದ ಆನೆಗುಂದಿ ನಗರವನ್ನು ತನ್ನ ಪರಿವಾರದೊಂದಿಗೆ ಸೇರಿದನು. ಆ ಒಳಗಾಗಿ ಬಲ್ಲಾಳರಾಯನ ಬಂಧುವರ್ಗದವರಾದ ಸಂಗಮರಾಯನ ಕುಟುಂಬವು ಜಂಬುಕೇಶ್ವರನ ಒಳಿಯಲ್ಲಿದ್ದದ್ದರಿಂದ ಆತನ ಜೇಷ್ಠ ಪುತ್ರನಾದ ಹರಿಹರ ಕುಮಾರನನ್ನು ತನಗೆ ಸಾಹಾಯಕನಾಗಿರಲು ಏರ್ಪಡಿಸಿಕೊಂಡು ಆ ಪ್ರಾಂತದಲ್ಲಿ ತುರುಷ್ಕ ಸೇನಾಜನರ ಮಾರ್ಗವ ನಿರ್ಗಮಿಸಲು ಒಂದು ಭವ್ಯವಾದ ಹೊಸ ಪಟ್ಟಣವನ್ನು ಕಟ್ಟಲು ಆಲೋಚಿಸಿದನು. ಹೊಸ ನಗರ ನಿರ್ಮಾಣಕೆ ಪ್ರಶಸ್ಥವಾದ ಒಂದು ಶುಭ ಮುಹೂರ್ತದಲ್ಲಿ ಶಂಕುಸ್ಥಾಪನಾದಿ ಆಗಮ ಕಾರ್ಯಕ್ರಮಗಳು ವೇದೋಕ್ತ ವಿಧಿಯಿಂದ ನಡಿಸಲು ಶಮದಮಾದಿ ಸದ್ಗುಣ ಸಂಪನ್ನನಾದ ಒಬ್ಬ ತಪೋಧನನು ಆವಶ್ಯಕವೆಂದು ತೋರಿತು. ವಿಚಾರಿಸಲು ಅಲ್ಲಿಗೆ ಸಮೀಪದಲ್ಲಿದ್ದ ಮತಂಗಾದ್ರಿಯ ಒಂದಾನೊಂದು ಗವಿಯಲ್ಲಿ ತಪಶ್ಚರ್ಯೆಯಲ್ಲಿ ಕುಳಿತ ಒಬ್ಬ ಯೋಗಿವರ್ಯನಿರುವುದನ್ನು ತಿಳಿದು ಅಲ್ಲಿಗೆ

ಬಲ್ಲಾಳ ದೇವನು ಹೋಗಿ ಆ ಮುನಿವರರನ್ನು ಕಂಡು ದಂಡ ಪ್ರಣಾಮಾದಿಗಳನಾಚರಿಸಿ ಪ್ರಾರ್ಥಿಸಲು ಆ ಯೋಗಿವರರನು ಪ್ರಸನ್ನನಾಗಿ ರಾಯನ ಹಿಂಬಾಲಿಸಿ ನಗರ ನಿರ್ಮಾಣ ಕಾರ್ಯಕ್ರಮಗಳನ್ನೆಲ್ಲ ವಿಧ್ಯುಕ್ತ ರೀತಿಯಿಂದ ಪೂರೈಸಿದನು. ಈ ಮಹಾತ್ಮನೇ ವಿದ್ಯಾರಣ್ಯ ಯೋಗಿವರನೆಂದು ಉತ್ಸವವನ್ನು ನೋಡ ಬಂದವರಿಗೆಲ್ಲ ತಿಳಿಯ ಬಂದಿತು. ಎಲ್ಲರು ಪರಮಾನಂದ ಭರಿತರಾದರು. ಶ್ರೀ. ಭುವನೇಶ್ವರೀ ದೇವಾಲಯದಲ್ಲಿ ಶ್ರೀಚಕ್ರವು ಸ್ಥಾಪನವಾಯಿತು. ಪಟ್ಟಣದ ಯಲ್ಲಮ್ಮನ ದೇವಾಲಯಕ್ಕೆ ಅಸ್ಥಿ ಭಾರವು ಹಾಕಲ್ಪಟ್ಟಿತು. ಶ್ರೀ ವಿದ್ಯಾರಣ್ಯರ ಯೋಗ ಸಾಮರ್ಥ್ಯದಿಂದ ಮೂರು ಮುಕ್ಕಾಲು ಘಳಿಗೆ ಸುವರ್ಣ ವೃಷ್ಟಿಯು ಸಹಾ ಪುರ ನಿರ್ಮಾಣ ಆವರಣದಲ್ಲಿ ಸುರಿಯಿತೆಂದು ಸಹಾ ಐತಿಹ್ಯ ವಿರುವದು.

ಈ ಸಮಾರಂಭವೆಲ್ಲವು ಇದರಡಿ ಯುದಹರಿಸಿದ ಅಭಿಜನ್ಮಾಹೂರ್ತದಲ್ಲಿ ನಡೆದಂತೆ ಶ್ರೀ ಹಂಪೀವಿರೂಪಾಕ್ಷೇಶ್ವರನ ದೇವಾಲಯದಲ್ಲಿ ದೊರೆತ ಪುರಾತನ ಬಖೈರಿನಲ್ಲಿ ಕಂಡುಬಂದ ಶ್ಲೋಕವನ್ನನುಸರಿಸಿ ಇರುವುದು

" ನಾಗೇಷ್ವರ್ಕೆ ನಿಯಮಿತ ಶಕೆ ಶಾಲಿವಾಹನ್ಯ
ಯಾತೆ
ಧಾತುವರ್ಷೆ ದ್ವೇಸುಗುಣ ಸಹಿತೆ ಮಾಸೆ ವೈಶಾಖ
ನಾಮ್ನಿ
ಶುಕ್ಲೇ ಪಕ್ಷೇ ಸುರಗುರು ಯುತೆ ಸೌಮ್ಯವಾರೆ
ಸುಲಗ್ನೆ
ಸಪ್ತಮ್ಯಾಂಹಿವಿಜಯನಗರಂ ನಿರ್ಮಮೇ
ದೇಶಿಕೇಂದ್ರಃ ॥

---

# ರಾಜ್ಯತೃಷ್ಣೆ

ಬರೆದವರು— **ಶ್ರೀ. ಶ್ರೀಕೃಷ್ಣ ಪಾಟೀಲ** (ನಾಡನಂ) **ಬೆಳಗಾವಿ**

ಅದರೊಳಗಿನದೊಂದು ಪ್ರವೇಶವನ್ನಷ್ಟೆ ಇಲ್ಲಿ ಕೊಟ್ಟಿದೆ.

## ೨ ನೆಯ ಪ್ರವೇಶ

(ಪಟ್ಟಾಭಿಷೇಕವಾಗಿ, ವೆಂಕಟಪತಿಯು ತೀರಿಕೊಂಡ ಕೆಲ ದಿವಸಗಳ ಮೇಲೆ ರಂಗರಾಯನು ತನ್ನ ಅರಮನೆಯಲ್ಲಿ)

ರಂಗ—
ಅರಿಗಣದ ಭೇರುಂಡ, ಭುಜಬಲದೋರ್ದಂಡ
ಕಾಳೆಗಕೆ ನಿಜಗಂಡ, ಅತುಲಬಲಯುತ ಚಂಡ
ತಂದೆ ವೆಂಕಟದೊರೆಯು ಸಗ್ಗವನು ಸೇರಿ
ಮೂರು ದಿನ ಮಿಕ್ಕಿಲ್ಲ, ನಾಡಿನೊಳಗದು ಬೇಗ
ಬಲಿಯುತಿವೆ ಭರದಿಂದ, ತೋರಲಾರದೆಯೊಳಗೆ
ಹೊತ್ತುತಿದೆ ಹುರುಹುರುನೆ. ಸಿಂಹಾಸನವಕೂಡೆ
ಇಂದು ನಾಳೆನ್ನದೆ ಮುಟ್ಟುವುದು ನಿಜವೆಂದು
ಮನವು ನುಡಿಯತಲಿಹುದು. ದೃಢವಾಗಿ ನಂಬುವುದು.
ಅಂತಃಕಲಹಕ್ಕಂಜಿ ಜೀವವದು ಬೇಡೆಂದು
ಸಾರುತಿದ್ದಿತು ಮೊದಲು, ಈ ರಾಜ ಮುದ್ರೆಯು
ಕಲಹಕ್ಕೆ ಕಾಳಾಗಿ ಬಂದಿಹುದು. ನುಂಗಲ್ಕೆ .... ....
ಯಾರನ್ನು ? ಯಾರನ್ನು ನುಂಗಲ್ಕೆ ! ಬೊಗುಳೊಮ್ಮೆ
ದೈವವೇ ! ನಾಚಿಕೆಯ ನೂಕುತ್ತ ಬೊಗಳೊಮ್ಮೆ !
ದೈವಕ್ಕೆ ನುಡಿಯುಂಟೆ ? .... ದೈವಕ್ಕೆ ಏನುಂಟು ?
ದೈವಕೆ ಕಣ್ಣಿಲ್ಲ, ದೈವಕ್ಕೆ ಕಿವಿಯಿಲ್ಲ
ದೈವಕ್ಕೆ ದನಿಯಿಲ್ಲ, ದೈವಕ್ಕೆ ದಯವಿಲ್ಲ
ತಂದೆ ವೆಂಕಟಪತಿಯು ಬಾಯಮ್ಮನೆತ್ತಿರುವ
ರಂಗನನು ಸಿಂಹಾಸನವೇರಿಸುವದೊಳಿತು ! ?
ಇತ್ತಲ್ಲ !! ಇದಿರುನಿಂತಿಹ ಖಡ್ಗ ಒರೆಯಿಂದ
ಹೊರಗಿಣಿಕುತಿದ್ದುವೇ !!! ತಾತವೆಂಕಟೇಶ !
ಶಾಂತಿಯಲಿ ಸೇರಿರುವ ಕನ್ನಡದ ದೊರೆಯೇ !
ನೀನು ನೀಡಿದವರವ - ಕರ್ನಾಟಕ ದೇಶವನು -
ಕೋಪದಲಿ ತೆತ್ತಿರುವೆ. ಎಚ್ಚಮನೆ, ಮಂತ್ರಿವರ,
ನಿನ್ನ ಭರವಸೆಯುಸಿರ ಬಲಗೊಂಡು ರಾಜ್ಯವನು
ಧರಿಸಿರುವೆ ಶಿರದೊಳಗೆ. ಕನ್ನಡದ ಕಲಿಗಳೇ,
ನಿಮ್ಮ ಕೈದುಗಳೆನ್ನ ಪೀಠದಲಿ ನಿಲಿಸಿಹವು.
ದೇವ ವಿರುಪಾಕ್ಷನೇ ತಾನಾಗಿ ಕರೆದಿಹನು.
ಇವರೆಲ್ಲರನು ನಂಬಿ ನಿಂತಿಹೆನು ನಾಡಿನಲಿ.
ಅಮರಲೋಕದ ಪತಿಯು ತನ್ನ ಜೀವದ ವಸ್ತು
ರಕ್ಷಿಸಲು ಶಿಕ್ಷಿಸಿಹ. ಜೀವವನು ತೊರೆದರೂ
ಕಾಯುವುದು ಧರ್ಮವಿದೆ. ಭೈರವನೆ ಇದಿರಾಗಿ
ಬಂದರೂ ಕಾಯುವೆನು, ದೇಹದಲಿ ಹನಿರಕ್ತ

# ಕೃಷ್ಣದೇವರಾಯನ ಕಾಲದ ವಿಜಯನಗರದ ಸಾಮ್ರಾಜ್ಯ.
(೧೫೦೯-೧೫೩೦)




ಶ್ರೀ. ಕೆ. ಎಸ್. ದೇಶಪಾಂಡೆ
ಬಿ. ಎಸ್. ಸಿ ಬಿ ಟಿ. ಗೋಕಾವಿ



ಪುಳಿದರೂ ತೋರುವೆನು ರಣರಂಗನಾರಂಗ.
ಮಡಿದರಿದೆ ವಕ್ತ್ರಿಯು; ಗೆಲಿದರಿದೆ ಗದ್ದುಗೆಯು.
ಎರಡರಲಿ ಹುರುಳಷ್ಟೆ.....ಜಗರಾಯ, ತಿಮ್ಮರಿಗೆ
ಕಾಳಗದ ಕಣದೊಳಗೆ ನೆತ್ತರದ ಹೊಳೆಹಾಕಿ,
ಮಾಂಸದಾ ದಂಡೆಯಲಿ ಎಲುವುಗಳ ಗಿಡನಾಟಿ,
ಕರುಳವಳ್ಳಿಯ ತೊಡಿಸಿ, ಕಣ್ಣುವೂಗಳ ಬಿರಿಸಿ,
ತಲೆಗಾಯನಿಳಬಿಟ್ಟು, ಗರಳುಗಾಳಿಯ ಬೀಸಿ,
ಮಜ್ಜೆಯಾ ರಸವನ್ನು ಕಾಯಿಂದೆ ಹನಿಹನಿಸಿ
ಭೂತಬೇತಾಳಗಳ ಕಾವಲಿಗೆ ಇರಿಸುತ್ತ
'ರಾಜ್ಯತೃಷ್ಣಾ' ಎಂಬ ಬೈಲಿಗದು ಬರಮಾಡಿ
ಏಳೇಳು ಜನ್ಮದಲಿ ಮರೆಯಲಾರದ ಹಾಗೆ
ಮಾಡುವುದು ಮನದಾಶೆ; ಅಲ್ಲದಿರೆ ಈ ತೊಡವು
ಈ ಮುದ್ರೆ, ಈ ರಾಜ್ಯ, ಈ ಮಾನ, ಈ ಭೋಗ,
ಈ ಪವಿತ್ರವೀ ಪೀಠವೇತಕ್ಕೆ !

(ತೆರಬೀಳುವುದು.)

---

# ಕೃಷ್ಣದೇವರಾಯನ ಕಾಲದ ವಿಜಯನಗರದೊಳಗಿನ ಸುಧಾರಣೆಗಳು.

[ ಲೇಖಕಃ—ಶ್ರೀ ಕೆ ಎನ್. ದೇಶಪಾಂಡೆ, ಬಿ. ಎಸ್. ಸೀ., ಬಿ. ಟಿ. ಗೋಕಾಕ ]

ಇತಿಹಾಸದ ಪುನರಾವೃತ್ತಿಯಾಗುತ್ತದೆಂಬ ಮಾತು ಸುಳ್ಳಲ್ಲ. ಬಾಬರ-ಹುಮಾಯೂನ ಮುಂತಾದ ಮೊಗಲ ಅರಸರು ಹಗಲಿರುಳೂ ಕಷ್ಟಬಟ್ಟು ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆದರೆ ಆ ಸಾಮ್ರಾಜ್ಯವನ್ನು ಸುಖ ಸಮಾಧಾನಗಳಿಂದ ಆಳಿ, ಅದರ ಅವಶೇಷಗಳನ್ನು ಇದುವರೆಗೆ ಉಳಿಯುವಂತೆ ಮಾಡುವ ಮರ್ಯಾದೆಯು ಅಕಬರಶಹಾ ಬಾದಶಹರನ್ನು ಕೂಡಿತ್ತು. ರೋಮನ್ ರಾಜ್ಯಗಳನ್ನು ಸ್ಥಾಪಿಸಿದ ವೀರರಿಗೆ, ಸಾಮ್ರಾಜ್ಯವನ್ನು ಸುಖಸಮಾಧಾನದಿಂದ ಆಳಲಿಕ್ಕೆ ವೇಳೆ ಸಿಗಲಿಲ್ಲ. ಅದನ್ನು ತರುವಾಯ ಬಂದ ಅರಸರೇ ಮಾಡಿದರು. ಸಾಮ್ರಾಜ್ಯಗಳನ್ನು ಸ್ಥಾಪಿಸಿದ ಮಹಾಪುರುಷರಲ್ಲಿ ಕಂಡು ಬರುವ ಗುಣಗಳು, ಆ ಸಾಮ್ರಾಜ್ಯವನ್ನು ಆಳುವ ಇತರ ಅರಸರಲ್ಲಿ ಕಂಡು ಬರುವದಿಲ್ಲ ಮುಂದೆ ಬರುವ ಅರಸರು ಬಹುತರವಾಗಿ ಸುಖಲೋಲುಪರಾಗಿ, ಸಾಮ್ರಾಜ್ಯದ ಸೌಂದರ್ಯವನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಮಾಡುವರು. ಇದೇ ಮಾತಾದರೂ ಹದಿನಾಲ್ಕನೇ ಶತಮಾನದೊಳಗೆ ಉದಯಿಸಿದ ವಿಜಯನಗರದ ಸಾಮ್ರಾಜ್ಯಕ್ಕೂ ಅನ್ವಯಿಸುವದು. ಮೊಟ್ಟಮೊದಲು ಅತಿ ಕಷ್ಟದಿಂದಲೂ, ಬಹು ಜಾಗ್ರತೆಯಿಂದಲೂ ನಡೆದ ಹುಕ್ಕಬುಕ್ಕರ ಆಯುಷ್ಯದ ಪ್ರತಿಯೊಂದು ಕ್ಷಣವು, ಮಾಧವಾಚಾರ್ಯರಂಥ ಅದ್ವಿತೀಯ ಪುರುಷರ ಅನುಗ್ರಹದಿಂದ ಕನ್ನಡ ಸಾಮ್ರಾಜ್ಯದ ತಳಹದಿಯನ್ನು ಹಾಕುವದರಲ್ಲಿ ಕಳೆಯಲ್ಪಟ್ಟಿತು. ಅಂಥ ವೇಳೆಯಲ್ಲಿ ಅವರಿಗೆ ರಾಜ್ಯಸುಖದ ನೆನಪು ಹೇಗಾದೀತು? ಸಾಮ್ರಾಜ್ಯದ ಸೌಂದರ್ಯದ ಕಡೆಗೆ ಲಕ್ಷ್ಯವು ಹೇಗೆ ಹೋದೀತು? ಹುರುಕಡಲೆಯನ್ನು ತಿಂದು ಹೊತ್ತು ಹಾಕಿ ಮರಾಠರ ಸಾಮ್ರಾಜ್ಯವನ್ನು ಸ್ಥಾಪಿಸಿದ ಶಿವರಾಯನಿಗೆ, ಪೇಶವೆಯವರಂತೆ ಸಕ್ಕರೆ ತುಪ್ಪಗಳೆಲ್ಲಿಂದ ಬರಬೇಕು? ಈ ಸುಖೋಪಭೋಗಗಳನ್ನನುಭವಿಸುವ ಮಾತು ಮುಂದ ಬಂದ ಅರಸರ ಸಲುವಾಗಿ ಇತ್ತು. ವಿಜಯನಗರದ ಸಾಮ್ರಾಜ್ಯವು ಸ್ಥಾಪನೆಯಾಗಿ, ೧೫೦ ವರುಷಗಳವರೆಗಿನ ಕಾಲವು ಸುತ್ತಲಿಂದಲೂ ಬರುತ್ತಿರುವ ಶತ್ರುಗಳನ್ನು ಹೊಡೆದಟ್ಟಿ, ಅವರನ್ನು ಮೂಲಿಗುಂಪಾಗಿ ಮಾಡುವದರಲ್ಲಿಯೇ ಕಳೆದು ಹೋಯಿತು. ಈ ಅವಧಿಯಲ್ಲಿ ಆಳಿದ ಅರಸರು ಸಾಮ್ರಾಜ್ಯಕ್ಕೆ ಸ್ಥೈರ್ಯವನ್ನು ತಂದುಕೊಡಲಿಕ್ಕೆ ಬೇಕಾಗುವ ಕೋಟೆಕೊತ್ತಳಗಳನ್ನೂ ದಂಡುದಳವಾಯಿಗಳನ್ನೂ ಸರಿಪಡಿಸುವದರಲ್ಲಿಯೇ ತಮ್ಮ ಆಯುಷ್ಯವನ್ನೆಲ್ಲ ಕಳೆದರು. ಆದರ ಆ ಮೇಲೆ ಬಂದ ಅರಸರಿಗೆ, ಶಾಂತತೆಯ ಲಾಭ ದೊರೆತು, ಪಟ್ಟಣಗಳ ಸಿರಿ-ಸೌಂದರ್ಯವನ್ನು ಹೆಚ್ಚಿಸಿ, ಲೋಕೋಪಯೋಗದ ಕೆಲಸಗಳನ್ನು ಮಾಡಲಿಕ್ಕೆ ಅನುವು ದೊರೆಯಿತು.

ಈ ಕಾಲದಲ್ಲಿ ವಿಜಯನಗರದ ಪಟ್ಟವೇರಿದ ಮೊದಲನೇ ಅರಸನೆಂದರೆ ಕೃಷ್ಣದೇವರಾಯನು. ಈತನು ವಿಜಯನಗರದ ಪಟ್ಟವನ್ನು ಶಕೆ ೧೪೩೧ ನೇ ವರ್ಷದ ಮಾಘ ಶುದ್ಧ ಚತುರ್ದಶಿಯ ದಿವಸ ಏರಿದನೆಂದು, ಹಂಪಿಯಲ್ಲಿಯ ಪಂಪಾಪತಿಯ ಗುಡಿಯೊಳಗಿನ ಶಿಲಾಲೇಖದಿಂದ ಗೊತ್ತಾಗುತ್ತದೆ. ಅಂದರೆ ೧೫೦೯ ನೇ ಇಸ್ವಿಯಲ್ಲಿ ಕೃಷ್ಣದೇವರಾಯನು ವಿಜಯನಗರದ ಸಾಮ್ರಾಜ್ಯ ಸೂತ್ರಗಳನ್ನು ತನ್ನ ಕೈಯಲ್ಲಿ ಧರಿಸಿದನು. ಮತ್ತು ೧೫೩೦ ರ ವರೆಗೆ ಅಂದರೆ ೨೧ ವರುಷ ರಾಜ್ಯನಾಳಿ, ಸಾಮ್ರಾಜ್ಯಕ್ಕೆ ಅಜರಾಮರವಾದ ಕೀರ್ತಿಯನ್ನು ತಂದುಕೊಟ್ಟನು. ಪಟ್ಟನೇರಿದ ೪-೫ ವರುಷಗಳವರೆಗೆ. ತನ್ನನ್ನು ಮೀರಲಿಕ್ಕೆ ಹವಣಿಸಿದ ಮುಸಲ್ಮಾನರನ್ನು ಬಗ್ಗುಬಡೆದು, ಕೃಷ್ಣದೇವರಾಯನು ತನ್ನ ಎಲ್ಲ ಮಾಂಡಲೀಕರನ್ನು ಚನ್ನಾಗಿ ಎಚ್ಚರಗೊಳಿಸಿದನು ಆತನು ಕಾದಿದ ಎಲ್ಲ ಯುದ್ಧಗಳಲ್ಲಿ ರಾಯಚೂರಿನ ಕಾಳಗವು ಬಹು ಮಹತ್ವದ್ದಾಗಿರುತ್ತದೆ. ಈ ಕಾಳಗದಿಂದಲೇ ವಿಜಯನಗರದ ಅಧಿಕಾರವು, ಅಂಜಿಕೆಯು ಹಿಂದುಸ್ತಾನದಲ್ಲೆಲ್ಲ ಹಬ್ಬಿತ್ತಲ್ಲದೆ, ಪರದೇಶದಿಂದ ಬಂದ ಪೋರ್ತುಗೀಜರು ಸಹ ವಿಜಯನಗರದ ಹೆಸರು ಕೇಳಿ ನಡಗುತ್ತಿದ್ದರು. ರಾಯಚೂರು, ಕೃಷ್ಣಾ ತುಂಗಭದ್ರಾನದಿಗಳ ನಡುವೆ ಇದ್ದು, ಆಕಾಲಕ್ಕ ಅದು ವಿಜಾಪೂರದ ಆದಿಲ್ ಶಹನ ವಶದಲ್ಲಿತ್ತು. ವಿಜಯನಗರದ ಈ ಮೊದಲಿನ ಅರಸರು, ರಾಯಚೂರನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಎಷ್ಟೋಸಾರೆ ಪ್ರಯತ್ನಿಸಿದ್ದರೂ ಆದಿಲ್ ಶಹನ ಮುಂದೆ ಅವರ ಆಟವೇನೂ ಸಾಗಿದ್ದಿಲ್ಲ. ಆದರೆ ಈ ಮಾನವು ಕೃಷ್ಣದೇವರಾಯನದಾಗಿತ್ತು. ಈ ಯುದ್ಧದ ವರ್ಣನೆಯನ್ನು ಆ ಕಾಲಕ್ಕೆ ಬೇರೆ ಬೇರೆ ದೇಶಗಳಿಂದ ಬಂದ, ಪೇಯಿಜ್, ಬ್ಯಾರೋಸ್, ಫೆರಿಸ್ತಾ, ನ್ಯೂನಿಜ ಮುಂತಾದ ಪ್ರವಾಸಿಕರು ಅತ್ಯುತ್ತಮವಾಗಿ ವರ್ಣಿಸಿರುವರು. ನ್ಯೂನೀಜನು ಕೃಷ್ಣದೇವರಾಯನ ಸೈನ್ಯದ ಬಗ್ಗೆ ಅನ್ನುವದೇನಂದರೆ:—

“ಕೃಷ್ಣದೇವರಾಯನು ರಾಯಚೂರು ಪಟ್ಟಣವನ್ನು ಮುತ್ತಿಗೆ ಹಾಕಲಿಕ್ಕೆ ಹೊರಟಾಗ, ಅಗಣಿತ ಸೈನ್ಯವು ಆ ಪರಾಕ್ರಮಿಯಾದ ಕರ್ನಾಟಕಪುತ್ರನನ್ನು ಅನುಸರಿಸಿತು. ೭೦೩೦೦೦ ಕಾಲಾಳುಗಳೂ, ೩೨೬೦೦ ಕುದುರೆಯ ಸವಾರರೂ, ೫೫೧ ಆನೆಗಳೂ ಆತನ ಸೈನ್ಯದಲ್ಲಿದ್ದವು. ಅಲ್ಲದೆ ಬಾಜಾರ ಇತರೇ ಜನರಿಂದ ಕೂಡಿದ ಸೇನಾಸಮುದ್ರವು ಕೃಷ್ಣರಾಯನ ಒಂದೇ ಮಾತಿಗೆ ಕೂಡಿಬಿದ್ದವು! ಈ ಯುದ್ಧವನ್ನು ಕೃಷ್ಣದೇವರಾಯನು ಇಸ್ವಿಸನ್ ೧೫೨೦ರ ಸುಮಾರಕ್ಕೆ ಗೆದ್ದು, ರಾಯಚೂರನ್ನು ಸಾಮ್ರಾಜ್ಯಕ್ಕೆ ಸೇರಿಸಿ, ದಿಗ್ವಿಜಯ ಹೊಂದಿ, ಅಟ್ಟಹಾಸದಿಂದ ತನ್ನ ರಾಜಧಾನಿಗೆ ತಿರುಗಿ ಬಂದನು.

ಕೃಷ್ಣದೇವರಾಯನ ಆಳಿಕೆಯಲ್ಲಿ ವಿಜಯನಗರದ ಸಾಮ್ರಾಜ್ಯವು ತನ್ನ ಅತ್ಯುಚ್ಚ ಶಿಖರಕ್ಕೆ ಮುಟ್ಟಿದ್ದೇನೊ ನಿಜ. ಆದರ ಸಂಗಡಲೇ, ಸಾಮ್ರಾಜ್ಯದ ಹ್ರಾಸದ ಬೀಜಾರೋಪಣೆಯಾಯಿತೆಂದೆನ್ನಲಿಕ್ಕೆ ಅಡ್ಡಿ ಇಲ್ಲ ಈಗ ವಿಜಯನಗರ ಸಾಮ್ರಾಜ್ಯವು ದಕ್ಷಿಣಕ್ಕೆ ಕನ್ಯಾಕುಮಾರಿಯ ವರೆಗೂ, ಉತ್ತರದಲ್ಲಿ ಕೃಷ್ಣಾನದಿಯ ವರೆಗೂ ತನ್ನ ಪರಾಕ್ರಮದ ತೇಜವನ್ನು ಬೀರಿತ್ತು ಆದಿಲ್ ಶಹನಂಥ ಒಬ್ಬೊಬ್ಬ ರಾಜರು ಆಳುತ್ತಿದ್ದರೂ ಅವರು ವಿಜಯನಗರಕ್ಕೆ ಬಹು ಮರ್ಯಾದೆಯನ್ನು ಕೊಡುತ್ತಿದ್ದರು ಈ ಲೇಖದಲ್ಲಿ ಕನ್ನಡ ಸಾಮ್ರಾಜ್ಯದ ಮುಂದಿನ ಇತಿಹಾಸವನ್ನು ಹೇಳದಲೆ ಕೃಷ್ಣದೇವರಾಯನು ರಾಜಧಾನಿಯ ಸೌಂದರ್ಯವನ್ನು ಹೇಗೆ ಹೆಚ್ಚಿಸಿದನೆಂಬದನ್ನೂ, ಲೋಕೋಪಯೋಗದ ಕೆಲಸಗಳಮೇಲೆಯೂ, ದೇವಾಲಯಗಳ ಮೇಲೂ ಹೇಗೆ ಮುಕ್ತಹಸ್ತದಿಂದ ವೆಚ್ಚಮಾಡಿದನೆಂಬದನ್ನೂ ಸ್ವಲ್ಪದರಲ್ಲಿ ವಿವರಿಸುತ್ತೇನೆ.

## ಕೃಷ್ಣರಾಯನು ಕಟ್ಟಿಸಿದ ಕಟ್ಟಡಗಳು.

ಕೃಷ್ಣರಾಯನು ಪಟ್ಟಕ್ಕೆ ಬಂದ ಕೂಡಲೆ, ಹಂಪಿಯ ದೇವಾಲಯದ ಗೋಪುರವನ್ನು ಜೀರ್ಣೋದ್ಧಾರ ಮಾಡಿಸಿದನು. ಈ ಗೋಪುರವು, ಹಂಪಿಯ ದೇಗುಲದ ಮಹಾದ್ವಾರದ ಮೇಲೆ ಹನ್ನೊಂದು ಅಂತಸ್ತಿನದ ಮೆರೆಯುತ್ತಿದ್ದು, ಪೂರ್ವಕಾಲದ ಕರ್ನಾಟಕದ ಕಲೆಯನ್ನು ಜಗತ್ತಿಗೆ ಬೀರುತ್ತಲಿದೆ. ಈ ಗೋಪುರವನ್ನು ಮೊದಲಿನ ಅರಸರು ಮಾಧವಾಚಾರ್ಯರ ಸ್ಮರಣಕ್ಕೋಸ್ಕರ ಕಟ್ಟಿದರು ಈ ಗೋಪುರವನ್ನು ಜೀರ್ಣೋದ್ಧಾರ ಮಾಡಿದ್ದಲ್ಲದೇ, ಕೃಷ್ಣದೇವರಾಯನು, ಇನ್ನೊಂದು ಗೋಪುರವನ್ನು ಕಟ್ಟಿಸಿದನು. ಪೂರ್ವದಿಕ್ಕಿನ ಪ್ರದೇಶವನ್ನೆಲ್ಲ ಕೈವಶಮಾಡಿಕೊಂಡು, ೧೫೧೩ ನೇ ವರುಷ ತಿರುಗಿ ಬಂದು ಶ್ರೀಕೃಷ್ಣನ ಗುಡಿಯನ್ನು ಕಟ್ಟಿಸಿದನು. ಅದೇ ವರುಷ ಹಜಾರ ರಾಮನ ಗುಡಿಯನ್ನು ಕಟ್ಟುವ ಕೆಲಸವಾದರೂ ಆರಂಭಿಸಲ್ಪಟ್ಟಿತು.

ರಿ ಸಾಹೇಬರು ಆ ಗುಡಿಯೊಳಗಿನ ಬೇರೆ ಬೇರೆ ಭಾಗಗಳನ್ನು ನಿರೀಕ್ಷಿಸಿ ಅಂದದ್ದೇನಂದರೆ-- "ಹಜಾರ ರಾಮನ ಗುಡಿಯು ಕೃಷ್ಣದೇವರಾಯನ ಕಾಲದಲ್ಲಿ ಕಟ್ಟಲಿಕ್ಕೆ ಆರಂಭವಾದರೂ ಅದು ಆತನ ತರುವಾಯ ಬಂದ ಅರಸರಿಂದ ಮುಗಿಸಲ್ಪಟ್ಟಿರಬೇಕು." ಅದರಂತೆ ಇಡೀ ವಿಜಯನಗರ ಸಾಮ್ರಾಜ್ಯದೊಳಗಿನ ಕಲಾಕೌಶಲ್ಯದಲ್ಲಿ ಮೇಲಾದದ್ದೂ, ಕರ್ನಾಟಕದೊಳಗಿನ ಶಿಲ್ಪಿಗರ ಶಿಲ್ಪಕಲೆಯಬಗ್ಗೆ ಪ್ರತ್ಯಕ್ಷ ಪ್ರಮಾಣವಾದದ್ದೂ ಆದ ವಿಜಯ ವಿಠ್ಠಲನ ಗುಡಿಯಾದರೂ ಈತನ ಕಾಲದಲ್ಲಿಯೇ ಕಟ್ಟಲ್ಪಟ್ಟಿತು. ಈ ದೇವಾಲಯವು ತುಂಗಭದ್ರೆಯ ದಂಡೆಯ ಮೇಲಿದ್ದು, ಆ ಗುಡಿಯೊಳಗಿನ ಕಲ್ಲಿನೊಳಗೆ ಕೆತ್ತಿದ ಕೆಲಸವನ್ನು ಕಂಡರೆ ಎಂಥವನಾದರೂ ಬೆರಗಾಗಿ ಬಾಯಿ ತೆರೆದು ನಿಲ್ಲದೇ ಇರಲಾರನು. ಮೇಲೆ ಹೇಳಿದ ರೇ ಸಾಹೇಬರು ಈ ಕಟ್ಟಡವನ್ನು ಕುರಿತು ಬರೆದಿಟ್ಟದ್ದೇನಂದರೆ, "ವಿಜಯ ವಿಠ್ಠಲನ ದೇವಾಲಯದೊಳಗೆ, ಆಕಾಲದ ಅತ್ಯುತ್ಕೃಷ್ಟರಾದ ಶಿಲ್ಪಿಗರು ಕೆಲಸಮಾಡಿದ್ದು, ಆ ಕೆಲಸದಲ್ಲಿ ಕರ್ನಾಟಕದೊಳಗಿನ ಶಿಲ್ಪಕಲೆಯು ಜಾಜ್ವಲ್ಯವಾದ ಶಿಖರಕ್ಕೆ ಮುಟ್ಟಿದ್ದು ಕಂಡುಬರುತ್ತದೆ." ಈ ದೇವಾಲಯವನ್ನು ಕಟ್ಟುವ ಕೆಲಸವು ಕೃಷ್ಣ ದೇವರಾಯನ ಕಾಲದಲ್ಲಿ ಆರಂಭವಾದರೂ, ಮುಂದೆ ಆಳಿದ ಅಚ್ಯುತರಾಯನ ಕಾಲದಲ್ಲಿಯೂ, ಸದಾಶಿವರಾಯನ ಕಾಲದಲ್ಲಿಯೂ ಸಾಗಿಯೇ ಇತ್ತು. ಇದರ ಕಟ್ಟುವ ಕೆಲಸವು ೧೫೬೫ ನೇ ವರ್ಷದ ವರೆಗೆ, ಅಂದರೆ ವಿಜಯನಗರವು ಹಾಳಾಗುವ ವರೆಗೂ ನಡೆದಂತೆ ಕಂಡುಬರುತ್ತದೆ. ಯಾಕಂದರೆ ಈ ದೇವಾಲಯಕ್ಕೆ ವರ್ಷಾಸನವನ್ನು ೧೫೬೧ ರಲ್ಲಿ ಕೊಟ್ಟಿತೆಂಬ ಶಿಲಾಲೇಖವುಂಟು. ಕೃಷ್ಣದೇವರಾಯನು ತನ್ನ ಪ್ರೀತಿಯ ರಾಣಿಯಾದ ನಾಗಲಾದೇವಿಯ ಸಲುವಾಗಿ ವಿಜಯನಗರದಿಂದ ಸುಮಾರು ೫ ಮೈಲಿನ ಮೇಲೆ, ಒಂದು ಪಟ್ಟಣವನ್ನು ೧೫೧೦ ನೇ ಇಸ್ವಿಯ ಮುಂಚಿತವಾಗಿ, ಅಂದರೆ ಪಟ್ಟಕ್ಕೆ ಬಂದ ಕೂಡಲೆ ಕಟ್ಟಿಸಿದನು. ನಾಗಲಾದೇವಿಯು ವಿಜಯನಗರದ ಅಂತಃಪುರದೊಳಗಿನ ದಾಸಿಯು; ಅವಳ ಲಾವಣ್ಯಕ್ಕೆ ಮೆಚ್ಚಿದ ಕೃಷ್ಣದೇವರಾಯನು ಅವಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಂಡು, ಈ ಹೊಸ ಪಟ್ಟಣಕ್ಕೆ ನಾಗಲಾಪುರವೆಂಬ ಹೆಸರಿಟ್ಟನು ಆದರೆ ಮುಂದೆ ಈ ಹೆಸರು ಹೇಗೋ ಹಿಂದೆ ಬಿದ್ದು, ಅದೇ ಈಗಿನ ಹೊಸಪೇಟೆಯಾಯಿತು. ನಾಗಲಾಪುರವು ಕೃಷ್ಣದೇವರಾಯನ ಪ್ರೀತಿಯ ವಿಶ್ರಾಂತಿ ಸ್ಥಳವಾಗಿತ್ತು.

**ಕೃಷ್ಣದೇವರಾಯನ ಕಾಲದ ಕೆರೆ ಕಾಲುವೆಗಳು**

ಕೃಷ್ಣ ದೇವರಾಯನು ಶೂರನೂ, ಸಾಹಸಿಯೂ, ರಾಜಕಾರಣ ಚತುರನೂ ಇದ್ದನಲ್ಲದೆ, ವೀರರಿಗೆ ಶೋಭಿಸುವ ಸದಯಾಂತಃಕರಣವೂ, ಪ್ರಜಾವಾತ್ಸಲ್ಯವೂ ಅವನಲ್ಲಿ ತುಂಬಿ ತುಳುಕುತ್ತಿದ್ದವು. ಆತನು ತನ್ನ ಪ್ರಜರ ಹಿತಕ್ಕಾಗಿ ಯಾವಾಗಲೂ ಹೆಣಗುತ್ತಿದ್ದನು. ವಿಜಯನಗರದ ಸಾಮ್ರಾಜ್ಯವು ಘಟ್ಟದ ಮೇಲ್ಭಾಗದಲ್ಲಿ ಹಬ್ಬಿದ್ದು ಅಲ್ಲಿ ಸಾಕಷ್ಟು ಮಳೆಯಾಗುವದಿಲ್ಲ. ಹೊರ್ತಾಗಿ ವಿಜಯನಗರದಂಥ ೧೫ ಮೈಲು ಉದ್ದವಾಗಿಯೂ, ೧೨ ಮೈಲು ಅಗಲವಾಗಿಯೂ ಹಬ್ಬಿದ, ಪ್ರಚಂಡವಾದ ಜನವಸತಿಯುಳ್ಳ ಪಟ್ಟಣಕ್ಕೆ ನೀರಿನ ಪೂರೈಕೆಯ ಅವಶ್ಯಕತೆಯು ಬಹಳವಿತ್ತು. ಆದ್ದರಿಂದ ಕೃಷ್ಣದೇವರಾಯನು ಅಲ್ಲಲ್ಲಿ ದೊಡ್ಡ ದೊಡ್ಡ ಕೆರೆಗಳನ್ನು ಕಟ್ಟಿಸಿದ್ದಲ್ಲದೆ, ತುಂಗಭದ್ರೆಗೆ ಅಣೆಕಟ್ಟುಗಳನ್ನು ಹಾಕಿ, ದೂರದ ವರೆಗೆ ಕಾಲುವೆಗಳನ್ನು ತೆಗೆದು ನೀರಿನ ಪೂರೈಕೆಯನ್ನು ಮಾಡಿಕೊಟ್ಟನು. ಈ ಕಾಲುವೆಗಳು, ವಿಜಯನಗರದಲ್ಲೆಲ್ಲ ಜಾಳಿಗೆಯಂತೆ ಹಬ್ಬಿ, ಪಟ್ಟಣದೊಳಗಿನ ಹೂದೋಟಗಳಿಗೂ, ಜನರಿಗೂ ತುಂಗಭದ್ರೆಯ ಅಮೃತದಂಥ ನೀರನ್ನು ಪೂರೈಸಿ ಕೊಡುತ್ತಿದ್ದವು. 'ಗಂಗಾಸ್ನಾನ, ತುಂಗಾಪಾನ' ಎಂಬ ನಾಣ್ಣುಡಿಯು ರೂಢವಾದದ್ದು ತುಂಗಭದ್ರೆಯ ನೀರಿನ ವಿಷಯಕ್ಕೆ ಚನ್ನಾಗಿ ಬೋಧಮಾಡಿ ಕೊಡುತ್ತದೆ. ಈತನು ಕಟ್ಟಿದ ಕೆರೆಗಳಲ್ಲಿ, ರಾಜಧಾನಿಯ ಹತ್ತರವೇ ಕಟ್ಟಿದ ಕೆರೆಯು ಬಹು ದೊಡ್ಡದೂ, ವಿಸ್ತೃತವಾದದ್ದೂ ಆಗಿತ್ತು. ಇದನ್ನು ಕಟ್ಟಲಿಕ್ಕೆ ಕೃಷ್ಣದೇವರಾಯನು ಆ ಕಾಲದ ಪೋರ್ತುಗೀಜರ ಕಡೆಯಿಂದ ಒಬ್ಬ ಎಂಜಿನಿಯರನನ್ನು ಕರೆ ಕಳುಹಿಸಿದ್ದನು. ಈತನ ಹೆಸರು ಜೋಆ ಲಾಪಾಂಟೀ ಎಂಬದಾಗಿತ್ತು. ಈ ಪೂರ್ವ ಕೆರೆಯು ಬತ್ತಿ ಹೋಗಿದ್ದು ಹೊಸಪೇಟೆಯ ನೈಋತ್ಯಕ್ಕಿರುವ ಸೊಂಡೂರ ಗುಡ್ಡಗಳ ವಾಯವ್ಯದಲ್ಲಿಯ ಕೊಳ್ಳವೇ ಇರಬೇಕೆಂದು ತಜ್ಞರ ಮತವದೆ. ಈ ಕೊಳ್ಳಕ್ಕೆ ಅಡ್ಡ ಕಟ್ಟಿದ ವಿಸ್ತೀರ್ಣವಾದ ವಡ್ಡನ್ನು ಸದ್ಯಕ್ಕೆ ಹೊಸಪೇಟೆಯಿಂದ ಬೇರೆಬೇರೆ ಭಾಗಗಳಿಗೆ ಹೋಗುವ ರಾಜಮಾರ್ಗಗಳ ಸಲುವಾಗಿ ಉಪಯೋಗಿಸಿರುವರು. ದ್ರವ್ಯ-ಶ್ರಮಗಳನ್ನು ವೆಚ್ಚ

ಮಾಡಿಕಟ್ಟಿದ ಆ ಕೆರೆಯು ನಿರುಪಯೋಗಿಯಾಗಿ ಬಿದ್ದದ್ದನ್ನು ಕಂಡರೆ ಸಖೇದಾಶ್ಚರ್ಯವಾಗುತ್ತದೆ. ಅರಸನ ಪ್ರೀತಿಯ ನಿವಾಸ ಸ್ಥಾನವಾದ ನಾಗಲಾಪುರ[ಹೊಸಪೇಟೆ]ಕ್ಕೆ ನೀರಿನ ಪೂರೈಕೆಯಾಗಬೇಕೆಂಬ ಉದ್ದೇಶದಿಂದ ಈ ಕೆರೆಯು ಕಟ್ಟಲ್ಪಟ್ಟಿದ್ದೇನೋ ನಿಜ ಆದರ ಸುತ್ತುಮುತ್ತಲಿನ ಭೂಮಿಗಳಿಗೆ ನೀರಿನ ಪೂರೈಕೆಯನ್ನು ಮಾಡಿಕೊಡುವ ಇನ್ನೊಂದು ಉದ್ದೇಶವಾದರೂ ಇತ್ತು. ಆದರೆ ಈ ಉದ್ದಿಷ್ಟಗಳು ಕೈಗೂಡಿದಂತೆ ಕಂಡುಬರುವದಿಲ್ಲ ಪೇಯಿಜ ಎಂಬ ಪ್ರವಾಸಿಯು ಈ ಕೆರೆಯ ಬಗ್ಗೆ ಬರೆದದ್ದೇನಂದರೆ— "ಕೃಷ್ಣದೇವರಾಯನು ನಾಗಲಾಪುರದ(ಹೊಸಪೇಟೆಯ)ಸಮೀಪದಲ್ಲಿ ಬಂದ ಗುಡ್ಡಗಳ ಎರಡು ತುದಿಗಳನ್ನು ಪ್ರಚಂಡವಾದ ವಡ್ಡಿನಿಂದ ಜೋಡಿಸಿ ವಿಸ್ತಾರವಾದ ಕೆರೆಯನ್ನು ನಿರ್ಮಿಸಿದನು. ಮತ್ತು ಈ ವಡ್ಡು ಹಾಕಲಿಕ್ಕೆ ಇನ್ನೊಂದು ಕಡೆಯ ಗುಡ್ಡವನ್ನು ನೆಲಸಮ ಮಾಡಬೇಕಾಯಿತು. ನಾನು ಈ ಕೆರೆಯ ಮೇಲೆ ಕೆಲಸ ಮಾಡುವ ಅಗಣಿತ ಜನರನ್ನು ಕಂಡೆನು. ಈ ಕೆರೆಯ ವಡ್ಡು ಸ್ಥಿರವಾಗಿ ನಿಲ್ಲಬೇಕೆಂದು ಅರವತ್ತು ನರಬಲಿಗಳನ್ನು ಕೊಟ್ಟರು!" ಇದೇ ಮಾತನ್ನು ನ್ಯೂನಿಜ ಎಂಬ ಪ್ರವಾಸಿಕನೂ ಬರೆದಿಟ್ಟಿದ್ದಾನೆ.

## ಉಗ್ರ ನರಸಿಂಹನ ಮೂರ್ತಿಯು

೧೫೨೮ನೇ ವರುಷ ಇಡಿ ವಿಜಯನಗರ ಪಟ್ಟಣದೊಳಗೆ ಯಲ್ಲಕ್ಕು ಸೋಜಿಗವಾದದ್ದೂ, ಭವ್ಯವಾದದ್ದೂ ಆದ ನರಸಿಂಹ ದೇವರ ಮೂರ್ತಿಯು, ರಚಿಸಲ್ಪಟ್ಟಿತು. ಇದು ವಿಷ್ಣುವಿನ ನಾಲ್ಕನೇ ಅವತಾರವನ್ನು ತೋರಿಸುವ ಮೂರ್ತಿಯು; ಅಖಂಡವಾದ ಒಂದೇ ಒಂದು ಬಂಡೆಯಲ್ಲಿ ಕೊರೆದು ಮಾಡಲ್ಪಟ್ಟಿದ್ದು. ಈ ಬಂಡೆಯು ಕೃಷ್ಣಸ್ವಾಮಿಯ ಗುಡಿಯ ನೈಋತ್ಯದಲ್ಲಿದ್ದು, ಆ ಬಂಡೆಗೆ ಕರ್ನಾಟಕ ಶಿಲ್ಪಿಗನ ಉಳಿಯು ಹತ್ತಿ, ಸುಂದರವಾದ ಮೂರ್ತಿಯ ಆಕಾರವನ್ನು ಹೊಂದಿ, ಶಿಲ್ಪಿಗನ ಕೀರ್ತಿಯನ್ನು ಅಜರಾಮರವಾಗುವಂತೆ ಮಾಡಿತು. ಈ ನೃಸಿಂಹ ದೇವರ ಮೂರ್ತಿಯು ಅತಿ ಭೀಕರವಾಗಿರುವದರಿಂದ, ಆದು ಉಗ್ರ ನರಸಿಂಹನೆಂಬ ಅನ್ವರ್ಥಕ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಮೂರ್ತಿಯು ೧೫೬೫ರಲ್ಲಿಯೂ, ಆ ಮೇಲೆ ಆದ ಮುಸಲ್ಮಾನರ ದಾಳಿಗಳಲ್ಲಿಯೂ ಛಿನ್ ವಿಛಿನ್‌ವಾಗಿ ವಿದ್ರೂಪ ಮಾಡಲ್ಪಟ್ಟಿತು ಸಾವಿರಾರು ಜನ ಶಸ್ತ್ರಗಳಿಂದ ಪೆಟ್ಟುತಿಂದು ಈ ಮೂರ್ತಿಯು, ಇನ್ನೂ ತನ್ನ ಉಗ್ರಸ್ವರೂಪವನ್ನೂ ಚನ್ನಾಗಿ ತೋರಿಸುವದು. ಇಂಥ ಅಗಾಧವಾದ ಕರೇ ಶಿಲೆಯು ಅದು. ಶತ್ರುಗಳಿಗೆ ಅದನ್ನು ಒಡೆದು ತುಂಡು ಮಾಡುವದು ಅಶಕ್ಯವಾದ ಮಾತಾಗಿತ್ತು. ಆದ್ದರಿಂದಲೇ ಅದನ್ನು ಅಷ್ಟಕ್ಕೆ ಬಿಟ್ಟುಕೊಟ್ಟು ಹೋಗಿರಬಹುದು. ಆದರೂ ಈ ಮೂರ್ತಿಯು ವಿಜಯನಗರದೊಳಗಿನ ಯಾವತ್ತೂ ಮೂರ್ತಿಗಳಲ್ಲಿ ಇನ್ನೂ ಅತಿ ಸೋಜಿಗವಾದ ಶಿಲ್ಪಕಲೆಯ ಮಾದರಿಯಾಗಿ ಉಳಿದಿರುತ್ತದೆ. ಈ ಮೂರ್ತಿಯನ್ನು ಕಟ್ಟಿಸಿದ ಮೇಲೆ, ಅದರ ವ್ಯವಸ್ಥೆಯ ಸಲುವಾಗಿ, ಕೃಷ್ಣದೇವರಾಯನು ಉಂಬಳಿಯನ್ನು ಹಾಕಿಕೊಟ್ಟನು. ಆದರಂತೆ ಆತನು ತನ್ನ ಪಟ್ಟಾಭಿಷೇಕದ ಕಾಲಕ್ಕೆ, ಹಂಪಿಯ ವಿರುಪಾಕ್ಷಲಿಂಗನಿಗೆ ರಾಜ್ಯಾಭಿಷೇಕದ ಸ್ಮರಣಾರ್ಥವಾಗಿ ದೊಡ್ಡ ಉಂಬಳಿಯನ್ನು ಹಾಕಿಕೊಟ್ಟನು. ವಿರುಂಚಿಪುರದೊಳಗಿನ ಗೋಪುರದ ಒಳಭಾಗದೊಳಗೆ, ಆ ಗ್ರಾಮವನ್ನು ವಿರುಪಾಕ್ಷಲಿಂಗನಿಗೆ ಇನಾಮು ಹಾಕಿಕೊಟ್ಟಬಗ್ಗೆ ಶಿಲಾಲೇಖವುಂಟು. ಈ ಶಿಲಾಲೇಖವು ಇಸ್ವಿ ಸನ್ ೧೫೧೩-೧೪ರಲ್ಲಿ ಬರೆಯಲ್ಪಟ್ಟಿತು. ಅದರಂತೆ ವಿಜಯನಗರದ ಸಮೀಪವಲ್ಲಿಯೇ ಸಂಕಲಾಪುರವೆಂಬ ಗ್ರಾಮದೊಳಗೆ ೨೦-೯-೧೫೧೩ ನೇ ತಾರೀಖಿನ ದಿವಸ ಬರೆದ ಇನ್ನೊಂದು ಶಿಲಾಲೇಖವು ಇರುತ್ತದೆ ಅದರೊಳಗೆ ಸಂಕಲಾಪುರಗ್ರಾಮವನ್ನು ಅರಮನೆಯೊಳಗಿನ ಗಣಪತಿಯ ಸಲುವಾಗಿ ಉಂಬಳಿ ಹಾಕಿ ಕೊಟ್ಟಬಗ್ಗೆ ನಮೂದಿಸಿದೆ. ಇದರ ಹೊರ್ತಾಗಿ ಕೃಷ್ಣದೇವರಾಯನು ತನ್ನ ಆಳಿಕೆಯಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬರೆಯಿಸಿದ ಎಷ್ಟೋ ಶಿಲಾಲೇಖಗಳು ದೊರೆತಿವೆ. ಸದ್ಯದ ಪರಿಶೋಧನೆಯಂತೆ, ಕೃಷ್ಣದೇವರಾಯನ ಆಳಿಕೆಯೊಳಗಿನ ಕಡೇ ಶಿಲಾಲೇಖವು, ಉಗ್ರನರಸಿಂಹ ದೇವರ ಮೂರ್ತಿಯ ಎದುರಿನಲ್ಲಿದ್ದು, ಅದು ೧೫೨೯ ನೇ ಇ. ಯ ಎಪ್ರಿಲ ತಿಂಗಳಿನ ೨೩ ನೇ ತಾರೀಖಿನ ದಿವಸ ಅಂದರೆ ಶುಕ್ರವಾರ ದಿವಸ ಬರೆಯಲ್ಪಟ್ಟಿತೆಂದು ಉಲ್ಲೇಖವಿದೆ.

ಇವುಗಳಿಂದ ಕೃಷ್ಣದೇವರಾಯನು ಶೂರನೂ, ಸಾಹಸಿಯೂ ಇದ್ದದ್ದಲ್ಲದೆ, ಕಲಾಪ್ರಿಯನೂ, ದೇವಧರ್ಮದಮೇಲೆ ನಿಷ್ಠೆಯುಳ್ಳವನೂ, ಪ್ರಜಾಹಿತರತನೂ ಇದ್ದನೆಂದು ಗೊತ್ತಾಗುತ್ತದೆ.

# ವಿಜಯನಗರ ಕಾಲದ ಗದುಗಿನ

# ಶಿಲಾಲೇಖ.

[ ಲೇಖಕರು — ಶ್ರೀ. ಶಿರಹಟ್ಟಿ ನಾರಾಯಣರಾಯರು, ಧಾರವಾಡ ]

## ಶಿಲಾಲೇಖ.

೧. ಶುಭಮಸ್ತು॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ ತ್ರೈಲೋಕ್ಯ
 ನಗರಾರಂಭ ಮೂಲಸ್ತಂಭಾಯ

೨. ಶಂಭವೆ। ಸ್ವಸ್ತಿಸಮಸ್ತಭವನಾಶ್ರಯ ಶ್ರೀ ಪ್ರಿಥ್ವಿವಲ್ಲಭ ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀವಿ

೩ ರ ಪ್ರತಾಪ ಶ್ರೀ ಅಚ್ಯುತರಾಯ ಮಹಾರಾಯರು ವಿಜಯನಗರಿಯ ನೆಲೆವೀಡಿನೊಳು ಸು

೪ ಖ ಸಂಕಥಾ ವಿನೋದಿಂ ರಾಜ್ಯಂ ಗೆಯ್ಯುತ್ತಮಿರಲು ಶಕವರ್ಷ ೧೪೬೧ ನೆಯವಿಕಾರಿ ಸಂವ

೫ ತ್ಸರದ ಭಾದ್ರಪದ ಶುದ್ಧ ಶ್ರವಣಾ ಮಂಗಳವಾರ ಪುಣ್ಯಕಾಲದೊಳು ಭಾಸ್ಕರ ಕ್ಷೆ

೬ ತ್ರ ತುಂಗಭದ್ರಾತೀರ ವಿರುಪೇಶ್ವರನ ಸಂನಿಧಿಯಲಿ ಮಾಧವ ಪ್ರಿತ್ಯರ್ಥವಾಗಿ ಆ

೭ ನಂದನಿಧಿಯೆಂಬ ದಾನವನು ಕೊಟ್ಟು ಸಮಸ್ತ ಭೂಸುರರನು ಸಂತೋಷಂ ಬಡಿಸಿದ ಪ್ರಶ

೮ ಸ್ತಿಯನು ಸಂಸ್ಕೃತ ಭಾಷಾಕವಿತ್ವದಲಿ ಶಾರ್ದೂಲ ವಿಕ್ರಿಡಿತವೆಂಬ ವೃತ್ತಂಗಳನು। ಕವಿ

೯. ಕುಮಾರ ವ್ಯಾಸಂಗೆ ಪ್ರಸನ್ನನಾದ ಗದುದೆಯ ಶ್ರೀ ವಿರನಾರಾಯಣನ ಸಂನಿದಿಯಲಿ ಶಿಲಾ

೧೦ ಶಾಸನಕೆ ಬರೆಸಿದ ಧರ್ಮಕೀರ್ತಿ ಪ್ರಶಸ್ತಿಯ ವೃತ್ತಂಗಳ ಕ್ರಮವೆಂತೆಂದೊಡೆ ॥ ವೃ ॥

೧೧. ಶಾಕೆ ಚಂದ್ರ ರಸಾಮರೆಂದ್ರ ಗಣಿತೆ ವರ್ಷೆ ವಿಕಾರ್ಯಾಹ್ವಯೆ ಪಕ್ಷೆ ಭಾದ್ರಪದ

೧೨. ಸ್ಯ ಪೋಷಿತ ವಿಧೌ ದ್ವಾದಶ್ಯಭಿಖೆ ತಿಥೌ ॥ ವಾರಿ ಭೂಮಿಸುತಸ್ಯ ವಿಷ್ಣು ಧಿಷತಾ ತಾರೆಚ್ಯುತಕ್ಷ್ಮಾ

೧೩ ಪತಿರ್ದತ್ವಾನಂದನಿಧಿಂ ದ್ವಿಜಾನನದಯನ್ನಾಮೊನ ಯನ್ಮಾಧವಂ ॥೧॥ ಪುಣ್ಯಾಪ್ತಿಃ ಪರಿಪಾಲಿತೊ

೧೪ ಸ್ಯ ಪರಿತೊ ಭೂತಾಳಿ ಸಂಪೆ ॥ ಸ್ಥಿತಾಸರ್ವ್ವಸ್ವ ಸವ ತೆ ಕ್ರುತಸ್ಯ ಸತತಾಕ್ರಾಂತಾಭುಜಂಗಾ

೧೫ ವಭೆ ವಾಕ್ತ್ರಸ್ಯಾತನವೆ ಪ್ರಶಸ್ತಮಧಿಕೆ ಪ್ರಖ್ಯಾತ ಶೌರ್ಯೊಚ್ಯುತ ಕ್ಷ್ಮಾಪಾನಂದ ನಿಧೆರ್ನ

೧೬. ವೊಚ್ಚನಿಧಯ ಕಿಂತೆಲಭಂತಿಕಾಲು

ಈ ಶಿಲಾಲೇಖವು ಗದುಗಿನ ಶ್ರೀ ವೀರನಾರಾಯಣ ದೇವರ ಗುಡಿಯಲ್ಲಿ ದಕ್ಷಿಣ ದಿಕ್ಕಿನ ಕೋಟೆವಲ್ಲಿ ಪೂರ್ವಾಭಿಮುಖವಾಗಿರುವ ಗೋಡೆಯ ಮೇಲೆ ಇರುತ್ತದೆ ಇದು ೧ ಫೂಟು ೫ ಇಂಚು ಉದ್ದ ಮತ್ತು ಸುಮಾರು ೨ ಫೂ. ೩ ಇಂ. ಅಗಲವಿರುತ್ತದೆ. ಗೋಡೆಯ ಎದುರಿನಲ್ಲಿ ನಾವು ನಿಂತರೆ ಅಕ್ಷರಗಳ ಸಾಲುಗಳು ನಮ್ಮ ಎಡದಿಂದ ಬಲಕ್ಕೆ ಹೋಗದೇ ಕಾಲುಕಡೆಯಿಂದ ನೆತ್ತಿಯ ಕಡೆಗೆ ಹೋಗುತ್ತವಾದ್ದರಿಂದ ಅಗಲವು ಹೆಚ್ಚಾಗಿ ಉದ್ದವೇ ಕಡಿಮೆ ಕಾಣುತ್ತದೆ. ಈ ಶಿಲಾಲೇಖವು ಅದರ ೩ ನೇಯ ಸಾಲಿನಲ್ಲಿ ಹೇಳಿದಂತೆ ವಿಜಯನಗರದ ಸಾಮ್ರಾಟರಾದ ಸಮಸ್ತ ಭುವನಾಶ್ರಯ ಇತ್ಯಾದಿ ಬಿರುದಾಂಕಿತರಾದ ಶ್ರೀ ಅಚ್ಯುತರಾಯ ಮಹಾರಾಯರದಿರುತ್ತದೆ ಮತ್ತು ಶಕ ವರ್ಷ ೧೪೬೧ ಕ್ರಿ. ಶ ೧೫೩೯ ನೆಯ ವಿಕಾರಿ ಸಂವತ್ಸರದ ಭಾದ್ರಪದ ಶುದ್ಧ ದ್ವಾದಶಿ ತಿಥಿಯಲ್ಲಿ ( ಸಾಲು ೪, ೫ ಮತ್ತು ೧೧ ) ಆನಂದನಿಧಿಯೆಂಬ ದಾನವನ್ನು ಬ್ರಾಹ್ಮಣರಿಗೆ ಕೊಟ್ಟು ( ಸಾ. ೬-೭) ಶ್ರೀ ಅಚ್ಯುತರಾಯರು ಮಾಧವದೇವರನ್ನೂ ಬ್ರಾಹ್ಮಣರನ್ನೂ ಸಂತೋಷಬಡಿಸಿದುದನ್ನು ಹೇಳುತ್ತದೆ.

ಈ ಲೇಖದಲ್ಲಿಯ 'ಭ' ಕಾರವು ೧೨ ನೆಯ ಶತಮಾನದ 'ಭ' ಕಾರದಂತೆ ಎರಡು ಬೇರೆ ಬೇರೆ ಭಾಗಗಳಿರದೆ ಕೂಡಿಯೇ ಇದೆ. ಆದರೆ ಇಂದಿನ 'ಭ' ಕಾರದಂತೆ ಕುಂಡಿಯನ್ನು ಮಾತ್ರ ಸೀಳಿಲ್ಲ (ಸಾ. ೧) 'ಚ' ಕಾರವು ಇವತ್ತಿನ 'ಚ' ಕಾರದಂತಿದೆ. (ಸಾ ೧)

ಕಥಾ' (ಸಾ. ೪) 'ಶುಘ' (ಸಾ. ೫) ಶಬ್ದಗಳಲ್ಲಿಯ ಘ' ಮತ್ತು 'ಧ' ಕಾರಗಳು ಕುಂಡೀ ಸೀಳಲ್ಪಟ್ಟಿವೆ ನಾರಾಯಣ' (ಸಾ. ೯) 'ಶಂಭವೆ' (ಸಾ. ೩) ವಿನೋದ' (ಸಾ. ೮) ಶಬ್ದಗಳಲ್ಲಿ ಕಂಡುಬರುವ 'ಆ' ಎ' 'ಓ' ಕಾರಗಳ ಚಿನ್ಹಗಳು ಆಧುನಿಕವಾಗಿವೆ. ಆದರೂ 'ಸಂತೋಷ' (ಸಾ. ೭) 'ಕ್ರಸುವೆಂತೆಂದೊಡೆ' (ಸಾ. ೧೦) ಎಂಬ ಶಬ್ದಗಳಲ್ಲಿಯ 'ಒ' ಕಾರ ಚಿನ್ಹಗಳು ಮಾತ್ರ ಪುರಾತನವಾಗಿವೆ 'ದ್ವಾದಶ್ಯಭಿಖೆ' (ಸಾ ೧೨) 'ತಾರೆಚ್ಯುತ' (ಸಾ. ೧೨), 'ಪತಿರ್ದತ್ವಾ ನಂದನಿಧಿಂ' (ಸಾ ೧೩) ಮುಂತಾದ ಶಬ್ದಗಳಲ್ಲಿ ಸಂಸ್ಕೃತ ಸಂಧಿಯ ನಿಯಮಗಳನ್ನು ಚೆನ್ನಾಗಿ ಪಾಲಿಸಿದ್ದಾರೆ. ೧೩ನೇ ಶತಮಾನದಲ್ಲಿ 'ದ್ವಿಜಾನನದಯಂ ನಾಮೊದಯನ್' ಎಂದು ಬರೆದಿದೆ. ಆದರೆ ಅದನ್ನು 'ದ್ವಿಜಾನನದಯನ್' 'ಆಮೊದಯನ್' ಎಂದು ಬರೆದಿದ್ದರೆ ದೋಷರಹಿತವಾಗುತ್ತಿತ್ತು ಈಬಗೆಯಿಂದ ಅರ್ಧಾಕ್ಷರ ಅಂದರೆ ವ್ಯಂಜನದ ಮುಂದ ಸ್ವರಬರಲು ಕೆಲವೆಡೆಯಲ್ಲಿ ಕನ್ನಡದಲ್ಲಿ ಹಿಂದಿನ ವ್ಯಂಜನವನ್ನು ದ್ವಿತ್ವಮಾಡುವದುಂಟು. ಮತ್ತು ಪ್ರಾಚೀನ ಶಿಲಾಶಾಸನಗಳಲ್ಲಿ ಅನುನಾಸಿಕ ದ್ವಿತ್ವಗಳನ್ನು ಬರೆಯುವಾಗ ಅನುಸ್ವಾರಗಳನ್ನು ಉಪಯೋಗಿಸುವದು ಕಂಡುಬರುತ್ತದೆ ೧೨ನೇ ಸಾಲಿನಲ್ಲಿ ಬರುವ 'ದ್ವಾದಶ್ಯಭಿಖೆತಿಥೌ' ಎಂಬ ಶಬ್ದಗಳಲ್ಲಿ 'ಅಭಿಖೆ' ಎಂಬುದು ತಿಥೌ'ಕ್ಕೆ ವಿಶೇಷಣವಿದ್ದುದರಿಂದ ಸ್ತ್ರೀಲಿಂಗದ ಸಪ್ತಮಿ ಏಕವಚನವಿರಬೇಕಿತ್ತು. ಆದರೆ ಪುಲ್ಲಿಂಗದ ಸಪ್ತಮಿ ಏಕವಚನವದೆ ಶಿಲಾಲೇಖದ ಕೊನೆಯಲ್ಲಿರುವ ಎರಡು ಸಂಸ್ಕೃತ ಶ್ಲೋಕಗಳು ಲೇಖದಲ್ಲಿ ಹೇಳಿದಂತೆ ನಿರ್ದುಷ್ಟವಾದ ಶಾರ್ದೂಲವಿಕ್ರೀಡಿತವೃತ್ತದ ಛಂದಸ್ಸಿನಲ್ಲಿವೆ.

ಶಿ. ಶಾಸನದಲ್ಲಿ ಹೇಳಿದಂತೆ ೧೪೬೧ ನೆಯ ಶಕವರ್ಷದಲ್ಲಿ ವಿಕಾರಿ ಸಂವತ್ಸರವು ಇತ್ತು. ೧೪೬೧ ಎಂದು ಸಂಸ್ಕೃತದಲ್ಲಿ ಹೇಳುವಾಗ '೧೪' ಕ್ಕೆ 'ಇಂದ್ರ' ಇಷ್ಟೇ ಎಂದಿದ್ದರೆ ಸಾಕಾಗಿತ್ತು ಅಮರೇಂದ್ರಎಂದು ಯಾಕೆ ಬರೆದರೋ ತಿಳಿಯದು ಬಹುಶಃ ಛಂದಸ್ಸು ಕೂಡಬೇಕೆಂದು ತೆಗೆದುಕೊಂಡಂತೆ ಕಾಣುತ್ತದೆ. ಆನಂದ ನಿಧಿಯೆಂಬ ದಾನವು ಎಂತಹದು? ಅದನ್ನು ಭಾದ್ರಪದ ಶುದ್ಧ ದ್ವಾದಶಿ ದಿವಸ ಕೊಡುವರೋ ಹೇಗೆಂಬ ಬಗ್ಗೆ ಆಧಾರಗಳು ಇನ್ನೂ ನನಗೆ ಸಿಕ್ಕಲಿಲ್ಲ 'ಧರ್ಮಕೀರ್ತಿ' [ಸಾ ೧೦] ಎಂಬ ಶಬ್ದಕ್ಕೆ ಎರಡು ಅರ್ಥಗಳಾಗುತ್ತವೆ (i) ಧರ್ಮವನ್ನು ಕೊಟ್ಟುದರಿಂದುಂಟಾದ ಕೀರ್ತಿಯು (ii) ಯಾವನಾದರೊಬ್ಬ ಮನುಷ್ಯನ ಹೆಸರು. ಮನುಷ್ಯನ ಹೆಸರೆಂದು ಒಪ್ಪಿಕೊಂಡರೆ ಈ ಪ್ರಶಸ್ತಿಯನ್ನು ಅವನೇ ಬರೆದನೆಂದಾಗುತ್ತದೆ. ಶಿಲಾಶಾಸನಗಳಲ್ಲಿ ಅವುಗಳಲ್ಲಿ ಬರುವ ಪ್ರಶಸ್ತಿಯ ಕರ್ತೃಗಳ ಉಲ್ಲೇಖಿಸುವ ಸಾಂಪ್ರದಾಯವಿದ್ದರೂ ಕೂಡಾ ನನಗ 'ಧರ್ಮಕೀರ್ತಿ' ಎಂಬ ಹೆಸರಿನವನು ವಿಜಯನಗರದ ಈ ಕಾಲದಲ್ಲಿ ಜೀತಿ ಪ್ರಶಸ್ತಿಯನ್ನು ಬರೆದವನು ಇನ್ನೂ ಕಂಡು ಬಾರದ್ದರಿಂದ ನಾನು ಮೊದಲನೆಯ ಅಂದರೆ 'ಧರ್ಮಕೊಟ್ಟದ್ದರಿಂದುಂಟಾದ ಕೀರ್ತಿ' ಯೆಂಬರ್ಥವನ್ನೇ ಎತ್ತಿಹಿಡಿಯುತ್ತೇನೆ.

ಶಿ. ಶಾಸನದ ೫ ನೇಯ ಸಾಲಿನಲ್ಲಿಬರುವ 'ಭಾಸ್ಕರ ಕ್ಷೇತ್ರ' ವೆಂಬ ಶಬ್ದವು ಆ ಹೆಸರಿನ ಯಾವದಾದರೊಂದು ಪುಣ್ಯಸ್ಥಳವಲ್ಲ ಏಕೆಂದರೆ ತುಂಗಭದ್ರೆಯ ದಂಡೆಯ ಮೇಲೆ ಭಾಸ್ಕರ ಕ್ಷೇತ್ರವೆಂಬ ಊರು ಇರುವದಿಲ್ಲ. ಅದರಲ್ಲೂ ಗದುಗಿನ ಸಮೀಪದಲ್ಲಿಯಂತೂ ಇಲ್ಲವೇ ಇಲ್ಲ. ಗದುಗಿನ ಸಮೀಪದಲ್ಲಿಯೇ ಏಕೆ ಇರಬೇಕೆಂದರೆ, ಬೀರೊತ್ತಟ್ಟಿಗೆ ಕೊಟ್ಟ ದಾನದ ಪ್ರಶಸ್ತಿಯನ್ನು ಬರೆಯಿಸಬೇಕಾದರೆ, ಗದುಗು ಸಮೀಪದಲ್ಲಿಯೇ ಇದ್ದ ಒಂದು ಪ್ರಮುಖ ಸ್ಥಳವಾಗಿರಬೇಕು. ಶ್ರೀ ವೀರನಾರಾಯಣನ ವಾಸಸ್ಥಾನವಾದ್ದರಿಂದ ಗದುಗು ಪ್ರಮುಖ ಸ್ಥಳವೇ ಸರಿ ಆದರೆ ವಿಸ್ತೀರ್ಣವಾದ ವಿಜಯನಗರದ ಸಾಮ್ರಾಜ್ಯದಲ್ಲಿ ಗದುಗಿನಷ್ಟೇ ಮಹತ್ವವಾದ ಸ್ಥಾನಗಳು ಹೇರಳವಾಗಿದ್ದವು. ಉದಾಹರಣೆಗಾಗಿ ಹಂಪೆಯನ್ನೇ ತೆಗೆದುಕೊಳ್ಳುವಾ, ದಾನದ ಪ್ರಶಸ್ತಿಯನ್ನು ಬರೆಯಿಸಬೇಕಾದರೆ ಗದುಗೇನು, ಹಂಪೆಯೇನು? ಆದುದರಿಂದ ಉಳಿದೆಲ್ಲ ಮಹತ್ವದ ಸ್ಥಾನಗಳನ್ನು ಬಿಟ್ಟು ಗದುಗಿನಲ್ಲಿಯೇ ಬರೆಯಿಸಬೇಕಾದರೆ ಅದರ ಸಾಮೀಪ್ಯವೇ ಮುಖ್ಯ ಕಾರಣವಾಗಿದೆ. ಮೇಲೆ ಬರೆದ ಕಾರಣಕ್ಕೋಸುಗ 'ಭಾಸ್ಕರ ಕ್ಷೇತ್ರ'ವುಊರ ಹೆಸರಾಗದಿದ್ದಮೇಲೆ, ಅದು ರಾಮಕ್ಷೇತ್ರ, ಪರಶುರಾಮ ಕ್ಷೇತ್ರಗಳಂತೆ ಪ್ರದೇಶ ವಾಚಕ ಪದವಾಗಲೇಬೇಕು ಮತ್ತು ಭಾಸ್ಕರಕ್ಷೇತ್ರವು ಪ್ರದೇಶವಾಚಿಯಾಗಿ ಎಷ್ಟೋ ಶಿ. ಲೇಖಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಇವತ್ತಿಗಾದರೂ ಕುಂಭಕೋಣಂ ಕಡೆಯ ಬ್ರಾಹ್ಮಣರು ತಮ್ಮ ಸಂಕಲ್ಪದಲ್ಲಿ ಭಾಸ್ಕರ ಕ್ಷೇತ್ರನೆಂದೇ ಅನ್ನುತ್ತಾರೆ. ಇನ್ನು ಭಾಸ್ಕರಕ್ಷೇತ್ರವು

ಪ್ರದೇಶವಾಚಿಯೆಂದರೆ ೬ನೆಯ ಸಾಲಿನಲ್ಲಿ ಬರುವ 'ವಿಟ್ಠಲೇಶ್ವರ' ದೇವರು ಇದ್ದ ಸ್ಥಳವಾವುದು ಎಂಬ ಪ್ರಶ್ನೆ ಹುಟ್ಟುವದು. ಭಾಸ್ಕರ ಕ್ಷೇತ್ರದ ಬಗ್ಗೆ ಮಾತಾಡುವಾಗ ಹಿಂದೆ ಹೇಳಿದಂತೆ ವಿಠಲೇಶ್ವರನ ಸ್ಥಾನವು ತುಂಗಭದ್ರೆಯ ತೀರದಲ್ಲಿರಬೇಕು, ಮತ್ತು ಗದುಗಿಗೆ ಸನಿಯದಲ್ಲಿರಬೇಕು ಅಂತಹ ಸ್ಥಳವೆಂದರೆ ಗದುಗಿಗೆ ೧೨ ಹರದಾರಿ ಅಂತರ ದಲ್ಲಿರುವ ಬಿದರಹಳ್ಳಿಗೆ ಒಂದೆರಡು ಫರ್ಲಾಂಗು ದೂರದಲ್ಲಿರುವ ತುಂಗಭದ್ರಾತೀರದ ವಿಠಲಾಪುರವೆಂಬ ಗ್ರಾಮವೇ ಸರಿ. ಅಲ್ಲಿ ವಿಠ್ಠಲ ದೇವರಗುಡಿಯು ಇವತ್ತಿಗೂ ಇದೆ. ಎರಡೇ ಫರ್ಲಾಂಗು ಅಂತರದಲ್ಲಿರುವ ಬಿದರಹಳ್ಳಿಯು ದೊಡ್ಡಕ್ಷೇತ್ರವಾದರೂ ಪ್ರಶಸ್ತಿಯನ್ನು ಗದುಗಿಗೆ ಬಂದೇಕೆ ಬರೆಯಬೇಕು ? ಎಂದು ಕೇಳಬಹುದು ಆದರೆ ಬಿದರಹಳ್ಳಿಯು ಸ್ಥಳ ಪುರಾಣದಲ್ಲಿ ಈಗಿದ್ದ ಬಿದರಹಳ್ಳಿಯಷ್ಟೇ ಕ್ಷೇತ್ರವಲ್ಲದೆ ಅದರ ಸಮೀಪದಲ್ಲಿಯೇ ಇದ್ದ ವಿಠಲಾಪುರದ ವಿಠಲೇಶ್ವರ; ರಂಗಾಪುರದ ರಂಗನಾಥ, ಬಿದರಹಳ್ಳಿಯ ಅಶ್ವತ್ಥನಾರಾಯಣ, ಸೋಮೇಶ್ವರ ಮುಂತಾದ ಏಳು ಎಂಟು ದೇವಸ್ಥಾನಗಳು ಕೂಡಿ ಬಿದರಹಳ್ಳಿ ಕ್ಷೇತ್ರವಾಗುವದೆಂದು ಅಲ್ಲಿಯ ಸ್ಥಳೀಕರೊಬ್ಬರಿಂದ ತಿಳಿದುಬಂದಿದೆ ಆದುದರಿಂದ ಅದೇ ಕ್ಷೇತ್ರದಲ್ಲಿ ಕೊಟ್ಟವನ್ನು ಅಲ್ಲಿಯೇ ಬರೆಯದೆ ಸಮೀಪದಲ್ಲಿಯೇ ಇರುವ ಶ್ರೀ. ವೀರನಾರಾಯಣನ ಗೌರವ ಕ್ಕೋಸುಗ ಅವನ ಸನ್ನಿಧಾನಕ್ಕೆ ಬಂದು ಅಲ್ಲಿ ಬರೆದಿರುವರೆಂಬಂತೆ ಕಾಣುತ್ತದೆ ಶ್ರೀಪಾದಂಗಳವರಾದ ಸೋದೆಯ ವಾದಿರಾಜಸ್ವಾಮಿಗಳು ತಮ್ಮ 'ತೀರ್ಥ ಪ್ರಬಂಧ' ವೆಂಬ ಗ್ರಂಥದಲ್ಲಿ ಪೂರ್ವದಿಕ್ಕಿನ ತೀರ್ಥ ಕ್ಷೇತ್ರಗಳನ್ನು ವರ್ಣಿಸುವಾಗ ಪೂರ್ವಪ್ರಬಂಧದ ೧೦ ನೇ ಶ್ಲೋಕದಲ್ಲಿ 'ನಿವೃತ್ತಿಸಂಗಮು' ವನ್ನು ಎಂದರೆ ಕೃಷ್ಣೆ ತುಂಗಭದ್ರೆಯರ ಸಂಗಮುವನ್ನು ವರ್ಣಿಸಿ ೧೧-೧೨ ರಲ್ಲಿ ತುಂಗಭದ್ರೆಯನ್ನೇ ವರ್ಣಿಸಿ, ೧೩ ರಲ್ಲಿ

चौर्यान्मातृनिबद्धनिबद्ध चरण: पापौघ चौर्याद्बुधै:
बद्धस्त्व पथि पुडरीकमुनिना जारेति सबोधित: ||
तुङ्गातीरगतोसि विठ्ठल दिशन्नन्याकृतिर्वाञ्छित
वतृण। यदि न दास्यसिपद त्वत्सास्थिति:कथ्यते १३

ಎಂಬ ಶ್ಲೋಕದಿಂದ ತುಂಗಭದ್ರಾತೀರಸ್ಥನಾದ ವಿಠ್ಠಲನ ವರ್ಣನೆಯನ್ನು ಮಾಡಿದ್ದಾರೆ. ಆದರೆ ಈ ವಿಠ್ಠಲನು ತುಂಗಭದ್ರಾತೀರಸ್ಥನಾದ್ದಾಗ್ಯೂ ಗದುಗಿಗೆ ಸಮೀಪದಲ್ಲಿದ್ದವನಲ್ಲೆಂದು ಬಿಟ್ಟು ಬಿಡಬೇಕಾಗುವದು.

ಇವೆಲ್ಲವುಗಳಿಗಿಂತ ಬಹು ಮಹತ್ವದ ಮಾತೇನೆಂದರೆ ಕವಿ ಕು. ವ್ಯಾಸನ ಉಲ್ಲೇಖವು ಈ ಶಿಲಾಲೇಖದಲ್ಲಿದೆ. ಬಹು ವಾದಗ್ರಸ್ತವಾದ ಕು ವ್ಯಾಸನ ಕಾಲನಿರ್ಣಯವನ್ನು ಮಾಡಲು ಈ ಲೇಖದಿಂದ ಬಹು ಸಹಾಯವಾಗುತ್ತದೆ. ಏಕೆಂದರೆ ಈ ಲೇಖದ ಕಾಲವಾದ ಕ್ರಿ. ಶ. ೧೫೩೯ ಕು. ವ್ಯಾಸನ ಕಾಲದ ಮೇಲಿನ ಮೇರೆಯಾಗಿ ನಿಲ್ಲುತ್ತದೆ ಕ್ರಿ. ಶ. ೧೫೩೯ ಕ್ಕಿಂತ ಮೊದಲು ಕು. ವ್ಯಾಸನು ಇದ್ದು ಆ ಸಮಯಕ್ಕೆ ಕವಿಯೆಂದು ಪ್ರಸಿದ್ಧಿಯನ್ನು ಪಡೆದಿದ್ದಷ್ಟೇ ಅಲ್ಲದೆ ಆತನ ಕವಿತ್ವವು ರಾಜಾಸ್ಥಾನದಲ್ಲಿಯೂ ಕೂಡ ಆ ಕಾಲಕ್ಕೆ ಮಾನ್ಯತೆಯನ್ನು ಪಡೆದಿತ್ತೆಂದು ಈ ಲೇಖದಿಂದ ಸಿದ್ಧವಾಗುತ್ತದೆ. ಈ ಶಿಲಾಲೇಖವು ಕು ವ್ಯಾಸನನ್ನು ಕವಿಯೆಂದಿಷ್ಟೇ ಕರೆಯದೆ ಗದುಗಿನ ವೀರನಾರಾಯಣನ ಪ್ರಸನ್ನತೆಯನ್ನು ಪಡೆದವನೆಂದು ಸಾರುತ್ತದೆ ಈ ಮಾತು ಪರಂಪರೆಯಾಗಿ ಬಂದ ನಾರಾಯಣಪ್ಪನು [ ಕು ವ್ಯಾಸನು ] ಮೊದಲಿನಿಂದ ಓದಿ ಬರೆದ ಪಂಡಿತನಲ್ಲ; ಅವನ ಕವಿತ್ವವು ಅಭ್ಯಾಸ ಮತ್ತು ಪಾಂಡಿತ್ಯಗಳಿಂದ ಬಂದುದಲ್ಲ, ಆದರೆ ಶ್ರೀ ನಾರಾಯಣನ ಅನುಗ್ರಹದಿಂದ ಪ್ರಾಪ್ತವಾದುದು— ಎಂಬುದನ್ನು ಬಿಡಿಮಾತುಗಳಲ್ಲಿ ಹೇಳದಿದ್ದರೂ ಬಲವಾಗಿ ಬೆನ್ನು ಕಟ್ಟುತ್ತದೆ ಮತ್ತು ಭಾರತಾರಂಭದಲ್ಲಿ ನಾರಾಯಣಪ್ಪನು ಸ್ವತಃ ಮಾಡಿದ ಪ್ರತಿಜ್ಞೆಯು—

" ಹಲಗೆ ಬಳಪವ ಪಿಡಿಯದೊಂದ।
ಗ್ಗಳಿಕೆ ಪದವಿಟ್ಟಳುಪದೊಂದ ॥
ಗ್ಗಳಿಕೆ ಪರರೊಡ್ಡವದ ರೀತಿಯಕೊಳ್ಳದೊಂದಗ್ಗಳಿಕೆ ॥
ಬಳಸಿ ಬರೆಯಲು ಕಂಠಪತ್ರದ।
ಉಲುಹುಗೆಡದಗ್ಗಳಿಕೆಯೆಂಬೀ ॥
ಬಲುಹು ಸಲುವುದು ವೀರನಾರಾಯಣನ
ಕಿಂಕರಗೆ " ॥ ೧ ॥

ಎಂಬುದು ಈ ಲೇಖದಲ್ಲಿಯ ಮಾತುಗಳಿಂದ ಅತಿ ಪುಷ್ಟಿಗೊಂಡಿದೆ.

ಕೆಲವು ಪಂಡಿತರು " ಇವನು ಬಹುಶ್ರುತನು ಎಂದರೆ ಹಲವು ಸಂಸ್ಕೃತ ಗ್ರಂಥಗಳನ್ನು ಓದಿ

ಕಂಠಸ್ಥ ಮಾಡಿಕೊಂಡವನು ........ಇವನು ಅಲ್ಲಲ್ಲಿ ಪ್ರಯೋಗಿಸಿದ ಕೆಲವು ಪದ್ಯಗಳು ಆಯಾ ಸಂಸ್ಕೃತ ಪ್ರಸಿದ್ಧ ಗ್ರಂಥಗಳ ಛಾಯೆಯಾಗಿರುವವು. ಉದಾ: ಪೀಠಿಕಾ ಸಂಧಿಯಲ್ಲಿ 'ಎರಡು ತೋಳಿನ ವಿಷ್ಣು ಶಿವ' ಎಂಬ ವೇದವ್ಯಾಸರ ವರ್ಣನೆಯು 'ಅಚತುರ್ವದನೊ ಬ್ರಹ್ಮಾ.... ." ಎಂಬ ಶ್ಲೋಕದ ಛಾಯೆಯು. ಹೀಗೆಯೇ ಸಂಭವ ಪರ್ವದ ೬ನೇ ಸಂಧಿಯಲ್ಲಿ ೪೩ ನೇ ಪದ್ಯದಲ್ಲಿ ಲಕ್ಷ್ಮೀ ಸ್ವಯಂವರ ಪ್ರಕರಣದಲ್ಲಿ 'ಸರಸಿರುಹ ಸಂಭವನು ತ್ರ್ಯ... ವೈಶ್ವಾನರನು.. ನಿಷ್ಕರುಣಿ" ॥ ೪೩ ॥ "ಅತ್ರ ರಾಕ್ಷಸಯೋನಿ .. ಕೆಗ್ಗರಿಯ ರಕ್ಷಿಸೀದೇವರಿವರೆಂದು" ॥೪೪॥ ಎಂಬ ಪದ್ಯಗಳು 'ಏಷಬ್ರಹ್ಮಾ ತಿವೃದ್ಧಃ... . ಇತ್ಥಂ ದೇವಾ ವಿಚಿಂತ್ಯ ದತ್ತ ಮಾಲಾಮುರಾರೇಃ ಪಾತುಯುಷ್ಮಾನ್' ಎಂಬ ಪ್ರಾಚೀನ ಶ್ಲೋಕದ ಛಾಯೆಯು... . ಇದಲ್ಲದೆ ಇವನು ಸ್ವತಂತ್ರವಾಗಿ ನೀತಿಯನ್ನು ಬರೆಯುವಾಗ ಉಪನಿಷತ್ತು, ಗೀತೆ ಪುರಾಣ ಇವುಗಳಿಂದಲೂ ಸಂಸ್ಕೃತ ಮಹಾಭಾರತದಲ್ಲಿ ಅಲ್ಲಲ್ಲಿ ಹೇಳಿರುವ ನೀತಿ ವಚನಗಳನ್ನು ಭಾಮಿನಿ ಷಟ್ಪದಿಯಲ್ಲಿ ಅನುವಾದ ಮಾಡಿದನು" ಎನ್ನುವರು. ಕನ್ನಡ ಭಾರತಾಂತರ್ಗತವಾದ ಮೇಲ್ಕಾಣಿಸಿದ ಶ್ಲೋಕಗಳು ಪಾಂಡಿತ್ಯದ್ಯೋತಕಗಳೇನೋ ನಿಜ. ಮತ್ತು ಆ ಶ್ಲೋಕಗಳೆದುರು ಪರಂಪರಾಗತ ದಂತಕಥೆಯು ಯಾರೂ ಬೆನ್ನಾಸರಕ್ಕಿಲ್ಲದೆ ಒಂಟಿಯಾಗಿ ನಿಂತಿದ್ದರೆ, ಗ್ರಂಥಗೌರವವನ್ನು ಹೆಚ್ಚಿಸಲು ಹೆಣೆದ ಕಥೆಯೆಂದು ಅದನ್ನು ಬೀಸಿಹಾಕಿ ಬಿಡಬಹುದಿತ್ತು. ಆದರೆ ಆ ದಂತಕಥೆಯನ್ನು ಎತ್ತಿ ಹಿಡಿಯಲು ಪ್ರಮಾಣಾರ್ಹವಾದ ಶಿಲಾಲೇಖ ಮತ್ತು ಅನುಭಾವಿ ಶಾಸ್ತ್ರದ (Mysticism) ತತ್ವವೂ ಹುರಿಯಾಗಿ ನಿಂತಿವೆ. ಕು. ವ್ಯಾಸನ ಕಾಲದ ಅಂದರೆ ೧೫ನೆಯ ಶತಮಾನದ ಮಧ್ಯ ಇಲ್ಲವೇ ಅಂತ್ಯ ಕಾಲಕ್ಕೆ [ಕವಿಚರಿತೆಕಾರರು ತೋರಿಸಿದ ಪ್ರಮಾಣಗಳು ತಪ್ಪಿದ್ದರೂ ಅವರು ಕಟ್ಟಿದ ಕಾಲವು ಅಜಮಾಸು ನಿಜವದೆ.] ಯೇ ಅತಿ ಸಮೀಪದಲ್ಲಿದ್ದ ಕು ವ್ಯಾಸನ ಜೀವಿತವನ್ನು ಪ್ರತ್ಯಕ್ಷವಾಗಿ ನೋಡಲು ಶಕ್ಯವಿದ್ದ ೧೫೩೯ರಷ್ಟು ಪ್ರಾಚೀನವಾದ ವರ್ಷವು ಶ್ರೀ ವೀರನಾರಾಯಣನು ಕು. ವ್ಯಾಸನಿಗೆ ಪ್ರಸನ್ನನಾದನೆಂದು ಲೇಖ ಪ್ರಮಾಣವನ್ನು ಕೊಡುತ್ತದೆ. ಕವಿಯ ಕಾಲವೂ, ಶಿ ಲೇಖದ ಕಾಲವೂ ಒಂದರಿಂದೊಂದು ಬಹಳ ದೂರವಿದ್ದು ಕವಿಯ ನಿಜಸ್ಥಿತಿಯು ಆಖ್ಯಾಯಿಕೆಗಳಲ್ಲಿ ಮುಚ್ಚಿ ಹೋಗಿದ್ದ ಕಾರಣ ಕಣ್ಣಿಗೆ ಮೇಲೆ ಕಾಣುವ ಆಖ್ಯಾಯಿಕೆಯನ್ನೇ ಶಿ. ಲೇಖವು ಕವಿಯ ನಿಜಸ್ಥಿತಿಯೆಂದು ಎತ್ತಿಕೊಂಡಿದೆ ಎಂಬುವಂತಿಲ್ಲ.

ಶ್ರೀವೀರ ನಾರಾಯಣನು ಪ್ರಸನ್ನನಾದನೆಂದು ಲೇಖವು ಹೇಳುವದನ್ನಂತೂ ಯಾರೂ ಅಲ್ಲಗಳೆಯುವಹಾಗಿಲ್ಲ. ಇನ್ನು ಕು. ವ್ಯಾಸನು ವೀರ ನಾರಾಯಣನನ್ನು ಪ್ರಸನ್ನೀಕರಿಸಿಕೊಂಡುದಾದರೂ ಏಕೆ? ಏನಾದರು ಆಧಿವ್ಯಾಧಿಗಳು ಔಷಧೋಪಚಾರವನ್ನು ಮೀರಿ ನಿಂತು ಆತನನ್ನು ಪ್ರಸನ್ನೀಕರಿಸಿಕೊಳ್ಳ ಹಚ್ಚಿತೇ? ಅಥವಾ ಮಕ್ಕಳುಮರಿಯ ಹಂಬಲವು ಹಾಗೆ ಪ್ರೇರಿಸಿತೇ? ಇದೂ ಅಲ್ಲದೆ ಹೋದರೆ ವಿದ್ಯಾರಣ್ಯರಂತೆ ರಾಜಸ್ಥಾಪನೆಯಂತಹ ಹಂಬಲ ಹೀಗೆ ಮಾಡ ಹಚ್ಚಿತೇ? ಐಶ್ವರ್ಯ ಭೋಗದಾಶೆಯಾದರು ದೇವರನ್ನು ಕಾಣ ಹಚ್ಚಿತೇ? ದೇವನು ಆವ ಬೇಡಿಕೆಯನ್ನು ನೀಡಲು ಪ್ರಸನ್ನನಾದನು? ಮೇಲ್ಕಾಣಿಸಿದ ಹಂಬಲಗಳಂತಹ ಯಾವದಾದರೊಂದು ಹಂಬಲದಿಂದ ಕು ವ್ಯಾಸನು ಕೊರಗುತ್ತಿದ್ದನೆಂದು ಪರಂಪರೆಯಾಗಲೀ ಇಲ್ಲವೆ ಇನ್ನಾವ ಆಧಾರವಾಗಲೀ ಹೇಳುವಂತಿಲ್ಲ. ಆದುದರಿಂದ ಅಖಂಡ ೪--೫ ನೂರು ವರ್ಷಗಳಿಂದ ನಡೆದು ಬಂದು, ಕವಿಯ ಕಾಲದ ಅತಿ ಸಮೀಪದ ಶಿ. ಲೇಖದಿಂದ ಪುಷ್ಟಿಗೊಂಡ ಪರಂಪರೆಯನ್ನು, 'ಹಲಗೆ ಬಳಪ' ಇತ್ಯಾದಿ ಕು ವ್ಯಾಸನ ಪ್ರತಿಜ್ಞಾ ಪದ್ಯವು, ಕು ವ್ಯಾಸನು ಬರೆದದ್ದಲ್ಲ, ಬೇರೆಯವರು ಹಿಂದುಗಡೆ ಬರೆದು ಸೇರಿಸಿದುದೆಂಬುದು ಸಿದ್ಧವಾಗುವವರೆಗೂ, ಮತ್ತು ಗದುಗಿನ ಈ ಶಿ. ಲೇಖವನ್ನು ಅಲ್ಲಗಳೆಯುವಂತಹ ಪ್ರಮಾಣ ಸಿಗುವವರೆಗೂ ನಾವು ನಂಬಲೇ ಬೇಕಾಗುತ್ತದೆ. ಗದುಗಿನ ಶಿ. ಲೇಖದ ಬಗ್ಗೆ ಇನ್ನೊಂದು ಮಾತೇನಂದರೆ, ದೇವನ ಪ್ರಸನ್ನತೆಯು ಪ್ರಶಸ್ತಿಯು ಅಂದರೆ ಸಾಹಿತ್ಯದ ಬಗ್ಗೆ ಮಾತಾಡುವಾಗ ಉಲ್ಲೇಖಿಸಲ್ಪಟ್ಟಿದೆ. ಮತ್ತು ಕ. ವ್ಯಾಸನಿಗೆ ಸಾಹಿತ್ಯಕ್ಕೋಸುಗ ಪ್ರಸನ್ನನಾದನೆಂದು ಸೂಚಿಸುತ್ತದೆ. ಹಾಗಿಲ್ಲದಿದ್ದರೆ ಪ್ರಶಸ್ತಿಯು ಅಂದರೆ ಸಾಹಿತ್ಯದ ಮಾತಿನೊಡನೆ ಪ್ರಸನ್ನತೆಯ ಮಾತು ಸರಿಹೋಗದೆ ಅದು ಅಪ್ರಾಸಂಗಿಕವಾಗುತ್ತಿತ್ತು. ಇನ್ನೂ ಕೆಲವು ಪಂಡಿತರು "ನಿಸರ್ಗ ರಮಣೀಯವಾದ ಕಾವ್ಯ ಪ್ರವಾಹವು ನಿರಕ್ಷರಕುಕ್ಷಿಯಬಾಯಿಂದ ಇಷ್ಟು ನಿಸರ್ಗವಾಗಿ ಹರಿಯುವದು ಹೇಗೆ? ವರದಿಂದ ಒಮ್ಮಿಂದೊಮ್ಮೆ ಕಾವ್ಯದೇವತೆ ಬಾಯಿಂದ ಹೊರಬಿದ್ದಳು ಇತ್ಯಾದಿ ಮಾತುಗಳು, ಅಮಾನುಷ್ಯವಾಗಿಯೂ

ಪ್ರತ್ಯಕ್ಷ ಪ್ರಪಂಚಕ್ಕೆ ಹೊಂದದವಾಗಿಯೂ ಇರುವದರಿಂದ, ವಿಚಾರಪರವಾದ ೨೦ನೇ ಶತಮಾನದಲ್ಲಿ ಇಂತಹದನ್ನು ಹೇಗೆ ನಂಬುವದು ?" ಎಂದು ಹೇಳುವರು ಅವರಿಗುತ್ತರವಿಷ್ಟೆ. ಶಿ. ಲೇಖದ ಆಧಾರವನ್ನು ೨೦ನೇ ಶತಮಾನವೂ ಅಲ್ಲಗಳೆಯಲಾರದು; ಇದೂ ಅಲ್ಲದೆ ವಿಚಾರಪರವಾದ ೨೦ನೆಯ ಶತಮಾನದಲ್ಲಿ 'ಅಂಡರ ಹಿಲ್' 'ಅರವಿಂದಘೋಷ' ಮೊದಲಾದ ಪಾಶ್ಚಿಮಾತ್ಯ ಪೌರ್ವಾತ್ಯ ಮಹಾನುಭಾವರಿಂದ ಮನ್ನಿಸಲ್ಪಟ್ಟಿರುವ ಅನುಭಾವ ಶಾಸ್ತ್ರವು ಮೊದಲು ಮಾನುಷಾಸಾಧ್ಯವೆಂದು ತೋರುವ ಮಾತುಗಳು ಕೂಡಾ ಕ್ಷಣದಲ್ಲಿ ಹೇಗೆ ಸುಲಭ ಸಾಧ್ಯವಾಗುವದೆಂಬದನ್ನು ಹೇಳುತ್ತದೆ. ಕು ವ್ಯಾಸನಂತೂ ವೀರನಾರಾಯಣನ ಅಸಾಮಾನ್ಯ ಭಕ್ತನಾಗಿದ್ದನು. ಮತ್ತು ಆ ಭಕ್ತಿಯ ಮೂಲಕವೇ ಅವನು ಅನುಭಾವಿತ್ವವನ್ನು ಹೊಂದಿ ದೇವನನ್ನು ಪ್ರಸನ್ನ ಪಡಿಸಿಕೊಂಡನು; ಅಂದರೆ ದೇವನಿಂದ ತನ್ನ ಅಂತರ್ಮಾನಸವನ್ನು ಅರಳಿಸಿಕೊಂಡನು. 'ದೇವದೇವನು ತನ್ನ ಭಕ್ತನಿಗೆ ಪ್ರಕಟವಾಗುವ ಅಸಂಖ್ಯ ಮಾರ್ಗಗಳನ್ನು ತನ್ನೆಡೆಗೆ ಕಾದಿಟ್ಟುಕೊಂಡಿರುವನು' [ಅರವಿಂದರು]. ಒಮ್ಮೆ ಹೀಗೆ ಅಂತರ್ಮಾನಸವು ಅರಳಿತೆಂದರೆ ಎಂತಹ ಅಸಾಧ್ಯ ಕಾರ್ಯಗಳಾದರೂ ಕೈಗೂಡುತ್ತವೆಂಬದನ್ನು ಶ್ರೀ ಮಧುರಚೆನ್ನರು ರತ್ನಾಕರವರ್ಣಿ ಮತ್ತು ಕು. ವ್ಯಾಸರ ಉದಾಹರಣೆಯನ್ನು ಕೊಟ್ಟು, ತಮ್ಮ 'ಕಾಳರಾತ್ರಿ' ಯೆಂಬ ಗ್ರಂಥದಲ್ಲಿ ತೋರಿಸಿದ್ದಾರೆ. ಮತ್ತು ಅದೇ ಗ್ರಂಥದಲ್ಲಿ ಇದಕ್ಕನುಗುಣವಾದ ತಮ್ಮ ಅನುಭವವನ್ನೂ ಬರೆದಿದ್ದಾರೆ "ತನ್ನ ಬುದ್ಧಿವಿಕಾಸದ ಬಗ್ಗೆ ತನಗೆ ಅತಿಶಯ ವಿಶ್ವಾಸ" ಇದು 'ಪೂರ್ವರಂಗ'ದ ಕೊನೆಯ ಮೆಟ್ಟಲಿಗೆ ಮುಟ್ಟಿದವರ ಸಹಜ ಸಂಪತ್ತು! ಅಲ್ಲಿಗೆ ಅತ್ಮವು, ಸರ್ವವ್ಯಾಪಿಯಾದ ದಿವ್ಯಸತ್ವದ ಅಗಾಧ ಸ್ಪರ್ಶದಿಂದ ದೀಪಿತವಾಗುವದು. ಆಗ ಬುದ್ಧಿಯಲ್ಲಿ ಅಪರಿಮಿತ ಶಕ್ತಿಯು ಸಂಚರಿಸುವದು ರತ್ನಾಕರಸಿದ್ಧನ ಭರತೇಶವೈಭವದಲ್ಲಿಯೂ ಕು. ವ್ಯಾಸನ ಕನ್ನಡ ಭಾರತದಲ್ಲಿಯೂ ಆಯಾ ಕವಿಗಳ ಸ್ವೋಕ್ತಿಯಿಂದ ಈ ಮಾತನ್ನು ಸಮರ್ಥಿಸಬಹುದು. . . . ತನ್ನ (ರತ್ನಾಕರಸಿದ್ಧ) ಬುದ್ಧಿಯ ಅಮೋಘ ವೈಭವವನ್ನು ತನ್ನದು ತಾನೇ ಹೀಗೆ ಹೊಗಳಿಕೊಂಡಿರುವನು. 'ಅವರೊಂದು ತಿಂಗಳೋದಿದ ಶಾಸ್ತ್ರ ನನಗೊಂದು ದಿವಸದೊಳವಗತಿಹುದು' ಇದು ಅಹಂಕಾರವಲ್ಲ ತನ್ನದು ತಾನೇ ಇಷ್ಟು ವತ್ತರಿಸಿ ಹರಿಯುವ ಬುದ್ಧಿವೈಭವದ ಅಗಮ್ಯ ವಿಕಸನದ ಫಲವಿದು. ಹಾಗಾದರೆ ಕು. ವ್ಯಾಸನು ತನ್ನ ಕಾವ್ಯಾರಂಭದಲ್ಲಿ ಮಾಡಿದ ಹೂಣಿಕೆಯ ಸರಿಯಾದ ಕಾರಣವು ನಮಗೀಗ ಅದೇ ಎಂದು ಹೊಳೆಯದಿರದು.

---

## ಬುಕ್ಕರಾಯನ ಮೊಮ್ಮಗನಾದ ದೇವರಾಜನ ಸೊಬಗಿನ ಸೋನೆ.

### ಶಿವಸ್ತುತಿ

ಸುರರೆಲ್ಲರ್ಗೆ ಸುರತ್ನ ಭೂಷಣಚಯಂ ಗೊಟ್ಟಿಂತು ಕುಂಭೀನಸಾ ।
ಭರಣಂದೊಟ್ಟೆಯೊ ತಾವಕಾಂಘ್ರಿಭಜಕರ್ಗೈಶ್ವರ್ಯಮಂ ಸಾರ್ಚಿಸೀಂ ।
ತಿರಿಯಲ್ ಕಲ್ತೆಯೊ ನೆಟ್ಟನೆಣ್ದೆಸೆಗಳಂ ದಿಕ್ಪಾಲಕರ್ಗಿತ್ತು ಸಾ ।
ಚರಿಸಲ್ ಸಾರ್ದೆಯೊ ರುದ್ರಭೂಮಿಯೆಡೆಗಂ ಪಂಪಾವಧೂಟೀವಲ್ಲಭಾ ॥

---

# ವಿಜಯನಗರ ಕಾಲದ ಸಂಗೀತ ಮತ್ತು ಅದರ ವಿನಾಶದ ಇತಿಹಾಸ.

ಲೇಖಕರು —ಮೈಸೂರ ಆಸ್ಥಾನದ ಕಿನ್ನರಿ ವಿದ್ವಾನ್‌ರಾದ ಶ್ರೀ **ಹುಲಗೂರ ಕೃಷ್ಣಾಚಾರ್ಯರು**

ಕರ್ನಾಟಕ ಸಂಗೀತವು ಸಾಮವೇದದ ಕಾಲದಿಂದ ಪರಂಪರೆಯಲ್ಲಿ ಭರತ ಮುನಿಯ ಮುಖಾಂತರವಾಗಿ ಈಗಿನ ಕಾಲದವರಗೆ ನಡೆದು ಬಂದಿದೆ ಭರತ ಮತದ ಪಾರಿಭಾಷಿಕ ಶಬ್ದಗಳನ್ನು ಒಳಗೊಂಡಿದ್ದರೂ, ಆರ್ಯ ಸಂಸ್ಕೃತಿಯಿಂದ ಉತ್ಪನ್ನವಾದ ಆ ಮತದ ತತ್ವಗಳನ್ನು ಕರ್ನಾಟಕ ಸಂಗೀತವು ಬಿಟ್ಟಿರುವುದೆಂಬುದು ಸದ್ಯಃಕಾಲದ ಅದರ ಸ್ಥಿತಿಯಿಂದ ತಿಳಿದುಬರುವುದು ಆದ್ದರಿಂದ ನಮ್ಮ ಸಂಗೀತವು ಆರ್ಯಸಂಸ್ಕೃತಿಯಿಂದ ಹುಟ್ಟಿದಂತಹದೇ ಅಥವಾ ದ್ರಾವಿಡ ಸಂಸ್ಕೃತಿಯಿಂದ ಹುಟ್ಟಿದಂತಹದೇ ಎಂಬ ಪ್ರಶ್ನೆಯು ಉತ್ಪನ್ನವಾಗಿದೆ. ಕ್ರಿಸ್ತಶಕದ ೧೫೫೦ ರ ಸುಮಾರಕ್ಕೆ ಆಗಿ ಹೋದ ರಾಮಾಮಾತ್ಯನ ಮತಗಳನ್ನು ಅನುಸರಿಸಿದ, ದಕ್ಷಿಣ ದೇಶದ ಕೆಲವು ಗ್ರಂಥಕಾರರ ಅಜ್ಞಾನದ ಮೂಲಕ ಕರ್ನಾಟಕ ಸಂಗೀತದಲ್ಲಿ ಕೆಲವು ತಪ್ಪುತಿಳುವಳಿಕೆಗಳಾಗಿವೆ ರಾಮಾಮಾತ್ಯನು "ಸ್ವರಮೇಳಕಲಾನಿಧಿ" ಎಂಬ ಗ್ರಂಥವನ್ನು ಬರೆದಿದ್ದಾನೆ. ಕ್ರಿ. ಶ ೧೨೧೦ ರಲ್ಲಿ ಶಾರ್ಙದೇವನೆಂಬವನು "ಸಂಗೀತ ರತ್ನಾಕರ'ವೆಂಬ ಗ್ರಂಥವನ್ನು ಬರದಿದ್ದಾನೆ. ಇದಕ್ಕೆ ಕಲ್ಲಿನಾಥನೆಂಬವನು ಭಾಷ್ಯವನ್ನು ಬರೆದಿದ್ದಾನೆ ಭರತಮುನಿಯ ಕಾಲದಿಂದ ಕಲ್ಲಿನಾಥನ ಕಾಲದವರೆಗೆ ಅಂದರೆ ಕ್ರಿ ಪೂ. ೧೧೦ ವರ್ಷಗಳಿಂದ ಕ್ರಿ. ಶ ೧೪೫೦ ರವರಗೆ ಕರ್ನಾಟಕ ಸಂಗೀತದ ಪರಂಪರೆಯು ಅವ್ಯಾಹತವಾಗಿ ಮತ್ತು ಅಚ್ಚಳಿಯದೆ ನಡೆದು ಬಂದಿತು. ಆದರೆ ಮುಂದೆ ಒಂದು ನೂರು ವರ್ಷಗಳನಂತರ ಆದ ರಾಮಾಮಾತ್ಯನು ಆ ಪರಂಪರೆಗೆ ಬೇರೆ ಅರ್ಥವನ್ನು ಹಚ್ಚಿ ಅದರಲ್ಲಿ ಹೆಚ್ಚುಕಡಿಮೆಯನ್ನು ಮಾಡಿದನು

ರಾಮಾ ಮಾತ್ಯನು. ಕಲ್ಲಿನಾಥನ ಮೊಮ್ಮಗನು (ಬಹುಶಃ ಮಗಳ ಮೊಮ್ಮಗ) ಇರಬೇಕೆಂದು ತಿಳುವಳಿಕೆಯಿದೆ. ಇವನು ತೆಲಗುದೇಶದ ತೀರ ಪೂರ್ವಭಾಗದವನಿದ್ದನು. ವಿಜಯನಗರದ ಪ್ರಧಾನ ಮಂತ್ರಿಯಾದ ರಾಮರಾಜನ ಆಶ್ರಯದಲ್ಲಿದ್ದು 'ಸ್ವರ ಮೇಳಕಲಾನಿಧಿ' ಯನ್ನು ಬರೆದನು. ರಾಮರಾಜನು ಸ್ವತಃ ದಕ್ಷಿಣದೇಶದವನಾಗಿದ್ದು ವಿಜಯನಗರದ ಕಡೆಯ ಸಾಮ್ರಾಟನು ರಾಜನಾದ ಕೃಷ್ಣದೇವರಾಯನ ಮಗಳನ್ನು ಮದುವೆ ಯಾಗಿದ್ದನು. ಕೃಷ್ಣದೇವರಾಯನ ಮರಣದ ನಂತರ ಕರ್ನಾಟಕ ಸಾಮ್ರಾಜ್ಯದ ಆಡಳಿತವು ಪರಪ್ರಾಂತೀಯರ ಕೈಯಲ್ಲಿ ಹೋಯಿತು ರಾಮರಾಜನ ಹಟಮಾರಿತನದ ಮೂಲಕ ಅವನ ಮುಂದೆ ಕರ್ನಾಟಕದ ಅಭಿಮಾನವುಳ್ಳ ಜನರ ಆಟವು ನಡೆಯದಾಯಿತು. ಅವನು ಹಟಮಾರಿತನದಿಂದಲೆ ತನ್ನನ್ನು ಹಾಳು ಮಾಡಿಕೊಂಡನಲ್ಲದ ೧೫೬೫ ರಲ್ಲಿ ಆದ ರಕ್ಕಸತಂಗಡಿಗಿಯ ಕಾಳಗದಲ್ಲಿ ಕರ್ನಾಟಕ ಸಾಮ್ರಾಜ್ಯವನ್ನು ಮಣ್ಣು ಗೂಡಿಸಿದನು. ಕೃಷ್ಣದೇವರಾಯನ ಮರಣದ ನಂತರ ಕರ್ನಾಟಕದ ರಾಜಕಾರಣದಲ್ಲಿ ಅನೇಕ ಹೆಚ್ಚು ಕಡಿಮೆಗಳಾದವು. ದೇಶದಲ್ಲಿ ಬಹುಕಾಲ ಅಶಾಂತತೆಯು ನೆಲಗೊಂಡದ್ದರಿಂದ ಕರ್ನಾಟಕ ಸಂಸ್ಕೃತಿ ಪರಂಪರೆಗಳು ನಿರಾಶ್ರಿತವಾದವು. ಭರತನ ಪೂರ್ವದಲ್ಲಿ ನಮ್ಮ ಸಂಗೀತವು ಎರಡು ವಿಭಾಗಗಳಲ್ಲಿ ಭಾಗಿಸಲ್ಪಟ್ಟಿತ್ತು. ೧ ಸಾಮಗಾನ, ೨ ಗ್ರಾಮಗಾನ ಅಥವಾ ಲೌಕಿಕಗಾನ ಅಥವಾ ಕಾವ್ಯಗಾನ, ಸಾಮಗಾನವು ಕೇವಲ ವೈದಿಕರಲ್ಲಿ ರೂಢವಾಗಿತ್ತು. ಎರಡನೆಯ ಪ್ರಕಾರವಾದ ಗ್ರಾಮಗಾಯನವು ರಾಜರು, ಪಂಡಿತರು, ಗಾಯಕರೇ ಮೊದಲಾದ ಉಚ್ಚತರಗತಿಯ ಜನರಲ್ಲಿ ಕಂಡು ಬರುತ್ತಿತ್ತು ಭರತನ ಪೂರ್ವದಲ್ಲಿ ಎಲ್ಲರಿಗೂ ತಿಳಿಯುವಂತೆ ಬರೆಯಲ್ಪಟ್ಟ ಸಂಪೂರ್ಣವಾದ ಗ್ರಂಥಗಳು ಇದ್ದಂತೆ ತೋರುವುದಿಲ್ಲ.

सर्व शास्त्रार्थ सपन्न। सर्व शिष्य प्रवर्तकम् ॥
नाट्याख्यं पचम वेद ! सेतिहास करोम्यहं ॥०॥

ಎಂದು ಈ ಭರತನೇ ಹೇಳಿರುವುದರಿಂದ ಭರತನು ಆ ಕಾಲಕ್ಕೆ ದೊರೆಯಬಹುದಾದ ಪೂರ್ವದ ಸೂತ್ರಗಳ ಮತ್ತು ಇತರ ಗ್ರಂಥಗಳ ಭಾಗಗಳ

ಸಹಾಯದಿಂದ ಎಲ್ಲರಿಗೆ ತಿಳಿಯುವಂತೆ ನಾಟ್ಯಶಾಸ್ತ್ರವನ್ನು ಬರೆದನೆಂಬುದು ಸ್ಪಷ್ಟವಿದೆ. ಭರತನ ಪೂರ್ವದಲ್ಲಿ ಬರೆಯಲ್ಪಟ್ಟ ಯಾವುದೇ ನಾಟ್ಯಶಾಸ್ತ್ರದ ಮೇಲಣ ಸಂಪೂರ್ಣ ಗ್ರಂಥವು ಇದು ವರೆಗೆ ಅಂದರೆ ಕಳೆದ ೨೦೦೦ ವರ್ಷಗಳಲ್ಲಿ ಶೋಧಿಸಲ್ಪಟ್ಟಿಲ್ಲ. ಭರತನು ತನ್ನ ನಾಟ್ಯಶಾಸ್ತ್ರದಲ್ಲಿ,

गीत वाद्यांग सयोग: संगीत इतिलाक्षित: ।
शारीर वैण वंशानामेकीभाव: प्रशस्यते ॥०॥

ಎಂದು 'ಸಂಗೀತ'ದ ವ್ಯಾಖ್ಯೆಯನ್ನು ಹೇಳಿ ನಾಲ್ಕು ಪ್ರವೃತ್ತಿಗಳನ್ನೂ ಅವುಗಳಿಗೆ ನಾಲ್ಕು ವೃತ್ತಿಗಳನ್ನೂ ಹೇಳಿದ್ದಾನೆ. ಅವು ಹೀಗೆ.

आवती दाक्षिणात्याच तथाचैवार्ध मागधी ।
पाचाल मध्यमाचेति विज्ञेयास्त प्रवृत्तयः ॥०॥
भारती सात्वती चैव कैशिक्यारभटी तथा ।
चतस्रो वृत्तयो ह्येता यासु नाट्य प्रतिष्टित ॥७॥

ದಾಕ್ಷಿಣಾತ್ಯದಲ್ಲಿ ಬಹುತರ ಕೈಶಿಕೀ ವೃತ್ತಿಯು ಇರುವುದೆಂದು ಭರತನು ಅಭಿಪ್ರಾಯ ಪಟ್ಟಿದ್ದಾನೆ

तत्र दाक्षिणात्या भवेत् बहुगीत नृत्यवाद्या
कैशिकी प्राया चतुर मधुर ललिताभिनया यथा।

ಎಲ್ಲ ಪಾಂಡಿತ್ಯ ಮತ್ತು ಕಲೆಗಳಿಂದ ಕೂಡಿದ ಆರ್ಯ ಸಂಸ್ಕೃತಿಯು ಕರ್ನಾಟಕದಲ್ಲಿ ಆಳವಾಗಿ ಬೇರೂರಿತ್ತೆಂಬುದೂ ಮತ್ತು ಕರ್ನಾಟಕದಲ್ಲಿ ಕಂಡು ಬಂದ ಕೈಶಿಕೀ ವೃತ್ತಿಯು, ಹಾಡುವಿಕೆ, ಬಾರಿಸುವಿಕೆ, ಕವಿತ್ವ ಕುಣಿತ ಮತ್ತು ಹಾವಭಾವಗಳಿಂದ ಕೂಡಿದ ನಾಟ್ಯ ಕಲೆಯ ಅಭ್ಯಾಸಕ್ಕೆ ತಕ್ಕಂತಹದಾಗಿದೆಯೆಂದು ಭರತನ ಅಭಿಪ್ರಾಯ. ಭರತನ ಕಾಲವು ಭಾಸಕಾಳಿದಾಸನ ಕಿಂತಲೂ ಪೂರ್ವದಲ್ಲಿ ಅಂದರೆ ಕ್ರಿ. ಪೂರ್ವ ೧---೨ ಶತಮಾನಗಳದ್ದಾಗಿರಬಹುದು. ಆಗಿನಿಂದಲೂ ಕರ್ನಾಟಕವು ಪ್ರಸಿದ್ಧ.

ಕರ್ನಾಟಕವು ಉತ್ತರ ಆರ್ಯಪ್ರದೇಶಗಳ ಮತ್ತು ದಕ್ಷಿಣದ ದ್ರಾವಿಡ ಪ್ರದೇಶಗಳ ನಡುವೆ ಬಹು ಪೂರ್ವಕಾಲದಿಂದ ಹಬ್ಬಿದೆ. ಆದ್ದರಿಂದ ಅದು ಎರಡೂ ನಿಟ್ಟಿನಲ್ಲಿಯ ಸಂಸ್ಕೃತಿಯ ಉತ್ತಮ ಭಾಗಗಳನ್ನು ತೆಗೆದುಕೊಂಡು ಆ ಮೂಲಕ ತನ್ನಲ್ಲಿ ಒಂದು ಕಲೆಯನ್ನು ಹುಟ್ಟಿಸಿಕೊಂಡಿತಲ್ಲದೆ ಅದನ್ನು ದಕ್ಷಿಣದ ಎಡಬಲದ ಪ್ರಾಂತಗಳಲ್ಲೂ ಪ್ರಸಾರ ಮಾಡಿತು ಈ ವಿಷಯದ ಪ್ರಾರಂಭದ ಕಾಲವನ್ನು ನಿಶ್ಚಿತ ಪಡಿಸಬೇಕಾದರೆ ಶ್ರೀರಾಮ-ಸುಗ್ರೀವರ ಸಖ್ಯದ ಕಾಲದ ವರೆಗೆ ಹೋಗಬೇಕಾಗುವದು. ಅದುವೇ ಆರ್ಯದ್ರಾವಿಡ ಸಂಸ್ಕೃತಿಗಳ ಸಂಕಲನದ ಪ್ರಾರಂಭದ ಕಾಲವೆಂದೆನ್ನಬಹುದು. ಉತ್ತರ ಮತ್ತು ದಕ್ಷಿಣ ಜನಾಂಗಗಳ ಪ್ರಮುಖ ಪ್ರತಿನಿಧಿಗಳಲ್ಲಿ ಪರಸ್ಪರ ಪ್ರೇಮಸಂಬಂಧವು ಮೊದಲನೆಯ ಸಲ ಬೆಳೆದುದು ಅದೇ ಕಾಲದಲ್ಲಿ ಆ ಕಾಲಕ್ಕೆ ಕರ್ನಾಟಕದ ರಾಜಧಾನಿಯು ಕಿಷ್ಕಿಂಧೆಯಾಗಿತ್ತು. ಅದೇ ಕಿಷ್ಕಿಂಧೆಯೇ ಈಗಿನ ಹಂಪೆಯೆಂಬುದು ಎಲ್ಲರಿಗೂ ತಿಳಿದ ವಿಷಯ.

ಈ ಮಿಶ್ರ ಸಂಸ್ಕೃತಿಯ ಪ್ರಗತಿಯನ್ನು ಅತ್ಯುನ್ನತ ಶಿಖರಕ್ಕೆ ಮುಟ್ಟಿಸಿದ ಶ್ರೇಯಸ್ಸು ೧೫ನೇ ಶತಮಾನಕ್ಕೆ ಸಲ್ಲುವದು. ಇದೇ ಶತಮಾನದಲ್ಲಿ ಕರ್ನಾಟಕವು ಅತಿ ಪ್ರಾಚೀನ ಕಾಲದಿಂದ ನಡೆದುಬಂದ ಕಿಷ್ಕಿಂಧಾ ಪಟ್ಟಣವನ್ನ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇಡೀ ದಕ್ಷಿಣವನ್ನು ಆಳಿತು. ಈ ಆಳಿಕೆಯಲ್ಲಿಯೇ ಕರ್ನಾಟಕವು ಆರ್ಯ ಸಂಸ್ಕೃತಿಯ ನಿಜವಾದ ಸಂರಕ್ಷಣೆಯನ್ನು ಮಾಡಿತು ಮತ್ತು ಸಾಮಾಜಿಕ ರಾಜಕೀಯ, ಮತ್ತು ಬೌದ್ಧಿಕ ಕ್ಷೇತ್ರಗಳಲ್ಲಿ ತಾನು ಅಭಿವೃದ್ಧಿಗೊಳಿಸಿದ ಆದರ್ಶಭೂತವಾದ ಸಂಸ್ಕೃತಿಯನ್ನು ಇಡೀ ಭರತವರ್ಷದಲ್ಲಿ ಹರಡಿತು. ಇರಲಿ.

ಮೊದಲಿನ ರಾಜರಾದ ಕದಂಬರ ಆಳಿಕೆಯಲ್ಲಾದ ಸಂಗೀತಶಾಸ್ತ್ರದ ಬೆಳವಣಿಗೆಯ ಐತಿಹಾಸಿಕ ಸಾಮಗ್ರಿಯು ನಮಗ ನಾಕಷ್ಟು ಉಪಲಬ್ಧವಾಗಿಲ್ಲ

ಅನಂತರದ ಅರಸರಾದ ಚಾಲುಕ್ಯರ ಆಳಿಕೆಯಲ್ಲಿ ಕರ್ನಾಟಕ ಸಂಸ್ಕೃತಿಯ ಪ್ರಕಾಶವು ಉತ್ತರ ಹಿಂದುಸ್ಥಾನದ ಕಣ್ಣುಗಳನ್ನಷ್ಟೆ ಅಲ್ಲದೆ ಇತರ ರಾಷ್ಟ್ರಗಳ ಕಣ್ಣುಗಳನ್ನು ಸಹ ಕುಕ್ಕಿಸಿತು. ಇದೇ ಕಾಲದಲ್ಲಿ ಅನೇಕ ಪಂಡಿತರಿಂದ ಸ್ವತಃ ರಾಜರುಗಳಿಂದ ಸಂಗೀತಶಾಸ್ತ್ರದ ಮೇಲೆ ಅನೇಕ ಗ್ರಂಥಗಳು ಬರೆಯಲ್ಪಟ್ಟವು ಅವುಗಳಲ್ಲಿ ಎಷ್ಟೋ ಉಪಲಬ್ಧವಿಲ್ಲ. ದೊರತವುಗಳಲ್ಲಿ ಚಾಲುಕ್ಯ ಸೋಮೇಶ್ವರ ನಾನ್ಯಭೂಪಾಲ ಇವರಿಂದ ಬರೆಯಲ್ಪಟ್ಟ ಎರಡು ಗ್ರಂಥಗಳು ಪ್ರಸಿದ್ಧವಾದವುಗಳು, ಮಹತ್ವವಾದವುಗಳೂ ಆಗಿವೆ.

ಆ ಬಳಿಕ ಯಾದವರಕಾಲ. ಸಾರಂಗದೇವ. ಮತ್ತು ಕಲ್ಲಿನಾಥ ಇವರಿಂದ ಬರೆಯಲ್ಪಟ್ಟ 'ರತ್ನಾಕರ' ಮತ್ತು 'ಕಲಾನಿಧಿ' ಗ್ರಂಥಗಳು ಇದೇ ಕಾಲದಲ್ಲಿ ಹುಟ್ಟಿದವು. ಇದಲ್ಲದೆ ಸಂಗೀತಶಾಸ್ತ್ರ ಪ್ರವರ್ತಕರಾದ

ನರಹರಿತೀರ್ಥರು, ಉಗಾಭೋಗ, ಸುಳಾದಿ, ಪದ, ವರ್ಣ, ಗೀತೆ, ರಾಯಾ, ಪ್ರಬಂಧಗಳೇ ಮೊದಲಾದ ಸಂಗೀತಶಾಸ್ತ್ರಕ್ಕೆ ಒಳಪಟ್ಟ ಕವನಗಳನ್ನು ಮೊದಲನೆಯ ಸಾರಿ ನಮ್ಮಪ್ರಾಂತೀಯ ಭಾಷೆ ಅಂದರೆ ಕನ್ನಡದಲ್ಲಿ ರಚಿಸಿದರು. ಕರ್ನಾಟಕ ಸಂಗೀತ ಪದ್ಧತಿಯ ಲೋಕಪ್ರಿಯತೆಗೆ ಮತ್ತು ಕೀರ್ತಿಗೆ ಈ ಐತಿಹಾಸಿಕ ಸಂಗತಿಗಳೇ ತಳಹದಿಗಳಾಗಿವೆ. ಪ್ರಾಂತೀಯ ಭಾಷೆಯಲ್ಲಿ ಶಾಸ್ತ್ರ ಸಮ್ಮತವಾದ ಕವನಗಳನ್ನು ಬರೆದು ಅವು ಲೋಕಪ್ರಿಯವಾಗುವಂತೆ ಮಾಡಿ, ಅವುಗಳ ಬೆಳವಣಿಗೆಯನ್ನು ಮೊದಲು ಮಾಡಿದ ಎಲ್ಲ ಶ್ರೇಯವು ಕರ್ನಾಟಕ ಪ್ರಾಂತಕ್ಕೆ ಇದೆ. ಇವೇ ಮುಂದ ಉತ್ತರ ಹಿಂದುಸ್ಥಾನದಲ್ಲಿ ಆದರ್ಶಭೂತವಾಗಿ ಪರಿಣಮಿಸಿದವು ಶ್ರೀಮನ್ಮಧ್ವಾಚಾರ್ಯರು ರಚಿಸಿದ ದ್ವಾದಶಸ್ತೋತ್ರದಲ್ಲಿಯ ಕೆಲವು ಪ್ರಬಂಧಗಳು ವಿದ್ವಾಂಸರಿಗೂ ಮತ್ತು ಸಂಗೀತ ವ್ಯವಸಾಯಗಾರರಿಗೂ ಪ್ರಿಯವಾಗಿದ್ದವು. ಆ ಕಾಲದಲ್ಲಿ ಉಪಯೋಗಿಸಲ್ಪಡುತ್ತಿದ್ದ ಗೀತೆಗಳಲ್ಲಿ ಪುರಾಣ ಮತ್ತು ಕಾವ್ಯಗಳಲ್ಲಿಯ ಶ್ಲೋಕಗಳು ಮತ್ತು ಗೀತಗಳೇ ಬಹಳವಾಗಿದ್ದವು. ಈ ಪದ್ಧತಿಯದೊಂದು ಉದಾಹರಣೆಯನ್ನು ಕಲ್ಲಿನಾಥನು ( ಕ್ರಿ ಶ ೧೪೫೦ ) ಬರೆದ ಒಂದು ಟೀಕೆಯಲ್ಲಿ ಕಾಣಬಹುದು ಕಾಲಿದಾಸನ ವಿಕ್ರಮೋರ್ವಶೀಯ ನಾಟಕದಲ್ಲಿಯ ನಾಂದೀ ಶ್ಲೋಕವನ್ನು ತೆಗೆದುಕೊಂಡು ಭರತನ ಧ್ರುವಗಾಯನ ಪದ್ಧತಿಯ ಮೇರೆಗೆ ರಸ, ಅಭಿನಯ, ಹಾಡುವ ರೀತಿಗಳನ್ನು ವ್ಯಕ್ತಪಡಿಸುತ್ತ ಶ್ಲೋಕಗಳನ್ನು ಹೇಗೆ ಹಾಡಬೇಕೆಂಬುದನ್ನು ಸ್ಪಷ್ಟ ತೋರಿಸಿದ್ದಾನೆ ಇವರ ಮೇಲಿಂದ ಪೂರ್ವಕಾಲದಲ್ಲಿ ಇಡೀ ಭರತಖಂಡದೊಳಗೆ ಭಾರತೀಯ ಸಂಗೀತವೆಂದು ಸುಪ್ರಸಿದ್ಧವಿದ್ದ ಧ್ರುವಪದ ಗಾಯನದಲ್ಲಿ ಕರ್ನಾಟಕಸ್ಥರು ಪ್ರವೀಣರಿದ್ದರೆಂದು ಸಿದ್ಧವಾಗುತ್ತದೆ.

ಹಿಂದೆ ಹೇಳಿದಂತೆ ಆ ಬಳಿಕ ಕರ್ನಾಟಕಸ್ಥರು ಉತ್ತರ ಮತ್ತು ದಕ್ಷಿಣ ಹಿಂದುಸ್ಥಾನದವರಿಂದ ಭರತ ಮತದ ಮೇಲನ ಪ್ರಮಾಣ ಗ್ರಂಥವೆಂದು ಸ್ವೀಕರಿಸಲ್ಪಟ್ಟ ಸಂಗೀತ ರತ್ನಾಕರದಲ್ಲಿ ಹೇಳಿದ ನಿಯಮಗಳಿಗನುಸರಿಸಿ ೧೩ನೆಯ ಶತಮಾನದ ನಂತರದ ಕಾಲದಲ್ಲಿ ಸ್ವತಂತ್ರವಾಗಿ ಕನ್ನಡ ಭಾಷೆಯಲ್ಲಿ ಶಾಸ್ತ್ರೀಯ ಕನ್ನಡ ಕವನಗಳನ್ನು ರಚಿಸಿಕೊಂಡರು ಹೀಗೆ ಭರತ ಮತವನ್ನು ಕರ್ನಾಟಕ ಪದ್ಧತಿಗೆ ಪರಿವರ್ತಿಸಿದ ಬಹುಮಾನವು ಕರ್ನಾಟಕ ಪ್ರಾಂತಕ್ಕೆ ಮೊದಲು ಸಿಕ್ಕಿತು ಇದೇ ಕರ್ನಾಟಕ ಪದ್ಧತಿಯು ಆ ಬಳಿಕ ಆಧುನಿಕ ಹಿಂದುಸ್ಥಾನಿ ಮತ್ತು ದಕ್ಷಿಣಾದಿ ಪದ್ಧತಿಗಳಿಗೆ ಜನ್ಮನಿತ್ತಿತು. ಮೂಲ ಕರ್ನಾಟಕಿ ಪದ್ಧತಿಯಿಂದಲೆ ದಕ್ಷಿಣಾದಿ ಸಂಗೀತವು ಹುಟ್ಟಿತೆಂಬುವ ಮಾತು ಸರ್ವಸಮ್ಮತವಾಗಿದೆ. ಹಿಂದುಸ್ಥಾನೀ ಸಂಗೀತದ ಮೂಲವೆಲ್ಲಿದೆಂಬುದನ್ನಷ್ಟು ನೋಡುವ ಭರತ ಮತದ ಕಾಲದಲ್ಲಿ ರಾಗ ಪದ್ಧತಿಯು (ಸ್ವರ ಪ್ರಧಾನ ಗಾಯನ) ಕರ್ನಾಟಕದ ಶಾರ್ಙ್ಗದೇವನ ಕಾಲದಲ್ಲಿ ಹೊಂದಿದಷ್ಟು ಪ್ರಗತಿಯನ್ನು ಹೊಂದಿದ್ದಿಲ್ಲ. ಈ ಪದ್ಧತಿಯಲ್ಲಿ ನಿಶ್ಚಯವಾಗಿ ಬೆಳವಣಿಗೆಯಾಗುವುದಕ್ಕೆ ಸಹಾಯವಾಗುವಂತಹ ಕೆಲವು ನಿರ್ದಿಷ್ಟವಾದ ನಿಯಮಗಳನ್ನು ಶಾರ್ಙ್ಗದೇವನು ಹಾಕಿಕೊಟ್ಟನು. ಧ್ರುವಪದ ಗಾಯನವು ಲಯ ಪ್ರಧಾನವಾಗಿತ್ತು. ಮತಂಗನಿಂದ ಹುಟ್ಟಿದ ಮತ್ತು ಶಾರ್ಙ್ಗದೇವನಿಂದ ಪ್ರಗತಿಹೊಂದಿದ ಅನಿಬದ್ಧ ರಾಗಾಲಾಪ ಪದ್ಧತಿಯು ಮೂಲಕ ಲಯ ಪ್ರಧಾನ ಗಾಯನ ಪದ್ಧತಿಯು ಹಿಂದೆ ಬಿದ್ದಿತು ನಿಬದ್ಧ ಧ್ರುವ ಪದ ಗಾಯನಕ್ಕಿಂತ ಅನಿಬದ್ಧ ರಾಗಾಲಾಪ ಪದ್ಧತಿಯು ತುಲನಾತ್ಮಕ ದೃಷ್ಟಿಯಿಂದ ಹೆಚ್ಚು ಪ್ರಿಯವು. ಕಲಾತ್ಮಕವೂ ಮತ್ತು ಭಾವನಾಜನಕವೂ ಎಂದು ಕಂಡುಬಂದಿತು. ಹೀಗೆ ಕರ್ನಾಟಕ ಪದ್ಧತಿಯು ಉತ್ತರ ಹಿಂದುಸ್ಥಾನವನ್ನು ಆಕ್ರಮಿಸಿತೆನ್ನುವುದಕ್ಕೆ ಐತಿಹಾಸಿಕ ಸಂಗತಿಗಳಿವೆ ೧೪ ನೆಯ ಶತಮಾನದ ಆರಂಭದಲ್ಲಿ ಅಂದರ ೧೩೧೦ ರ ಸುಮಾರಕ್ಕೆ ಕಡೆಯ ಯಾದವ ಅರಸನಾದ ರಾಮಚಂದ್ರ ದೇವನ ಆಸ್ಥಾನದಲ್ಲಿ ಗೋಪಾಲನಾಯಕನೆಂಬ ಗಾಯಕನಿದ್ದನು. ರಾಮಚಂದ್ರ ದೇವನು ಮಲಿಕ ಕಾಫುರನಿಂದ ಸೋಲಿಸಲ್ಪಟ್ಟದ್ದರಿಂದ ದಿಲ್ಲಿಯ ಅರಸನಾದ ಅಲ್ಲಾವುದ್ದಿನ ಖಿಲಜಿಯು ಸಂಗಡ ಒಪ್ಪಂದ ಮಾಡಿಕೊಂಡು ಅವನೊಡನೆ ರಾಮಚಂದ್ರ ದೇವನು ಸ್ನೇಹ ಬೆಳಿಸಿದನು. ಗೋಪಾಲನಾಯಕನು ದಿಲ್ಲಿಗೆ ಹೋಗಿ ಇದ್ದು ಅಲ್ಲಿ ತಾನು ಬಲ್ಲ ಸಂಗೀತ ಪದ್ಧತಿಯನ್ನು ಪ್ರಚಾರ ಮಾಡಬೇಕೆಂದು ಅಲ್ಲಾವುದ್ದೀನನಿಂದ ಅಪ್ಪಣೆ ಪಡೆದನು. ಆ ವೇಳೆಗೆ ಗೋಪಾಲನಾಯಕನು ದಿಲ್ಲಿಗೆ ಹೋಗಿ ಅಲ್ಲಿದ್ದು ಕೊಂಡು ತನ್ನ (ಕರ್ನಾಟಕ) ಸಂಗೀತ ಪದ್ಧತಿಯ ಪ್ರಚಾರವನ್ನು ಉತ್ತಮವಾಗಿ ಮಾಡಿದನು ಗೋಪಾಲನಾಯಕನು ತಮ್ಮ ಸಂಗೀತ ಪದ್ಧತಿಯ

ಆದ್ಯ ಪ್ರವರ್ತಕನೆಂದು ಹೇಳುವುದರಲ್ಲಿ ಒಂದು ಸ್ಥಾನೀ ಸಂಗೀತಕಾರರು ಈಗಲೂ ಅಭಿಮಾನ ಪಡುತ್ತಾರೆ. ಅವನು ಅಸಾಧಾರಣ ಪಂಡಿತನಾಗಿದ್ದನೆಂದು ಹೇಳುತ್ತಾರೆ ಅವನು ಸಂಗೀತ ಶಾಸ್ತ್ರದ ಮೇಲೆ ಗ್ರಂಥಗಳನ್ನು ಬರೆದಂತೆ ತೋರುತ್ತದೆ ಅವು ಈಗ ಉಪಲಬ್ಧವಿಲ್ಲ ಕಲ್ಲಿನಾಥನು ತನ್ನ ಟೀಕೆಯ ಪ್ರಬಂಧಾಧ್ಯಾಯ ಮತ್ತು ತಾಲಾಧ್ಯಾಯಗಳಲ್ಲಿ ಗೋಪಾಲ ನಾಯಕನ ಪ್ರಮಾಣಗಳನ್ನು ಹೇಳಿದ್ದಾನೆ ಕಲ್ಲಿನಾಥನ ಕಾಲವು [೧೪೧೦-೧೪೪೦] ಆ ಮೇಲೆ ಕ್ರಿ. ಶ ೧೬೬೦ ರಲ್ಲಿ ಆಗಿಹೋದ ವೆಂಕಟಮುಖಿಯೆಂಬ ಗ್ರಂಥಕಾರನಾದರೂ ಗೋಪಾಲನಾಯಕನ ಹೆಸರನ್ನು ಎತ್ತಿದ್ದಾನೆ ಆದರೆ ಅವನು ಗೋಪಾಲ ನಾಯಕನ ಮತಗಳನ್ನು ಒಪ್ಪುವದಿಲ್ಲವೆಂದು ಹೇಳಿದ್ದಾನೆ

ಉತ್ತರ ಹಿಂದುಸ್ಥಾನದ ರಾಜರಲ್ಲಿ ಆಶ್ರಯ ಹೊಂದಿದ ಇನ್ನೊಬ್ಬ ಕನ್ನಡ ಪಂಡಿತನ ಉದಾಹರಣೆಯೊಂದರ ಅಹಮ್ಮದ ಸಾಹಿಬ ಬುರಹಾನಖಾನ ಮತ್ತು ರಜಪುತಾನಾದ ಮಾನಸಿಂಗ ಇವರಲ್ಲಿ ಆಶ್ರಯ ಹೊಂದಿದ ಪುಂಡರೀಕ ವಿಟ್ಠಲ ಎಂಬುವನದು ಮಾನಸಿಂಗನು ಈ ಪಂಡಿತರನ್ನು ತನ್ನ ಮೇಲಧಿಕಾರಿಯಾದ ದಿಲ್ಲಿಯ ಅಕಬರ ಬಾದಶಹನಿಗೆ ಪರಿಚಿತನನ್ನಾಗಿ ಮಾಡಿದನು. ರಾಮಾಮಾತ್ಯನ ಹೊಸ ಪದ್ಧತಿಯು ಬಂದ ನಂತರ ಪುಂಡರೀಕ ವಿಟ್ಠಲನು ಸಂಗೀತ ಶಾಸ್ತ್ರದ ಮೇಲೆ ಮೂರು ಗ್ರಂಥಗಳನ್ನು ಬರೆದು ತನ್ನ ಆಶ್ರಯದಾತನಿಗೆ ಅರ್ಪಿಸಿದನು ಪುಂಡರೀಕ ವಿಟ್ಠಲನು ಮೈಸೂರ ಸಂಸ್ಥಾನದಲ್ಲಿಯ ಶಿವಗಂಗಾ ಪರ್ವತದ ಹತ್ತರಿರುವ ಸಾತನೂರ ಎಂಬ ಸ್ಥಳದವನಾಗಿದ್ದನು ಅವನ ಗ್ರಂಥಗಳು ಪ್ರಮಾಣ ಗ್ರಂಥಗಳಾಗಬೇಕೆಂದು ರಚಿಸಲ್ಪಟ್ಟಿದ್ದರೂ ಅವು ಭರತಮತಕ್ಕೆ ವಿರೋಧಿಗಳಾಗಿದ್ದರಿಂದ ಉತ್ತರಹಿಂದುಸ್ಥಾನದಲ್ಲಿ ಅವು ಲೋಕಪ್ರಿಯವಾಗಲಿಲ್ಲ. ಉತ್ತರದಲ್ಲಿ ಗೋಪಾಲನಾಯಕನು ಕರ್ನಾಟಕದ 'ಉಗಾಭೋಗ' ಅರ್ಥಾತ್ ಸ್ವತಂತ್ರ ರಾಗಾಲಾಪ ಪದ್ಧತಿಯನ್ನು ಪ್ರಚಾರ ಮಾಡಿದನು ಇದೇ ಪದ್ಧತಿಯು ಆ ಬಳಿಕ "ಖ್ಯಾಲ" ಎಂಬ ಹೆಸರಿನಿಂದ ರೂಢವಾಯಿತು.

ಭರತನ ಮತದ ವಿಷಯವಾಗಿ ರಚಿಸಲ್ಪಟ್ಟ ಕೆಲವು ಪ್ರಾಮಾಣ್ಯ ಗ್ರಂಥಗಳ ವರ್ಣನೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಕೊಡುವೆವು. ಇವುಗಳಲ್ಲಿ ಮೊದಲನೇಯದೂ ಮುಖ್ಯವೂ ಬಹಳ ಮಹತ್ವದ್ದೂ ಎಂದರೆ ಸಂಗೀತರತ್ನಾಕರವು ಭರತನಕಾಲದಿಂದ ಈ ಗ್ರಂಥವು ಹುಟ್ಟುವ ಕಾಲದ ವರೆಗೆ ಅಂದರೆ ಕ್ರಿ. ಪೂ ೧೦೦ ವರ್ಷಗಳಿಂದ ಕ್ರಿ. ಶ ೧೨೦೦ ವರ್ಷಗಳ ವರೆಗೆ ಆಗಿದ್ದ ಸಂಗೀತ ಶಾಸ್ತ್ರದ ಮೇಲಿನ ಎಲ್ಲ ವಾಙ್ಮಯದ ಸಿಂಹಾವಲೋಕನವನ್ನು ಮಾಡಿ, ಎಲ್ಲ ಮತಗಳನ್ನು ಸಂಗ್ರಹಿಸಿ ಬರೆದ ಚಿರಸ್ಮರಣೀಯ ಗ್ರಂಥವು ಇದಾಗಿದೆ ಈ ಗ್ರಂಥದ ಕರ್ತನಾದ ಶಾರ್ಙ್ಗದೇವನು ಕ್ರಿ ಶ ೧೨೦೦ ದಿಂದ ೧೨೪೭ರ ವರೆಗೆ ದೇವಗಿರಿಯಲ್ಲಿ (ಈಗಿನ ನಿಜಾಮನ ರಾಜ್ಯದಲ್ಲಿಯ ದೌಲತಾಬಾದ) ಕರ್ನಾಟಕ ಸಾಮ್ರಾಜ್ಯವನ್ನಾಳಿದ ಶೂರ ಯಾದವ ವಂಶದ ಸಿಂಘಣ ಎಂಬ ರಾಜನ ಆಶ್ರಯದಲ್ಲಿದ್ದನು.

ಇನ್ನು ವಿಜಯನಗರ (ಹಂಪಿ) ದಲ್ಲಿ ಆಳಿದ ಮತ್ತೊಂದು ಅರಸು ಮನೆತನವನ್ನು ತೆಗೆದುಕೊಳ್ಳೋಣ ಈ ಮನೆತನದವನಾದ ಇಮ್ಮಡಿ ದೇವರಾಜನೆಂಬವನು ಕರ್ನಾಟಕ ರಾಜ್ಯವನ್ನು ಕ್ರಿ ಶ ೧೪೨೦ ರಿಂದ ೧೪೪೦ರ ವರೆಗೆ ಆಳಿದನು. ಇವನ ಆಸ್ಥಾನದಲ್ಲಿ ಕಲ್ಲಿನಾಥನು ಆಸ್ಥಾನ ಪಂಡಿತನಾಗಿದ್ದನು. ದೇವರಾಜನ ಅಪ್ಪಣೆಯ ಮೇರೆಗೆ ಕಲ್ಲಿನಾಥನು ಶಾರ್ಙ್ಗದೇವನ ಪ್ರಸಿದ್ಧ ಗ್ರಂಥವಾದ 'ಸಂಗೀತ ರತ್ನಾಕರ'ಕ್ಕೆ ಟೀಕೆಯನ್ನು ಬರೆದನು ಅವನು ತನ್ನ ಗ್ರಂಥದಲ್ಲಿ ಈ ರೀತಿಯಾಗಿ ಹೇಳಿದ್ದಾನೆ.

आस्ते कर्नाटदेशः सुविमल यशसा पूरिताशः
प्रार्थ्याम्
कावेरी कृष्णवेणी तरल तरंगार्द्रदक्षोत्तरास.
कर्णाटा घाट लक्ष्मी चरणपरिलस त्पौरुषोत्कर्षशाली
प्रोढ. श्रीदेवराजो विजयनृपसुतो यादवानावरेण्यः।
पुरीह विद्या नगरीचकास्ति तुंगातरंगैरभितःपवित्रा।
संगीतसाहित्यकलास्वभिज्ञःप्रतापवानिम्मडिदेवराजः॥
तमाह कल्लिनाथार्यं सराजाबहुमानतः।
रत्नाकरं व्याकुरुष्व लक्ष्य लक्षण कोविद ॥

ಈ ರೀತಿ ಸಂಗೀತ ಶಾಸ್ತ್ರ ಮತ್ತು ಕಲೆಯ ಪರಂಪರೆಯು ಭರತ ಮುನಿಯಿಂದ ಕಲ್ಲಿನಾಥನವರೆಗೆ ನಡೆದು ಬಂತು. ಕರ್ನಾಟಕದ ಹೊರಗಿನವರು ಮಾತ್ರ ಪರಂಪರೆಯ ಸಂಸ್ಕಾರವಿಲ್ಲದ ಮೂಲಕ ತಮ್ಮ ಮನಸಿಗೆ ಬಂದಂತ ಅರ್ಥ ಹಚ್ಚಿ ಅಸ್ವಾಭಾವಿಕ ಮತ್ತು ಕೃತ್ರಿಮ ಪ್ರಯೋಗಗಳನ್ನು ಮಾಡಹತ್ತಿದರು ಹಲವರು ಸ್ವತಂತ್ರ ರೀತಿಯಿಂದ ಪ್ರಯೋಗಗಳನ್ನು ಕಲ್ಪಿಸತೊಡಗಿದರು.

ಕರ್ನಾಟಕ ಸಾಮ್ರಾಜ್ಯವು ನಷ್ಟವಾದ ನಂತರ ಕರ್ನಾಟಕದಲ್ಲಿಯೂ ಇದೇ ಪರಿಸ್ಥಿತಿಯು ಉಂಟಾಯಿತು. ಕ್ರಿ.ಶ. ೧೫೫೦ ರಲ್ಲಿ ಸ್ವರಮೇಳ ಕಲಾನಿಧಿಯನ್ನು ಬರೆದ ರಾಮಾಮಾತ್ಯನು, ಭರತ ಮತ್ತು ಶಾರ್ಙ್ಗದೇವನ ಪದ್ಧತಿಯಿಂದ ಸಿಡಿದು ಹೊಸ ಗ್ರಂಥಕಾರರಲ್ಲಿ ಮೊದಲನೆಯವನಾಗಿದ್ದಾನೆ. ಶುದ್ಧ ಮತ್ತು ವಿಕೃತ ಸ್ವರಗಳು ಅವಲಂಬಿಸಿದ ೨೨ ಶ್ರುತಿಗಳ ತತ್ವವನ್ನು ಹಿಂದಿನ ಗ್ರಂಥಗಳೊಳಗಿಂದ ತಿಳಿದುಕೊಳ್ಳುವದು ರಾಮಾಮಾತ್ಯನಿಂದಾಗಲಿಲ್ಲ. ೨೨ ಶ್ರುತಿಗಳಲ್ಲಿ ರತ್ನಾಕರದಲ್ಲಿ ಹೇಳಿದ ೧೯ ರಾಗೋಪಯುಕ್ತ ಸ್ವರಗಳನ್ನು ತಿಳಿದುಕೊಳ್ಳಲೂ ರಾಮಾಮಾತ್ಯನು ಸಮರ್ಥನಾಗಲಿಲ್ಲ. ತನ್ನ ಪೂರ್ವದಲ್ಲಿ ಬರೆಯಲ್ಪಟ್ಟ ಗ್ರಂಥಗಳ ವಿಷಯವಾಗಿ ರಾಮಾಮಾತ್ಯನು ಆದರವುಳ್ಳವನಾಗಿ ಅವುಗಳನ್ನೆ ತನ್ನ ಗ್ರಂಥಕ್ಕೆ ಆಧಾರವಾಗಿಟ್ಟುಕೊಂಡಿದ್ದರೂ ಅವುಗಳಲ್ಲಿಯ ವಿಷಯದ ಅರ್ಥವಾಗದೆ ವಿಪರೀತ ಅರ್ಥವನ್ನು ಮಾಡಿ ಬಿಟ್ಟಿದ್ದಾನೆ.

ಕರ್ನಾಟಕ ಪ್ರಾಂತದ ಹೊರತು ಇನ್ನುಳಿದ ಪ್ರಾಂತಗಳಲ್ಲಿ ಕಲ್ಲಿನಾಥನ ಕಲಾನಿಧಿಯಂತಹ ಲೋಕಪ್ರಿಯ ಟೀಕೆಗಳಿರಲಿಲ್ಲ. ಮೂಲ ಗ್ರಂಥಗಳ ಅರ್ಥ ಹಚ್ಚಲಿಕ್ಕೆ ಬಹಳ ಕಷ್ಟವಾಗುತ್ತಿತ್ತು. ಇದರಿಂದಲೇ ಎಷ್ಟೋ ಜನರು ಹಲವು ವಿಷಯಗಳಲ್ಲಿ ತಪ್ಪು ತಿಳುವಳಿಕೆಯನ್ನುಂಟು ಮಾಡಿದ್ದರು. ಅವರಲ್ಲಿ ದಕ್ಷಿಣದವರಾದ ಸೋಮನಾಥ, ಪುಂಡರೀಕ, ವೆಂಕಟಮುಖಿ ಮೊದಲಾದವರೂ ಇದ್ದಾರೆ. ಗೋವಿಂದ ದೀಕ್ಷಿತರ (ಚತುರ್ದಂಡಿ ಪ್ರಕಾಶಿಕ ಎಂಬ ಗ್ರಂಥದ ಕರ್ತನಾದ ವೆಂಕಟಮುಖಿಯ ತಂದೆ) ಆಶ್ರಯ ದಾತನಾದ ರಘುನಾಥ ಭೂಪಾಲನು ಮಾತ್ರ ಈ ಗೊಂದಲದಲ್ಲಿ ಬೀಳಲಿಲ್ಲ. ಅವನು ಸಂಗೀತ ಶಾಸ್ತ್ರದ ಮೇಲಿನ ಪೂರ್ವದ ಎಲ್ಲ ಗ್ರಂಥಗಳ ನಿಜವಾದ ಅರ್ಥವನ್ನು ಅರಿತವನಾಗಿದ್ದನು. ಇವನ ಗ್ರಂಥವು ಮೊನ್ನೆ ಮೊನ್ನೆ ಮದ್ರಾಸ ವಿಶ್ವವಿದ್ಯಾಪೀಠದವರಿಂದ ಪ್ರಕಟಿಸಲ್ಪಟ್ಟಿದೆ.

ಅಜ್ಞಾನ ಮೂಲಕ ಹಲವು ತಪ್ಪುತಿಳುವಳಿಕೆಗಳಾದವು. ಮುಖಾರಿ ರಾಗದ ಅಥವಾ ಈವತ್ತಿನ ಕನಕಾಂಗಿ ರಾಗದ ಶುದ್ಧ ಸ್ವರ ಸಪ್ತಕಕ್ಕೆ ಪರಂಪರೆಯ ಬೆಂಬಲವಿದ್ದರೆ ಅದನ್ನು ಬಿಟ್ಟು ಭರತನ ಅಭಿಪ್ರಾಯವನ್ನು ಹೇಗೆ ರಘುನಾಥ ಭೂಪಾಲನು ಎತ್ತಿ ಹಿಡಿಯಬಹುದಾಗಿತ್ತು? ಕನಕಾಂಗಿ ಸ್ವರ ಸಪ್ತಕವು ಪ್ರಾಚೀನ ಪರಂಪರವಾಗಿ ಬಂದ ಸಪ್ತಕದಲ್ಲಿಲ್ಲ. ಅದು ಕೇವಲ ರಾಮಾಮಾತ್ಯನಿಂದ ಪ್ರಚಾರ ಮಾಡಲ್ಪಟ್ಟಿತು (೧೫೫೦). ಮುಂದೆ ಕ್ರಿ.ಶ. ೧೬೬೦ರಲ್ಲಿ ಅಂದರೆ ಒಂದು ಶತಮಾನದ ನಂತರ ರಘುನಾಥ ಭೂಪಾಲನಿಂದ ಅಲ್ಲಗಳೆಯಲ್ಪಟ್ಟಿತು. ತಮ್ಮ ಸಂಗೀತವು ವೆಂಕಟಮುಖಿಯ ೭೨ ಮೇಳಗಳ ಪದ್ಧತಿಯ ಮೇಲೆ ಅವಲಂಬಿಸಿದಂತಹದೆಂದು ಆಧುನಿಕ ದಾಕ್ಷಿಣಾತ್ಯ ಸಂಗೀತಕಾರರು ಹೇಳುತ್ತಾರೆ. ಆದರೆ ಸ್ವರ ಮೇಳಗಳ ಪ್ರಸ್ತಾರದ ಈ ಪದ್ಧತಿಯು ಕೃತ್ರಿಮವೂ ಯಾಂತ್ರಿಕವೂ ಆಗಿದ್ದು ಸಂಗೀತ ಸ್ವರಗಳ ವಿಕಾಸದ ಸ್ವಾಭಾವಿಕ ನಿಯಮಗಳಿಗೆ ವಿರುದ್ಧವಾದಂತಹದಿರುತ್ತದೆ.

ಈ ತರಹದ ನಿಯಮಗಳನ್ನು ಹೋಗಲಾಡಿಸಿ ತಮ್ಮ ಪ್ರಾಂತದ ಶಾಸ್ತ್ರ ಮತ್ತು ಕಲೆಗಳ ವೈಶಿಷ್ಟ್ಯವನ್ನು ರಕ್ಷಿಸುವದೂ, ಎಲ್ಲರೂ ಪರಸ್ಪರ ಸಹಕಾರದಿಂದ ಅವುಗಳ ಸ್ಪರ್ಶ ಜನವಣಿಗೆಯಾಗುವಂತೆ ಹೆಣಗುವದೂ, ಮತ್ತು ನಮ್ಮ ಅಜ್ಞಾನ ಪರಕೀಯರ ಸಹವಾಸಗಳ ಮೂಲಕ ನಮ್ಮಲ್ಲಿ ಉಂಟಾದ ತಪ್ಪು ತಿಳುವಳಿಕೆಗಳನ್ನು ನಾಶಗೊಳಿಸುವದೂ ಕನ್ನಡಿಗರ ಆದ್ಯ ಕರ್ತವ್ಯವಾಗಿದೆ. ಈ ವಿಷಯಗಳ ಕಡೆಗೆ ನಮ್ಮ ಕರ್ನಾಟಕದವರ ಲಕ್ಷವನ್ನು ಎಳೆಯುವದಕ್ಕೆ ಕಳೆದ ಹತ್ತು ವರ್ಷಗಳಿಂದ ನಮ್ಮ ಪ್ರಯತ್ನವು ಸತತವಾಗಿ ನಡೆದಿದ್ದು ಅದಕ್ಕೆ ಈಗ ಮಾತ್ರ ಅಲ್ಪಸ್ವಲ್ಪ ಯಶವು ದೊರೆಯುತ್ತಿದೆ. ಈ ವರೆಗೆ ಕರ್ನಾಟಕ ದೇಶದಲ್ಲಿ ಸಂಗೀತ ಅಭ್ಯಾಸಕರು ಅಥವಾ ಕಲೋಪಾಸಕರು ತಮ್ಮ ಕಾರ್ಯವನ್ನು ಮಾಡುತ್ತಿದ್ದುದು ಯೋಗ್ಯವಾಗಿದ್ದರೂ ಅಷ್ಟರಿಂದಲೇ ಕರ್ನಾಟಕದ ವೈಶಿಷ್ಟ್ಯದ ಬಗ್ಗೆ ಹೆಚ್ಚಾದ ಲಾಭವಾಗಲಾರದು. ಆದ್ದರಿಂದ ವಿದ್ಯಮಾನವಾಗಿದ್ದ ಜನರಿಗೆ ಹೊಸದಾದ ದೃಷ್ಟಿಕೋಣವನ್ನು ಕೊಡುವ ಉದ್ದೇಶದಿಂದಲೇ ನಾವು ಈ ರೀತಿಯಾಗಿ ಪ್ರಯತ್ನ ಮಾಡುತ್ತ ಇದ್ದೇವೆ. ಈ ಸಂದರ್ಭದಲ್ಲಿ ಕರ್ನಾಟಕ ಸಂಗೀತದ ವಿಷಯಕವಾದ ವಾಙ್ಮಯ ಮತ್ತು ಐತಿಹಾಸಿಕ ಸಾಮಗ್ರಿಗಳನ್ನು ಸಂರಕ್ಷಿಸಿ ಅವುಗಳ ಆಧಾರದ ಮೇಲೆ ಮುಂದಿನ ಕಾಲದಲ್ಲಿ ಕರ್ನಾಟಕದ ವೈಶಿಷ್ಟ್ಯವನ್ನು ಅಭಿವೃದ್ಧಿಗೊಳಿಸಬೇಕೆಂಬುದನ್ನು ಮರೆಯದೆ ಎಲ್ಲ ಸಂಗೀತಾಭಿಮಾನಿಗಳೂ ಅಭ್ಯಾಸಕರೂ ಕಲೋಪಾಸಕರೂ ಈ ವಿಷಯವನ್ನು ಪರಾಮರ್ಶಿಸಬೇಕು.

---

# ವಿಜಯನಗರದ ಸೈನ್ಯ.

[ ಲೇಖಕರ :— **ಡಾ. ನಾರಾಯಣ ಸುಬ್ರಾವ ಹರಡೀಕರ ಹುಬ್ಬಳ್ಳಿ.** ]

ಹದಿನಾಲ್ಕನೆಯ ಶತಮಾನದ ಪ್ರಾರಂಭ ಅಲ್ಲಲ್ಲಿ ನೆಲೆಸಿದ್ದ ಹಿಂದೂರಾಜ್ಯಗಳ ನಡುವೆ ಸಹಕಾರ ಇಲ್ಲದ್ದರಿಂದ ಪರಕೀಯರಿಗೆ ಹಿಂದುಸ್ಥಾನದ ಮೇಲೆ ದಾಳಿಯನ್ನು ಮಾಡಿ ಕೊಳ್ಳೆಸುಲಿಗೆಗಳ ಹೊಲಿಯನ್ನೆಬ್ಬಿಸಲು ಬಹು ಅನುಕೂಲವಾದ ಕಾಲವದು. ಗುಡಿಗುಂಡಾರಗಳಲ್ಲಿ ಸಹ ರಕ್ಷಿಸಲ್ಪಟ್ಟ ಅಸಂಖ್ಯ ಮುತ್ತು, ರತ್ನ, ಬೆಳ್ಳಿ, ಬಂಗಾರಗಳ ರಾಶಿಗಳು ಹೇಳ ಹೆಸರಿಲ್ಲದ ಮಾಯವಾಗತೊಡಗಿದ್ದವು. ಹಿಂದುಸ್ಥಾನದ ವೈಭವ, ಸಂಪತ್ತಿಗಳ ಯಥಾರ್ಥ ವರ್ಣನೆಯು ಪಾಶ್ಚಿಮಾತ್ಯರ ಕಿವಿಯಲ್ಲಿ ಗುಂಗು ಹಿಡಿಸಿ ದಿಗ್ಭ್ರಮೆ ಮಾಡಿತು. ತುರುಷ್ಕರ ರಾಜ್ಯತೃಷ್ಣೆ ಹಾಗು ಪರಧರ್ಮದವರನ್ನು ಧರ್ಮಾಂತರ ಮಾಡುವ ಹವ್ಯಾಸ ಇವು ಜೋರಾಗಿ ಹರಿದುಹಂಚಿಹೋದ ಹಿಂದೂ ರಾಜ್ಯಗಳ ಸತ್ವವನ್ನೇ ಹಿಂಡತೊಡಗಿದ್ದವು. ತಂಪು ಹವೆಯಲ್ಲಿ ವಾಸಮಾಡಿ, ಮಾಂಸಗಳನ್ನು ತಿಂದು ಪುಷ್ಟರೂ ಕ್ರೂರರೂ ಆದ ಉತ್ತರದ ಕಡೆಯವರ ಭೀಕರ ದೇಹಗಳ ಮಧ್ಯದಲ್ಲಿ ಸಿಲುಕಿ ಆರ್ಯ ಸಂಸ್ಕೃತಿಯು ಒಮ್ಮೆಲೆ ನಿರ್ನಾಮವಾಗುವ ಹೊತ್ತು ಬಂದಿದ್ದಿತು. ಆಗ ಚಿಕ್ಕಪುಟ್ಟ ಹಿಂದೂರಾಜ್ಯಗಳು ಒಟ್ಟಾಗಿದ್ದರೆ ಈ ಹೊರಗಿನ ಶಕ್ತಿಯನ್ನು ಎದುರಿಸುವದು ಅವರಿಗೆ ಅಸಾಧ್ಯವಾಗಿದ್ದಿಲ್ಲ. ಆದರೆ ಒಟ್ಟುಗೂಡಿಸುವ ಶಕ್ತಿಯೊಂದು ಬೇಕಲ್ಲವೇ? ದಕ್ಷಿಣ ಹಿಂದುಸ್ಥಾನದಲ್ಲಿ ಮಾತ್ರ ವಿಜಯನಗರದಲ್ಲಿ ೧೩೩೬ರಲ್ಲಿ ಸ್ಥಾಪಿಸಲ್ಪಟ್ಟ ಕರ್ನಾಟಕ ಸಾಮ್ರಾಜ್ಯವು ಪರಕೀಯರ ದಾಳಿಯನ್ನು ಯಶಸ್ವಿಯಾಗಿ ಎದುರಿಸಿತು. ಎರಡೂವರೆ ಶತಮಾನಗಳ ವರೆಗೆ ತುಂಗಾಭದ್ರಾನದಿಯಿಂದ ಕನ್ಯಾಕುಮಾರಿಯ ವರೆಗಿರುವ ಪ್ರದೇಶವನ್ನು ಸಂಪೂರ್ಣವಾಗಿ ಸಂರಕ್ಷಿಸಿತು. ಈ ಸಾಮ್ರಾಜ್ಯದ ಪ್ರಚಂಡ ಶಕ್ತಿಬಲದಿಂದ ಯಾವ ಪರಕೀಯರಿಗೂ ಇತ್ತ ಹೊರಳಿ ನೋಡಲು ಸಹ ಧೈರ್ಯವಾಗುತ್ತಿದ್ದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಉತ್ತರ ಹಿಂದುಸ್ಥಾನದ ಬಹು ಭಾಗವನ್ನು ಸಹ ಈ ಸಾರ್ವಭೌಮರು ತಮ್ಮ ಉನ್ನತಿಯ ಕಾಲದಲ್ಲಿ ಗೆದ್ದಿದ್ದರು. ಇವರ ರಾಜ್ಯದಲ್ಲಿ ಯಾವುದೇ ಪರಧರ್ಮದವರಿಗೆ ತಿಲಮಾತ್ರವಾದರೂ ಭಯವಿದ್ದಿಲ್ಲ.

ಇನ್ನು ಇಷ್ಟು ದೊಡ್ಡ ಸಾಮ್ರಾಜ್ಯವನ್ನು, ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಎರಡೂವರೆ ಶತಮಾನಗಳ ವರೆಗೆ ನಿರ್ಭಯವಾಗಿ ಸಾಗಿಸಬೇಕಾದರೆ ರಾಜ್ಯ ಸಂರಕ್ಷಣೆಗೆ ಮುಖ್ಯವಾಗಿ ಸೈನ್ಯದ ಸಂಖ್ಯೆಯೂ ಹೆಚ್ಚಾಗಿ ಇದ್ದು ಸೈನ್ಯದ ವ್ಯವಸ್ಥೆಯೂ ಉತ್ತಮ ತರಗತಿಯದಾಗಿ ಇದ್ದೇ ಇರಬೇಕು. ಈ ವಿಷಯವಾಗಿ ಚರ್ಚಿಸುವದೇ ಈ ಬರಹದ ಉದ್ದೇಶವಿದೆ. ಸರ್ವಸಾಧಾರಣವಾಗಿ ದೊರೆಯಬಹುದಾದ ಸಂಗತಿಗಳ ಮೇಲಿಂದ ೩೦ ರಿಂದ ೪೦ ಸಾವಿರಗಳ ವರೆಗೆ ಅಶ್ವಾರೋಹರೂ, ೩ ಸಾವಿರದ ವರೆಗೆ ಆನೆಗಳೂ, ೧೦ ರಿಂದ ೨೦ ಲಕ್ಷದವರೆಗೆ ಕಾಲಾಳುಗಳೂ ಈ ಸಾರ್ವಭೌಮರ ಅಂಕಿತದಲ್ಲಿ ಇರುತ್ತಿದ್ದರೆಂದು ಹೇಳಬಹುದು. ಇದಲ್ಲದೆ ರಥಗಳು, ಒಂಟೆಗಳು, ಬಿಲ್ಲು ಬಾಣದವರು, ತುಬಾಕಿಯವರು, ತೋಫಿನವರು ಅಸಂಖ್ಯರಿದ್ದರು. ಹಿಂದುಗಳೇ ಈ ಸೈನ್ಯದಲ್ಲಿರಬೇಕೆಂಬ ನಿರ್ಬಂಧವಿರಲಿಲ್ಲ.

ಪ್ರತಿಯೊಬ್ಬ ಸೈನಿಕನನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಬೇಕೆಂದರೆ ಅವರ ಉಡಿಗೆ ತೊಡಿಗೆಗಳನ್ನು ತೆಗೆಯಿಸಿ ಅವನ ಆಕೃತಿಯನ್ನು ಮಾಡುತ್ತಿದ್ದರು ಮತ್ತು ಅವರ ಮೈ ಮೇಲೆ ಯಾವದಾದರೂ ಚಿನ್ಹಗಳಿವೆಯೋ ಹೇಗೆಂಬದನ್ನು ನೋಡುತ್ತಿದ್ದರು ಮತ್ತು ಈ ಎಲ್ಲ ವರ್ಣನೆಯನ್ನು, ಅವರ ಸಂಪೂರ್ಣ ಹೆಸರು, ಜನ್ಮಸ್ಥಳ, ವಾಸಸ್ಥಳ, ತಂದೆ, ತಾಯಿಗಳ ಹೆಸರುಗಳನ್ನು ಸೈನ್ಯಯಾತ್ರೆಯ ಪುಸ್ತಕದಲ್ಲಿ ಬರೆದಿಡುತ್ತಿದ್ದರು ಮತ್ತು ಅವರಿಗೆ ವ್ಯವಸ್ಥಿತ ರೀತಿಯಿಂದ ವೇತನವು ದೊರೆಯುವಂತೆ ವ್ಯವಸ್ಥೆಯಾಗಿತ್ತು. ಇದಲ್ಲದೆ ಶೌರ್ಯ, ಸಾಹಸದ ಕೃತ್ಯಗಳಿಗಾಗಿ ಸಂಭಾವನೆ ಜರೆ. ಈ ಎಲ್ಲ ಸೈನ್ಯದ ಮುಖ್ಯಾಧಿಕಾರಿಗೆ 'ದಂಡನಾಯಕ' ನೆಂದು ಹೆಸರು. ಇವನೇ ಸೈನ್ಯಾಧಿಪತಿಯು.

ಇಡೀ ಸಾಮ್ರಾಜ್ಯದಲ್ಲಿ ಕೆಲವು ಭಾಗಗಳನ್ನು ಮಾಡಿದ್ದರು. ಪ್ರತಿಯೊಂದು ಭಾಗದ ಮುಖ್ಯಾಧಿಕಾರಿಯು

ಇಂತಿಷ್ಟು ಸೈನ್ಯವನ್ನು ಯುದ್ಧದ ಕರೆ ಬಂದಾಗ ಮುಖ್ಯ ಸರಕಾರಕ್ಕೆ ಒಪ್ಪಿಸಲೇ ಬೇಕೆಂಬ ನಿರ್ಬಂಧವಿದ್ದಿತು ಈ ಸೈನ್ಯದ ವೆಚ್ಚಕ್ಕಾಗಿ ತೆರಿಗೆ ಯಿಲ್ಲದ ಭೂಮಿಯು ನಿರಂತರ ನಡೆಯುತ್ತಿತ್ತು. ಹೀಗಾಗಿ ರಾಜಧಾನಿಯ ಹಾಗೂ ಸಮ್ರಾಟನ ಸಂರಕ್ಷಣೆ ಮತ್ತು ಗೌರವಕ್ಕಾಗಿ ಅವಶ್ಯ ಬೇಕಾಗುವ ಸೈನ್ಯ ವಷ್ಟೇ ರಾಜಧಾನಿಯಲ್ಲಿ ಅಥವಾ ಅದರ ಹತ್ತಿರದಲ್ಲ ಇರಬೇಕಾಗುತ್ತಿತ್ತು

ಈ ದೇಶದಲ್ಲಿ ಶ್ರೇಷ್ಠತರಗತಿಯ ಕುದುರೆಗಳು ದೊರ ಯದ್ದರಿಂದ 'ಆರ್ಮಜು' [ಇರಾಣದಲ್ಲಿ] ದಿಂದಲೂ 'ಏಡನ್' ದಿಂದಲೂ ಕುದುರೆಗಳನ್ನು ತರಿಸುತ್ತಿದ್ದರು ಕುದುರೆಗಳನ್ನು ಪೂರೈಸುವರು ಪೋರ್ತುಗೀಜ ವ್ಯಾಪಾರಸ್ಥರು ಈ ವ್ಯಾಪಾರಸ್ಥರು ಪ್ರತಿ ವರ್ಷ ಸುಮಾರು ೧೩ ಸಾವಿರ ಕುದುರೆಗಳನ್ನು ಪೂರೈಸಬೇಕಾ ಗುತ್ತಿತ್ತು. ಈ ವ್ಯಾಪಾರಸ್ಥರು ಕುದುರೆಯ ವ್ಯಾಪಾರದ ಗುತ್ತಿಗೆಯನ್ನೇ ಹಿಡಿದಿದ್ದರನ್ನಲು ಅಡ್ಡಿಯಿಲ್ಲ. ಪರದೇಶದಿಂದ ಕುದುರೆಗಳನ್ನು ಹಡಗದ ಮೇಲೆ ಹೇರಿ ದರಾಯಿತು. ಸಾಮ್ರಾಟನು ಅದರ ಕ್ರಯವನ್ನು ಕೊಡಲೇ ಬೇಕು, ಆ ಕುದುರೆಗಳು ಜೀವಂತ ಬರಲಿ, ಅಥವಾ ಬಿಡಲಿ. ದಾರಿಯಲ್ಲಿ ಸತ್ತ ಕುದುರೆಯ ಬಾಲ ವನ್ನು ತಂದುಕೊಟ್ಟರ ತೀರಿತು. ಈ ವ್ಯಾಪಾರ ಮತ್ತು ಉಳಿದ ವ್ಯವಹಾರಗಳಿಂದ ಪುಷ್ಟರಾದ ಪೋರ್ತುಗೀಜರು ವಿಜಯನಗರದ ಕೊನೆಯಾದ ಕೂಡಲೆ ಅದ ಹಾನಿಯಿಂದ ಹಣ್ಣಾದರು.

ರಾಜಧಾನಿಯ ಅಶ್ವಶಾಲೆಯಲ್ಲಿ ೧೬೨೦ ಕುದುರೆ ಯು ಆಳುಗಳಿದ್ದವು. ಕುದುರೆಗಳಿಗೆ ಶಿಕ್ಷಣ ಕೊಡು ವವರು ೩೦೦ ಜನರು ಸುಮಾರು ೬೦೦೦ ಕುದುರೆ ಸವಾರರು ಸಿದ್ಧರಿರುತ್ತಿದ್ದರು. ಈ ಕುದುರೆಗಳಿಗೆ ರಾಜ ಮುದ್ರೆಯನ್ನು ಒತ್ತುತ್ತಿದ್ದರು.

ಕುದುರೆಯ ಸವಾರರು ದಪ್ಪನಾದ ಚರ್ಮಗಳಿಂದ ಮಾಡಿದ ಉದ್ದಂಗಿಯನ್ನು ತೊಟ್ಟು ಮೇಲೆ ಉಕ್ಕಿನ ಅಥವಾ ಬೆಳ್ಳಿಯ ಚಿಲಿಮಿತ್ತುಗಳನ್ನು ತೊಡುತ್ತಿದ್ದರು ಮತ್ತು ಮುಖರಕ್ಷಣೆಗಾಗಿ ಉಕ್ಕಿನ ಟೊಪ್ಪಿಗೆಗಳನ್ನು ಹಾಕುತ್ತಿದ್ದರು ಟೊಂಕಕ್ಕೆ ಖಡ್ಗ ಮತ್ತು ಚೂಪ ಕೊಡ್ಲಿಗಳನ್ನು ಕಟ್ಟುತ್ತಿದ್ದರು ಕಾಲಾಳುಗಳು ಬರ್ಚಿ, ಡಾಲು, ಬಿಲ್ಲು, ಬಾಣ, ತುಬಾಕಿ, ಚಪಕೊಡ್ಲಿ, ಕಠಾರಿ, ಬರ್ಚಿ, ಖಡ್ಗ ಮುಂತಾದ ಆಯುಧಗಳನ್ನು ಉಪಯೋಗಿಸುತ್ತಿದ್ದರು.

ಆನೆಗಳ ಮೇಲೆ ಸಂಪೂರ್ಣವಾಗಿ ಶ್ರೇಷ್ಠತರಗತಿಯ ಅರಿವೆಗಳ ಹೊದಿಕೆ ಇದ್ದು, ಗಂಟೆಗಳನ್ನು ಕಟ್ಟುತ್ತಿದ್ದರು. ಮತ್ತು ಮೋರೆಗೆ ಭೀಕರ ಚಿತ್ರ ಗಳನ್ನು ಬರೆಯುತ್ತಿದ್ದರು. ಅಂಬಾರಿಯಲ್ಲಿ ನಾಲ್ವರು ಯೋಧರು ಸಜ್ಜಾಗಿರುತ್ತಿದ್ದರು. ಸೈನ್ಯದಲ್ಲಿ ಸಾವಿ ರಾರು ಒಂಟೆಗಳೂ, ಅಸಂಖ್ಯ ಎತ್ತುಗಳೂ, ನೀರು ಪೂರೈಸುವವರೂ, ವ್ಯಾಪಾರಸ್ಥರೂ, ಹಾಡುವವರೂ ಬಾರಿಸುವವರೂ, ವೇಶ್ಯಾಸ್ತ್ರೀಯರೂ, ಬ್ರಾಹ್ಮಣರೂ, ಕೂಲಿಯವರೂ, ವೈದ್ಯರೂ ಮುಂತಾದ ಸಹಸ್ರಾವಧಿ ಜನರಿರುತ್ತಿದ್ದರು. ಇದರಿಂದ ಸೈನ್ಯವಿಳಿದ ಸ್ಥಳ ವೆಂದರೆ ದೊಡ್ಡದೊಂದು ನಗರವೇ ಇಳಿದಂತಾ ಗುತ್ತಿತ್ತು. ತಮ್ಮ ನಾದದಿಂದ ಕಿವಿಗಳನ್ನು ಗಡ ಚಿಕ್ಕಿಸಿ ಮೇಲೆ ಹಾರಾಡುವ ಪಕ್ಷಿಗಳನ್ನುಸಹ ಎಚ್ಚರ ತಪ್ಪಿ ಬೀಳುವಂತ ಮಾಡುವ ಭೀಕರ ರಣ ವಾದ್ಯ ಗಳಿಗೂ ಎಣೆ ಇದ್ದಿಲ್ಲ. ಯುದ್ಧದ ವೇಳೆಯಲ್ಲಿ ವೈರಿ ಗಳನ್ನು ತುಂಡರಿಸುವದೇ ನಿಜವಾದ ಆರ್ಯ ಧರ್ಮದ ಗುಟ್ಟೆಂದು ಪುರಾಣ ಹೇಳುವ ಅಸಂಖ್ಯ ಬ್ರಾಹ್ಮಣರು ಸೈನ್ಯದ ಜೊತೆಗಿದ್ದು ದಿನಾಲು ಸೈನಿಕರನ್ನು ಪ್ರೋತ್ಸಾ ಹಿಸುತಿದ್ದರು.

೧೪೯೮ ರಲ್ಲಿ ಪೋರ್ತುಗೀಜರು ಹಿಂದುಸ್ತಾನಕ್ಕೆ ಬರುವ ಮೊದಲೇ ಇಲ್ಲಿ ತೋಫು ತುಬಾಕಿಗಳು ಉಪಯೋಗಿಸಲ್ಪಡುತ್ತಿದ್ದವೆನ್ನಲು ಆಧಾರಗಳುಂಟು ಫರಿಸ್ತನು ಹೇಳುವಂತ ಸುಮಾರು ೧೩೬೮ ರಲ್ಲಿಯೇ ತೋಫು ತುಬಾಕಿಗಳಿದ್ದವು. ರಕ್ಕಸತಂಗಡಗಿಯ ಯುದ್ಧದಲ್ಲಿಯಂತೂ ಅವು ಬಹಳ ದೊಡ್ಡ ಪ್ರಮಾಣ ದಿಂದ ಉಪಯೋಗಿಸಲ್ಪಡುತ್ತಿದ್ದವು. ( ವಿಜಾಪುರ ದ್ಲಿರುವ ಇತಿಹಾಸ ಪ್ರಸಿದ್ಧ "ಮುಲಿಖ-ಈ-ಮೈದಾನ" ವೆಂಬ ತೋಫನ್ನು ಈ ಯುದ್ಧದಲ್ಲಿ ಮುಹಮ್ಮದೀ ಯರು ಉಪಯೋಗಿಸಿದ್ದರಂತೆ. )

ಬಂಕಾಪುರ ಕೋಟೆಯನ್ನು ಮುಹಮ್ಮದೀಯರು ಮುತ್ತಿದಾಗ ಅಲ್ಲಿಯ ಹಿಂದೂ ಕಾಲಾಳುಗಳು ಒರ ಮೈಯಿಂದ ಯುದ್ಧಮಾಡುವಾಗ ಮೈತುಂಬ ಎಣ್ಣೆ ಹಚ್ಚಿಕೊಂಡು ಕೈಯಲ್ಲಿ ಸಿಕ್ಕದೆ ಜಾರಿ ಹೋಗುತ್ತಿದ್ದ ರೆಂದು ಫೆರಿಸ್ತನು ಬರೆಯುತ್ತಾನೆ

ಸೈನ್ಯದ ದಾರಿಯು ನಿರಾತಂಕವಾಗಿದೆಯೋ ಇಲ್ಲ ವೋ ಎಂಬುದನ್ನು ನೋಡುವದಕ್ಕಾಗಿ ಮೊದಲು ಒಂದೆರಡು ಹರದಾರಿಗಳ ಅಂತರದವರೆಗೆ 'ಸ್ಕಾವುಟ' ಚಾರರ ಪಥಕವು ಹೋಗುತ್ತಿತ್ತು. ಈ ಎಲ್ಲ ವ್ಯವಸೆ

ಶ್ರೀ. ಬೆಂಗೇರಿ ಪ್ರಲ್ಹಾದರಾಯರು
ಹುಬ್ಬಳ್ಳಿ.



ದೇ. ಭ. ಪರ್ಡೀಕರ ನಾರಾಯಣರಾಯರು
ಹುಬ್ಬಳ್ಳಿ.



ಶ್ರೀ. ಹುಯಿಲಗೋಳ ನಾರಾಯಣ
ರಾಯರು. ಬಿ. ಎ. ಎಲ್‌ಎಲ್. ಬಿ. ಗದುಗು.



ಶ್ರೀ. ಎಸ್. ವ್ಹಿ. ಅಡ್ಡಣಗಿ.
ಬಿ. ಎ. ಎಲ್‌ಎಲ್. ಬಿ. ಬೆಳಗಾವಿ.



ಯನ್ನು ನೋಡಿದರೆ ಸೈನ್ಯದ ವ್ಯವಸ್ಥೆಯು ವಿಜಯ ನಗರದ ರಾಜ್ಯದಲ್ಲಿ ಉಚ್ಚತರಗತಿಗೆ ಮುಟ್ಟಿತ್ತೆಂದು ಹೇಳಲಭ್ಯಂತರವಿಲ್ಲ. ಮೇಲಾಗಿ ಹೀಜನು ಹೇಳಿದಂತೆ ಈ ಸಾಮ್ರಾಟನ ಸೈನ್ಯದಲ್ಲಿ ಹೇಡಿಯೆನಿಸಿಕೊಳ್ಳಲು ಯೋಗ್ಯರಿದ್ದವರು ಒಬ್ಬನೂ ಸಹ ಕಾಡು ಬರಲಿಲ್ಲ.

ಪ್ರತಿವರ್ಷ ಮಹಾನವಮಿಯ ಮರುದಿನ ಎಲ್ಲ ಸೈನ್ಯವನ್ನು ರಾಯನು ನಿರೀಕ್ಷಿಸುತ್ತಿದ್ದನು. ಇದಕ್ಕಾಗಿ ಅರಮನೆಯಿಂದ ೧ ಅಥವಾ ೨ ಹರದಾರಿಗಳ ಅಂತರದಲ್ಲಿ ಒಂದು ಡೇರೆಯನ್ನು ಹೊಡೆಯುತ್ತಿದ್ದರು ರಾಯನು ವಜ್ರವೈಡೂರ್ಯಗಳಿಂದ ಭೂಷಿತವಾದ ತುರಗವನ್ನೇರಿ ಅರಮನೆಯಿಂದ ಸರದಾರರ ಸಮೇತನಾಗಿ ಹೊರಡುತ್ತಿದ್ದನು. ಅಲ್ಲಿಂದ ಡೇರೆಯ ವರೆಗೆ ಎರಡೂ ಮಗ್ಗುಲು ಸೈನಿಕರು, ಅವರ ಹಿಂದೆ ಸವಾರರು ಅವರ ಹಿಂದೆ ರಥ, ಅವರ ಹಿಂದೆ ಆನೆಗಳು ಸಾಲಾಗಿ ನಿಂತಿರುತ್ತಿದ್ದರು ಪ್ರತಿಯೊಬ್ಬ ಸೈನಿಕನ ಜಿಲೆಬಾಳುವ ಉಡಿಗೆತೊಡಿಗೆ ಭಾವಗಳನ್ನು ಗೋಣು ಹೊರಳಿಸಿ ಹೊರಳಿಸಿ, ನೋಡಿ ಪೋರ್ತುಗೀಜ ಪ್ರವಾಸಿಯ ಕಣ್ಣಿಗೆ ಮಬ್ಬು ಬಂದಿತಂತೆ! ಇದೇ ರೀತಿಯಾಗಿ ಹೊರಟ ರಾಯನು ಡೇರೆಯನ್ನು ಮುಟ್ಟಿ, ಅಲ್ಲಿಂದ ಮರಳಿ ಬರುವ ವರೆಗೂ ಎಲ್ಲ ಸೈನಿಕರು ಸ್ಥಳ ಬಿಟ್ಟು ಕದಲುತ್ತಿದ್ದಿಲ್ಲ. ಇವನ ಜಯಘೋಷದಿಂದ ನಭೋಮಂಡಲವು ಸಹ ನಡುಗುತ್ತಿತ್ತು. ಮನೆ, ಮಾಳಿಗೆ, ಬೀದಿ, ಬೈಲು ಬೆಟ್ಟ ಎಲ್ಲಿ ನೋಡಿದಲ್ಲಿ ವಿವಿಧಬಣ್ಣಗಳ ಬಟ್ಟೆ ಅಲಂಕಾರಗಳನ್ನು ಧರಿಸಿದ ಸೈನಿಕರೂ, ಪ್ರೇಕ್ಷಕರೂ ಕಾಣುತ್ತಿದ್ದರು ಇದೊಂದ ವಿಜಯನಗರದಲ್ಲಿಯ ನವರಾತ್ರಿಯ ಉತ್ಸವದ ದೃಶ್ಯ

ನಮ್ಮ ಕರ್ನಾಟಕಸಾಮ್ರಾಜ್ಯದ ರಕ್ಷಣೆಯು ಇಂತಹ ಪ್ರಬಲ ಸೈನ್ಯದ ಮುಖಾಂತರ ಸಾಗಿರುವಾಗ ಸಾಮ್ರಾಜ್ಯಕ್ಕಳಿಗಾಲ ಬಂದುದೇಕೆ ? ಚಿಕ್ಕಪುಟ್ಟ ಸೈನ್ಯಾಧಿಕಾರಿಗಳಲ್ಲಿ ಸ್ವಾರ್ಥವು ಬೆಳೆಯಹತ್ತಿ ಅವರು ಸ್ವತಂತ್ರರಾಗಲು ಪ್ರಯತ್ನಿಸುತ್ತಿದ್ದರು. ಇವರ ಮೇಲೆ ರಾಯರ ಪ್ರತ್ಯಕ್ಷ ನಿಯಂತ್ರಣವಿಲ್ಲದ ಮೂಲಕ ರಾಯರು ಇಂತಹ ಸೈನ್ಯಾಧಿಕಾರಿಗಳಿಗೆ ಕೂಡಲೇ ಯೋಗ್ಯ ಶಾಸನ ಮಾಡುವದು ಸಾಧ್ಯವಿದ್ದಿಲ್ಲ. ಯಾಕಂದರೆ ಈ ಸೈನ್ಯದ ವೆಚ್ಚಕ್ಕಾಗಿ ಭೂಮಿಯು ಕೊಡಲ್ಪಟ್ಟು ಆ ಉತ್ಪನ್ನದ ವ್ಯವಸ್ಥೆಯನ್ನು ಈ ಸೈನ್ಯಾಧಿಕಾರಿಗಳೇ ಮಾಡುತ್ತಿದ್ದರು. ಮುಂದೆ ಬರಬರುತ್ತ ಈ ಸೈನ್ಯಾಧಿಕಾರಿಗಳಲ್ಲಿ ಬಹು ಜನರು ಸ್ವತಂತ್ರರಾಗಿ ರಾಯರ ಅಪ್ಪಣೆಯನ್ನು ಮನ್ನಿಸದಾದರು. ಇದರಿಂದ ದಂಡಿನಲ್ಲಿ ಅವಶ್ಯವಾಗಿ ಇರಬೇಕಾದ ಶಿಸ್ತು ಶಿಥಿಲವಾಗಹತ್ತಿತು ಈ ಶಿಸ್ತಿನ ಶಿಥಿಲತೆಯೇ ಕೊನೆಗೆ ಕರ್ನಾಟಕ ಸಾಮ್ರಾಜ್ಯ ಗಿರಿಯನ್ನು ಒಡೆದು ಚೂರ ಚೂರು ಮಾಡುವ ವಜ್ರಾಯುಧವಾಗಿ ಪರಿಣಮಿಸಿತು. ರಾಯರ ಸೈನ್ಯದಲ್ಲಿ ಮೊದಲಿದ್ದ ಶಿಸ್ತು, ಸ್ವಾಭಿಮಾನ, ನಿಃಸ್ವಾರ್ಥತೆಗಳು ಹಾಗೆಯೇ ಮುಂದಯೂ ಇದ್ದುದಾಗಿದ್ದರೆ ನಮ್ಮ ಕರ್ನಾಟಕದ, ಅದೇಕೆ ಅಖಿಲ ಭಾರತದ, ಇತಿಹಾಸವೇ ಬೇರೆಯಾಗಬಹುದಾಗಿತ್ತು. ಆದರೆ ನಮ್ಮ ಬಾಂಧವರ ದೈವ ದುರ್ವಿಪಾಕದಿಂದ ಆ ಸಾಮ್ರಾಜ್ಯವನ್ನು ಕಳೆದುಕೊಂಡು ಈಗ ಗುಲಾಮರಾಗಿರುವೆವು. ಹಿಂದುಗಳ ಅವನತಿಗೆ ಅವರಲ್ಲಿರುವ ಶಿಸ್ತಿನ ಅಭಾವವೇ ಮುಖ್ಯ ಕಾರಣವೆಂಬದನ್ನು ಇನ್ನೂ ಒಂದು ಉದಾಹರಣೆಯನ್ನು ಕೊಟ್ಟು ತೋರಿಸಬಹುದು.

ಶಿವಾಜಿಮಹಾರಾಜರು ಕಾಯ್ದುಕೊಂಡ ಶಿಸ್ತು ಸಂಘಟನೆಗಳು ಬರಬರುತ್ತ ಸಡಿಲಾಗಹತ್ತಿ ಕೊನೆಗೆ ಸೈನ್ಯಾಧಿಕಾರಿಗಳು ಸ್ವತಂತ್ರ ರಾಜ್ಯಗಳನ್ನೇ ಸ್ಥಾಪಿಸಿದರು ಇದರಿಂದ ಶಿವಾಜಿರಾಜರು ಬಹು ಪ್ರಯಾಸದಿಂದ ಸ್ಥಾಪಿಸಿದ ರಾಜ್ಯವು ಪರಚಕ್ರಗಳ ದಾಳಿಗೆ ಈಡಾಗಿ ಅಳಿದುಹೋಯಿತು. ಹಿಂದುಗಳ ಶಿಸ್ತು ಸಂಘಟನೆಗಳು ನಾಮಶೇಷವಾದವು.

ವಿಜಯನಗರ ಸಾಮ್ರಾಜ್ಯವು ಬಹುಕಾಲ ವೈಭವದಲ್ಲಿ ಮೆರೆದು ಕೊನೆಗೆ ಯಾವ ಕಾರಣದಿಂದ ನಾಶವಾಯಿತೆಂಬದನ್ನು ಇಲ್ಲಿ ಹೇಳಲಾಗಿದೆ ಆದರೆ ಅದರ ನಾಶವು ನಿಸರ್ಗದ ನಿಯಮದಂತೆ ಆಗಿದೆಯೇ ಹೊರತು ಅದರಿಂದ ಅಂತಹದೊಂದು ಆಶ್ಚರ್ಯಕರವಾದ ಸಂಗತಿಯು ಜರಗಿತೆಂದು ಹೇಳಲಾಗದು. ಯಾಕಂದರೆ ಒಂದೇ ರಾಜ್ಯವು ಅಥವಾ ಒಂದೇ ಸಂಗತಿಯು ಎಷ್ಟು ದಿವಸ ನಡೆದರೂ ಕೊನೆಗೆ ಅದರ ನಾಶವು ಖಂಡಿತವಾದದ್ದು. ಹುಟ್ಟಿದವನು ಸಾಯಲೇಬೇಕು. ಅದೇ ಮಾತನ್ನು ಇನ್ನೊಂದು ರೀತಿಯಿಂದ ಹೇಳುವದಾದರೆ—ಜಗತ್ತು ದಿನದಿನಕ್ಕೂ ರೂಪಾಂತರ ಹೊಂದುತ್ತಿರುತ್ತದೆ. ಅದೇ ಪ್ರಕಾರ ಅದರಲ್ಲಿಯ ಜನರು ಒಡವೆಗಳು ಕೂಡ ರೂಪಾಂತರ ಹೊಂದುವರೆಂದು ಸಹಜವಾದದ್ದು ಈ ರೂಪಾಂತರಗಳ

ಮೂಲಕ ಆಗುವ ಹೆಚ್ಚುಕಡಿಮೆಗಳೇ ಯಾವುದಾದರೊಂದು ವ್ಯಕ್ತಿಯ ಅಥವಾ ವಸ್ತುವಿನ ಉನ್ನತಿಯು ಅಥವಾ ಅವನತಿಯು. ಈ ಮಾತಿಗೆ ಇದುವರೆಗೆ ಜಗತ್ತಿನಲ್ಲಿ ಆಗಿಹೋದ ಅನೇಕ ಸಂಗತಿಗಳ ಉದಾಹರಣೆಗಳಿವೆ. ಪೌರಾಣಿಕದೃಷ್ಟಿಯಿಂದ ರಾಮರಾಜ್ಯ ರಾವಣರಾಜ್ಯಗಳೂ ಐತಿಹಾಸಿಕದೃಷ್ಟಿಯಿಂದ ರೋಮ ರಾಜ್ಯದಂತಹ ಬಲಾಢ್ಯರಾಜ್ಯಗಳೂ ನಾಶವಾಗಿರುವದು ಇದೇ ಮಾತಿಗೆ ಪುಷ್ಟಿಯನ್ನು ಕೊಡುತ್ತವೆ. ಉನ್ನತಿ ಅವನತಿಗಳು ನಿತ್ಯವಾದವುಗಳೆಂಬ ಮಾತ್ರಕ್ಕೆ ನಾವು ಕೈಕಟ್ಟಿಕೊಂಡು ಕೂಡ್ರಬೇಕೆಂದು ಹೇಳಲಾಗುವದಿಲ್ಲ. ಅವನತಿಯನ್ನು ತಪ್ಪಿಸುವವಕ್ಕೆ ಯತ್ನಿಸಿದಲ್ಲಿ ಅದಕ್ಕೆ ಫಲವು ದೊರೆಯುವದೂ ಉಂಟು. ಪ್ರಯತ್ನವನ್ನು ಮಾಡುವುದಕ್ಕೆ ತಪ್ಪಕೂಡದು. ಪ್ರಯತ್ನಾಂತ್ಯದಲ್ಲಿಯೂ ಕೂಡ ಫಲವು ದೊರೆಯದಿದ್ದರೆ ಅದಕ್ಕಾಗಿ ದುಃಖಿಸಕೂಡದು. ಅದೇ ಮಾತನ್ನು ಮತ್ತೊಂದು ರೀತಿಯಿಂದ ನಮ್ಮ ಹಿರಿಯರು 'ಪ್ರಯತ್ನಾಂತೇ ಪರಮೇಶ್ವರಃ' ಪರಮೇಶ್ವರನೆ ಅದಕ್ಕೆ ಕಾರಣನೆಂದು ನಂಬಿ ಸುಖದುಃಖಗಳಿಂದ ಹಿಗ್ಗಿ ಕೊರಗಬಾರದೆಂದು ಹೇಳಿದ್ದಾರೆ.

ಸದ್ಯಕ್ಕೆ ನಮಗೆ ಬೇಕಾದುದು ಒಂದೇ ವಿಷಯ. ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ಸೈನ್ಯದ ವ್ಯವಸ್ಥೆಯು ಮತ್ತು ಕಲೆಯು ಯಾವತರಗತಿಯದಿತ್ತೆಂಬದನ್ನು ನಿರ್ಣಯಿಸುವುದು. ಇಂದು ಈ ಕಾಲದಲ್ಲಿ ಆದಂತಹ ಸುಧಾರಣೆಗಳನ್ನು ನೋಡಿದರೆ ಆಗಿನ ಕಾಲದ ವ್ಯವಸ್ಥೆಯು ತೀರ ಅಸಮಾಧಾನಕರವಿತ್ತೆಂದು ಹೇಳಬೇಕಾದೀತು. ಆದರೆ ಆಗಿನ ಕಾಲದ ಪರಿಸ್ಥಿಯನ್ನು ಲಕ್ಷದಲ್ಲಿ ತಂದು ವಿಜಯನಗರದ ಸೈನ್ಯದ ವ್ಯವಸ್ಥೆಯು ಎಂತಹದಿತ್ತೆಂಬದನ್ನು ನೋಡಿದರೆ ಅದರ ಯೋಗ್ಯತೆಯು ಯಾವ ಯೋಗ್ಯತೆಗೂ ಹಿಂದೆ ಬಿದ್ದಿದ್ದಿಲ್ಲವೆಂಬದನ್ನು ಎದೆತಟ್ಟಿ ಹೇಳಬಹುದು. ಪರದೇಶದವರು ಕೂಡ ರಾಜ್ಯವೈಭವವನ್ನು ನೋಡಲು ಹಿಂದುಸ್ಥಾನಕ್ಕೆ ಬಂದ ಸಂಗತಿಗಳೂ, ಪರದೇಶೀಯ ಪ್ರವಾಸಿಕರು ತಾವು ಕಣ್ಣಾರೆ ಕಂಡ ಸಂಗತಿಗಳನ್ನು ವರ್ಣಿಸಿ ಹೇಳಿರುವ ರೀತಿಗಳೂ, ಆಗಿನ ಕಾಲದ ಭಾರತೀಯ ರಾಜ್ಯದಾಡಳಿತದ ಪ್ರಗತಿಯನ್ನೂ ವಿಶೇಷತಃ ವಿಜಯನಗರ ಸಾಮ್ರಾಜ್ಯದ ಸುವ್ಯವಸ್ಥೆಯನ್ನೂ ಸ್ಪಷ್ಟವಾಗಿ ಇಡೀ ಜಗತ್ತಿಗೆ ತಿಳಿಸಿ ಹೇಳುತ್ತವೆ. ವಿಜಯನಗರದ ಸಾಮ್ರಾಜ್ಯವು ನಮ್ಮೊಳಗಿನ ಒಡಕಿನಿಂದ ಹಾಳಾಯಿತಷ್ಟೇ? ಆದರಿಂದ ನಾವು ಕಲಿಯಬೇಕಾದುದೇನು ಎಂಬುದನ್ನು ತಿಳಿದುಕೊಳ್ಳುವುದೇ ಇಂತಹ ಲೇಖನಗಳನ್ನು ಬರಯುವ ಮತ್ತು ಓದುವುದರ ಉದ್ದೇಶವು. ಇಂದಿನ ನಮ್ಮ ಸ್ಥಿತಿಯನ್ನು ನಾವು ಸುಧಾರಿಸುವುದಾದರೆ ಎರಡು ಮಾತುಗಳನ್ನು ನಾವು ಮರೆಯದಿರುವುದು ಅವಶ್ಯವಾಗಿದೆ. ೧ ನೆಯದೆಂದರೆ ಬೇಕಾದಂತಹ ಪ್ರಗತಿಯನ್ನು ನಾವು ಮಾಡಿಕೊಳ್ಳುವುದು ಸಾಧ್ಯವಿದೆಯೆಂಬುದು. ೨ ನೆಯದು ನಮ್ಮಲ್ಲಿಯ **ಅನೈಕ್ಯತೆಯನ್ನು ಹೋಗಲಾಡಿಸಿಕೊಳ್ಳುವದು**. ಆದ್ದರಿಂದ ಈಗಲಾದರೂ ಕನ್ನಡಿಗರು ಎಚ್ಚರಿಸಿಕೊಂಡೆದ್ದು ತಮ್ಮಲ್ಲಿ ಸೇರಿ, ಮನೆ ಮಾಡಿದ ದುರ್ಗುಣಗಳನ್ನು ಹೊಡದೋಡಿಸಬೇಕಲ್ಲವೆ? ನಮ್ಮಲ್ಲಿ ಶಿಸ್ತು ಸಂಘಟನೆಗಳ ಮುಖಾಂತರ ಪ್ರಚಂಡ ಶಕ್ತಿಯನ್ನು ಸಂಗ್ರಹಿಸಬೇಕಲ್ಲವೇ? ಇದಕೆ ನಮ್ಮ ಪೂರ್ವಜರ ಶೌರ್ಯ ಧೈರ್ಯಾದಿಗಳು ಪ್ರೇರಕವಾಗಲಿ!

**ಟೀಪು**—ಈ ಲೇಖನವನ್ನು ಬರೆಯುವದಕ್ಕಾಗಿ ಡಾ ಬಿ ಏ ಸಾಲೆತ್ತೂರ ಪಿ. ಎಚ್. ಡಿ. ಇವರ 'Social and political life in Vijaya Nagar Empre' ಎಂಬ ಪುಸ್ತಕದೊಳಗಿನ ಸಂಗತಿಗಳನ್ನು ತೆಗೆದುಕೊಳ್ಳಲಾಗಿದೆ ಮತ್ತು ಈ ಲೇಖನವನ್ನು ಬರೆದು ಸಿದ್ಧ ಮಾಡುವುದಕ್ಕಾಗಿ ಶ್ರೀ ಪ್ರಲ್ಹಾದರಾವ ಬೆಂಗೇರಿ, ಶ್ರೀ. ಭೀಮರಾವ ನಾಡಕರ್ಣಿ, ಮತ್ತು ಶ್ರೀ. ರಾ. ವೆ. ಕರಗುದರಿ ಇವರ ಸಹಾಯವು ದೊರೆಯದಿದ್ದರೆ ಈ ಕಾರ್ಯವು ಕೊನೆಗಾಣುವುದೇ ಸಾಧ್ಯವಿದ್ದಿಲ್ಲ—[ಲೇಖಕರು]



# ವಿಜಯನಗರದ ಕಾಲದ ಕಲಾಕೌಶಲ್ಯ ಕೈಗಾರಿಕೆಗಳು.

**ಲೇಖಕರು:—ಶ್ರೀ. ಹುಯಿಲಗೋಳ ನಾರಾಯಣರಾಯರು ಬಿ. ಎ., ಎಲ್. ಎಲ್. ಬಿ. ಗದುಗು.**

ವಿಜಯನಗರದ ಸಾಮ್ರಾಜ್ಯದ ವೈಭವವನ್ನು ಕಣ್ಣಾರೆ ಕಂಡು ಬಲ್ಲವರಾದ ಅನೇಕ ಜನ ಪ್ರಯಾಣಿಕರು, ಅದನ್ನು ವಿವಿಧವಾಗಿ ಬಣ್ಣಿಸಿದ್ದಾರೆ ಆ ಮಹನೀಯರಲ್ಲಿ ಇಟಾಲಿಯ ನಿಕೋಲೊ ಡಿ ಕೊಂಟ ಎಂಬ ಪ್ರಯಾಣಿಕನೂ, ಇರಾಣದೇಶದ ವಕೀಲ ಅಬ್ದುಲರಝಾಕ ಸಾಹೇಬನೂ ನೂನಿಝು ಮತ್ತು ಪೇಯೆಸರೆಂಬ ಪೋರ್ತುಗೀಜ ಪ್ರವಾಸಿಗಳೂ ಮುಖ್ಯರಾದವರು, ಇವರಲ್ಲಿ ನಿಕೋಲೊನೂ ಅಬ್ದುಲರಝಾಕನೂ ಇಮ್ಮಡಿ ಇಲ್ಲವೆ ಪ್ರೌಢದೇವರಾಯನ ಆಡಳಿತದಕಾಲದಲ್ಲಿ (ಕ್ರಿ. ಶ ೧೪೨೦—೧೪೪೩) ಮತ್ತು ನ್ಯೂನಿಝುನೂ ಪೇಯೇಸನೂ ಕೃಷ್ಣದೇವರಾಯನಕಾಲದಲ್ಲಿ [ಕ್ರಿ.ಶ ೧೫೦೯--೧೫೩೦] ವಿಜಯನಗರವನ್ನು ನೋಡಿ ನಾನಾವಿಧಗಳಿಂದ ಬಣ್ಣಿಸಿ ಹೇಳಿರುವುದರಿಂದಲೂ ಅವರು ಮಾಡಿದ ವರ್ಣನೆಯೆ ನಂಬಲು ತಕ್ಕವುಗಳಾಗಿರುವುದರಿಂದಲೂ ಈ ಬರೆಹದ ಪ್ರಮಾಣಗಳಾಗಿವೆ ಪ್ರೌಢದೇವರಾಯನ ಕಾಲದಲ್ಲಿಯೆ ಕನ್ನಡ ಭಾರತ [ಗದುಗಿನ ಭಾರತ] ವನ್ನು ರಚಿಸಿದ ಕುಮಾರವ್ಯಾಸಕವಿಶ್ರೇಷ್ಠನು ಇದ್ದಿರಬೇಕೆಂದು ಕರ್ನಾಟಕ ಕವಿಚರಿತೆಯಿಂದ ತಿಳಿದು ಬರುತ್ತಿದ್ದು ಅವನಾದರೂ ತನ್ನ ಕಾಲದಲ್ಲಿ ವಿಜಯನಗರದಲ್ಲಿಯ ಉತ್ಸವಗಳನ್ನು ನೋಡಿ ತನ್ನ ಗ್ರಂಥಗಳಲ್ಲಿಯ ವರ್ಣನೆಗಳನ್ನು ಹೇಳಿರಬೇಕೆಂದು ಊಹಿಸಬಹುದು.

ಇವುಗಳಲ್ಲದೆ ಇನ್ನೂ ಕೆಲವು ಮಹತ್ವದ ಸಂಗತಿಗಳನ್ನು ವಾಚಕರು ತಮ್ಮ ಲಕ್ಷದಲ್ಲಿಟ್ಟುಕೊಂಡಿದ್ದರೆ ವಿಜಯನಗರದಲ್ಲಿಯ ಕಲಾಕೌಶಲ್ಯಗಳೂ ಕೈಗಾರಿಕಗಳೂ ಹೇಗಿದ್ದುವೆಂಬ ಬಗ್ಗೆ ವಿಚಾರ ಮಾಡಲಿಕ್ಕೆ ಅನುಕೂಲವಾಗುವದು. ಮೇಲೆ ಹೇಳಿದ ಪ್ರಯಾಣಿಕರು ವಿಜಯನಗರದ ರಾಜಧಾನಿಯಲ್ಲಿ ಇಪ್ಪತ್ತರಿಂದ ಇಪ್ಪತ್ತೈದು ಲಕ್ಷ ಜನಗಳ ವಸತಿಯಿತ್ತೆಂದು ಬರೆಯುತ್ತಾರೆ, ಇವರಲ್ಲದೆ ರಾಜಧಾನಿಯಲ್ಲಿ ಆಗಾಗ್ಗೆ ಯುಗಾದಿ ಮಹಾನವಮಿ ದೀವಳಿಗೆ ಮೊದಲಾದ ಹಬ್ಬಗಳಲ್ಲಿ ಜರಗುತ್ತಿದ್ದ ಮಹೋತ್ಸವಗಳನ್ನೂ ವೈಭವದ ಮೆರೆವಣಿಗೆಗಳನ್ನೂ ನೋಡುವುದಕ್ಕೆ ಹೊರಗಿಂದ ಬಂದ ಜನಗಳನ್ನೂ ಕೂಡಿಸಿದರೆ ಎಷ್ಟು ಜನಗಳಾಗುತ್ತಿದ್ದರೆಂಬು ಕಲ್ಪಿಸಬಹುದು. ಈ ಜನಗಳಿಗೂ ಅರಮನೆಯಲ್ಲಿಯ ವಿಲಾಸಮಂದಿರಗಳಲ್ಲಿ ಕೆಲಸ ಮಾಡುವ ತಲೆನಾಯಕರೂ ಅವರ ಕೆಳಗೆ ದುಡಿಯುತ್ತಿದ್ದ ಸೇವಕರೂ ಇವರೆಲ್ಲರಿಗೂ ಬೇಕಾಗುತ್ತಿದ್ದ ಸಾಮಾನು ಸುಟ್ಟು ಅರಿವೆ ಅಂಚಡಿ ಕಾಳುಕೂಳುಗಳನ್ನು ಒದಗಿಸಿ ಕೊಡಲಿಕ್ಕೆ ಸಾಕಷ್ಟು ಕೈಗಾರಿಕೆಯವರೂ ವ್ಯಾಪಾರಸ್ಥರೂ ಎಲ್ಲ ತರದ ಕಾಯಕದವರೂ ಬೇಕು ಬೇಕಾಗುತ್ತಿದ್ದರೆಂದು ಸಹಜವಾಗಿ ತಿಳಿಯ ಬೇಕು ಮತ್ತು ಇಂಥ ಮಹೋತ್ಸವಗಳಲ್ಲಿಯೆ ಕೈಗಾರಿಕೆಯವರಿಗೂ ಕಾಯಕದವರಿಗೂ ತಮ್ಮ ತಮ್ಮ ಕಲಾಕೌಶಲ್ಯವನ್ನು ಪ್ರಕಟವಾಗಿ ತೋರಿಸಲಿಕ್ಕೆ ಅನುಕೂಲವಾದ ಸಂಧಿಯು ದೊರೆಯುತ್ತಿತ್ತು ಆಗಿನ ಇಂಥ ಜಾತ್ರೆಗಳ ಈಗಿನ ಪ್ರದರ್ಶನಗಳು (Exhibition) ಆಗಿವೆ.

ರಝಾಕಸಾಹೇಬನು ವಿಜಯನಗರವನ್ನು ನೋಡಲಿಕ್ಕೆ ಹೋದಾಗ್ಗೆ ಮಹಾನವಮಿಯ ಹಬ್ಬವು ಬಂದಿತ್ತು. ತಾನು ಆ ಉತ್ಸವದಲ್ಲಿ ಕಣ್ಣಾರೆ ಕಂಡುದನ್ನು ಬಹು ವಿರಳವಾಗಿ ಬಣ್ಣಿಸಿ ಹೇಳಿದ್ದಾನೆ. ಆ ಉತ್ಸವದಲ್ಲಿ ‘ಅರಸರ ಅಪ್ಪಣೆಯಾದಪ್ರಕಾರ ಸಾಮ್ರಾಜ್ಯದಲ್ಲಿಯ ಎಲ್ಲ ಮುಖ್ಯ ಅಧಿಕಾರಸ್ಥರೂ ಮುಖಂಡರೂ ಒಂದು ವಿಸ್ತಾರವಾದ ಬೈಲಿನಲ್ಲಿ ನೆರೆದಿದ್ದರು ಅಲ್ಲಿ ನಾಲ್ಕು ಇಲ್ಲವೆ ಐದು ಮಹಡಿಗಳುಳ್ಳ ಗುಡಾರಗಳನ್ನು (Pavilions) ಕಟ್ಟಿದ್ದರು ಅವು ಬೇಕಾದ ಹಾಗೆ ಬೇಕಾದ ಕಡೆಗೆ ಗರ್ರನೆ ತಿರುಗುವಂತೆಯೂ ಅವು ತಿರುಗಿದಾಗೆಲ್ಲ ಹೊಸಹೊಸದೊಂದು ಅಂಬಲವು (Hall) ಕಣ್ಣಿಗೆ ಬೀಳುವಂತೆಯೂ ಮಾಡಿದ್ದರು. ಮತ್ತು ಅಲ್ಲಲ್ಲಿ ಬೀದಿಗಳಲ್ಲಿ ಸಿಂಹ, ಹುಲಿ, ಹೊನ್ನಿಗ ಮೊದಲಾದ ಪ್ರಾಣಿಗಳ ಬೊಂಬೆಗಳನ್ನು ಮಾಡಿಟ್ಟು ಅವು ಜೀವಂತ ಪ್ರಾಣಿಗಳಂತೆ ಓಡಾಡುವ ಹಾಗೆ ಮಾಡಿದ್ದರು.’’ ಅದೇ ಕಾಲದಲ್ಲಿದ್ದ ಕುಮಾರವ್ಯಾಸನಾದರೂ ಇವುಗಳನ್ನು ನೋಡಿಯೇ ತನ್ನ ಭಾರತದ

ಆದಿಪರ್ವದಲ್ಲಿ ದ್ರೌಪದೀಸ್ವಯಂವರದ ಸಲುವಾಗಿ ದ್ರುಪದರಾಜನು ಮಾಡಿದ ವ್ಯವಸ್ಥೆಯನ್ನು ವರ್ಣಿಸುವಾಗ್ಗೆ ಕೆಳಗಿನ ಶ್ಲೋಕಗಳನ್ನು ಹೇಳಿದ್ದಾನೆ.

ಝುಳವ ಝೋಂಪಿಪಿ ಬೀಸಿದುವು ತಂ।
ಬೆಲರ, ಬೀಸಣಿಗೆಗಳು ಪರಿಮಳ।
ಕಲಿತ ಮಕರಂದದಲಿ ನಾದಿನ ತುಹಿನರೇಣುಗಳ॥
ಸುಳಿವ ಸುತ್ತಣ ಸಾಲಭಂಜಿಕೆ।
ಗಳಲಿ ಸೂತ್ರಿಸಿ ರಚಿಸಿದರು ಮಂ।
ಗಳದ ರಿಂಗಣ ಝಾಡಿಸಿತು ವೈವಾಹ
ರಚನೆಯಲಿ ॥೦॥

ಬಿಳಿದ ಸುಧೆಗಳ ಬಾವಿಗಳ ಪ।
ಕ್ಕಲೆಯ ಪನ್ನೀರುಗಳ ಹಿಡಿದುವು।
ಹೊಳೆವ ಕೈರಾಟಣದ ಕಾಂಚನ ಮಯದ
ದೋಣಿಗಳ॥

ತಳುಕು ಬಿಗಿದುವು ಕೊಪ್ಪರಿಗೆಗಳ।
ವಳಯದಲಿ ನವ ಯಂತ್ರಗಳ ಪು।
ತ್ತಳಿಗಳೀ ನೀಡುವುವು ಬೇಡಿದವರಿಗೆ ವಸ್ತ್ರಗಳ॥೦॥

ಇದರಲ್ಲಿ ಸೂತ್ರಿಸಿದ ಸಾಲಭಂಜಿಕೆಗಳೂ, ಕೈರಾಟಣವೂ, ಬೇಡಿದವರಿಗೆ ವಸ್ತ್ರಗಳ ನೀಡುವ ನವ ಯಂತ್ರಗಳ ಪುತ್ತಳಿಗಳೂ ರಝುಕಸಾಹೇಬನು ಬಣ್ಣಿಸಿದಂತೆ ಓಡಾಡುವ ಸಿಂಹ ಹುಲಿಗಳ ಪ್ರತಿಮೆಗಳೂ ವಿಜಯನಗರದಲ್ಲಿಯ ಚಿತ್ರಕಾರರ ಜೀನಗಾರರ ಅದ್ಭುತವಾದ ಕಲಾಕೌಶಲ್ಯವನ್ನು ಚನ್ನಾಗಿ ವ್ಯಕ್ತಪಡಿಸುವುದಿಲ್ಲವೆ?

ಕ್ರಿ. ಶಕದ ೧೭೩೦ನೆಯ ಇಸವಿಯಲ್ಲಿ ನೂಲು ತೆಗೆಯುವ ಯಂತ್ರವನ್ನು ವಿಲಾಯತಿಯಲ್ಲಿ ಹುಡುಕಿ ತೆಗೆಯುವ ಮೊದಲು ಜನರು ಕೈರಾಟಿ ಕದಿರುಂಡಿಗೆಗಳಿಂದ ನೂಲನ್ನು ತೆಗೆಯುತ್ತಿದ್ದರು. ಈಗಿನಂತೆ ಆಗಿನ ಕಾಲದಲ್ಲಿ ಗಿರಣಿಗಳಿದ್ದಿಲ್ಲವಾದುದರಿಂದ ಜನರು ತಮ್ಮ ತಮ್ಮ ಮನೆಗಳಲ್ಲಿಯೆ ರಾಟೆ ಕದಿರುಂಡಿಗೆಗಳಿಂದ ನೂಲನ್ನು ತೆಗೆಯುವುದೂ ನೇಯ್ಕಾರರು ಕೈಮಗ್ಗಗಳಿಂದ ಅರಿವೆಗಳನ್ನು ನೇಯುವುದೂ ಮೊದಲಾದ ಕಾಯಕಗಳನ್ನು ಮಾಡುತ್ತಿರಲಿಕ್ಕೆ ಬೇಕ. ಕೃಷ್ಣದೇವರಾಯನು ರಾಯಚೂರ ಕೋಟೆಯನ್ನು ಕೈವಶಮಾಡಿಕೊಳ್ಳಲಿಕ್ಕೆ ಹೋದಾಗ್ಗೆ ಅವನ 'ಛಾವಣಿ' ಯಲ್ಲಿ ದಿನಾಲು ಒಂದು ಸಂತಯೇ ನೆರೆಯುತ್ತಿತ್ತೆಂದೂ ಅಲ್ಲಿ ಎಲ್ಲತರದ ಜನಗಳಿಗೆ ಬೇಕಾಗುವ ನೂಲಿನ ಅರಿವೆಗಳನ್ನು ಮಾರುವ ಅಂಗಡಿಗಳು ಅಸಂಖ್ಯವಾಗಿದ್ದುವೆಂದೂ ನ್ಯೂನಿಝನು ಹೇಳಿದ್ದಾನೆ. ಸೈನಿಕರು ಕವುದಿಯ ಕುಪ್ಪಸಗಳನ್ನು [Quited tunies] ತೊಡುತ್ತಿದ್ದರೆಂದು ನ್ಯೂನಿಝನು ಮತ್ತು ಅರಸನ ಸಭೆಯಲ್ಲಿ ಸಭಾಸದರು ಜಿನುಗಾದ ಅರಿವೆಯ [Fine raiment] ಅಂಗಿಗಳನ್ನು ಹಾಕಿಕೊಂಡಿದ್ದರೆಂದು ರಝುಕಸಾಹೇಬನೂ ಬರೆದಿದ್ದಾನೆ. ಕುದುರೆಗಳಮೇಲೆ ನಯವಾದ ಅರಿವೆಗಳೂ(clothes of fine stuff) ಆನೆಯ ಗೋಡೆಗಳನ್ನು ಮರೆಮಾಡಲು 'ಸೂಸಿ' ಅರಿವೆಗಳೂ ಇದ್ದುವೆಂದು ಹೇಳಿದ್ದಾರೆ. ಈ ಮೊದಲಾದರೂ ಎಂದರೆ ೯ ನೆಯ ಶತಮಾನದಲ್ಲಿ ಸೋಲೆಮಾನನೆಂಬ ಮಹಮ್ಮದೀಯ ಪ್ರವಾಸಿಕನೊಬ್ಬನು ಈ ದೇಶದಲ್ಲಿ [ಈಗಿನ ವಿಜಯನಗರದ ಯುತ್ತ ಪ್ರದೇಶದಲ್ಲಿ] ಬಂದಾಗ್ಗೆ ಉಂಗುರದಲ್ಲಿ ಹಾಯ್ದು ಹೋಗುವಷ್ಟು ಜಿನುಗಾದ ಅರಿವೆಯ ಅಂಗಿಯನ್ನು ನೋಡಿದೆನೆಂದು ಬರೆದಿದ್ದಾನೆ. ಇದೇನೂ ಆಶ್ಚರ್ಯವಲ್ಲ. ಮೊನ್ನೆ ಮೊನ್ನೆ ಬಳ್ಳಾರಿಯಲ್ಲಿ ಜರುಗಿದ ಸ್ವದೇಶೀ ಪ್ರದರ್ಶನದಲ್ಲಿ ಇಂತಹದೊಂದು ಅರಿವೆಯು ಒಂದಿತೆಂಬುದನ್ನು ಎಷ್ಟೋ ಜನರು ನೋಡಿರುತ್ತಾರೆ. ನಾನೂ ಕಣ್ಣಾರೆ ನೋಡಿರುತ್ತೇನೆ. ಎಂದಬಳಿಕ ಇದು ಕಟ್ಟುಕಥೆಯಲ್ಲ. ಇದರಿಂದ ಎಷ್ಟು ಜಿನುಗಾದ ನೂಲು ಹುಟ್ಟುತ್ತಿದ್ದಿತೆಂದೂ ಎಷ್ಟು ನಯವಾದ ವಸ್ತ್ರಗಳನ್ನು ನೇಯುತ್ತಿದ್ದರೆಂದೂ ಸಹಜವಾಗಿ ಕಲ್ಪಿಸಲಿಕ್ಕೆ ಬರುವಂತೆ ಇದೆ.

ರೇಶಿಮೆಯ ವಸ್ತ್ರಗಳಾದರೂ ಇದರಂತೆಯೆ. ಇವುಗಳಿಗೆ ಪಟ್ಟೆಯೆಂದನ್ನುತ್ತಿದ್ದರು. ಚೀನದೇಶದಿಂದ ರೇಶಿಮೆಯು ಬರುತ್ತಿತ್ತೆಂದು ಅದೇ ಪ್ರಯಾಣಿಕರು ಬರೆಯುತ್ತಾರೆ. ಮೈಸೂರಲ್ಲಿಯೂ ರೇಶಿಮೆಯು ಬುನಾದಿಯಿಂದ ಹುಟ್ಟುತ್ತ ಬಂದಿದೆಯೆಂದು ಹೇಳುತ್ತಾರೆ. ಆ ರೇಶಿಮೆಯಿಂದ ಒಳ್ಳೆಯ ನಯವಾದ ಪಟ್ಟೆಗಳನ್ನು ನೇಯಬಲ್ಲ ನೇಯ್ಕಾರರು ಇದ್ದಿರಬೇಕು. ಅರಸನ ದರುಶನಕ್ಕೆ ಹೋದಾಗ್ಗೆ ಅರಸನು ಹಸರು ಮಿರುಗಿನ ಪಟ್ಟೆಯ ನಿಲುವಂಗಿಯನ್ನು ಹಾಕಿದ್ದನೆಂದು ರಝುಕನು ಹೇಳಿದ್ದಾನೆ. ಕೃಷ್ಣದೇವರಾಯನು ಜರದ ಗುಲಾಬಿಯ ಹೂಗಳುಳ್ಳ ಬಿಳಿಯ ಅರಿವೆಯ ಅಂಗಿಗಳನ್ನು ಹಾಕಿಕೊಳುತ್ತಿದ್ದನೆಂದು ಪೇಯಿಸನು ಬರೆಯುತ್ತಾನೆ. [ಕುಮಾರ ವ್ಯಾಸಭಾರತ ಆದಿಪರ್ವ ಸಂಧಿ ೨೮ ಶ್ಲೋಕ ೧೨-೧೪]

"ಮೇಲುಕಟ್ಟಿನ ದಿವ್ಯಚಿತ್ರದು।
ಕೂಲ ನಿಚಯದ ಲೋಲೆಗಳ ಬ।
ಲ್ಲಾಳ ವಡ್ಡಿಯೂಳಿಡೆಗೆಡೆಗೆ ರಂಜಿಸುವ |ಪಟ್ಟಗಳೂ"

'ಕೀಲಿಸಿದ ಪಟ್ಟಗಳ ದಿವ್ಯ ದುಕೂಲದಲ ಹೊಂಬಾಳೆ ತೆರೆಗಳ ಚೂಳಿಕೆ'ಗಳೂ ಆಗಿನ ನೇಯ್ಗಾರರ ನೈಪುಣ್ಯವನ್ನು ಜರಳು ಕಚ್ಚುವಂತೆ ಮಾಡುತ್ತಿರುವುದೇನಾಶ್ಚರ್ಯ?

ಬಂಗಾರ ಬೆಳ್ಳಿಯ ಒಡವೆಗಳಂತೂ ವಿಜಯನಗರದಲ್ಲಿ ಹೇರಳವಾಗಿದ್ದುವು. ಬಂಗಾರಬೆಳ್ಳಿಗಳ ಕೆತ್ತಿಗೆಯ ಕಾಯಕದಲ್ಲಿ ಆಗಿನ ಅಕ್ಕಸಾಲಿಗರು ಪಕ್ವಾನುರಿತವರಾಗಿರಬೇಕು. ಕೃಷ್ಣದೇವರಾಯನ 'ಭಾವಣ'ಯಲ್ಲಿ ದಾರಿಗಂಟೆ ಬಂಗಾರಬೆಳ್ಳಿಗಳ ಆಭರಣಗಳನ್ನು ಮಾಡುತ್ತಿದ್ದರೆಂದು ನ್ಯೂನಿಝನು ಬರೆಯುತ್ತಾನೆ. 'ಭಾವಣಿ'ಯಲ್ಲಿಯೇ ಈ ಬಗೆಯಾಗಿರುವಾಗ ರಾಜಧಾನಿಯಲ್ಲಿಯ ಬಗೆಯನ್ನು ವಾಚಕರ ಕಲ್ಪನೆಗೆ. 'ಆನೆಕುದುರೆಗಳ ಮೇಲಿನ ಬಂಗಾರ ಬೆಳ್ಳಿಯ ಒಡವೆಗಳೂ "ಹೆಂಗಸರು ಧರಿಸಿದ ಬಂಗಾರದ ತೋಡಗಳೂ" "ಇಮ್ಮಡಿ ದೇವರಾಯನು ಕುಳಿತುಕೊಳ್ಳುವ ರತ್ನಖಚಿತವಾದ ಬಂಗಾರದ ಸಿಂಹಾಸನವೂ ಆಗಿನ ಅಕ್ಕಸಾಲಿಗರು ತಮ್ಮ ಕಲೆ ಕೈಗಾರಿಕೆಗಳಲ್ಲಿ ಎಷ್ಟು ಕುಶಲರಿದ್ದರೆಂಬವನ್ನು ವ್ಯಕ್ತಪಡಿಸುತ್ತವೆ. ಪೇಯಿಸನು ಕೃಷ್ಣದೇವರಾಯನ ಅರಮನೆಯನ್ನು ನೋಡಲಿಕ್ಕೆ ಹೋದಾಗ್ಗೆ ಅಲ್ಲಿ ಹನ್ನೆರಡುವರ್ಷದ ಹುಡುಗಯಷ್ಟು ಎತ್ತರವಾದ ಬಂಗಾರದ ಪುತ್ಥಳಿಯನ್ನು ಮಾಡಿಟ್ಟಿದ್ದರೆಂದು ಬರೆಯುತ್ತಾನೆ. "ಬಗೆದ ಮಣಿ ಮುತ್ತುಗಳ ಬಂಗಾರಗಳು" 'ಕಂಭದ ವಜ್ರಮಯದ್ವಾರಗಳು" ವಿಜಯನಗರದ ಅಕ್ಕಸಾಲಿಗರ ಚಾತುರ್ಯವನ್ನು ಹೇಳಿಕೊಡುವವಲ್ಲವೆ! (ಕು. ವ್ಯಾ. ಭಾರತ ಆ. ಪ. ಸಂಧಿ ೨೫)

ಬಣ್ಣಗಳನ್ನು ಮಾಡಲಿಕ್ಕೆ ಬೇಕಾಗುವ ಎಲ್ಲ ತರದ ದ್ರವ್ಯಗಳು ವಿಜಯನಗರದ ಪಕ್ಕದಲ್ಲಿರುವ ಗುಡ್ಡಗಳಲ್ಲಿ ಈಗಲೂ ದೊರೆಯುತ್ತವೆ. ಅವುಗಳಿಂದಲೆ ವಿಜಯನಗರದವರು ಬಣ್ಣಗಳನ್ನು ಮಾಡುತ್ತಿರಬೇಕು. ಪೇಯಿಸನು ಅರಮನೆಯನ್ನು ನೋಡಲಿಕ್ಕೆ ಹೋದಾಗ್ಗೆ ಕೆಲವೆಡೆಗಳಲ್ಲಿ ಬಣ್ಣಕೊಡುವ ಕೆಲಸವು ನಡೆದಿತ್ತೆಂದು ಹೇಳುತ್ತಾನೆ. ಕಲವೆಡೆಗಳಲ್ಲಿ ಕಲ್ಲುಗಳಲ್ಲಿ ಕಟೆದು ಮಾಡಿದ ಎಲೆಗಳ ಒಳತದಲ್ಲಿ ಕೆಂಪು ಬಣ್ಣವನ್ನು ಹಚ್ಚಿದ್ದರಿಂದೂ ಕೆಲವೆಡೆಗಳಲ್ಲಿ ಎಲೆಗಳ ಬೆನ್ನುಗಳಲ್ಲಿ ಕೆಂಪು ಮತ್ತು ನೀಲಿಯ ಬಣ್ಣವನ್ನು ಹಚ್ಚಿದ್ದರಿಂದೂ ಹೇಳುತ್ತಾನೆ. ವಿಜಯವಿಠ್ಠಲರಾಯನ ಗುಡಿಯ ಪಟಾಂಗಣದಲ್ಲಿರುವ ಒಂದು ಮಂಟಪದಲ್ಲಿ ಕೊರೆದ ಗಿಳಿಗಳ ಚಿತ್ರಗಳಲ್ಲಿ ಮೂಗಿಗೆ ಕೆಂಪುಬಣ್ಣವನ್ನೂ ಮೈಗೆ ಹಸರು ಬಣ್ಣವನ್ನೂ ಹಚ್ಚಿದ್ದರೆಂದು ಈಗಲೂ ಕಾಣುತ್ತಿರುವ ಬಣ್ಣಗಳಿಂದ ತಿಳಿಯಲು ಬರುವಂತೆ ಇದೆ. ಶ್ರೀವಿರೂಪಾಕ್ಷದೇವರ ಗುಡಿಯಲ್ಲಿ ಈವರೆಗೂ ಬಣ್ಣದ ಚಿತ್ರಗಳು ಕಂಡು ಬರುತ್ತವೆ. ವಿಜಯನಗರವು ಹಾಳಾಗಿ ನಾಲ್ಕುನೂರು ವರ್ಷಗಳಾಗುತ್ತ ಬಂದರೂ ಅಚ್ಚಳಿಯದೆ ಹಾಗೆ ನಿಂತಿರುವ ಬಣ್ಣಗಳನ್ನು ಮಾಡಿದ ಬಣ್ಣಗಾರರ ಜಾಣ್ಮೆಯನ್ನು ಎಷ್ಟು ವರ್ಣಿಸಿದರೂ ತೀರದು. ಪೇಯಿಸನಾದರೂ ಆಗಿನ ಚಿತ್ರಕಾರರ ಕೌಶಲ್ಯವನ್ನು ವರ್ಣಿಸದೆ ಬಿಟ್ಟಿಲ್ಲ. "ಅರಸನ ಮಂದಿರದ ಬಾಗಿಲದ ಹೊರಗೆ ಎರಡು ಮೂರ್ತಿಗಳಿದ್ದು ಅವುಗಳಿಗೆ ಆಯಾ ಮನುಷ್ಯರ ನಡೆನುಡಿಗಳಿಗನುಸರಿಸಿಯೆ ಬಣ್ಣ ಹಚ್ಚಿದ್ದಾರೆ; ಬಲಪಕ್ಕದಲ್ಲಿರುವುದು ಅರಸನ ತಂದೆಯದು, ಎಡಪಕ್ಕದಲ್ಲಿರುವುದು ಅರಸನದು; ಅವು ಸಜೀವವಾಗಿ ಕಾಣುವಂತೆ ಬಣ್ಣಕೊಟ್ಟಿದ್ದಾರೆ" ಎಂದು ವರ್ಣಿಸಿದ್ದಾನೆ. ಅಲ್ಲದೆ ಮತ್ತೊಂದೆಡೆಯಲ್ಲಿ ಪೋರ್ತುಗೀಜರೂ ಭಿಕ್ಷುಕರೂ ಕುರುಡರೂ ಹೇಗೆ ಇರುತ್ತಾರೆ, ಅವರಿರತಕ್ಕ ನಡಣಿಗಳು ಹೇಗೆ, ಎಂಬುದು ತಿಳಿಯಲೆಂದು ಅರಮನೆಯ ಹೆಂಗಸರ ಸಲುವಾಗಿ ಬರೆಯಿಸಿದ್ದಾರೆ. ಕಂಭದ ಮೇಲಿನ ಜಿಂಕೆ ಮೊದಲಾದ ಪ್ರಾಣಿಗಳ ಮುಖಗಳಿಗೆ ಪಾಟಲ [Pink] ಬಣ್ಣವನ್ನು ಹಚ್ಚಿದ್ದಾರೆಂದೂ ಬರೆಯುತ್ತಾನೆ. ಇವುಗಳಿಂದ ಬಣ್ಣಗಾರರ ಚಾತುರ್ಯವೂ ಎಲ್ಲ ತರದ ಬಣ್ಣಗಳನ್ನು ಮಾಡುವ ಹದವೂ 'ಚೈತನ್ಯಮಯ ಚಿತ್ರಗಳನ್ನು' ಬರೆಯುವ ಚಿತ್ರಕಾರರ ಅಪ್ರತಿಮ ಕೌಶಲ್ಯವೂ ಪ್ರತಿಮೆಗಳನ್ನು ಮಾಡುವ ರೂಪಕಾರರ ನೈಪುಣ್ಯವೂ ಜನಗಳನ್ನು ಬೆರಗುಗೊಳಿಸದೆ ಬಿಟ್ಟಾವೆ?

ಇಪ್ಪತ್ತು ಹರದಾರಿಗಳ ಸುತ್ತಳತೆಯುಳ್ಳ ವಿಶಾಲವಾದ ವಿಜಯನಗರದ ರಾಜಧಾನಿಯಲ್ಲಿ ವಾಸಮಾಡಿಕೊಂಡಿದ್ದ ಎಲ್ಲ ತರದ ಜನಗಳಿಗೆ ಬೇಕಾಗುವಷ್ಟು ನೀರನ್ನು ಪೂರೈಯಿಸಿ ಕೊಡುವ ಸಲುವಾಗಿ ಆಣೆಕಟ್ಟುಗಳನ್ನು ಕಟ್ಟಿ "ಕಲ್ಲಿಗಳಲ್ಲಿ ಉಳಿಯಿಂದ ಕಡಿದು ಮಾಡಿದ ಕಾಲುವೆಗಳನ್ನು [Chiselled Stone

channels] ಪಟ್ಟಣದ ತುಂಬೆಲ್ಲಾ ಹಾಕಿದ್ದಾರೆಂದು ನಿಕೋಲೋನು ಬರೆಯುತ್ತಾನೆ. ಆನೆಗಳಿಗೆ ನೀರು ಕುಡಿಸುವ ೪೨ ಅಡಿಯುದ್ದವಿರುವ ಒಂದೇ ಕಲ್ಲಿನಲ್ಲಿ ಕಡಿದ ದೋಣಿಯನ್ನು ಈಗಲೂ ನೋಡಬಹುದು, ಈ ಕಾಲುವೆಗಳನ್ನೂ ಕಾಣಬಹುದು ಶ್ರೀ ವಿರೂಪಾಕ್ಷದೇವರ ಗುಡಿಯ ಮಾಳಿಗೆಯ ಮೇಲೆ ಒಂದು ಕಾಲುವೆಯನ್ನು ತಂದಿದ್ದಾರೆ. ಈಗಲೂ ಕಾಣುತ್ತಿರುವ ರಾಯಗಾವಲಿ ಮುಂತಾದ ದೊಡ್ಡ ಕಾಲುವೆಗಳು ಈಗಿನ ಹೊಲಗದ್ದೆಗಳಿಗೆ ನೀರನ್ನು ಪೂರಯಿಸಿ ಕೊಡುತ್ತವೆ. ಇವುಗಳೆಲ್ಲವೂ ತುಂಗಭದ್ರಾ ನದಿಗೆ ಹಾಕಿದ ಅಣೆಕಟ್ಟೂ ವಿಜಯನಗರದ ಶಿಲ್ಪಿಗರ (Engineering Skill) ಜಾಣತನವನ್ನು ತೋರಿಸುವುದಿಲ್ಲವೆ? ಹಾಳುಹಂಪೆಯಲ್ಲಿ ಈಗಲು ಕಾಣುತ್ತಿರುವ ಭವ್ಯವಾದ ದೇವಾಲಯಗಳೂ ಕಮಲ ಮಹಲೂ ಆನೆಯ ಸಾಲೂ ವಿಲಾಸಮಂದಿರಗಳೂ ವಿಜಯನಗರದವರ ಶಿಲ್ಪಿಗರ ಶಿಲ್ಪಕಲೆಯ ಮೂರ್ತಿಮಂತವಾದ ಕುರುಹುಗಳಾಗಿವೆ. ಹಜಾರ ರಾಮಸ್ವಾಮಿಯ ಗುಡಿ, ಶ್ರೀ. ವಿರುಪಾಕ್ಷದೇವರ ಗುಡಿ, ವಿಜಯ ವಿಠ್ಠಲದೇವರ ಗುಡಿ ಚಿತ್ರಕೂಟ ಹೇಮಕೂಟ, ಕಡ್ಲೆಕಾಳಗಣಪತಿ, ಉಗ್ರನರಸಿಂಹ ಮೂರ್ತಿ ಮುಂತಾದವು ಶಿಲ್ಪಕಲೆಯ ಕೌಶಲ್ಯವನ್ನು ತೋರಿಸಿ ಕೊಡುವುದಕ್ಕೆಯೇ ಉಳಿದಿವೆಯೆಂದು ಹೇಳಬೇಕಾಗಿದೆ ಪಂಪಾಪತಿಯ ಗುಡಿಯ ಮುಂದಿನ ಬಿಷ್ಟಪ್ಪಯ್ಯನ ಗೋಪುರದ ಕಟ್ಟಡವನ್ನು ನೋಡಿದವರಿಗೆ ಶಿಲ್ಪಕಲೆಯ ಮೇಲ್ಮೆಯೂ ಕಂಡುಬರುವುದು. ಆ ಗೋಪುರದ ಸಲುವಾಗಿ ಉಪಯೋಗಿಸಿದ ಗಚ್ಚು ಈ ಹೊತ್ತಿಗೂ ಕಚ್ಚಾಗದ ಉಳಿದಿರುವುದನ್ನು ನೋಡಿದರೆ ಗಚ್ಚನ್ನು ಮಾಡುವ ಹದವು ಬಹಳ ಚನ್ನಾಗಿರಲಿಕ್ಕೆ ಬೇಕೆಂದು ಕಲ್ಪಿಸಬಹುದು

ವಿಜಯನಗರದಲ್ಲಿ ಕಟ್ಟಡಗಳಿಗೆ ಬೇಕಾಗುವ ಕಟ್ಟಿಗೆಯನ್ನು ಮೈಸೂರ ಪ್ರಾಂತದ ಅಡವಿಗಳಿಂದ ತರುತ್ತಿದ್ದರಂತೆ. ಹೇಗೆಂದರೆ ಕಾಡಿನಲ್ಲಿ ಅವುಗಳನ್ನು ತುಂಗಭದ್ರೆಯಲ್ಲಿ ತೇಲಬಿಟ್ಟು ಅವು ಹರಿಯುತ್ತ ಹರಿಯುತ್ತ ವಿಜಯನಗರದಲ್ಲಿ ಬಂದ ಕೂಡಲೆ ಅವುಗಳನ್ನು ದಂಡೆಗೆ ತೆಗೆಯುತ್ತಿದ್ದರು. ಮರದ ಗೊಂಬೆ ತೊಟ್ಟಿಲ ಮುಂತಾದ ಜನಸಾಮಾನ್ಯಕ್ಕೆ ಬೇಕಾಗುವ ಮರದ ವಸ್ತುಗಳು ವಿಪುಲವಾಗಿರಬೇಕಲ್ಲವೆ? ಅರಮನೆಯಲ್ಲಿ ಮರದ ಕಂಭಗಳಿದ್ದರೂ ಅವುಗಳನ್ನು 'ಸೂಸಿ' ಯಿಂದ ಆಚ್ಛಾದಿಸಿದ್ದರೆಂದು ರಝಾಕನು ಬರೆಯುತ್ತಾನೆ. ಆದರೂ ಅಡ್ಡ ತೊಲೆಗಳಲ್ಲಿ ಹಸ್ತಿದಂತದಲ್ಲಿ ಕೊರೆದ ಚಿತ್ರಗಳನ್ನು ಕೂಡಿಸಿದ್ದರೆಂದು ಬಣ್ಣಿಸಿದ್ದಾನೆ. 'ಅರಮನೆಯಲ್ಲಿ ಕೇವಲ ಹಸ್ತಿದಂತದಿಂದ ರಚಿಸಿದ ಕೊರಡಿಯೊಂದಿತ್ತೆಂದೂ ಆ ಮಂದಿರದ ಅಡ್ಡ ತೊಲೆಗಳಲ್ಲಿ ಹಸ್ತಿದಂತದ ಕಮಲ ಮತ್ತು ಗುಲಾಬಿಯ ಹೂಗಳನ್ನು ಕೊಟ್ಟಿದ್ದರೆಂದೂ ಅವುಗಳ ಚಂದವನ್ನು ವರ್ಣಿಸಲಿಕ್ಕೆ ಬಾರದೆಂದೂ ಪೇಯಿಸನೂ ಬರೆದಿದ್ದಾನೆ. ಇವುಗಳಿಂದ ಹಸ್ತಿದಂತದ ಕೈಗಾರಿಕೆಯೂ ಕಲಾಕೌಶಲ್ಯವೂ ಎಲ್ಲಿಯವರೆಗೆ ಹೋಗಿದ್ದಿತೆಂಬುದನ್ನು ವಾಚಕರ ಕಲ್ಪಿಸಲಿ!

ಅಲ್ಲಲ್ಲಿ ಮಂದಿರದ ಮೆಟ್ಟಲುಗಳಲ್ಲಿ ತಾಮ್ರದ ತಗಡುಗಳನ್ನು ಹೊಂದಿಸಿದ್ದರೆಂದೂ ಕೆಲವೆಡೆಗಳಲ್ಲಿ ಬಂಗಾರದ 'ಮೊಲಾಮು' ಮಾಡಿದ್ದರೆಂದೂ ಪೇಯಿಸನು ಹೇಳಿದ್ದಾನೆ. ಅರಮನೆಯ ಮತ್ತೊಂದು ಭಾಗದಲ್ಲಿ ಬೆತ್ತದಿಂದ ಹೆಣೆದ ಒಂದು ಮಂಟಪವನ್ನು ಮಾಡಿ ಅದನ್ನು ಮುತ್ತುಮಾಣಿಕಗಳಿಂದ ಕೆಚ್ಚಿದ್ದರೆಂದೂ ವರ್ಣಿಸಿದ್ದಾನೆ. ವಿಜಯನಗರಕ್ಕೊಳಪಟ್ಟಿದ್ದ ಕನ್ನಡ ಜಿಲ್ಹೆಗಳಲ್ಲಿ ವಿಪುಲವಾಗಿ ದೊರೆಯುತ್ತಿರುವ ಬೆತ್ತಗಳನ್ನು ಈ ಕೆಲಸದ ಸಲುವಾಗಿ ಉಪಯೋಗಿಸುತ್ತಿರಲಿಕ್ಕೆ ಸಾಕು ಸೈನ್ಯಕ್ಕೆ ಬೇಕಾಗುವ ಮದ್ದುಗುಂಡುಗಳು, ಮದ್ದನ್ನು ತಯಾರಮಾಡಲಿಕ್ಕೆ ಬೇಕಾಗುವ ಸೋರುಪ್ಪು ಮೊದಲಾದವುಗಳ ಮಾಡುವ ಹದವೂ ವಿಧಾನಗಳೂ ವಿಜಯನಗರದವರಿಗೆ ಚನ್ನಾಗಿ ಗೊತ್ತಿರಲಿಕ್ಕೆ ಬೇಕು.

ಅಲ್ಲಿಯೆ ವಿಜಯನಗರದ ಪಕ್ಕದಲ್ಲಿಯೆ ಇರುವ ಸೊಂಡೂರ ಗುಡ್ಡಗಳಲ್ಲಿ ಕಬ್ಬಿಣದ ಲೋಹದ ಕಲ್ಲುಗಳು ಹೇರಳವಾಗಿ ಈಗಲೂ ದೊರೆಯುತ್ತವೆ ಅವುಗಳನ್ನು ತಂದು ಜನರು ಬೇರೆ ಬೇರೆಯಾಗಿ ಸೋಸಿ ಉತ್ತಮವಾದ ಕಬ್ಬಿಣವನ್ನೂ ಉಕ್ಕನ್ನೂ ತಯಾರಮಾಡುತ್ತಿದ್ದರು. ಅವುಗಳಿಂದ ಖಡ್ಗ ಭಾಲ್ಲೆ ಬರ್ಚಿ ಮೊದಲಾದ ಯುದ್ಧದ ಆಯುಧಗಳನ್ನೂ ತಯಾರಮಾಡುವ 'ಕಾರಖಾನೆ' ಗಳಿರಬೇಕಲ್ಲವೆ? ಈಗಿನಂತೆ ದೊಡ್ಡ ಪ್ರಮಾಣದಿಂದ ನಡೆಯುವ 'ಕಾರಖಾನೆಗಳಿಲ್ಲದಿದ್ದರೂ' ಸಣ್ಣಸಣ್ಣ ಕೈ ಕಾರಖಾನೆಗಳಿದ್ದೇ ಇದ್ದವು. ಮಹಾನವಮಿಯ ಉತ್ಸವದಲ್ಲಿ ಮದ್ದುಗಳನ್ನು ಹಾರಿಸಿದ್ದನ್ನೂ ಸೈನಿಕರ ಮೆರೆವಣಿಗೆ

ಯಲ್ಲಿ ಅವರ ಕೈಗಳಲ್ಲಿ ಆಯುಧಗಳನ್ನು ನೋಡಿದ ಬಗ್ಗೆ ರಝಾಕನೂ ಪೇಯಿಸನೂ ತಮ್ಮ ಇತಿಹಾಸ ದಲ್ಲಿ ಬರೆದಿಟ್ಟಿದ್ದಾರೆ.

ವಿಜಯನಗರದಲ್ಲಿ ಕಾಗದಗಳಿದ್ದಿಲ್ಲವೆಂದು ಈ ಪ್ರಯಾಣಿಕರು ಬರೆಯುತ್ತಾರೆ ತಾಡವಾಲಿಗಳ ಮೇಲೆ ಉಕ್ಕಿನಕಡ್ಡಿ [ಕಂಠ] ಯಿಂದ ಬರೆಯುತ್ತಿದ್ದರೆಂದು ಬರೆದಿದ್ದಾರೆ. ಕುಮಾರವ್ಯಾಸನೂ 'ಕಂಠ ಪತ್ರದ ಉಲುಹುಗಡಪಗ್ಗಳಿಕೆ' ಎಂದು ಬರೆದಿರುವದರಿಂದ ತಾಡವಾಲಿಗಳಮೇಲೆ ಬರೆಯುವುದು ಬಹಳ ರೂಢಿಯಲ್ಲಿತ್ತೆಂದು ಹೇಳಬಹುದು. ಆಗಿನಕಾಲದಲ್ಲಿ 'ಕಡತ' ವೆಂಬುದೊಂದು ಬರೆಯುವ ಸಾಧನವಿತ್ತು. ಅರಿವೆಯ ತುಂಡನ್ನೊಂದು ತೆಗೆದುಕೊಂಡು ಅದರ ಮೇಲೆ ಜಿಗುಟಾದ ಕಪ್ಪು ಬಣ್ಣವನ್ನು ಬೋಳಿಯುತ್ತಿದ್ದರು. ಅದು ಒಣಗಿದ ಬಳಿಕ ಅದರ ಮೇಲ ಬಿಳಿಯ 'ಬಾಳಪ್ಪ' ಎಂಬ ಮಿದುವಾದ ಕಲ್ಲಿನ ಕಡ್ಡಿಯಿಂದ ಬರೆಯುತ್ತಿದ್ದರು. ಇದನ್ನಾದರೂ ಈ ಪ್ರಯಾಣಿಕರೆ ಬರೆದುದು. ಕಲ್ಲುಗಳ ಮೇಲೂ ತಾಮ್ರ ಪಟಗಳ ಮೇಲೂ ಬರೆಯುತ್ತಿದ್ದರೆಂಬುದು ಶಿಲಾಲಿಪಿ ತಾಮ್ರ ಪಟಗಳಮೇಲಿಂದ ಸಿದ್ಧವಾಗುತ್ತದೆ.

ಇವುಗಳಲ್ಲದೆ ಸಂಗೀತಕಲೆ, ನೃತ್ಯಕಲೆ, ಯಂತ್ರ ಕಲೆಗಳೂ ಒಂದಲ್ಲ ಎರಡಲ್ಲ ನೂರಾರು ಬಗೆಯ ಕೈಗಾರಿಕೆಗಳೂ ಇದ್ದುವೆಂದು ಸಿದ್ಧಮಾಡಬಹುದು ಈ ಚಿಕ್ಕಲೇಖದಲ್ಲಿ ಎಲ್ಲವನ್ನೂ ವಿಸ್ತಾರಮಾಡಿ ಹೇಳುವುದು ಆಗದು.

ಎಂದಬಳಿಕ ಈ ರೀತಿಯಾಗಿ ಬೆರಗುಗೊಳಿಸುವಂತಹ ಕಲಾಕೌಶಲ್ಯ ಕೈಗಾರಿಕೆಗಳುಳ್ಳ ವಿಜಯನಗರದ ವೈಭವವನ್ನು ಓದಿ ಪ್ರತಿಯೊಬ್ಬ ಹಿಂದೀಯನೂ ಅದರಲ್ಲಿ ವಿಶೇಷವಾಗಿ ಪ್ರತಿಯೊಬ್ಬ ಕನ್ನಡಿಗನೂ ಅಭಿಮಾನ ಪಡಬೇಕು.

---

# ವಿಜಯನಗರ ಸಾಮ್ರಾಜ್ಯದ ವೈಭವ.

**ಲೇಖಕರು:- ಶ್ರೀ. ದೇಶಪಾಂಡೆ ಗಂಗಾಧರರಾಯರು ಬೆಳಗಾವಿ**

ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಯ ಸುಮಾರಕ್ಕೆ ಮುಸಲ್ಮಾನರ ರಾಜ್ಯ, ಅವರ ಧರ್ಮ ಮತ್ತು ಅವರ ಸಂಸ್ಕೃತಿಗಳ ಪ್ರಭಾವ ಉತ್ತರ ಹಿಂದುಸ್ಥಾನವನ್ನೆಲ್ಲ ವ್ಯಾಪಿಸಿತ್ತು. ವಿಜಯನಗರ ಸಾಮ್ರಾಜ್ಯವು ಉದಯವಾಗಿ ಅದು ಪ್ರಭಾವಶಾಲಿಯಾಗತೊಡಗಿದಂತೆ ಮುಸಲ್ಮಾನರ ವರ್ಚಸ್ಸು ಕಡಿಮೆಯಾಯಿತು. ಅವರ ಏರಾಟವು ಕುಗ್ಗಿತು ಇದೇನೋ ನಿಜ. ಆದರೆ ಕೇವಲ ಹಿಂದೂಧರ್ಮವನ್ನು ಸಂರಕ್ಷಿಸುವದಕ್ಕಾಗಿ, ಮುಸಲ್ಮಾನ ಧರ್ಮದ ಪ್ರಸಾರವನ್ನು ತಡೆಯುವದಕ್ಕಾಗಿಯೆ ವಿಜಯನಗರ ಸಾಮ್ರಾಜ್ಯವು ಸ್ಥಾಪಿಸಲ್ಪಟ್ಟಿತೆಂದು ಹೇಳಲಿಕ್ಕಾಗದು ಜಗತ್ತಿನೊಳಗೆ ಸಾಮ್ರಾಜ್ಯಗಳನ್ನು ಸ್ಥಾಪಿಸುವಲ್ಲಿ ಕಂಡು ಬರುವ ಉದ್ದಿಶ್ಯಗಳೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಬುಡದಲ್ಲಿಯೂ ಇದ್ದಿರಲಿಕ್ಕೆ ಬೇಕು ಬೇರೆ ಬೇರೆ ಧರ್ಮದ ಅನುಯಾಯಿಗಳು ತಂತಮ್ಮ ಧರ್ಮದ ಢಾಲು ಮುಂದೆ ಮಾಡಿಕೊಂಡು ತಮ್ಮ ಮಹತ್ವಾಕಾಂಕ್ಷೆಗಳನ್ನು ತೃಪ್ತಗೊಳಿಸಲಿಕ್ಕೆ ಯತ್ನಿಸುವರು. ಒಂದೇ ಧರ್ಮದ ಜನರಾದರೂ ಧರ್ಮದ ಹೆಸರಿನಿಂದಲೆ ತಮ್ಮತಮ್ಮೊಳಗೆ ಜಗಳಾಡುತ್ತಿರುವದನ್ನು ನಾವು ಕಾಣುತ್ತೇವೆ. ಈ ಮಾತಿಗೆ ಇತಿಹಾಸದಲ್ಲಿ ಉದಾಹರಣೆಗಳು ದೊರೆಯುತ್ತವೆ. ಮತ್ತು ಸದ್ಯದಕಾಲದಲ್ಲಿ ನಡೆದ ಸಂಗತಿಗಳಿಂದಲೂ ಈ ಮಾತಿಗೆ ಪುಷ್ಟಿಯೇ ದೊರೆಯುತ್ತದೆ.

ಯಾವುದಾದರೊಂದು ಸಾಮ್ರಾಜ್ಯದ ಇಲ್ಲವೆ ವ್ಯಕ್ತಿಯ ಯೋಗ್ಯತೆಯನ್ನು ಆಯಾ ಕಾಲದ ಪರಿಸ್ಥಿತಿಯನ್ನು ಅನುಲಕ್ಷಿಸಿ ನಿರ್ಣಯಿಸತಕ್ಕದ್ದು ೩೦೦ ವರ್ಷಗಳ ಹಿಂದಿನ ಸಾಮ್ರಾಜ್ಯವನ್ನು ಈಗಿನ ಕಾಲದ ಸಾಮ್ರಾಜ್ಯಗಳೊಡನೆ ಹೋಲಿಸಿ ಅದರ ವಿಷಯಕವಾಗಿ ಅಭಿಪ್ರಾಯವನ್ನು ವ್ಯಕ್ತಮಾಡುವುದು ಸಯುಕ್ತಿಕವಾಗಲಾರದು ಇದರಂತೆಯೇ ವ್ಯಕ್ತಿಯ ಮಾತು. ವಿಜಯನಗರ ಸಾಮ್ರಾಜ್ಯ ಮತ್ತು ಅದನ್ನು ಸ್ಥಾಪಿಸಿದ ಶ್ರೀವಿದ್ಯಾರಣ್ಯ ಮುನಿಯ ಯೋಗ್ಯತೆ ಮತ್ತು ಈಗಿನ ರಶಿಯದ ರಾಜ್ಯಪದ್ಧತಿ (ಅದಕ್ಕೆ ಸಾಮ್ರಾಜ್ಯವೆನ್ನಲು ಬರಲಾರದು.) ಮತ್ತು ಅದನ್ನು ನೆಲೆಗೊಳಿಸಿದ ಲೆನಿನ್, ಟ್ರಾಟ್ಸ್ಕಿ, ಸ್ಟಾಲಿನ್ ಇಲ್ಲವೆ ಗಾರ್ಕಿ ಇವರ ಯೋಗ್ಯತೆ ಪರಸ್ಪರ ಭಿನ್ನ ಭಿನ್ನವಾಗಿರುವವು.

ಜಗತ್ತಿನೊಳಗಿನ ಈಗಿನ ಕಾಲದಲ್ಲಿಯ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಲ್ಪನೆಗಳು ವಿಜಯನಗರ ಸಾಮ್ರಾಜ್ಯದ ಕಾಲದಕಿಂತಲೂ ತೀರ ಬೇರೆಯಾಗಿವೆ ಈ ಕ್ರಮವು ಹೀಗೆಯೇ ಸಾಗುವದು. ಆದುದರಿಂದ ವಿಜಯನಗರ ಸಾಮ್ರಾಜ್ಯದ ಮಹತ್ವವನ್ನು ಇಲ್ಲವೆ ಯೋಗ್ಯತೆಯನ್ನು ಅರಿತುಕೊಳ್ಳಬೇಕಾದರೆ ಆಗಿನ ಕಾಲವನ್ನು ಲಕ್ಷ್ಯದಲ್ಲಿ ತರಬೇಕಾಗುವದು ಈ ದೃಷ್ಟಿಯಿಂದ ನೋಡಿದರೆ ಕರ್ನಾಟಕದ ಇತಿಹಾಸದಲ್ಲಿ ಆ ಸಾಮ್ರಾಜ್ಯವು ಅತ್ಯಂತ ವೈಭವಸಂಪನ್ನವಾಗಿತ್ತೆಂದು ಒಪ್ಪಲೇಬೇಕು. ಆ ಕಾಲದ ಶಿಲಾಲೇಖಗಳು ಶಾಸನಪತ್ರಗಳು ತಾಮ್ರಪತ್ರಗಳು ಮೊದಲಾದ ಐತಿಹಾಸಿಕ ಸಾಧನಗಳು ಸ್ವಲ್ಪಮಟ್ಟಿಗೆ ಉಪಲಬ್ಧವಾಗಿವೆ ಈಗಿನಂತೆ ಆಗಿನಕಾಲದಲ್ಲಿ ಒಂಟಿಯ ಒಜ್ಜಯನ್ನು ಐತಿಹಾಸಿಕ ಸಂಗತಿಗಳನ್ನು ವರ್ಣಿಸುವ ಪುಸ್ತಕಗಳನ್ನು ಬರೆದಿಡುವ ಪರಿಪಾಠವಿದ್ದಿಲ್ಲ ಆದುದರಿಂದ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು, ವೈಭವವನ್ನು ಬೆಳಕಿಗೆ ತರುವಷ್ಟು ಸಾಕಷ್ಟು ಸಾಧನಗಳು ದೊರೆಯಲಾರವು ಕೆಲವು ನಷ್ಟವಾಗಿ ಹೋಗಿವೆ. ಕೆಲವನ್ನು ಇನ್ನೂ ಸಂಶೋಧಿಸಿ ಗೊತ್ತುಹಚ್ಚಬಹುದು ಆದರೂ ಸದ್ಯದಲ್ಲಿಯೂ ಉಪಲಬ್ಧವಿರುವ ಮೇಲಿನ ಅಲ್ಪಸ್ವಲ್ಪ ಸಾಧನಗಳಿಂದಲೂ, ಆ ಸಾಮ್ರಾಜ್ಯದ ವಿಸ್ತಾರ, ಆಗಿನಕಾಲದ ವೀರರು ತೋರಿಸಿದ ಪರಾಕ್ರಮ, ಪ್ರತೀಕಾರ ಮಾಡುವ ಆಗಿನ ಜನರಲ್ಲಿರುವ ಶಕ್ತಿ, ಆಗಿನಕಾಲದಲ್ಲಿ ವಾಙ್ಮಯಕ್ಕೆ ದೊರೆತಿರುವ ಉತ್ತೇಜನ, ಪ್ರಜೆಗಳ ಕಲ್ಯಾಣಕ್ಕೋಸುಗ ಆಗಿನ ಹಲವು ಅರಸರು ತಾಳಿದ ಧೋರಣ, ಕಲಾಕೌಶಲ್ಯಕ್ಕಾಗಿ ದೊರೆತ ಪ್ರೋತ್ಸಾಹನ ಮುಂತಾದ ಸಂಗತಿಗಳು ಸ್ಪಷ್ಟವಾಗಿ ಕಂಡುಬರುತ್ತಿವೆ ಅವನ್ನು ನೆನೆದರೂ ಯಾವ ಕನ್ನಡಿಗನಿಗೆ ಅಭಿಮಾನವೆನಿಸಲಿಕ್ಕಿಲ್ಲ! ಆ ಕಾಲದಲ್ಲಿ ಹಿಂದುಸ್ಥಾನಕ್ಕೆ ಪರದೇಶದಿಂದ ಬಂದ ಪ್ರವಾಸಿಕರೂ ಕೂಡ ಆ ಸಾಮ್ರಾಜ್ಯದ ವೈಭವದ ವರ್ಣನೆಯನ್ನು ಅತಿ ಸರಸವಾಗಿ ಮಾಡಿದ್ದಾರೆ. ಮಧ್ಯಏಶಿಯಾದಿಂದ ಅಬದುಲ್‌ರಝುಕ್ ಎಂಬ ಮುಸಲ್ಮಾನ ಪ್ರವಾಸಿಯು ಆ ಕಾಲಕ್ಕೆ ಹಿಂದುಸ್ಥಾನಕ್ಕೆ ಬಂದಿದ್ದನು ಆತನು ಬೇಲೂರಲ್ಲಿಯ ಪ್ರಸಿದ್ಧ ಚನ್ನಕೇಶವ ದೇವಾಲಯದ ವರ್ಣನೆಯನ್ನು ಕೊಟ್ಟು ವಿಜಯನಗರದ ರಾಜಧಾನಿಯನ್ನು "ಇಡೀಜಗತ್ತಿನಲ್ಲಿಯೇ ನಾನು ಇಂತಹ ಸುಂದರ ನಗರವನ್ನು ಎಲ್ಲಿಯೂ ಕಂಡಿಲ್ಲ" ಎಂದು ವರ್ಣಿಸಿದ್ದಾನೆ. ಇದರಂತೆಯೇ ಪೀಜಎಂಬ ಪೋರ್ತುಗೀಜ ಪ್ರವಾಸಿಯೂಕೂಡ ವಿಜಯನಗರದ ವರ್ಣನೆಯನ್ನು ಮಾಡಿದ್ದಾನೆ ಅವನು ಕೃಷ್ಣದೇವರಾಯನ ವಿಷಯಕ್ಕೆ ಹೇಳುವಾಗ್ಗೆ ಅವನು ತನ್ನ ಶತ್ರುಗಳ ವಿಷಯವಾಗಿಯೂ ದಾಕ್ಷಿಣ್ಯವನ್ನು ತಾಳುತ್ತಿದ್ದನಲ್ಲದೆ ಅವನು ವಿದ್ಯಾಪಕ್ಷಪಾತಿಯೂ, ಪ್ರಜಾವತ್ಸಲನೂ ಆಗಿದ್ದನೆಂದು ಬರೆದಿರುವನು.

ವಿಜಯನಗರದ ಸಾಮ್ರಾಜ್ಯವು ಕರ್ನಾಟಕ ಮತ್ತು ಆಂಧ್ರ ಈ ಎರಡೂ ಪ್ರಾಂತಗಳಲ್ಲಿ ಹಬ್ಬಿಕೊಂಡಿತ್ತು. ಎರಡೂ ಪ್ರಾಂತಗಳಲ್ಲಿಯೂ ಆ ಸಾಮ್ರಾಜ್ಯದ ವಿಷಯಕವಾಗಿ ಆದರವಿತ್ತು ಅದು ತಮ್ಮದೆಂದು ಉಭಯ ಪ್ರಾಂತದವರೂ ಅಭಿಮಾನಪಡುತ್ತಿದ್ದರು. ಈಗ್ಯೂ ಆಂಧ್ರರೂ ಕೂಡ ಆ ಸಾಮ್ರಾಜ್ಯವು ತಮ್ಮದೇ ಆಗಿತ್ತೆಂದು ಹಕ್ಕು ಹೇಳುತ್ತಿರುವರೆಂಬುದನ್ನು ಮರೆಯತಕ್ಕದ್ದಲ್ಲ ಇದೆಂಥ ಅಭಿಮಾನದ ವಿಷಯ! ಅಂದಮೇಲೆ ಸೂರ್ಯನಾರಾಯಣರಾಯರನ್ನುವಂತೆ ಆ ವಿಜಯನಗರ ಸಾಮ್ರಾಜ್ಯವು ಎಂದಿಗೂ ಮರೆಯದಂಥ ಸಾಮ್ರಾಜ್ಯವೇ ಆಗಿದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

---

# ವಿಜಯನಗರ ಸಾಮ್ರಾಜ್ಯದಲ್ಲಿ ಸ್ತ್ರೀಯರ ಸ್ಥಾನ.

**ಬರೆದವರುಃ—ಶ್ರೀ. ಎಸ್. ವ್ಹಿ. ಅಡ್ಡಣಗಿ ಬಿ ಎ. ಎಲ್. ಎಲ್. ಬಿ ಬೆಳಗಾವಿ**

ವಿಜಯನಗರ ಸಾಮ್ರಾಜ್ಯದ ಸಮಗ್ರ ಇತಿಹಾಸವನ್ನು ಓದಿದವರಿಗೆ ಅಥವಾ ಅದರ ಸರ್ವ ಸಂಗತಿಯನ್ನು ಕೇಳಿದವರಿಗೆ, ಇಲ್ಲವೆ ಅಲ್ಲಿಗೇ ಹೋಗಿ, ಅಲ್ಲಿಯ ಗತವೈಭವದ ಅವಶೇಷಗಳನ್ನು ಕಣ್ಣಾರೆ ಕಂಡವರಿಗೆ, ಯಾವುದೋ ಒಂದು ಅನಿರ್ವಚನೀಯ ಹೃದಯದನುಕಂಪನವು ಎದೆಯನ್ನಾವರಿಸಿ ಕಂಬನಿಯ ಮಳೆಗರೆಯದ ಬಿಡದು. ಅದು ಇಲ್ಲಿಗೇ ಕೊನೆಗಾಣದೆ, ಹೃದಯದಲ್ಲಿ ಅನವರತವಾಗಿ, ಅವ್ಯಾಹತವಾಗಿ, ಅಲೆದಲೆದು, ಓದಿದ, ಕೇಳಿದ, ಕಣ್ಣಾರ ಕಣ್ಣಿಣಿಯೆ ಕಾಡ ಸಂಗತಿಗಳ ದಿವ್ಯವಾದ ಚಿತ್ರಗಳನ್ನು ಚಿತ್ತನಯನದ ಮುಂದೆ ತೆರೆತೆರೆಯಾಗಿ ಚಿತ್ರಿಸುವದು. ಯಾವುದನ್ನು ಕಂಡರೂ, ನೆನೆದರೂ, ಎಲ್ಲವೂ ತನತನಗೆ ಚಂದವಾಗಿ, ಅಂದವಾಗಿ ನಯನಗಳಿದುರಿಗೆ ನಲಿಯುವವು ಮನಸ್ಸು "ಯಾವುದು ಗ್ರಹಿಸಲಿ? ಯಾವುದನ್ನು ಬಿಡಲಿ?" ಎಂದು ಬಪ್ಪಾಗಿ ನಿಲ್ಲುವದು. ಆಳವಾಗಿ, ಗಂಭೀರವಾಗಿ ಹರಿಯುವ ಮಹಾನದಿಯಂತೆ, ವಿಜಯನಗರ ಸಾಮ್ರಾಜ್ಯವು ಕಣ್ಣುಗಳ ಮುಂದ ತೇಲ ಹೋಗುವದು

ಈ ಸಾಮ್ರಾಜ್ಯದಲ್ಲಿ ಬಗೆಸಳೆವ ಅನೇಕಾನೇಕ ಚಿತ್ರಗಳಲ್ಲಿ ಸ್ತ್ರೀಯೂ ಒಂದು ಮೋಹಕವಾದ ಮನೋಹರವಾದ. ರಮಣೀಯ ಚಿತ್ರವು ವಿಜಯನಗರದ ಕಾಲವಲ್ಲಿಯ ಸ್ತ್ರೀಯ ಘನತೆಯನ್ನು ಕಂಡಾಗ ಇಂದಿನ ನಮ್ಮ ದುರವಸ್ಥೆಯಲ್ಲಿ "ಸ್ತ್ರೀಯ ಪದವಿಯು ಆ ಕಾಲದಲ್ಲಿ ನಿಜವಾಗಿ ಹೀಗೆ ಇತ್ತೇ" ಎಂದು ಮನಸ್ಸು ಬೆರಗಗೊಳ್ಳುವದು. ಅಲ್ಲದೆ, 'ದೇವತೆಗಳ, ಅಪ್ಸರೆಯರ ಲೋಕವೇ ತನ್ನ ಸಕಲ ವೈಭವದೊಂದಿಗ ಇಂದು ಹಾಳಾಗಿ ರಣಗುಡುವ ಭೂಮಿಗೆ ಅವತರಿಸಿರುವುದೇ?' ಎಂಬ ಭ್ರಮೆಯುತ್ಪನ್ನವಾಗುವದು. 'ಸ್ತ್ರೀರೂಪಮೆ ರೂಪಂ' ಎಂದು ನೇಮಿಚಂದ್ರನು ಹಾಡಿದಂತೆ, ಸ್ತ್ರೀರೂಪ ಮೊದಲೇ ಸುಂದರವಾದುದೂ, ಅದರ ಜೊತೆಗೆ ಸಕಲ ವೈಭವವೂ, ಒಡಗೂಡಿ ಮುಂದೆ ಬಂದು ನಿಲ್ಲಲು, 'ದೇವರೆ' ನನ್ನನ್ನು ಬಿಡುಗಂಣನನ್ನು ಮಾಡು' ಎಂದುಬೇಡಿಕೊಳ್ಳುವಂತಾಗುವದು. ವಿಜಯನಗರದ ಕಾಲದಲ್ಲಿ ಸ್ತ್ರೀಯು ಅಷ್ಟು ಪರಿಪೂರ್ಣಾವಸ್ಥೆಯನ್ನು ಹೊಂದಿದ್ದಳು.

ವಿಜಯನಗರ ಕಾಲದ ಸ್ವಲ್ಪ ಪೂರ್ವದಲ್ಲಿಯೇ ಸ್ತ್ರೀಯರಿಗೆ ಅನುಕೂಲ ವಾತಾವರಣವು ಸುಳಿಯುತ್ತಿತ್ತು. ಮೆಗಾಸ್ಥೆನೀಸನ ಕಾಲದಲ್ಲಿ ಅರಸರ ಶರೀರ ರಕ್ಷಣೆಯು ಹೆಂಗಳೆಯರ ಕಡೆಗೇ ಇತ್ತು. ಹರ್ಷವರ್ಧನನ ಹಾಗೂ ಬಾಣನ ಕಾಲದಲ್ಲಿ ಕೂಡ ಇದು ಬಳಿಕೆಯಲ್ಲಿತ್ತು. ಆಗ ರಾಜಕನ್ಯೆಯರು ನರ್ತನ, ಗಾಯನಗಳಲ್ಲಿ ಕೂಡ ನಿರತರಿದ್ದರೂ, ಮನೆಗೆಲಸಗಳನ್ನು ಸ್ವತಃ ಮಾಡುತ್ತಿದ್ದರು ದಕ್ಷಿಣ ಹಿಂದುಸ್ತಾನದಲ್ಲಿ ಸ್ತ್ರೀಯರು ಆಗ ಕೂಡ ಆಗಾಗ ಧಾರ್ಮಿಕ, ರಾಜಕೀಯ ಕಾರಣಗಳ ಕೆಲಸದಲ್ಲಿರುವ ರೂಢಿಯಿತ್ತು. ಇ. ಸ. ೯೧೮ ರಲ್ಲಿಯ ಶಿಲಾಶಾಸನಗಳು, ಸ್ತ್ರೀಯರು ರಾಜ್ಯಸೂತ್ರ ಚಾಲಕರಿದ್ದ ಬಗ್ಗೆ ಉಲ್ಲೇಖಿಸುತ್ತವೆ. ಜಕ್ಕಿಯಬ್ಬೆಯು ರಾಜ್ಯಕಾರ್ಯ ಪ್ರವೀಣಳು; ರಾಣಿ ಸೋಮಲದೇವಿಯು ಮಂತ್ರಿ ಇದ್ದ ಬಗ್ಗೆ ಇ. ಸ ೧೦೬೬ ರ ಶಿಲಾಲೇಖ ಹೇಳುವದು. ರುದ್ರಾಂಬೆಯೆಂಬವಳು ರಾಜ್ಯವನ್ನಾಳಿದಂತೆ ಇ. ಸ. ೧೨೬೦ರ ಶಿಲಾಶಾಸನ ಹೇಳುವದು. ದಕ್ಷಿಣಭಾರತದ ಮಹಿಳೆಯರು ಒಳ್ಳೇ ಯಶಸ್ವಿಯಾಗಿ ಧರ್ಮಸಂಸ್ಥೆಗಳ ಕಾರಭಾರವನ್ನು ದಕ್ಷತಯಿಂದ ಮಾಡಿದ ಉಲ್ಲೇಖಗಳೂ ಇವೆ. ಇದಕ್ಕೆ ಇ. ಸ ೧೫೫೫ ರ ಶಿಲಾಶಾಸನಗಳೇ ಸಾಕ್ಷಿ. ಕುಂಜಶೆಟ್ಟಿಯ ಕುಮಾರಿಯಾದ ಗಣಕುಮಾರಿ ಚಂದವ್ವೆಯು ಕುಂಜೇಶ್ವರ ದೇವಸ್ಥಾನದ ವ್ಯವಸ್ಥಾಪಕಳಿದ್ದಳು ಹಲಕೆಲವು ಧಾರ್ಮಿಕ ಸಂಸ್ಥೆಗಳಲ್ಲಿ ಸ್ತ್ರೀವಿಶ್ವಸ್ತರೂ ಇದ್ದರು.

ಮೊದಲು ಏನೇ ಇದ್ದರೂ, ಶ್ರುತಿ, ಸ್ಮೃತಿಗಳ ಕಟ್ಟಳೆಗಳೆಲ್ಲ ಸುಗಮವಾಗಿ ಸಾಗುತ್ತಿದ್ದವು ಇವುಗಳ ಬಂಧನವು ಸಡಿಲಾಗಿರಲಿಲ್ಲ ಬರಬರುತ್ತ ಈ ಶೃಂಖಲೆಗಳು ಸಡಿಲಾಗುತ್ತ ಬಂದು, ವಿಜಯನಗರದ ಕಾಲದಲ್ಲಿ ತೀರಾ ಬಿಟ್ಟಿದ್ದವು ಸ್ತ್ರೀಗೆ ಬೇಕಾದ ಅನುಕೂಲತೆಗಳೆಲ್ಲ ದೊರೆತಿದ್ದವು. ಎಲ್ಲ ವಿಲಾಸಗಳ ವೈಭವವೂ

ಕೈಸೇರಿದ್ದಿತು. ಅಂದ ಸ್ತ್ರೀಯರು ಬೇಕಾದ ಸ್ವಾತಂತ್ರ್ಯವೆಲ್ಲವನ್ನು ಪಡೆದಿದ್ದಳೆಂಬುದನ್ನು ಧೈರ್ಯವಾಗಿ ಹೇಳಬಹುದು. ಸ್ಮೃತಿಕಾರರು ಸ್ತ್ರೀಯರಿಗೆ ಹಾಕಿಕೊಟ್ಟ ಕಟ್ಟಳೆಗಳನ್ನು ನಿಬಂಧನಗಳನ್ನು ದಕ್ಷಿಣಭಾರತದ ವೀರಮಹಿಳೆಯರು ವಿಜಯನಗರದ ಕಾಲದಲ್ಲಿ ತಮ್ಮ ಆಚರಣೆಯಿಂದ ಉಲ್ಲಂಘಿಸಿದ್ದರು. ಆಗಿನ ಸ್ತ್ರೀಯರು ವ್ಯವಹಾರಗಳಲ್ಲೆಲ್ಲ ತಮತಮಗುಚಿತವಾದ ಸ್ಥಾನವನ್ನು ಪಡೆದಿದ್ದರು. ರಾಜಕೀಯ, ಸಾಮಾಜಿಕ ಮೊದಲಾದ ಕಾರ್ಯಗಳಲ್ಲೆಲ್ಲ ಭಾಗವನ್ನು ವಹಿಸುತ್ತಿದ್ದರು. ಮನೆಗೆಲಸಗಳನ್ನು ನೋಡಿಕೊಳ್ಳುವಂತೆ, ಮನೆಯ ಹೊರಗಿನ ವ್ಯವಹಾರವನ್ನೂ ಕೈಕೊಳ್ಳುತ್ತಿದ್ದರು. ಅರಮನೆಯಲ್ಲಿ ದಾಸಿಯರಾಗಿ, ದ್ವಾರಪಾಲಕಿಯರಾಗಿ, ಕಾರ್ಯ ವಹಿಸುತ್ತಿದ್ದಂತೆ ಕತ್ತಿ ಡಾಲುಗಳನ್ನು ಹಿಡಿದುಕೊಂಡು ರಣಾಂಗಣಕ್ಕೆ ಹೋಗುತ್ತಿದ್ದರು. ಕಹಳೆ ತುತೂರಿಯನ್ನೂದುತ್ತಿದ್ದರು. ಭೋಯಿಗಳಾಗಿ ಮೇಣೆಗಳನ್ನು ಹೊರುತ್ತಿದ್ದರು. ಈ ಬಗ್ಗೆ ಪೇಜಸ ನೂನೀಜನೂ ಸುಂದರವಾಗಿಯೂ ಸವಿಸ್ತರವಾಗಿಯೂ ಹೇಳಿದ್ದಾರೆ. "ಅರಸನ ಬಳಿ ನಾಲ್ಕು ಸಾವಿರದ ವರೆಗೆ ಸ್ತ್ರೀಯರಿರುತ್ತಿದ್ದರು. ಅವರ ವಾಸ ಅರಮನೆ. ಕೆಲವರು ನರ್ತಕಿಯರು, ಹಲವರು ರಾಣಿಯರನ್ನು ಮೇಣೆಯಲ್ಲಿ ಒಯ್ಯುವ ಭೋಯಿಗಳು; ಕುಸ್ತಿ ಹಿಡಿಯುವವರು ಕೆಲವರು; ಜ್ಯೋತಿಷ್ಯ, ಭವಿಷ್ಯ ಹೇಳುವವರು ಕೆಲವರು, ಅವರಲ್ಲಿ ಲೆಕ್ಕಗಳನ್ನಿಡುವವರೂ, ಹೊರಗಣ ಗ್ರಂಥಕರ್ತರ ಕೃತಿಗಳನ್ನು ನಿರೀಕ್ಷಿಸಿ, ತುಲನಾತ್ಮಕ ದೃಷ್ಟಿಯಿಂದವಲೋಕಿಸಿ, ರಾಜ್ಯದ ಸಂಗತಿಗಳನ್ನು ಬರೆಯುವವರೂ, ಹಾಡುವವರೂ, ವೀಣೆ, ಮೃದಂಗ, ಮದ್ದಲಿ ಮೊದಲಾದ ವಾದ್ಯಗಳನ್ನು ಬಾರಿಸುವವರೂ, ಇದ್ದರಲ್ಲದೆ ಅರಸಿಯರೂ ಸಹ ಸಂಗೀತದಲ್ಲಿ ಪ್ರಾವೀಣ್ಯ ಪಡೆದವರಿದ್ದರು."

ಇದಲ್ಲದೆ ಅರಸನಿಗಾಗಿ ಅಡಿಗೆ ಮಾಡುವವರು, ಅರಸನಿಗೆ ವಿಷಪ್ರಯೋಗವಾಗದಂತೆ ಎಚ್ಚರದಿಂದ ಕಾಯುವವರು, ಅವನಿಗೆ ಊಟಕ್ಕೆ ನೀಡುವವರು, ಎಲ್ಲರೂ ಸ್ತ್ರೀಯರೇ! ನ್ಯಾಯಾಧೀಶರೂ, ಪೋಲೀಸರೂ, ಅರಮನೆಯ ಕಾವಲುಗಾರರು ಕೂಡ ಸ್ತ್ರೀಯರೇ ಆಗಿದ್ದರು.

ಆಗಿನ ಕಾಲದ ಸ್ತ್ರೀಯರು, ಪ್ರಮುಖ್ಯವಾಗಿ ವೇಶ್ಯೆಯರು ಸೇನೆಯೊಡನೆ ಸಮರಾಂಗಣಕ್ಕೆ ಸಾಗುತ್ತಿದ್ದರು. ಇಷ್ಟೇ ಅಲ್ಲ, ಅರಸಿಯರೂ ಕೂಡ ಯುದ್ಧ ಮಾಡಲು ತಮ್ಮ ತಮ್ಮ ಪತಿಗಳೊಂದಿಗೆ ಹೋಗುತ್ತಿದ್ದರೆಂಬ ಮಾತಿಗೆ ಅನೇಕ ಉದಾಹರಣೆಗಳೂ ಇವೆ. ಕೃಷ್ಣದೇವರಾಯನು ೧೫೨೫ ರಲ್ಲಿ ಕೊಂಡವೀಡನ್ನು ಮುತ್ತಿದಾಗ, ಆತನ ಜೊತೆಯಲ್ಲಿ ಚಿನ್ನದೇವಿಯರಾಣಿ ಹಾಗೂ ತಿರುಮಲಾದೇವಿಯವರೂ ಇದ್ದರು. ಸಮರದಲ್ಲಿ ಪತಿಯು ಮಡಿದರೆ, ಸತಿಯು ಸಾಯುವ ವರೆಗೆ ಕಾದಿ ಅಲ್ಲಿಯೇ ಪ್ರಾಣವನ್ನು ನೀಗುತ್ತಿದ್ದಳು. ೧೩೮೬ ರಲ್ಲಿ ಮಹಾವೀರ ಮಾದಾರ್ಕಳನ ಹೆಂಡತಿಯಾದ ಬೊಮ್ಮಾಂಬೆಯು ಯುದ್ಧದಲ್ಲಿ ತನ್ನ ಪತಿಯಂತೆ ಹೋರಾಡಿ ಮಡಿದು ಹೋದಳು.

ಸಾಹಿತ್ಯದಲ್ಲಿಯೂ ಕೂಡ ಸ್ತ್ರೀಯರು ಅಗ್ರಸ್ಥಾನವನ್ನು ಪಡೆದಿದ್ದರು. ವೀರಕಂಪರಾಯನ ಚರಿತೆ ಅಥವಾ ಮಧುರಾವಿಜಯವನ್ನು ಒರೆದ ಗಂಗಾದೇವಿಯೇ ಇದಕ್ಕೆ ಸಾಕ್ಷಿ. ಮೊದಲನೇ ಬುಕ್ಕರಾಯನ ಮಡದಿಯೂ ಕೂಡ ಸಾಹಿತ್ಯದಲ್ಲಿ ಒಳ್ಳಿದಳು. ಅವಳ ಬಗ್ಗೆ ೧೩೭೮ ರಲ್ಲಿಯ ಶಿಲಾಶಾಸನವು ಹೀಗಿದೆ. "ಬುಕ್ಕರಾಯನ ಸತಿಯಾದ ಹೊನ್ನಾಯಿಯು ಕಾಮಕಲೆ (ಪ್ರೇಮಶಾಸ್ತ್ರ) ಯಲ್ಲಿ, ವೇದೋಪಮ ವಿದ್ಯೆಯಲ್ಲಿ ಚತುರೆಯಾಗಿದ್ದಳು. ಅರಸನ ಅನೇಕ ಪತ್ನಿಯರಲ್ಲಿ ಅವಳೇ ಪ್ರಮುಖಳಾಗಿ, ಸದಾ ಅರಸನ ಇಚ್ಛೆಗಳನ್ನು ಈಡೇರಿಸುತ್ತಿದ್ದಳು. ಈ ಮೇರೆಗೆ ವಿದ್ಯಾವತಿಯರಾದ ಅನೇಕ ವನಿತೆಯರಾಗಿನ ಕಾಲದಲ್ಲಿದ್ದರು. ಅಚ್ಯುತರಾಯನ ಸುವರ್ಣ ಮೇರುವಿನ ದಾನದ ಬಗ್ಗೆ ಸಂಸ್ಕೃತದಲ್ಲಿ ಕವಿತೆ ರಚಿಸಿದವಳು ತಿರುಮಲಾಂಬೆಯೆಂಬ ವಿದುಷಿಯು. ಅಚ್ಯುತರಾಯ ವರದಾಂಬೆಯರ ಪರಿಣಯವನ್ನು ಬಣ್ಣಿಸುವ ಕಾವ್ಯ ಒರೆದವಳು ಇವಳೇ ಎಂಬ ಊಹೆಗೆ ಆಸ್ಪದವಿದೆ. ಮೋಹನಾಂಗಿಯೆಂಬವಳು ಮರೀಚಿ ಪರಿಣಯಂ ಎಂಬ ಪ್ರೇಮಕಾವ್ಯವನ್ನು ಒರೆದಿರುವಳು. ರಘುನಾಥಾಭ್ಯುದಯಂ ಎಂಬ ಕಾವ್ಯವನ್ನು ಬರೆದವಳು ರಾಮಭದ್ರಾಂಬೆಯು. ಇವಳು ಆಗಿನ ಕಾಲದ ಸ್ತ್ರೀಯರ ಬಗ್ಗೆ ಹೇಳುವದೇನೆಂದರೆ, ಚಿತ್ರ, ಬಂಧ, ಗರ್ಭ ಮತ್ತು ಆಶು ಎಂಬ ನಾಲ್ಕು ವಿಧವಾದ ಕವಿತೆಗಳನ್ನು ರಚಿಸುವಲ್ಲಿಯೂ ಅನ್ಯಭಾಷೆಗಳಲ್ಲಿ ಒರೆದ ಗ್ರಂಥಗಳ ವಿವರಣೆ ಮಾಡುವಲ್ಲಿಯೂ, ಶತಲೇಖನಿ ಕಲೆಯಲ್ಲಿಯೂ, ಸ್ತ್ರೀಯರು ಬಲ್ಲವರಾಗಿದ್ದರು. ಒಂದೊಂದು ತಾಸಿನಲ್ಲಿ ನೂರಾರು ನುಡಿಗಳನ್ನು ರಚಿಸಬಲ್ಲ ಶೀಘ್ರಕವಯಿತ್ರಿಯರಿದ್ದರು. ಅಷ್ಟ ಭಾಷೆಗಳಲ್ಲಿ ಕವನಗಳನ್ನು ಕಟ್ಟುವ ಸಾಮರ್ಥ್ಯ

ವುಳ್ಳವರಾಗಿದ್ದರು. ಆಗಿನ ಮಹಿಳೆಯರು. ಉದ್ದಾಮ ಕವಿಗಳಿಂದ ರಚಿತವಾದ ಕಾವ್ಯ ನಾಟಕಗಳನ್ನು ಓದಿ, ಪರಿಶೀಲಿಸಿ, ಅರ್ಥ ವಿವರಿಸುವಲ್ಲಿ ಪಟುಗಳಿದ್ದರು. ಕರ್ನಾಟಕ ಮತ್ತು ದೇಶ ಎಂಬ ಎರಡೂ ಗಾನಕಲೆಯ ರಹಸ್ಯವನ್ನರಿತವರು; ಮಧುರವಾಗಿ, ಮಂಜುಳವಾಗಿ, ಹಾಡಬಲ್ಲವರು; ವೀಣೆಯನ್ನು ನುಡಿಸಬಲ್ಲವರು. ರಾವಣಹಸ್ತ ಮೊದಲಾದ ವಾದ್ಯಗಳನ್ನು ಬಾರಿಸಲೂ ಅರಿತಿದ್ದರು

ಆಗಿನ ಸ್ತ್ರೀಯರು ಕುಸ್ತಿಯಾಡುವದರಲ್ಲಿ ಪ್ರವೀಣೆಯರಿದ್ದರೆಂದು ನ್ಯೂನಿಜನು ಹೇಳುವದಕ್ಕೆ ಇ. ಸ. ೧೪೪೬ ಕ್ರೋಧನಾಮ ಸವಂತ್ಸರ ಮಾಘ ಶುದ್ಧ ೧೫, ಸೋಮವಾರ ಶಿಲಾಲೇಖದಲ್ಲಿದ್ದ ಸಂಗತಿಯು ಆಧಾರವಾಗಿದೆ. ಜಟ್ಟಿಗಳೊಡನೆ ಕ ಸ್ತ್ರೀಯೊಡನೆ ತನ್ನ ತಂದೆ ಮಾದಿಗೌಡನು ಮಡಿದು ಹೋದುದರ ಸೇಡನ್ನು ತೀರಿಸಿಕೊಳ್ಳಲು, ಹರಿಯಕ್ಕನು ಕುಸ್ತೀ ಒಡಿದಳಂತೆ!

ಕೌಟಿಲ್ಯನ ಅರ್ಥಶಾಸ್ತ್ರದಂತೆ, ವಿಜಯನಗರದಲ್ಲಿಯು ವೇಶ್ಯಾ ಸ್ತ್ರೀಯರು ಬಹುತರವಾಗಿ ಅರಸನಿಗೆ ಸಂಬಂಧಪಟ್ಟ ಎಲ್ಲ ಕೆಲಸಗಳನ್ನು ಮಾಡುತ್ತಿದ್ದರು ಸ್ನಾನಗೃಹಕಾರ್ಯ, ಕಾಲೊತ್ತುವದು, ಹಾಸಿಗೆ ಮಾಡುವದು, ಅರಿವೆಗಳನ್ನು ನೆಳೆಯುವದು ಹೂಮಾಲೆಗಳನ್ನು ಹೆಣೆಯುವದು, ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು ವೇಶ್ಯೆಯರ ಮುಖ್ಯಸ್ಥಳಿಗೆ, ಅವಳು ಯಾವ ಕುಲದಲ್ಲಿ ಹುಟ್ಟಿದ್ದರೂ ಸರಿ. ಸೌಂದರ್ಯ ತಾರುಣ್ಯಗಳಲ್ಲಿ ಹೆಸರಾಗಿ ಮೇಲೆ ವಿವರಿಸಿದ ಕೆಲಸಗಳನ್ನೆಲ್ಲ ನೆರವೇರಿಸಬಲ್ಲವಳಾಗಿದ್ದರೆ, ಅರಸನು ಅವಳಿಗೆ ವರ್ಷಕ್ಕೆ ಸಾವಿರಪಣಗಳನ್ನು ಕೊಡುತ್ತಿದ್ದನು ಅಲ್ಲದ, ಈ ಎಲ್ಲ ವೇಶ್ಯೆಯರು ಮಧ್ಯವರ್ತಿ ಸರಕಾರದ ಆಡಳಿತೆಯ ಕೆಳಗೆ ಇರುತ್ತಿದ್ದರು ಅರಸನ ಅಪ್ಪಣೆಯಂತ, ಯಾವನೊಬ್ಬ ಪುರುಷನಿಗೆ ವಶಳಾಗದವಳಿಗೆ, ಸಾವಿರ ಪಟ್ಟುಗಳನ್ನು ಹಾಕುತ್ತಿದ್ದರು. ಇಲ್ಲವೆ ಐದು ಸಾವಿರ ಪಣಗಳನ್ನು ದಂಡ ಕಟ್ಟುತ್ತಿದ್ದರು. ಪ್ರತಿಯೊರ್ವ ವೇಶ್ಯೆಯು ಪ್ರತಿ ತಿಂಗಳಿಗೆ ತನ್ನ ದಿನದ ಉತ್ಪನ್ನದ ಇಮ್ಮಡಿ ಹಣವನ್ನು ಸರಕಾರಕ್ಕೆ ಕೊಡಬೇಕಾಗುತ್ತಿತ್ತು. ವೇಶ್ಯೆಯರಿಗೆ, ದಾಸಿಯರಿಗೆ, ನರ್ತಕಿಯರಿಗೆ, ಗಾಯನ, ವಾದನ, ಓದುವದು, ಅಭಿನಯ, ಬರೆಯುವದು, ಚಿತ್ರಕಲೆ, ಪರಸ್ಪರ ಭಾವಗಳನ್ನರಿಯುವದು, ಸುಗಂಧ ದ್ರವ್ಯ, ಹಾರ ಮೊದಲಾದ ದ್ರವ್ಯಗಳನ್ನು ತಯಾರಿಸುವದು, ಕೈ ಕೈಕಾಲು ಒತ್ತುವದು (ಹಿಸುಕುವದು) ಪರರ ಮನವನ್ನು ಸೆಳೆಯುವದು, ಈ ಎಲ್ಲ ಕಲೆಗಳನ್ನು ಕಲಿಸುವವರಿಗೆ ಸರಕಾರದಿಂದ ಹೊಟ್ಟೆಗೆ ಸಿಗುತ್ತಿತ್ತು. ಇಂಥ ವಿದ್ಯೆಗಳನ್ನೆಲ್ಲ ಕಲಿತ ನಟರ ಹೆಂಡಂದಿರೂ, ಅವರಂತೆ ಅನೇಕ ಭಾಷೆಗಳನ್ನೂ ಸನ್ನೆಗಳನ್ನೂ ಕಲಿತ ಉಳಿದ ಸ್ತ್ರೀಯರು ದುಷ್ಟರನ್ನು ಶೋಧಿಸುವಲ್ಲಿ ಪರದೇಶದ ಅಥವಾ ಶತ್ರುಗಳ ಗುಪ್ತಚಾರರನ್ನು ಕೊಲೆ ಮಾಡುವಲ್ಲಿ ಸಹಾಯಕಾರಿಗಳಾಗುತ್ತಿದ್ದರು

ಆ ಕಾಲದ ದಕ್ಷಿಣ ಹಿಂದುಸ್ಥಾನದಲ್ಲಿ ವೇಶ್ಯೆಯರ ಸಂಸ್ಥೆಗಳು ವಿಶಾಲವಾಗಿ ಹಬ್ಬಿಕೊಂಡಿದ್ದವು. ವಿಜಯನಗರವಂತೂ ವೇಶ್ಯೆಯರ ಕೇಂದ್ರವಾಗಿದ್ದಿತು ಇದರ ಬಗ್ಗೆ ಅಬ್ದುಲ್ ರಝಾಕನು ಮಾಡಿದ ವರ್ಣನೆಯು ಮನೋಹರವಾಗಿದೆ. “ ನಾಣ್ಯಾಲಯದ ಹಿಂಬದಿಯಲ್ಲಿ ೩೦೦ ಯಾರ್ಡು ಉದ್ದ ಹಾಗೂ ೨೦ ಯಾರ್ಡು ಅಗಲವಾದ ಒಂದು ಪೇಟೆ. ಇದರ ಎಡಬಲ ಪಕ್ಕಗಳಲ್ಲಿ ಸುಂದರವಾದ ಕಟ್ಟಡಗಳಿವೆ. ಇವುಗಳ ಮುಂಭಾಗದಲ್ಲಿ ಬಾಕಗಳ ಬದಲು ಉತ್ತಮ ಶಿಲೆಗಳಿಂದ ನಿರ್ಮಿತವಾದ ಪೀಠಗಳಿವೆ. ಮಧ್ಯಾಹ್ನದ ಪ್ರಾರ್ಥನೆಯಾದ ಮೇಲೆ ವೇಶ್ಯೆಯರು, ಅಲಂಕೃತವಾದ ತಮ್ಮ ಮನೆಯ ತಲೆಬಾಗಿಲುಗಳ ಮುಂದೆ ಇಟ್ಟ ಖುರ್ಚಿಗಳಲ್ಲಿ ಕೂಡ್ರುವರು ಪ್ರತಿಯೊಬ್ಬರೂ ಮುತ್ತುರತ್ನ, ಅಮೌಲ್ಯ ವಸ್ತ್ರಗಳಿಂದ ಭೂಷಿತರಾಗಿರುವರು ಅವರು ನೂತನ ತರುಣಿಯರು, ಒಳ್ಳೇ ಸುಂದರಿಯರು, ಅವರ ಬಳಿ ಸೇವೆಗೆ ಸಿದ್ಧರಾದ ದಾಸಿಯರು, ಈ ಬೀದಿಯಲ್ಲಿ ಹಾಯ್ದು ಹೋಗುವವನು ತನಗೆ ಬೇಕಾದವಳನ್ನು ಆರಿಸಬಹುದು. ಇಲ್ಲಿ ೧೨೦೦೦ ಪೋಲೀಸರ ಕಾವಲು. ಅವರಿಗೆ ವೇಶ್ಯೆಯರ ದಿನದ ಉತ್ಪನ್ನದಲ್ಲಿಯ ೧೨೦೦೦ ಪಣಗಳನ್ನು ಸಂಬಳ ಕೊಡುವರು.

ಪೀಜನು ಮಹಾನವಮಿಯ ಉತ್ಸವವನ್ನು ವರ್ಣಿಸುವಾಗ, ವೇಶ್ಯೆಯರ ಬಗ್ಗೆ ಹೀಗೆ ಅಭಿಪ್ರಾಯ ಪಡುವನು, ‘ ನಾನು ಮೊದಲು ಹೇಳಿದಂತೆ ಅರಸನು ಹೆಬ್ಬಾಗಿಲಿನಿಂದ ಅರಮನೆಯನ್ನು ಪ್ರವೇಶಿಸುವನು. ಆಗ ವೇಶ್ಯೆಯರು, ದೇವಾಲಯದ ಮತ್ತು ಅರಮನೆಯ ನರ್ತಕಿಯರು, ದೇವರ ಮೂರ್ತಿಯ ಮುಂದೆ ಬಹಳ ವೇಳೆ ನರ್ತಿಸುತ್ತ ನಿಲ್ಲುವರು. ಉತ್ಸವಕಾಲದಲ್ಲಿ ನರ್ತಕಿಯರನ್ನು ಕರೆಯುವರು. ರಾಜ್ಯದಲ್ಲಿಯ

# ವಿಜಯನಗರದ ಪ್ರವಾಸವು.

ಲೇಖಕರು --ಶ್ರೀ ಬೆಂಗೇರಿ ಪ್ರಲ್ಹಾದರಾಯರು ಹುಬ್ಬಳ್ಳಿ

ಮುಂದಿನ ವರ್ಷ ಹಂಪೆಯಲ್ಲಿ "ವಿಜಯನಗರ ಸ್ಮಾರಕೋತ್ಸವವು ಜರುಗುವದೆಂದು ಕನ್ನಡಿಗರೆಲ್ಲರೂ ಮಾತಾಡುತ್ತಿರುವರಷ್ಟೇ? ಆ ವಿಷಯದ ಮಾತು, ಚರ್ಚೆಗಳ ಫಲವಾಗಿ ಜನರು ತಂಡ ತಂಡವಾಗಿ ವಿಜಯನಗರವನ್ನು ನೋಡಲು ಹೋಗುತ್ತಿರುವರು. ಹೋದ ವರ್ಷ ಮುಂಬೈಯ ಗವ್ಹರ್ನರ ಸಾಹೇಬರೂ ವಿಜಯನಗರವನ್ನು ನೋಡಿಬಂದರು. ಎಷ್ಟೋ ಸಾರಿ ಗವ್ಹರನರ ಜನರಲ್‌ರೂ ಅಲ್ಲಿಗೆ ಹೋಗುವದುಂಟು. ಅವರಲ್ಲಿ ಮೊದಲನೆಯವರೆಂದರೆ ಲಾರ್ಡ ಕರ್ಝನ್ನರು ಈ ಶತಮಾನದ ಪ್ರಾರಂಭಕ್ಕೆ ಅವರು ಹಿಂದುಸ್ತಾನದ ವ್ಹಾಯಿಸರಾಯರಿದ್ದಾಗ ಈ ಸುಪ್ರಸಿದ್ಧ ರಾಜಧಾನಿಯ ಅವಶೇಷಗಳನ್ನು ಸಂದರ್ಶಿಸಿ ಆ ಕಟ್ಟಡಗಳ ಪ್ರಶಾಂತ ಆರ್ಕಸ್ಮರದಿಂದ ಕನಿಕರ ಹುಕ್ಕಿದವರಾಗಿ, ಅಲ್ಲಿನ ಚಿಸಕಡ್ಡಿ, ಮಣ್ಣು ಕಲ್ಲುಗಳನ್ನು ತೆಗೆಯಿಸುವ ಕಾರ್ಯಕ್ಕಾಗಿ ತಡವಿಲ್ಲದೆ ಅರ್ಧ ಲಕ್ಷ ರುಪಾಯಿಗಳನ್ನೊದಗಿಸಿಕೊಟ್ಟಿರುವದಾಗಿ ತಿಳಿಯುತ್ತದೆ ಹಿಂದೀ ಸಂಸ್ಕೃತಿಯ ಲವಲೇಶವು ಸಹ ಯಿಲ್ಲದ ಪರಧರ್ಮೀಯ, ಪರದೇಶಸ್ಥರಾದ ಲಾರ್ಡ ಕರ್ಝನ್ನರ ಹೃದಯವನ್ನರಳಿಸಿ, ಆಗಾಗ್ಗೆ ಇಲಾಖಾಧಿಪತಿಗಳ, ವ್ಹಾಯಿಸರಾಯರ, ಹಾಗೂ ಪರದೇಶದ ಪ್ರವಾಸಿಗಳ ಯಾತ್ರಾಸ್ಥಾನವಾಗಿರುವ ಈ ವಿಜಯನಗರವನ್ನು, ಕರ್ಮಯೋಗೀ ಕನ್ನಡಿಗರ ಈ ಪುಣ್ಯಭೂಮಿಯನ್ನು ಕನ್ನಡಿಗರು ನೋಡಿದರೆ ಅವರಲ್ಲಿಯಂತೂ ಆದರ, ಪ್ರೇಮ, ಅಭಿಮಾನ, ಸ್ಫೂರ್ತಿ, ಚೈತನ್ಯಗಳು ಅದೆಷ್ಟೋ ಪಾಲು ಹೆಚ್ಚಾಗಿ ಉತ್ಪವಿಸಬಹುದಲ್ಲವೆ? ಆದುದರಿಂದ ಕರ್ನಾಟಕದ ಮುಂದಿನ ಕಾಲದ ಹಿರಿಯರಾದ ಇಂದಿನ ವಿದ್ಯಾರ್ಥಿಗಳಿಗೆ ವಿಜಯನಗರದ ದರ್ಶನವನ್ನು ಐತಿಹಾಸಿಕ ದೃಷ್ಟಿಯಿಂದ ಅಗತ್ಯವಾಗಿ ಮಾಡಿಸಬೇಕಾಗಿ ನಮ್ಮ ಆಗ್ರಹದ ಬೇಡಿಕೆಯಿದೆ.

**ನನ್ನ ಪ್ರವಾಸದ ಸಂಕ್ಷಿಪ್ತ ವರ್ಣನೆ:--** ಒಂದು ದಿನ ನಾನು ನನ್ನ ಮಿತ್ರರ ಗೂಡ ಮುಂಜಾನೆ ೧೦ ಘಂಟೆಯ ಗಾಡಿಯಿಂದ ಹೊರಟು ಸುಮಾರು ೧ ಘಂಟೆಗೆ ಹೊಸಪೇಟೆಯ ನಿಲ್ದಾಣಕ್ಕೆ ತಲುಪಿದೆನು. ಮತ್ತು ಅಲ್ಲಿರುವ ರೇಲ್ವೆ ಭೋಜನಾಲಯದಲ್ಲಿ ಸ್ನಾನ, ಊಟಗಳನ್ನು ತೀರಿಸಿಕೊಂಡು ಊರಲ್ಲಿ ಹೊರಟೆನು. ಇಲ್ಲಿ ಭೋಜನಕ್ಕೆ ನಾಲ್ಕಾಣೆ ಕೊಡಬೇಕಾಗುವದು ಹುಬ್ಬಳ್ಳಿ, ಧಾರವಾಡಗಳಂತೆ ಇಲ್ಲಿ ಟಾಂಗಾಗಳಿರುವದಿಲ್ಲ. ಇಲ್ಲಿಯ ವಾಹನಗಳೆಂದರೆ ಜಟಕಾ, ಹಾಗೂ ಚಕ್ಕಡಿಗಳು. ಒಳ್ಳಾರಿಗೆ ಹೋಗುವ ಮೋಟಾರು ಕಮಲಾಪುರದ ಮೇಲೆ ಹಾಯ್ದು ಹೋಗುತ್ತಿದ್ದರೂ ಜನರು ಜಟಕಾದಲ್ಲಿಯೇ ವಿಜಯನಗರಕ್ಕೆ ಹೋಗುವದು ಹೆಚ್ಚು ಅನುಕೂಲ. ನಾನು ಹೊಸಪೇಟೆಯಲ್ಲಿಯ ನಮ್ಮ ಮಿತ್ರರನ್ನು ಕಾಣಲು, ಅವರು ಆ ದಿನ ತಮ್ಮಲ್ಲಿಯೇ ಇಟ್ಟುಕೊಂಡು ಆದರೋಪಚಾರ ಮಾಡಿದರು. ಹಾಗು ಮರುದಿನ ನಸಕು ಹರಿಯುವದರೊಳಗಾಗಿ ಜಟಕಾವನ್ನು ಸಿದ್ಧಪಡಿಸಿ ತಾವೂ ನಮ್ಮ ಸಂಗಡ ನನಗೆ ವಿಜಯನಗರವನ್ನು ತೋರಿಸುವದಕ್ಕಾಗಿ ಹೊರಟರು.

**ಅನಂತಶಯನ ಗುಡಿ—**ಹೊಸಪೇಟೆಯನ್ನು ದಾಟಿದ ಕೂಡಲೆ "ಅನಂತಶಯನ ಗುಡಿ" ಎಂಬ ಚಿಕ್ಕ ಹಳ್ಳಿಯು ಹತ್ತುತ್ತದೆ. ಅಲ್ಲಿರುವ ಅನಂತಶಯನ ದೇವಾಲಯದಿಂದಲೇ ಇದಕ್ಕೆ ಆ ಹೆಸರು ಬಂದಿರಲಿಕ್ಕೆ ಸಾಕು ವಿಜಯನಗರದ ರಾಯರು ಈ ಸುಂದರ ಹಾಗೂ ಭವ್ಯವಾದ ಗುಡಿಯನ್ನು ಕಟ್ಟಿಸಿದರು. ಇದರಲ್ಲಿ ಸ್ಥಾಪಿಸಲು ಸಿದ್ಧಪಡಿಸಿದ ಶ್ರೀ ಅನಂತಶಯನನ ಮೂರ್ತಿಯು ತುಂಗಭದ್ರೆಯ ದಂಡೆಯ ಮೇಲೆ ಹಡಗಲಿ ತಾಲೂಕ "ಹೊಳಲು" ಗ್ರಾಮದಲ್ಲಿಯೇ ಉಳಿದು ಬಿಟ್ಟಿದೆ

**ಮಲ್ಲಪ್ಪನ ಗುಡಿ**—ಮುಂದೆ ಹೋದಮೇಲೆ ಮತ್ತೊಂದು ದೇವಾಲಯ, ಹಾಗೂ ಚಿಕ್ಕಹಳ್ಳಿ. ಮೊದಲಿನಂತೆ ದೇವಾಲಯದಿಂದಲೇ ಊರಿಗೆ ಈ ಹೆಸರು. ನಾವು ಈಗ ಹೊರಟದ್ದು "ರಾಯರ" ಕಾಲದ ರಾಜಮಾರ್ಗ ಮಾರ್ಗದಲ್ಲಿ ಎರಡು ಕೋಟೆಯ ಗೋಡೆಗಳೂ, ಮಹಾ ದ್ವಾರಗಳೂ ಹತ್ತುತ್ತವೆ.

**ಸೂಳೆಯ ಭಾವಿ**—ಮಾರ್ಗದ ಎಡಬದಿಗೆ ಒಂದು ಹೊಲದಲ್ಲಿ ಒಂದು ಸುಂದರವಾದ ಕಟ್ಟಡವುಳ್ಳ ಭಾವಿಗೆ ಈ ಹೆಸರು ಇದೆ. ಕಾರಣವು ಗೊತ್ತಾಗಿಲ್ಲ.

ಹೊಸಪೇಟೆಯಿಂದ ೬ ಮೈಲು ಹೋದಮೇಲೆ ದಾರಿಯು ಇಬ್ಭಾಗವಾಗುತ್ತದೆ. ಒಂದು ದಾರಿಯು (ಎಡಕ್ಕೆ) ಪಂಪಾಪತಿಯ ದೇವಾಲಯಕ್ಕೂ, ಎರಡನೆಯದು (ಬಲಗಡೆಗೆ) ಕಮಲಾಪುರದ ಕಡೆಗೂ ಹೋಗುತ್ತವೆ ಪ್ರಯಾಣಿಕರು ಬಹುಕರವಾಗಿ ಪಂಪಾಪತಿಯ ಗುಡಿಯಲ್ಲಿಳಿಯುವುದೇ ಹೆಚ್ಚು ಅನುಕೂಲ ನಾವು ಕಮಲಾಪುರದ ಕಡೆಗೆ ಸಾಗಿದೆವು. ದಾರಿಯಲ್ಲಿ ಮತ್ತೂ ಒಂದೆರಡು ಕೋಟೆಯ ಗೋಡೆಗಳು ಹತ್ತುತ್ತವೆ. ದಾರಿಯು ಬಹಳೇ ವಿಸ್ತಾರವಾಗಿರುವ ಕಮಲಾಪುರದ ಕೆರೆಯ ಒಡ್ಡಿನ ಮೇಲಿನಿಂದ ಹಾಯುತ್ತದೆ. ಈ ಕೆರೆಯಿಂದ ಎಷ್ಟೋ ಕೂರಿಗೆ ಭೂಮಿಯು ನೀರುಣ್ಣುತ್ತದೆ "ರಾಯರ" ಕಾಲದ ಈ ಕೆರೆಯು ಇನ್ನೂ ಉತ್ತಮ ಸ್ಥಿತಿಯಲ್ಲಿದ್ದು ಕೆಲಸ ಕೊಡುತ್ತದೆ. ಕೆರೆಯ ಸಮೀಪದಲ್ಲಿಯೇ ಕಮಲಾಪುರ ಗ್ರಾಮವದೆ. ಈ ಗ್ರಾಮದಲ್ಲಿ ಶಾಲೆಗಳೂ ಟ್ರಾವ್ಹಲರ್ಸ ಬಂಗ್ಲೆ, ಧರ್ಮಶಾಲೆಗಳೂ ಉಂಟು. ಯುರೋಪಿಯನ್ನ ಪದ್ಧತಿಗಳಿಗೆ ಸಹ ಈ ಟ್ರಾವ್ಹಲರ್ಸ ಬಂಗ್ಲೆಯಲ್ಲಿ ಅನುಕೂಲವಿರುವದರಿಂದ ಪರದೇಶದ ಪ್ರಯಾಣಿಕರೂ ಸುಧಾರಿಸಿದ ದೇಶೀ ಜನರೂ ಈ ಬಂಗ್ಲೆಯಲ್ಲಿಳಿಯುವರು. ವಿಜಯನಗರದ ಅರಮನೆ ಅರಸಿಯರ ಮನೆ, ನವರಾತ್ರಿಯದಿಬ್ಬ ಮೊದಲಾದವು ಇಲ್ಲಿಂದ ಸನಿಯದಲ್ಲಿಯೇ ಇವೆ ಈ ಮೊದಲು ಬರುವಾಗ ದಾರಿಯು ಇಬ್ಭಾಗವಾದಾಗಿಂದ ಇಲ್ಲಿಗೆ ಸುಮಾರು ಎರಡು ಮೈಲು ಅಂತರವಿದೆ ನಾವು ಇಲ್ಲಿ ಇಳಿಯದೆ ಹಾಗೇ ಮುಂದಕ್ಕೆ ಹೊರಟೆವು

**ಪಟ್ಟಾಭಿರಾಮನ ಗುಡಿ**—ಮುಂದೆ ಸುಮಾರು ೨ ಫರ್ಲಾಂಗುಗಳ ಅಂತರದ ಮೇಲೆ ಹಾಳು ಬೈಲಲ್ಲಿ ಪಟ್ಟಾಭಿರಾಮನ ಗುಡಿಯೊಂದಿದೆ. ವಿಸ್ತಾರವಾದ ಪಟಾಂಗಣದ ಮಧ್ಯದಲ್ಲಿರುವ ಭವ್ಯವಾದ ಗುಡಿಯಿದು. ಆದರೆ ನಿರ್ಜನವಾದ ಸ್ಥಳ. ದಾರಿಬಿಟ್ಟು ದೂರವಿದೆ ಅಲ್ಲಲ್ಲಿ ಹಾಳಾಗುತ್ತಿರುವ ದೃಶ್ಯಗಳನ್ನು ಕಾಣಬಹುದು ಕಣ್ಣು ಕಪ್ಪಡಿಗಳ ಸಾಮ್ರಾಜ್ಯ! ಸಹಸ್ರಾವಧಿ ವರಹಗಳನ್ನು ಸೂರೆ ಮಾಡಿ ಸಿದ್ಧಗೊಳಿಸಿದ ಈ ಸುಂದರ ದೇವಾಲಯದ ಪಾಡು ಕಾಲನಮಹಿಮೆಯಿಂದ ಹೀಗಾಯಿತಲ್ಲವೇ? ಎಂದು ನಿಟ್ಟುಸುರು ಬಿಡಲು ಪ್ರಾರಂಭವಾಯಿತು ಇಲ್ಲಿಂದ!

**ಗಾಣಗಿತ್ತಿಯ ಗುಡಿ** —

ಮುಂದೆ ಅರ್ಧಮೈಲು ಹೋಗುವದರೊಳಗಾಗಿ ಕೋಟೆಯ ಗೋಡೆಗಳು ಮತ್ತು ಗಾಣಗಿತ್ತಿಯ ಸಾದಾತರದ ಗುಡಿಯು. ಅಲ್ಲಲ್ಲಿ ತೀರ ಸನಿಯಕ್ಕೆ ಇರುವ ಕೋಟೆಯ ಗೋಡೆಗಳ ಸಾಲುಗಳ ಮೇಲಿಂದ ಈ ಸ್ಥಾನವು ಹೆಚ್ಚು ಜಾಗರೂಕತೆಯಿಂದ ಕಾಯಲ್ಪಡುತ್ತಿದ್ದು ಬಹಳೇ ಭದ್ರವಾದದ್ದಿರಬೇಕು. ಹತ್ತಿರವೇ "ಭೀಮನ ಮಹಾದ್ವಾರ" ವೆಂಬ ಬಾಗಿಲು ಕಾಣುತ್ತದೆ. ಅಲ್ಲಿಂದ ತುಸು ದೂರ ಹೋದ ಮೇಲೆ ಎಡಗಡೆಗೆ ದೊಡ್ಡದೊಂದು ಬೆಟ್ಟವು ಹತ್ತುತ್ತದ

**ಮಾಲ್ಯವಂತ ರಘುನಾಥನ ಗುಡಿ**—

ಬೀದಿಗೆ ಹೊಂದಿ ದೊಡ್ಡದೊಂದು ಕಟ್ಟೆಗೆಯ ತೇರು ಅದಕ್ಕೆ ಹೊಂದಿ ಗುಡ್ಡದ ಮೇಲೇರಲು ಪಾವಟಿಗೆಗಳು, ಸುವ್ಯವಸ್ಥೆಯಿಂದಿದ್ದ ತೇರು, ಪ್ರತಿವರ್ಷ ರಥೋತ್ಸವವಾಗುತ್ತದೆಂಬದನ್ನು ಸೂಚಿಸುತ್ತದೆ ಗುಡ್ಡದ ಮೇಲೆ ವಿಸ್ತಾರವಾದ ಪಟಾಂಗಣದ ಮಧ್ಯದಲ್ಲಿ ಮಾಲ್ಯವಂತ ರಘುನಾಥನ ಗುಡಿಯಿದೆ. ಅದರ ಗೋಡೆಯ ಮೇಲೆ ಸಮುದ್ರದಲ್ಲಿರುವ ಮೀನ ಮುಂತಾದ ಪ್ರಾಣಿಗಳ ಹಾಗೂ ಹಡಗುಗಳ ಚಿತ್ರಗಳನ್ನು ಕೆತ್ತಿರುವರು. ಇಲ್ಲಿ ಪೂಜೆಯು ನಡೆಯುತ್ತಿದ್ದು ಬಾವಾ, ಬೈರಾಗಿಗಳೂ, ಆಕಳುಗಳೂ ಇರುತ್ತವೆ.

**ಆನಂದಾಶ್ರಮ**—

ಮುಂದೆ ಸುಮಾರು ಅರ್ಧ ಮೈಲಿನ ಮೇಲೆ ದಾರಿಯಿಂದ ಎಡಬದಿಗೆ ಮಾಲ್ಯವಂತ ಬೆಟ್ಟದಲ್ಲಿಯೇ ತುಂಗಭದ್ರೆಯ ಕಾಲುವೆಯ ಹತ್ತರ ಆನಂದಾಶ್ರಮವೆಂಬಲ್ಲಿ ಶ್ರೀ ಶಂಭುನಾಥರೆಂಬ ಸಾಧುಗಳು ತ್ಯಾಗಿಗಳಿರುವರು ಈ ಆಶ್ರಮದಲ್ಲಿ ಮಾರುತಿ ದೇವಾಲಯ. ಧರ್ಮಶಾಲೆ, ಹೋಮಕುಂಡ, ಹೂಶಾಲೆ, ತೋಟ, ಬಾವಿ ಮುಂತಾದವುಗಳಿದ್ದು ಸ್ಥಾನವು ಬಹಳೇ ರಮಣೀಯವದೆ. ಶ್ರೀಗಳು ವಿದ್ವಾಂಸರಿದ್ದು ಬಹಳೇ ಶಾಂತಸ್ವಭಾವದವರಿರುವರ. ನಾವು ಹೋದ ಕೂಡಲೆ ನಮ್ಮನ್ನು ಆದರದಿಂದ ಬರಮಾಡಿಕೊಂಡು ಊಟದ ವ್ಯವಸ್ಥೆ ಮಾಡಿದರು. ವಿಜಯನಗರದ ಬಗ್ಗೆ ಇವರಿಗೆ ಬಹಳೇ ಅಭಿಮಾನ. ಷಷ್ಠ್ಯಬ್ದ ಸ್ಮಾರಕೋತ್ಸವದ ಬಗ್ಗೆ ಬಹಳಹೊತ್ತು ಚರ್ಚಿಸಿದರು. ಮತ್ತು ಆ ಬಗ್ಗೆ ತಮ್ಮ ಕೈಲಾದಮಟ್ಟಿಗೆ ಸಹಾಯ ಮಾಡುವದಾಗಿ ಆಶ್ವಾಸನವನ್ನಿತ್ತರು

ಇಲ್ಲಿಂದ ಪುನಃ ಬಂದ ದಾರಿಯಿಂದ ಕೆಲಹೊತ್ತು ತಿರುಗಿ ಹೊರಟಮೇಲೆ ಬಲಗಡೆಗೆ ಒಂದು ದಾರಿಯು ಬರುತ್ತದೆ. ಈ ಹಾದಿಯಿಂದ ಹೋದರೆ 'ತಳವಾರ ಗಟ್ಟ' ಹಳ್ಳಿಯು ಅದನ್ನು ದಾಟಿ ತುಂಗಭದ್ರೆಯು ಹತ್ತುತ್ತದೆ ಇಲ್ಲಿನಿಂದಲೇ ಹರಗೋಲಿನಲ್ಲಿ ದಾಟಿ ಆನೇಗುಂದಿಗೆ ಹೋಗತಕ್ಕದ್ದು.

**ಆನೆಗುಂದಿ—**

ನದಿಯು ಆಚೆಯ ದಂಡಿಗೆ ಹೋದಕೂಡಲೆ ಉನ್ನತವಾದ ಪರ್ವತಗಳ ಮಧ್ಯದಲ್ಲಿರುವ ಕೋಟೆಯ ಬಾಗಿಲು ಹತ್ತುತ್ತದೆ. ಇದನ್ನು ದಾಟಿ ಸುಮಾರು ಅರ್ಧ ಮೈಲು ಹೋದರೆ ಈಗಿನ ಆನೆಗುಂದಿಯು ಬರುತ್ತದೆ. ಇದು ನಿಜಾಂಸಾಹೇಬರ ಅಂಕಿತದಲ್ಲಿರುವ ಸಂಸ್ಥಾನ. ಅರಸನು ಚಿಕ್ಕವನು. ೮೦ ವರ್ಷದ ರಾಣಿಯೇ ಒಸುತರ ಎಲ್ಲ ವ್ಯವಹಾರವನ್ನು ನೋಡುತ್ತಾಳೆ ಮೇಲ್ಸರಕಾರದಪರವಾಗಿ 'ಸರ್ಬೀಮ' ಎಂಬ ತುರುಕ್ಕ ಅಧಿಕಾರಸ್ಥನಿರುತ್ತಾನೆ ಜನವಸತಿಯೇನು ಬಹಳಿಲ್ಲ ಪುರಾತನ ಕಾಲದ ಅರಮನೆಯ ಅವಶೇಷಗಳುಂಟು, ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿ ಮಹಮ್ಮದೀಯರು ಆನೆಗುಂದಿಗೆ ದಾಳಿಯಿಟ್ಟಾಗ ವೀರಾವೇಶ ಭರಿತರಾದ ಕನ್ನಡಿಗರು ತಮ್ಮ ಹೆಂಡರುಮಕ್ಕಳನ್ನು ಅಗ್ನಿ ಕುಂಡದಲ್ಲಿ ಅರ್ಪಿಸಿ ಜೋಹಾರು ಮಾಡಿದ ಪವಿತ್ರ ಸ್ಥಾನವಿದು. ಇಲ್ಲಿಂದ ಉತ್ತರಕ್ಕೆ ಹೋಗಲು ಕಾಲುದಾರಿಯುಂಟು ದಕ್ಷಿಣಕ್ಕೆ ಮಾತ್ರ ಹರಗೋಲಿನಲ್ಲಿಯೇ ನದಿದಾಟಬೇಕಾಗುವದು ಸುತ್ತಲೂ ಗುಡ್ಡಗಳಿಂದ ಭದ್ರವಾಗಿ ಕಾಯಲ್ಪಟ್ಟ ಈ ಸ್ಥಳವು ಪುರಾಣಕಾಲದಿಂದಲೂ ಪ್ರಸಿದ್ಧವಿದ್ದು 'ಪಂಪಾಸರೋವರ' 'ವಾಲಿಯಭಂಡಾರ' 'ನವವೃಂದಾವನ' ಮುಂತಾದ ಅವಶೇಷಗಳನ್ನೊಳಗೊಂಡು ಭಾವಿಕರ ಯಾತ್ರಾ ಸ್ಥಳವಾಗಿದೆ

**ವಿಜಯವಿಠ್ಠಲನ ಗುಡಿ—**ತಳವಾರಗಟ್ಟೆಯಿಂದ ದುರ್ಗದ ಬಾಗಿಲಿನಲ್ಲಿ ಹಾಯ್ದು ವಿಜಯವಿಠ್ಠಲನ ಗುಡಿಗೆ ಹೋಗುವ ದಾರಿಯು ಹತ್ತುತ್ತದೆ. ನಡುವೆ ಬಲಗಡೆಯ ಹೊಲದಲ್ಲಿ ಒಂದು ಸುಂದರವಾದ ಕಲ್ಲಿನ ಮಂಟಪವದೆ. ಮುಂದೆ ಒಂದು ವಿಸ್ತೀರ್ಣವಾದ ಬೀದಿಯ ಎರಡೂ ಕಡೆಗೆ ಹಾಳುಬಿದ್ದ ಮನೆಗಳ ಅವಶೇಷಗಳುಂಟು. ಈ ಬೀದಿಯ ಕೊನೆಗೆ ವಿಜಯನಗರದ ಅತಿಶಯ ಸುಂದರವಾದ ಕಟ್ಟಡವು, ವಿಜಯವಿಠ್ಠಲನ ದೇವಾಲಯವಿದೆ. ವಿಜಯನಗರದ ಉಳಿದ ಪ್ರಸಿದ್ಧ ದೇವಾಲಯಗಳಂತೆ ಇದೂ ಬಹಳ ವಿಸ್ತಾರವಾದ ಪಟಾಂಗಣದ ಮಧ್ಯದಲ್ಲಿದ್ದು, ಗುಡಿಯ ಹಾಗೂ ಕಲ್ಯಾಣ ಮಂಟಪದ ಕೆತ್ತಿಗೆಯ ಕೆಲಸವು ನೋಡತಕ್ಕಂತಿರುತ್ತದೆ. ಪ್ರತಿಯೊಂದು ಕಂಬದ ಜೊತೆಗಿರುವ ಏಳು ಸಣ್ಣ ಉಪಕಂಬಗಳನ್ನು ಬಾರಿಸಿದರೆ ಈಗ್ಯೂ ಸಪ್ತಸ್ವರಗಳು ಸುಸ್ವರವಾಗಿ ಕೇಳ ಬರುತ್ತವೆಂದ ಮೇಲೆ ಒಂದೇ ಕಲ್ಲಿನಲ್ಲಿ ಕಂಬ ಉಪಕಂಬಗಳನ್ನು ಕಟೆದ ಶಿಲ್ಪಿಗಳ ಜಾಣತನವನ್ನು ಎಷ್ಟು ವರ್ಣಿಸಿದರೂ ಸಾಲದು. ಮುಖಮಂಟಪದ ಮಾಳಿಗೆಯು ಬಿದ್ದಿದೆ. ವಿಜಯನಗರದ ಸೌಂದರ್ಯ ತಿಲಕವು ಕ್ರಮಶಃ ನಾಶವಾಗತೊಡಗಿದೆ

**ತುಲಾ—**ಇಲ್ಲಿಂದ ಹಂಪೆಗೆ ಹೋಗುವ ದಾರಿಯ ಮೇಲೆ ಒಂದು ಕಲ್ಲಿನ ಚೌಕಟ್ಟುಂಟು ಇದಕ್ಕೆ ಒಂದು ತಕ್ಕಡಿಯನ್ನು ಇಳಿಬಿಟ್ಟು 'ರಾಯರು' ಒಂದರಲ್ಲಿ ಕುಳಿತು ಮತ್ತೊಂದು ಪರಡಿಯಲ್ಲಿ ತಮ್ಮ ತೂಕ ಬಂಗಾರ ಮುತ್ತು ರತ್ನಗಳನ್ನು ತೂಕಮಾಡಿ ದಾನ ಮಾಡುತ್ತಿದ್ದರಂತೆ !

ಮುಂದೆ ಹೋದಹಾಗೆ ಬಲಗಡೆಗೆ ತುಂಗಭದ್ರೆಯೂ ಎಡಗಡೆಗೆ ಕಲ್ಲಿನ ಗುಡ್ಡಗಳೂ ಬಂಡೆಗಲ್ಲುಗಳೂ, ಜೈನ ಗುಡಿಯೂ, ವರಾಹದೇವರ ಗುಡಿಯೂ ಹತ್ತುವವು ಎಡಗಡೆಗೆ ಸೂಳೆಯ ಬಾಜಾರವೂ

**ಅಚ್ಯುತರಾಯನ ಗುಡಿಯೂ— ಹತ್ತುತ್ತವೆ** ಅಚ್ಯುತರಾಯನ ಗುಡಿಯು ಸುಂದರವಿದೆ ಆದರೆ ಈಗ ಹಾಳಾಗತೊಡಗಿದೆ ಈ ಗುಡಿಯ ಹತ್ತಿರ ಮಾತಂಗಪರ್ವತವನ್ನೇರುವ ಪಾವಟಿಗೆಗಳುಂಟು. ಈ ಪರ್ವತದ ಮೇಲೆ ಒಂದೆರಡು ಗುಡಿಗಳಿದ್ದು ಇಲ್ಲಿಂದ ಇಡೀ ವಿಜಯ ನಗರದ ಹಾಗೂ, ತುಂಗಭದ್ರೆ, ಬೆಟ್ಟಗಳು, ಕೋಟೆಗಳು. ಕಬ್ಬಿನ ತೋಟಗಳು, ಕಟ್ಟಡಗಳು ಮುಂತಾದವುಗಳ ನೋಟದ ಮನೋಹರ ದೃಶ್ಯವನ್ನು ನೋಡಬಹುದು. ಈ ಬೆಟ್ಟದ ಮೇಲಿಂದ ಕಾಣುವ ಸೂರ್ಯೋದಯ ಹಾಗೂ ಸೂರ್ಯಾಸ್ತ ಸಮಯದ ದೃಶ್ಯಗಳು ಎಂದೂ ಮರೆಯಲಾರದಂಥವುಗಳೆಂದು "ಲಾಂಗಹರ್ಸ್ಟ"ನು ವರ್ಣಿಸಿರುವನು.

ಚಕ್ರತೀರ್ಥದ ದಂಡೆಗೆ "ಕೋದಂಡರಾಮನ" ಹಾಗೂ "ಯಂತ್ರೋದ್ಧಾರ ಪ್ರಾಣದೇವರ" ಗುಡಿಗಳಿವೆ ಈ ಗುಡಿಗಳಲ್ಲಿ ಪೂಜೆಯು ನಡೆಯುತ್ತದೆ. ಇಲ್ಲಿಂದ ಪಂಪಾಪತಿಯ ಗುಡಿಗೆ ಹೋಗಬೇಕಾದರೆ

ದಾರಿಯಲ್ಲಿ ದೊಡ್ಡದೊಂದು ಬಸವಣ್ಣನಗುಡಿಯೂ, ದವಿಶಾಲವಾ ತೇರುಬೀದಿಯೂ, ಎಡಬಲಕ್ಕೆ ಮನೆಗಳ ಸಾಲುಗಳೂ ಕಂಗೊಳಿಸುತ್ತವೆ ಬೀದಿಯ ಕೊನೆಗೆ ಕಟ್ಟಿಗೆಯ ತೇರುಗಳೂ, ಗಗನವನ್ನು ಚುಂಬಿಸುವ, ಭವ್ಯವಾದ ಹನ್ನೊಂದಸ್ತಿನ ಗೋಪುರವೂ ನಯನ ಮನೋಹರವಾಗಿ ಕಂಗೊಳಿಸುತ್ತಿರುವವು ಇಲ್ಲ ಮಾತ್ರ ಈಗಲೂ ಜನವಸತಿಯಿದೆ ನಾಲ್ಕಾರು ಅಂಗಡಿಗಳಿವೆ. ಒಂದೆರಡು "ಕಾಫೀಕ್ಲಬ್ಬ"ಗಳೂಉಂಟು. ಪಾಂಥಸ್ಥರು ಗುಡ್ಡಗುಡ್ಡ-ಗುಡಿ-ಗುಡಿ ತಿರುಗಾಡಿ ಬೇಸತ್ತವರು ಇಲ್ಲಿ ತುಸು ವಿಶ್ರಾಂತಿಯನ್ನೂ, ಕ್ಷುಧಾ ಶಾಂತಿಯನ್ನೂ ಹೊಂದಬಹುದು.

**ವಿರೂಪಾಕ್ಷದೇವಾಲಯ** - ಪಂಪಾಪತಿಯಾದ ಶ್ರೀವಿರೂಪಾಕ್ಷನು ವಿಜಯನಗರದ "ರಾಯರ ಕುಲದೈವತವು ಅಂದಮೇಲೆ ಆ ದೇವಾಲಯದ ಐಶ್ವರ್ಯವನ್ನೇನು ಬಣ್ಣಿಸುವದು? ಮೊದಲನೆಯ ಅಂಗಳದ ಮಧ್ಯದಲ್ಲಿಯೇ ತುಂಗಭದ್ರೆಯ ಕಾಲುವೆಯು ಯಾವಾಗಲೂ ಹರಿಯುತ್ತದೆ. ಇಲ್ಲಿಂದ ಒಳ ಅಂಗಳಕ್ಕೆ ಹೋಗುವ ಬಾಗಿಲು ದಾಟಿ ಹಿಂದುಗಳ ಹೊರತು ಉಳಿದವರಿಗೆ ಪ್ರವೇಶವಿಲ್ಲ. ವಿರೂಪಾಕ್ಷನ ದರ್ಶನಕ್ಕೆ 'ಫೀ.' ಕಾಯಿ ಒಡಿಸಿದರೆ 'ಫೀ,' ಮಂಗಳಾರತಿ ಮಾಡಿಸಿದರ 'ಫೀ.' ಗುಡಿಯ ಹೊರಗೆ 'ಕಾಫೀ' ಒಳಗೆ 'ಫೀ' 'ಫೀ' ಗುಡಿಯ ಮುಖ್ಯಮಂಟಪದ ಮೇಲ್ಛಾಗಕ್ಕೆ ಸಾಮ್ರಾಜ್ಯದ ಕಾಲದ ಚಿತ್ರಗಳು ಇನ್ನೂ ಅಚ್ಚಳಿಯದೆ ಕಂಗೊಳಿಸುತ್ತಿವೆ ಒಂದು ಚಿತ್ರದಲ್ಲಿ ಒಬ್ಬ ಸನ್ಯಾಸಿಯನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮೆರವಣಿಗೆಯನ್ನು ಹೊರಡಿಸಿರುವರು. ಇವರೇ ವಿದ್ಯಾರಣ್ಯರಿರಬಹುದೆಂದು ಕೆಲವರ ಊಹೆ.

ಗುಡಿಯ ಪ್ರಾಕಾರದಲ್ಲಿ ಶ್ರೀ ಭುವನೇಶ್ವರಿಯ ಹಾಗೂ ಹಿಂದುಗಡೆಯಲ್ಲಿ ಶ್ರೀ ವಿದ್ಯಾರಣ್ಯರ ಮೂರ್ತಿಗಳಿವೆ. ಇಲ್ಲಿ ದಿನಾಲು ಪೂಜೆಯೂ ಪ್ರತಿ ವರ್ಷ ಚೈತ್ರ ಪೌರ್ಣಿಮೆಗೆ ಜಾತ್ರೆ ರಥೋತ್ಸವಗಳೂ ನಡೆಯುತ್ತವೆ. ದೇವರಿಗೆ ಇನಾಮು ಭೂಮಿಯು ನಡೆಯುತ್ತದೆ ಇಲ್ಲಿ ಹಂಪೆಯ ಸ್ವಾಮಿಗಳವರು ಇರುತ್ತಾರೆ.

ಗುಡಿಯ ಬಲಭಾಗಕ್ಕೆ ಹೇಮಕೂಟ ಪರ್ವತವಿದೆ. ಅದರಲ್ಲಿ ಕೆಲವು ಜೈನ ಗುಡಿಗಳೂ, ಮೂಲ ಪಂಪಾಪತಿ ಮುಂತಾದ ದೇವಾಲಯಗಳೂ ಉಂಟು. ಮೂಲ ಪಂಪಾಪತಿಯ ದೇವಸ್ಥಾನದ ಪೂಜೆ ಮಾಡಿಕೊಂಡಿರುವ ಬ್ರಾಹ್ಮಣರೊಬ್ಬರು ಪ್ರಯಾಣಿಕನ ಊಟ ಉಪಚಾರದ ವ್ಯವಸ್ಥೆಯನ್ನು ಶಕ್ತ್ಯನುಸಾರ ಮಾಡುತ್ತಾರೆ. ನಾವು ಇಲ್ಲಿ ಒಂದು ದಿನ ಇದ್ದೆವು. ಈ ಪೂಜಾರಿಯವರು ಒಳ್ಳೇ ಸುಸ್ವಭಾವದವರಿರುವರು.

**ಕಡಲೇಕಾಳು ಗಣೇಶ**:—ಒಂದೇ ಬಂಡೆಗಲ್ಲಿನಲ್ಲಿ ಕೊರೆದ ಮೂರ್ತಿಯು. ಈಗ ಭಿನ್ನವಾಗಿದೆ.

**ಸಾಸಿವೆಕಾಳು ಗಣೇಶ**:--ವೇಲಿಸಂತೆ

**ಕೃಷ್ಣನ ಗುಡಿ**:—ಇದೊಂದು ಸುಂದರವಾದ ವಿಸ್ತೀರ್ಣವಾದ ದೇವಾಲಯ, ಓಡಿಸಾ ಪ್ರಾಂತವನ್ನು ಕೃಷ್ಣದೇವರಾಯನು ಗೆದ್ದಾಗ ಅಲ್ಲಿ ಅವರಿಗೆ ಸಿಕ್ಕ ಸುಂದರ ಕೃಷ್ಣನ ಮೂರ್ತಿಗಾಗಿ ಕಟ್ಟಿಸಿದ ದೇವಾಲಯವಿದು ಈ ಮೂರ್ತಿಯನ್ನು ಈಗ ಮದ್ರಾಸದ ವಸ್ತುಸಂಗ್ರಹಾಲಯದಲ್ಲಿರಿಸಿರುವರು.

ಇಲ್ಲಿಂದ ಹಾಳುಪಟ್ಟಣ (ವಿಜಯನಗರದ ಅರಮನೆಯ ಒಳಕೋಟೆ)ಕ್ಕೆ ಹೋಗುವಾಗ ಬಲಗಡೆಯ ಹೊಲದಲ್ಲಿ ಒಂದು ಬಹುದೊಡ್ಡ ಕಲ್ಲಿನಲ್ಲಿ ಕಟದ, ಭಿನ್ನವಾದ "ಉಗ್ರನರಸಿಂಹನ" ಮೂರ್ತಿಯಿದೆ ಇದು ತೀರ ಅಸ್ತವ್ಯಸ್ತವಾಗಿ ಭಿನ್ನವಾಗಿದೆ ಇದನ್ನು ಓರ್ವ ಬ್ರಾಹ್ಮಣಶಿಲ್ಪಿಯು ಸಿದ್ಧಪಡಿಸಿದನಂತೆ' ಹತ್ತಿರವೇ ಬಹು ದೊಡ್ಡಲಿಂಗವದೆ. 'ಬಡವೀಲಿಂಗ' ವಂತೆ !

ದಾರಿಯಲ್ಲಿ ಮಹಾಸತಿಯರ ಕಲ್ಲುಗಳು ಕಾಣಬರುವವು 'ಉದ್ದಾನ ವೀರಭದ್ರ' ನ ಗುಡಿಯಿದೆ. ಇಲ್ಲಿ ಪೂಜೆಯು ನಡೆಯುತ್ತದೆ. ದೇವರ ಮುಂದಿರುವ 'ಪಡದೆ' ಯನ್ನು ತೆಗೆಯಿಸಬೇಕಾದರೆ 'ಫೀ.' ಗುಡಿಯು ಮಾತ್ರ ತೀರ ಸಾದಾತರದ್ದು.

ದಾರಿಗೆ ಹೊಂದಿ ಈಶ್ವರ ದೇವಾಲಯವು ತಗ್ಗಿನಲ್ಲಿದೆ. ಗುಡಿಯಲ್ಲಿ ಯಾವಾಗಲೂ ನೀರು ನಾಗಪೂಜೆಯ ಕಲ್ಲುಗಳು ವಿಶೇಷವಾಗಿ ಕಂಡುಬರುತ್ತವೆ. ಮುಂದೆ ಬರುವದು 'ದಂಡನಾಯಕನು' ಇರುವ ಸ್ಥಳ ಹಾಗೂ 'ಟಂಕಸಾಲೆ'ಗಳು ಮತ್ತು ಮಹಮ್ಮದೀಯರಿಗಾಗಿ ಕಟ್ಟಿಸಿದ ಮಸೀದೆ ವಿಜಯನಗರದಲ್ಲಿ ಕಾಣಬರುವ ಮಸೀದೆಯೆಂದರೆ ಇದೊಂದೇ ಎಂದು ಹೇಳಬಹುದು ಎದುರಿಗೆ ಕಾಣುವದು '**ಝನಾನೆ**' ರಾಣಿಯರ ವಾಸಸ್ಥಳ.

ಈ ಪ್ರಾಕಾರದಲ್ಲಿ '**ಕಮಲಭುವನ**' ವೆಂಬ ಸುಂದರ ಕಟ್ಟಡವಿದೆ. ಇದು ಎರಡಂತಸ್ತಿನದು ಈ ಕಟ್ಟಡವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಇದರಲ್ಲಿ

ಮೇಲಂತಸ್ತಿನಲ್ಲಿ ನೀರನ್ನು ಸಂಗ್ರಹಿಸಿ ಕೆಳಗೆ ಸ್ನಾನ ಮಾಡುವವರು ನಿಂತು ಮಾಳಿಗೆಯಲ್ಲಿಯ ಬೂಚು ತೆಗೆದರೆ ಸಾಕು. (Shower Bath) ಮಳೆನೀರಿನ ಸ್ನಾನದ ಆನಂದವನ್ನನುಭವಿಸುತ್ತಿದ್ದರೆಂದು ಹೇಳಬಹುದು ಇದೇ ಮಾದರಿಯ ಕೆಲವು ಸ್ನಾನಗೃಹದ ಕಟ್ಟಡಗಳು ವಿಜಾಪುರದ ಪೂರ್ವಕ್ಕೆ ಸುಮಾರು ೧೩ ಮೈಲು ಅಂತರದ ಮೇಲಿರುವ ಕುಮಟಗಿಯೊಳಗಲ್ಲಿ ಇರುತ್ತವೆ.

ಇದರ ಹತ್ತಿರ ಭಗ್ನಾವಶೇಷವಾದ ಕಟ್ಟಡಗಳಲ್ಲಿ ತಳಹದಿಯ ಕಟ್ಟೆಗಳುಂಟು ಹತ್ತಿರವೇ ಗಜಶಾಲೆ, ಕಾವಲುಗಾರರ ಮನೆ, ಶ್ರೀರಂಗನ ದೇವಾಲಯ, ಗುರಜುಗಳುಂಟು. ಒಂದು ಗರಡೀಮನೆಯೂ ಸುಸ್ಥಿತಿಯಲ್ಲಿದೆ

**ಹಜಾರರಾಮನ ಗುಡಿ**—ಇದೊಂದು ಸುಂದರವಾದ ಚಿಕ್ಕ ದೇವಾಲಯ-ಕೆತ್ತಿಗೆಯ ಕೆಲಸವು ಸೂಕ್ಷ್ಮ ರಂಗಮಂಟಪದ ಕಂಬಗಳು ಬಹು ನುಣುಪಾದ ಕಲ್ಲುಗಳಲ್ಲಿ ಕೆತ್ತಲ್ಪಟ್ಟವೆ. ಗುಡಿಯ ಹೊರಭಾಗದ ಗೋಡೆಯ ಮೇಲೆ ರಾಮಾಯಣ ಮುಂತಾದ ಪುರಾಣದೊಳಗಿನ ಚಿತ್ರಗಳು ಹೇರಳವಾಗಿ ಕೊರೆಯಲ್ಪಟ್ಟಿವೆ ಜೈನ ಮೂರ್ತಿಗಳೂ ಕಡಿಮೆಯಿಲ್ಲ.

ಇದರ ಹತ್ತಿರ ರಾಯನ ದರ್ಬಾರಭವನದ ವಿಶಾಲವಾದ ಕಟ್ಟೆಯು ಮಾತ್ರ ಉಳಿದಿದೆ. ಕಂಬಗಳಿಗಾಗಿ ಮಾಡಿದ ತೆಗ್ಗುಗಳೂ ನೆಲಗಟ್ಟೂ, ಇನ್ನೂವರೆಗೂ ಉತ್ಕೃಷ್ಟ ಸ್ಥಿತಿಯಲ್ಲಿವೆ ಹತ್ತಿರವೇ ನೆಲಮನೆಯಿದೆ ಇಲ್ಲಿ ಗುಪ್ತ ಮಾತು ಕಥೆಗಳು ನಡೆಯುತ್ತಿದ್ದವೆಂದೂ ಈ ನೆಲಮನೆಯು ಕಾವಲುಗಾರರನ್ನು ಸಹ ಕಿವುಡರನ್ನೇ ನೇಮಿಸಿ ಕೊಳ್ಳುತ್ತಿದ್ದರೆಂದೂ ಹೇಳಲಾಗುತ್ತದೆ. ಇದರ ಎದುರಿಗೆ ಅರಮನೆಯ ಕಟ್ಟಡದ ನೆಲಗಟ್ಟು ಮಾತ್ರ ಗಿಡ, ಗಂಟಿ, ಮುಳ್ಳುಗಳ್ಳಿಗಳಲ್ಲಿ ಮುಚ್ಚಿಹೋಗಿದೆ. ಕಟ್ಟಡದ ಯಾವ ಭಾಗವೂ ಉಳಿದಿಲ್ಲ. ಮತ್ತು ಗಜಗಳನ್ನು ಸಹ ತಮ್ಮ ಭುಜಬಲದಿಂದ ಮೆತ್ತಗೆ ಮಾಡಲು ಶಕ್ತರಾದ ವೀರಶಿರೋಮಣಿಗಳು ಕಾಲಿಡಲು ಬೆದರಿ ನಡುಗುತ್ತಿದ್ದ ಆ ದೈದೀಪ್ಯಮಾನವಾದ ಪ್ರಾಸಾದದಲ್ಲಿ (ಅಥವಾ ಅದರ ಅವಶೇಷದಲ್ಲಿ) ಇಂದು ಇಣಚಿ, ಹಾವು, ಹುಳ, ಹುಪ್ಪಡಿ, ಕಸ, ಕಡ್ಡಿ, ಗಿಡಗಂಟೆ, ಮುಳ್ಳುಗಳ್ಳಿಗಳ ಸಾಮ್ರಾಜ್ಯವಾಗುವವೆಂದರೆ ಅಕಟಕಟಾ ಕಾಲನ ಕ್ಷೋಭೆಯಾದರೂ ಎಷ್ಟು ಭೀಕರವು !

**ನವರಾತ್ರಿಯ ದಿಬ್ಬ**—ರಾಜಪ್ರಾಸಾದದ ಹತ್ತಿರ 'ನವರಾತ್ರಿಯ ದಿಬ್ಬ' ವಿದೆ. ನವರಾತ್ರಿಯಲ್ಲಿ ಇದರ ಮೇಲೆ ರಾಯರು ತಮ್ಮ ರತ್ನಖಚಿತವಾದ ಸಿಂಹಾಸನವನ್ನು ಇಟ್ಟು ಅಲ್ಲಿನಿಂದ ನವರಾತ್ರಿಯ ಉತ್ಸವಗಳನ್ನು ನಿರೀಕ್ಷಿಸುತ್ತಿದ್ದರಂತೆ? ತುಂಗಭದ್ರೆಯಿಂದ ಕನ್ಯಾಕುಮಾರಿವರೆಗಿನ ಸಕಲ ಸಾಮಂತರೂ ಕಪ್ಪುಕಾಣಿಕೆಗಳನ್ನು ಸಂದರ್ಶಿಸಿ ನಮಿಸಿದ ಸ್ಥಲವಿದು. ರಾಜಮುಗುಟಗಳ ರತ್ನತೇಜಸ್ಸಿನಿಂದ ಬೆಳಗಿದ ಪುಣ್ಯ ಭೂಮಿಯಿದು. ವೀರರ ನಿನಾದವನ್ನು ಆಲಿಸಿದ ವೀರಭೂಮಿಯಿದು ಆ ದಿಬ್ಬದ ಮೇಲೆ ನಿಂತು ಸುತ್ತಲೂ ನಿರೀಕ್ಷಿಸಿದರೆ ಹಿಂದಿನ ಕಾಲದ ವೈಭವದ ದೃಶ್ಯಗಳು ನಮ್ಮ ಸ್ಮೃತಿಪಟಲದ ಮೇಲೆ ಒಂದೊಂದೇ ಹಾಯ್ದು ಹೋಗುವವು.

ಇಲ್ಲಿಂದ ಕಮಲಾಪೂರ ಬಂಗ್ಲೆಗೆ ಹೋಗುವ ದಾರಿಯ ಎಡಬದಿಗೆ ಸ್ನಾನಗೃಹ ವೊಂದಿದೆ. ಇದು ಕಲ್ಲುಗಳಿಂದ ಸುಂದರವಾಗಿ ಕಟ್ಟಲ್ಪಟ್ಟಿದ್ದು ಸುತ್ತಲೂ ಗೋಡೆಗಳಿರುವದರಿಂದ ರಾಣಿಯರಿಗಾಗಿ ಇದು ಕಟ್ಟಲ್ಪಟ್ಟಿತ್ತೆಂದು ಕಲ್ಪಿಸಲಾಗಿದೆ ಇಲ್ಲಿಂದ ಸುಸು ದೂರದಲ್ಲಿ ಚಂದ್ರಶೇಖರನ ಗುಡಿಯೂ,ಆ ಮೇಲೆ ಕಮಲಾಪೂರ ಟ್ರಾವ್ಹಲರ್ಸ ಬಂಗ್ಲೆಯೂ ಬರುವುವು. ಒಂದು ಪುರಾತನ ದೇವಾಲಯವನ್ನೇ ಈ ಟ್ರ್ಯಾವ್ಹಲರ್ಸ ಬಂಗ್ಲೆಯಾಗಿ ಪರಿವರ್ತಿಸಲಾಗಿದೆ

ಪಂಪಾಪತಿ ದೇವಾಲಯದಿಂದ ಹೊಸಪೇಟೆಗೆ ಹೋಗುವ ಬೀದಿಯ ಬಲಭಾಗಕ್ಕೆ ಕದಿರಾಂಪುರದ ಹತ್ತರ ಮಹಮ್ಮದೀಯರ ಗೋರಿಗಳುಳ್ಳ ಕಟ್ಟಡಗಳಿವೆ ಹೊಸಪೇಟೆಯಿಂದ ಹಂಪೆಯು ಸುಮಾರು ೮ ಮೈಲುಗಳುಂಟು.

ವಿಜಯನಗರವನ್ನು ನೋಡಲಿಕ್ಕೆ ಸುಮಾರು ೪ ದಿವಸಗಳಾದರೂ ಬೇಕು. ಪ್ರಯಾಣಸ್ಥರು ತಮ್ಮ ಊಟದ ವ್ಯವಸ್ಥೆ ಮಾಡಿಕೊಂಡು ಹೋಗುವದು ಉತ್ತಮ. ಸಂಗಡ ಒಂದೆರಡು ಬಾಟರಿಗಳು ( Pocket (Lamps ), ೧ ಕ್ಯಾಮೇರಾ, ೧ ನೀರಿನ ಚೀಲ (Water Bag), ೧ ಥರ್ಮಾಸ ಫ್ಲಾಸ್ಕ, ಸಾಕಷ್ಟು ಹಾಸಿಗೆಹೊದಿಕೆ, ಮುಂತಾದವುಗಳನ್ನು ಅವಶ್ಯ ತೆಗೆದುಕೊಂಡು ಹೋಗಬೇಕು. ಈ ಸ್ಥಳಗಳ ಮಧ್ಯದಲ್ಲಿ ಕಳೆದ ೧ ವಾರವು ವ್ಯರ್ಥವಾಗಲಾರದು ಸಂಗಡ 'ಹಾಳುಹಂಪೆ' 'Hampi Ruins" Forgotten Empire' ಮುಂತಾದ ಗ್ರಂಥಗಳಿದ್ದರೆ ಮತ್ತಿಷ್ಟು ಒಳಿತು.

# ನಮ್ರ ಮಾತು.

ಔಪಚಾರಿಕತೆಯಿಂದಲಾದರೂ ಈ ಸಂಚಿಕೆಯ ವಿಷಯವಾಗಿ ನಮ್ಮ ಕೆಲವು ಮಾತುಗಳನ್ನು ಹೇಳುವುದು ಸಯುಕ್ತಿಕವಾಗಿತ್ತು. ಆದರೆ ಮೊದಲಿನಿಂದಲೂ ಹೇಳುತ್ತ ಬಂದಂತೆ ಶ್ರೀಭುವನೇಶ್ವರಿಯ ಪ್ರೇರಣೆಯಿಂದಲೆ ಈ ಕಾರ್ಯವು ಕೈಕೊಳ್ಳಲ್ಪಟ್ಟಿರುವುದರಿಂದ ನಮಗೇನೂ ಹೆಚ್ಚಿಗೆ ಹೇಳಬೇಕಾಗಿಲ್ಲ. ಆಕೆಯ ಪ್ರೇರಣೆಯಿಂದಲೆ ಅನೇಕ ಜನ ಕರ್ನಾಟಕದೊಳಗಿನ ಬೇರೆ ಬೇರೆ ವಿಖ್ಯಾತ ಸಾಹಿತಿಗಳು, ನಮ್ಮ ಸ್ನೇಹಿತರೂ, ಮುದ್ರಣಾಲಯದೊಳಗಿನ ಕೆಲಸಗಾರರೂ, ವಿವಿಧ ರೀತಿಯಿಂದ ನೆರವಾಗಿ ಈ ಮಹತ್ಕಾರ್ಯವನ್ನು ಯಶಸ್ವಿಯಾಗಿ ಕೊನೆಗಾಣಿಸಿದ್ದಾರೆ, ಅವರೆಲ್ಲರಿಗೂ ನಾವು ತುಂಬಾ ಋಣಿಯಾಗಿರುವೆವಲ್ಲದೆ ಶ್ರೀ ಭುವನೇಶ್ವರಿಯು ಅವರೆಲ್ಲರಿಗೂ ಸಕಲಸುಖಸಂಪತ್ತುಗಳನ್ನು ಕೊಟ್ಟು ಸುಖಿಯಾಗಿರಿಸಲೆಂದು ಪ್ರಾರ್ಥಿಸುತ್ತೇವೆ. ಆಕೆಯ ಆಜ್ಞೆಯೆಂದು ಭಾವಿಸಿ ಎಲ್ಲರೂ ಎಂದಿಗೂ ಮರೆಯದಂಥ ಆ ನಮ್ಮ ಕನ್ನಡ ಸಾಮ್ರಾಜ್ಯದ ವೈಭವವನ್ನು ಮಹತ್ವವನ್ನು ಬೆಳಕಿಗೆ ತರುವಂಥ ಈ ಸಂಚಿಕೆಯ ಪ್ರಚಾರವು ಹೆಚ್ಚಾಗಿ ಆಗುವಂತೆ ಮಾಡುವರೆಂದೂ ಪೂರಾ ನಂಬಿದ್ದೇವೆ.

---

ಆ ಸೌಂದರ್ಯದ ರಾಜಧಾನಿಯುಕಟಾ! ಆ ರಾಜನಾ ವೈಭವಂ।
ಆ ಸಾಮಂತ ಸಮೂಹವಾ ಬುಧಸಭಾಸ್ಥಾನಂಗಳಾ ವೈಭವಂ।
ಆ ಸೋಮಾನನೆಯರ್ ಪ್ರಮತ್ತ ನೃಪಪುತ್ರರ್ ಘೋಷಿಪಾ ವಂದಿಗಳ್।
ಆ ಸರ್ವರ್ ಮರೆಯಾದರಾರವಶದಿಂದಾಕಾಲಗೀವಂದನಂ ॥ ೧ ॥

